University of Mysore

Oriental Library Publications

KANNADA SERIES No. 11

ರುದ್ರಭಟ್ಟ ವಿರಚಿತವಾದ

# ಜಗನ್ನಾಥ ವಿಜಯಂ

THE

# JAGANNATHAVIJAYAM

BY

RUDRABHATTA

EDITED BY

DR. R. SHAMA SASTRY, B.A., Ph.D., M.R.A.S.,

*Curator, Government Oriental Library, Mysore, Director of Archæological Researches in Mysore, Periodical Lecturer to the Post-Graduates' Classes of the Calcutta University, and B.B.R.A.S. Campbell Memorial Medalist*



MYSORE

PRINTED AT THE GOVERNMENT BRANCH PRESS,

1923

# ದ್ವಿತೀಯಮುದ್ರಣದ ಉಪೋದ್ಘಾತ.

ಈ ಗ್ರಂಥವು ನಾಲ್ಕು ತಾಳಪತ್ರ ಪ್ರತಿಗಳ ಆಧಾರದಿಂದ ಕ್ರಿ.ಶ. ೧೯೦೪ರಲ್ಲಿ ಈ ಲೈಬ್ರರಿಯಲ್ಲಿಯೇ ಲೈಬ್ರರಿಯನ್ ಆಗಿದ್ದ ಮ|| ರಾ|| ಎಸ್. ಜಿ ನರಸಿಂಹಾಚಾರ್ಯರಿಂದ ಶೋಧಿತವಾಗಿ ಮುದ್ರಿತವಾಯಿತು.

ಈಗ ಮೈಸೂರು ಯೂನಿವರ್ಸಿಟಿ ವೈಸ್‌ಛಾನ್ಸೆಲರವರು ಮತ್ತೆ ಶೋಧನೆಮಾಡಿ ಮುದ್ರಿಸಬೇಕೆಂದು ಅಪ್ಪಣೆಮಾಡಿದುದರಿಂದ ಈ ಲೈಬ್ರರಿಯಲ್ಲಿರುವ ಮೂರು ತಾಳಪತ್ರ ಪ್ರತಿಗಳ ಆಧಾರದಿಂದ ಯಥಾಮತಿಯಾಗಿ ಶೋಧಿಸಿ ಪಾಠಭೇದಗಳಿರುವ ಸ್ಥಲಗಳಲ್ಲಿ ಉಚಿತವಾಗಿ ತೋರುವ ಪಾಠವನ್ನು ಮೇಲೆ ಬರೆದು ರುಚಿಭೇದದಿಂದ ಅಥವಾ ಪ್ರತಿಭಾ ವಿಶೇಷದಿಂದ ಕವಿಹೃದಯವನ್ನು ಗೊತ್ತುಮಾಡುವ ಅಭಿಜ್ಞರಿಗೆ ತಿದ್ದಿಕೊಳ್ಳುವುದಕ್ಕೆ ಅನುಕೂಲವಾಗಿರುವುದಕ್ಕೋಸುಗ ಉಳಿದ ಪಾಠಗಳನ್ನು ಪುಸ್ತಕಸೂಚಕಚಿಹ್ನಗಳೊಡನೆ ಆ ಪುಟದಲ್ಲಿಯೇ ಕೆಳಗೆ ಬರೆದು ಎರಡನೆಯಾವೃತ್ತಿ ಮುದ್ರಿತವಾಗಿದೆ. ಈ ಮುದ್ರಣದಲ್ಲಿ ಮೊದಲನೆಯ ಮುದ್ರಣದಲ್ಲಿ ಕಂಡು ಬಂದ ಹಲವು ತಪ್ಪುಗಳು ತಿದ್ದಿ ಸರಿ ಮಾಡಲ್ಪಟ್ಟಿವೆ ಪ್ರಾಮಾದಿಕಗಳಾದ ತಪ್ಪುಗಳನ್ನು ತಿಳಿಸಲು ಶುದ್ಧಿ ಪತ್ರಿಕೆಯೂ ಸೇರಿಸಲ್ಪಟ್ಟಿದೆ. ಇನ್ನೂ ಪ್ರಾಮಾದಿಕವಾದ ತಪ್ಪು ತೋರಿದಲ್ಲಿ ಅದನ್ನು ಶೋಧನಕ್ಲೇಶವನ್ನರಿತ ಮಹಾಶಯರು ಅನಸೂಯರಾಗಿ ತಿದ್ದಿಕೊಳ್ಳುವುದು.

ಈ ಶೋಧನೆಗೆ ಆಧಾರವಾದ ಮೂರುಪ್ರತಿಗಳಲ್ಲಿ 87ನೆಯ ನಂಬರಿನ ಕ. ಎಂಬ ಪ್ರತಿಯು ಪ್ರಾಚೀನಪುಸ್ತಕವಾಗಿ ತೋರುತ್ತದೆ. ಆದರೆ ಆ ಪ್ರತಿಯಲ್ಲಿ ಅದನ್ನು ಬರೆದ ಕಾಲವನ್ನು ತಿಳಿಸುವ ಪಙ್ಕ್ತಿಯು

ಹೋಗಿದೆ. 114ನೆಯ ನಂಬರಿನ ಖ. ಎಂಬ ಪ್ರತಿಯ ಕೊನೆಯಲ್ಲಿ ಲೇಖಕನು :—

ಈತೆರದಿಂದೆ ರುದ್ರಕವಿನ್ಯೆನುಸಿರ್ದ ಮನೋಜ್ಞವಿರಾಜಗ
ನ್ನಾಥಜಯಪ್ರಬನ್ಧಮನಿಶಂ ಕವಿಶೋಭಿತಮಾಗಮಸ್ತುತ |
ಖ್ಯಾತಮನೂಪಮಂ ಸುಮನಸಾಶ್ರಿತಮಾಗಿ ಮಹೇನ್ದ್ರಭೂಮಿಸಂ
ಜಾತದೊಲೊಪ್ಪಿ ಭಾವಕಮನಾಳಿ ಮನಿಕರ್ಗಳಿಗೊಳ್ಗಮಾವಗಂ || ೧

ಕರಮಿಾಕಾವ್ಯಮ ಕುತ್ಸಗೋತ್ರಭವನಾಪಸ್ತಂಬಸೂತ್ರಂ ಬೃಹ
ಚ್ಚರಣಾಲಂಕರಣಂ ಶಿವಾಂಘ್ರಿವಿಲಸತ್ಪಾಸೀಯಸಂಜಾತಸಂ |
ಚರಣೋದ್ಭಾಸಿತಬಂಭರಾಯಿತಮತಿ ಶ್ರೀವೇಂಕಟಾಖ್ಯಂ ಕರಂ
ಬರೆದಂ ದುಂದುಭಿವತ್ಸರಾಶ್ವಯುಜಮಾಸಂ ಪೂರ್ಣಿರಲ್ಕಾದಿನಂ || ೨

ಸುಮನೋರಾಜಿವಿರಾಜಿತಂ ಕುವಲಯಾನನ್ದಪ್ರಭಾಭಾವಿತಂ
ಕಮಲಾಕ್ಷಪ್ರತಿಪಾದಿತಂ ಕವಿಜನಾನಂದಪ್ರದಂ ಚೋದಿತಂ |
ಪ್ರಮದಾಲಂಕರಣೋದಿತಂ ಹರಿಪದೈಕಧ್ಯಾನ ಸಮ್ಮಿಶ್ರಿತಂ
ಕ್ರಮದಿಂದೆನ್ನಯ ಪುಸ್ತಕಂ ಸರಸಿಯೊಲ್ ವ್ಯೋಮಾಂಬೊಲುದ್ಭಾಸಿತಂ || ೩

ವಿಲಸದ್ಭ್ರಾಮಧ್ಯಮಧ್ಯಾಭ್ರದೊಳೊಗೆದ ತಮಂ ಕಾಣಿಸಲ್ ಕಾಣಿಪರ್ಕಾ
ಶುಲಸಚ್ಚಂದ್ರಾತಪಂಗಳ್ ಕುಡೆ ಸುಧೆಯೊಗೆದಾನಂದಮಂ ನಿರ್ಮಳಾಂತ |
ಸ್ಸ್ಥಳದೊಳ್ ತೋರ್ಪಾತ್ಮಶೋಭಾಕಲಿತಜನಿತಚಿತ್ಸೌಖ್ಯದಿಂನಿತ್ಯಯೋಗಂ
ನೆಲೆಯಾಗಲ್ ಕೌತುಕಾಂತಾಳ್ದೆಸೆವೆ ತವಕೃಪಾನುಜ್ಞೆಯಿಂ ದೇಶಿಕಾರ್ಯಾ || ೪

ಶ್ರೀಗೌರೀಕುಚಕುಂಕುಮ
ರಾಗಾಂಕಿತವಕ್ಷ ದಕ್ಷಲಕ್ಷಿತಲಕ್ಷ್ಯಾ |
ಸ್ಥಾ ಗಾನಪ್ರಿಯ ಸುವಿಧೃತ
ನಾಗಾಧಿಪಶ್ರೀಭವಾನಿ ಶಂಕರ ಶರ್ವಾ ||

ದಯೆಗೈದೆಮ್ಮೊಳ್ ಭಕ್ತೋ
ದಯಮಂ ಸಾರ್ಥಪ್ರಭಾವಮುಮನುಸ್ಮಚ್ಛ್ರೀ |
ನಯನಾವಲೋಕನಸ್ಥಯಿ ?
ನಯನಿರ್ದಂ ಭೂಸಮಧ್ಯವಿಶದಸ್ಥಳದೊಳ್ ||

ಎಂದು ಕಾವ್ಯವಿಷಯವನ್ನೂ, ತನ್ನ ವಿಷಯವನ್ನೂ, ಲೇಖನ ಕಾಲವನ್ನೂ, ತನ್ನ ಪುಸ್ತಕದ ರೀತಿಯನ್ನೂ ತನ್ನ ಗುರುಕೃಪಾಫಲವನ್ನೂ ಸೂಚಿಸಿ ಬರೆದಿರುವೆನು. ಬೇರೊಂದು ವೋಲೆಯಲ್ಲಿ—

ಇಂತಿಂತು ರುದ್ರಭಟ್ಟಂ
ಸಂತೋಷಾನ್ವಿತನೆ ಪೇಳಲಾಸತ್ಕೃತಿಯಂ ।
ಸ್ವಾಂತಸುಖಮುಣ್ಮೆ ಸಜ್ಜನ
ರಿಂ ತಾಂ ಭಾವಿಸಲುಮೊಪ್ಪುತಿರ್ಪುದನೂನಂ ॥

ವರರುದ್ರಭಟ್ಟನಿಂದಂ
ವಿರಚಿತವಾದೀಪ್ರಬಂಧಮಂ ಸಂತಸದಿಂ ।
ಬರೆದಂ ವೇಂಕಟಶರ್ಮಂ
ಧರೆಯೊಳ್ ರಾಜಿಸೆ ಸಮಸ್ತವಿದ್ವಜ್ಜನದಿಂ ॥

ದುಂದುಭಿಸಂವತ್ಸರದೊಳ್
ನಂದಂಬೆತ್ತೆಸೆವ ಮಾರ್ಗಶಿರಮಾಸದೊಳಂ ।
ಪೊಂದಿದ ಶುಕ್ಲದ್ವಾದಶಿ
ಯಂದೀಸುಕರಪ್ರಬಂಧಮಂ ವಿಲಿಖಿಸಿದೆಂ ॥

ವರಗುಮ್ಮಳಾಪುರಸ್ಥಿತ
ನುರುವೇಂಕಟಶರ್ಮನಧಿಕಸಂತಸದಿಂದಂ ।
ಬರೆದಂ ಬುಧಜನರಿಂತಿದ
ಪರೀಕ್ಷಿಸಿಯುಂ ತಪ್ಪ ತಿದ್ದಿ ಮೆರೆಯಿಂ ಗುಣಮಂ ॥

ಸುಮನೋರಾಜಿವಿರಾಜಿತಂ ಕುವಲಯಾನಂದಪ್ರಭಾಭಾವಿತಂ
ಕಮಲಾಕ್ಷಪ್ರತಿಪಾದಿತಂ ಕವಿಜನಾನಂದಪ್ರದಂ ಚೋದಿತಂ ।
ಪ್ರಮದಾಲಂಕರಣೋದಿತಂ ಹರಿಪದೈಕಧ್ಯಾನಸಮ್ಮಿಶ್ರಿತಂ
ಕ್ರಮದಿಂದೆನ್ನಯ ಪುಸ್ತಕಂ ಸ್ವಗಸಿಯೊಲ್ ಮೋಕ್ಷಾಧ್ವದೊಲ್ ರಾಜಿಕುಂ ॥

ಜಯ ಶರ್ವ ದೇವವಂದಿತ
ಜಯ ಚಂದ್ರಕಿರೀಟ ಫಣಿವಿಭೂಷಣ ಭಕ್ತೋ ।
ಜಯ ಶ್ರೀಭವಾನಿ ಶಂಕರ
ಜಯ ಜಯ ಮದ್ವಾಂಛಿತಾರ್ಥದಾತ ಮದೀಶಾ ॥

ಎಂದು ಬರೆದಿದೆ. ಮತ್ತು ಶಾಲಿವಾಹನಶಕ ೧೬೫೮ನೆಯ ನಳ ಸಂವತ್ಸರದ ಜಾತಕವೊಂದೂ. ೧೬೬೬ನೆಯ ರಕ್ತಾಕ್ಷಿ ಸಂವತ್ಸರದ ಜಾತಕವೊಂದೂ. ೧೬೭೪ನೆಯ ಆಂಗಿರಸ ಸಂವತ್ಸರದ ಜಾತಕವೊಂದೂ ಬರೆಯಲ್ಪಟ್ಟಿವೆ. ಆಂಗಿರಸ ಸಂವತ್ಸರಗ ಜಾತಕವು ಈ ವೇಂಕಟೇಶನ ಮಗನದಾಗಿ ಅದರಿಂದಲೇ ತಿಳಿಯುತ್ತದೆ. ಆದುದರಿಂದ ಈ ಪುಸ್ತಕ ವನ್ನು ಬರೆದ ದುಂದುಭಿಸಂವತ್ಸರವು ಈಗ್ಗೆ ೧೮೧ ವರ್ಷಗಳ ಹಿಂದಣ ದಾಗಿರಬೇಕು. ೨೧೯ನೆಯ ನಂಬರಿನ ಗ ಎಂಬ ಪುಸ್ತಕದ ಕೊನೆ ಯಲ್ಲಿ:—ಸ್ವಸ್ತಿ ಶ್ರೀವಿಜಯಾಭ್ಯುದಯಶಾಲಿವಾಹನಶಕಾಬ್ದ ೧೫೯೭ ನೆಯ ವರುಷಕ್ಕೆ ಸಂದ ರಾಕ್ಷಸಸಂವತ್ಸರದ ಫಾಲ್ಗುನಶುದ್ಧ ೧೦ ಚಂದ್ರ ವಾರ ಪುನರ್ವಸುನಕ್ಷತ್ರದಲ್ಲೂ ಹದಿನಾಡುಸೀಮೆಯ ಸೇನಬೋವದೊಡ್ಡ ತಮ್ಮರಸರ ಮಲ್ಲಪ್ಪರಸರ ಮಗ ಗವಿಯಣ್ಣನ ಮಗ ವೇಂಕಟಪತಿಯು ಬರೆದ ಜಗನ್ನಾಥವಿಜಯದ ಪುಸ್ತಕಕ್ಕೆ ಮಂಗಳಮಸ್ತು ಎಂದು ಬರೆ ದಿದೆ. ಇದರಿಂದ ಈ ಪುಸ್ತಕವನ್ನು ಬರೆದು ೨4೮ ವರ್ಷಗಳಾದು ವೆಂದು ತಿಳಿಯುತ್ತದೆ. ಇಂತಹ ಪುಸ್ತಕಗಳ ಸಹಾಯದಿಂದ ಮುದ್ರಿತ ವಾಗಿರುವ ಜಗನ್ನಾಥವಿಜಯವೆಂಬ ಈಗ್ರಂಥದಮಂಗಳಶ್ಲೋಕಗಳಿಗೆ ಮಾತ್ರ ಬರೆಯಲ್ಪಟ್ಟಿರುವ ಪಜ್ಞಾ ಸಂಸ್ಕೃತವ್ಯಾಖ್ಯೆಯೂ ಪರಿಶಿಷ್ಟದಲ್ಲಿ ಶೋಧಿಸಿ ಮುದ್ರಿತವಾಗಿ ಸೇರಿಸಲ್ಪಟ್ಟಿರುವುದಲ್ಲದೆ ಆರಂಭದಲ್ಲಿಯೇ ವಿಷಯಸೂಚಿಯೂ ಪುಟಾಙ್ಕಗಳೊಡನೆ ಮುದ್ರಿತವಾಗಿದೆ. ಪ್ರಥಮ ಮುದ್ರಣದಲ್ಲಿ ಬರೆದಿದ್ದ ಕವಿಚರಿತ್ರೆಯೇ ಈಮುದ್ರಣದಲ್ಲಿಯೂ ಸೇರಿಸ ಲ್ಪಟ್ಟಿದೆ.

ಟಿ. ಎ. ಸುಬ್ಬರಾಯಶಾಸ್ತ್ರಿ,
ರೆಸಿಡೆಂಟ್ ಪಂಡಿತ.

# ಪ್ರಥಮ ಮುದ್ರಣದ ಉಪೋದ್ಘಾತ.

ಈ ಗ್ರಂಥವು ನಾಲ್ಕು ತಾಳಪತ್ರಪ್ರತಿಗಳ ಆಧಾರದಿಂದ ಮುದ್ರಿತವಾಗಿದೆ. ಇವುಗಳಲ್ಲಿ ಎರಡು ಪ್ರತಿಗಳು ಒಂದೇ ಮಾತೃಕೆಯಿಂದ ಹುಟ್ಟಿದಂತೆ ಕಾಣುತ್ತವೆ; ಉಳಿದ ಪ್ರತಿಗಳು ಬೇರೆಬೇರೆಯಾಗಿವೆ ಇವೆಲ್ಲವೂ ಪ್ರಾಯಃ ಶುದ್ಧವಾಗಿಯೇ ಇವೆ. ಆದರೆ ಕೆಲವು ಭಾಗಗಳಲ್ಲಿ ಒಂದು ಪುಸ್ತಕದಲ್ಲಿ ಒಂದು ಪದವೂ ಮತ್ತೊಂದು ಪುಸ್ತಕದಲ್ಲಿ ಸಮಾನಾರ್ಥಕವಾದ ಮತ್ತೊಂದು ಪದವೂ ದೊರಕುತ್ತವೆ. ಎರಡು ಪುಸ್ತಕಗಳಲ್ಲಿಮಾತ್ರ ದ್ವಿತೀಯಾಶ್ವಾಸದಲ್ಲಿಯೂ ಅಷ್ಟಾದಶಾಶ್ವಾಸದಲ್ಲಿಯೂ ಕೆಲವು ಪದ್ಯಗಳು ಹೆಚ್ಚಾಗಿ ದೊರೆಯುತ್ತವೆ. ಅವುಗಳನ್ನು ಮೂಲದಲ್ಲಿಯೇ ಸೇರಿಸಿದೆ. ಮದ್ರಾಸಿನಲ್ಲಿ ಅಚ್ಚಾಗಿರುವ ಪ್ರತಿಗೂ ಈ ಪುಸ್ತಕಕ್ಕೂ ಆಶ್ವಾಸಗಳಲ್ಲಿರುವ ಪದ್ಯಸಂಖ್ಯೆಯಲ್ಲಿ ಸ್ವಲ್ಪಸ್ವಲ್ಪ ವ್ಯತ್ಯಾಸವಿರುವಂತೆ ಕಾಣಿಸುತ್ತದೆ. ಈ ವ್ಯತ್ಯಾಸವು ಮುಖ್ಯವಾಗಿ ಪದ್ಯಗಳ ಲೆಕ್ಕದಲ್ಲಿ ಬಿದ್ದಿರುವ ಅಚ್ಚುತಪ್ಪಿನಿಂದ ಉಂಟಾಗಿದೆ. ವಾಚಕರ ಸೌಕರ್ಯಕ್ಕಾಗಿ ಅವುಗಳನ್ನು ಈ ಪಟ್ಟಿಯಲ್ಲಿ ತಿಳಿಸಿದೆ.

| ಆಶ್ವಾಸ | ಮದರಾಸ್ ಪುಸ್ತಕ | ಈ ಪುಸ್ತಕ |
|---|---|---|
| 1 | 80 | 80 |
| 11 | 84 | 99 (ಇದರಲ್ಲಿರುವ 19–35 ಪದ್ಯಗಳು ಮದರಾಸ್ ಪುಸ್ತಕದಲ್ಲಿಲ್ಲ. 96 ಎರಡು ಸಲ ಬಿದ್ದಿದೆ ಒಂದು ಗದ್ಯಕ್ಕೆ ಸಂಖ್ಯೆ ಹಾಕಿಲ್ಲ.) |
| 111 | 115 | 114 (28ನೆಯ ಪದ್ಯಕ್ಕೆ ಸಂಖ್ಯೆ ಬಿಟ್ಟು ಹೋಗಿ ಒಂದು ಕಡಮೆಯಾಗಿದೆ) |

| ಆಶ್ವಾಸ | ಮದರಾಸ್ ಪುಸ್ತಕ | ಈ ಪುಸ್ತಕ |
| --- | --- | --- |
| iv | 127ನೆಯ ಪದ್ಯಕ್ಕೆ ಸಂಖ್ಯೆ ಬಿಟ್ಟುಹೋಗಿ ಒಂದು ಕಡಿಮೆಯಾಗಿದೆ | 128 |
| v | 113 (68ನ್ನು ತಪ್ಪಾಗಿ ಎರಡುಸಲ ಹಾಕಿದ ಪ್ರಯುಕ್ತ ಒಂದು ಕಡಿಮೆಯಾಗಿದೆ) | 114 |
| vi-ix | ಸರಿಯಾಗಿದೆ. | ಸರಿಯಾಗಿದೆ. |
| x | 141 | 143 (ಇದರ 95,96ನೆಯ ಪದ್ಯಗಳು ಮದ್ರಾಸ್ ಪುಸ್ತಕದಲ್ಲಿಲ್ಲ) |
| xi | 94 (57ಕ್ಕೆ ಪ್ರತಿಯಾಗಿ 58 ಬಿದ್ದುದರಿಂದ ಒಂದು ಹೆಚ್ಚಾಗಿದೆ) | 93 |
| xii | ಸರಿ | ಸರಿ |
| xiii | 110 | 111 (58ಕ್ಕೆ 59 ಬಿದ್ದುದರಿಂದ ಒಂದು ಹೆಚ್ಚಾಗಿದೆ) |
| xiv | 114 | 115 (ಇದರ 48ನೆಯ ಪದ್ಯವು ಆಪುಸ್ತಕದಲ್ಲಿಲ್ಲ) |
| xv-xvi | ಸರಿ | ಸರಿ |
| xvii | 135 | 136 (74 ಆದಮೇಲೆ ತಪ್ಪಾಗಿ 77 ಬಿದ್ದು ಹಾಗೆಯೇ ಲೆಕ್ಕವಾಗಿದೆ. ಆದರೂ ರಗಳೆಗೆ ಸಂಖ್ಯೆ ಬಿದ್ದಿಲ್ಲ. ಆದುದರಿಂದ ಒಂದು ಹೆಚ್ಚಾಗಿದೆ) |

| ಆಶ್ವಾಸ | ಮದರಾಸ್ ಪುಸ್ತಕ. | ಈ ಪುಸ್ತಕ. |
|---|---|---|
| XVIII | 112 (20 ಆದಮೇಲೆ 31 ಬಿದ್ದು ಹಾಗೆಯೇ ಕೊನೆಯವರೆಗೂ ತಪ್ಪಾಗಿ ಲೆಕ್ಕಮಾಡಿದೆ) | 113 (ಇದರಲ್ಲಿರುವ 10-22 ಪದ್ಯಗಳು ಇನ್ನೊಂದು ಪುಸ್ತಕದಲ್ಲಿಲ್ಲ) |

ಈ ಗ್ರಂಥದ ಮಂಗಳ ಶ್ಲೋಕಗಳಿಗೆ ಪಂಚಪಾಷಾಣವ್ಯಾಖ್ಯೆ ಎಂಬ ಸಂಸ್ಕೃತದ ವ್ಯಾಖ್ಯಾನವು ದೊರಕುತ್ತದೆ. ನಮಗೆ ದೊರೆತ ಈ ವ್ಯಾಖ್ಯೆಯ ಪ್ರತಿಯಲ್ಲಿ ಕೊನೆಯ ಎರಡು ಮೂರು ಪಙ್ಕ್ತಿಗಳಿರಲಿಲ್ಲ ಪ್ರತ್ಯಂತರವು ದೊರಕದಕಾರಣ ದೊರೆತಷ್ಟನ್ನೇ ವಾಚಕರ ಸೌಕರ್ಯಕ್ಕಾಗಿ ಪರಿಶಿಷ್ಟದಲ್ಲಿ ಮುದ್ರಿಸಿದೆ.

---

# ರುದ್ರಭಟ್ಟ *

ಈ ಕವಿಗೆ ರುದ್ರಭಟ್ಟ, ರುದ್ರ ಎಂಬ ಹೆಸರುಗಳುಂಟು. ಈತನು ಸ್ಮಾರ್ತ ಬ್ರಾಹ್ಮಣನು ವಿಷ್ಣುಭಕ್ತನು. 'ಕಾವ್ಯೆಸಮಾಧಿಯಿಂ ಪರಂಜ್ಯೋತಿಮುಕುಂದನನ್ನಬಗೆಯೊಳ್ ನಿಲೆ ನಿರ್ಮಳತತ್ತ್ವ ಬೋಧಮುದ್ಯೋತಿಪುದೆಂಬುದಂ ಬಯಸಿ ಪೇೞಲೊಡರ್ಚಿದೆಂ' 'ಅತರ್ಕ್ಯಮಲ್ಲವಮಹತ್ತ್ವಂ ವಿಷ್ಣು ಸರ್ವಜ್ಞನಾ' 'ವೇದಶಾಸ್ತ್ರರಹಸ್ಯಾಚಿಂತ್ಯಸಾಮರ್ಥ್ಯದ ಮುರಹರನಂ ಬಣ್ಣಿಸಲ್ ಬಲ್ಲನಾವಂ' 'ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ' ರುದ್ರಾಂಕನ ಪೇೞ್ದಂ ವಿಷ್ಣು ಕೈಕೊಳ್ವನೆಂದು' 'ವೈಷ್ಣವಕಾವ್ಯರಸಂತುಳುಂಕಾಡುಗೆ' ಎಂದು ಮೊದಲಾಗಿ ಹೇಳಿದ್ದಾನೆ. ಇದೂ ಅಲ್ಲದೆ ಅಲ್ಲಲ್ಲಿ ವಿಷ್ಣುವೇ ತ್ರಿಮೂರ್ತಿಗಳಿಗೂ ಮೂಲಪುರುಷನೆಂದು.

ಉದಯಸ್ಥಿತಿಸಂಹಾರ
ಪ್ರದರ್ ಜನಕ್ಕೆನಿಪ ಕಮಲಭವಹರಿಹರನಾ ।
ಮದ ಪುರುಷಾಕಾರತ್ರಯ
ಮದು ನಿನ್ನ ವಿಡಂಬಮಲ್ತೆ ಪರಮಜ್ಯೋತೀ ॥ ೩ನೆಯ ಆ॥ ೧೮ನೆಯ ಪ॥

ಎಂಬ ಇದೇ ಮೊದಲಾದ ಪದ್ಯಗಳಲ್ಲಿ ವರ್ಣಿಸಿದ್ದಾನೆ. ಹರಿಹರೈಕ್ಯವನ್ನು ಸೂಚಿಸುವ ಹಲವು ಪದ್ಯಗಳನ್ನೂ ಬರೆದಿದ್ದಾನೆ.

ನೊಸಲೊಳ್ ಕಣ್ಣುಳ್ಳ ಮನೋ
ಜಸೂದನಂ ಪೆಱದಾವನಾನೆ ದಲೆಂದೀ ।
ವಸುಮತಿಗೆ ಸೂಚಿಪಂದದಿ
ನಸೆವಂ ಹರಿ ನೊಸಲಕಣ್ಣ್ಪೊಲೆಸೆವರಲೆಲೆಯಿಂ ॥ ೩–೪೫

---

* ಈ ಕವಿಗೂ 'ಭ' ಕಾರವನ್ನು ಅಡವಿಟ್ಟು ರುದ್ರಟ ಎಂಬ ಹೆಸರಿನಿಂದ ಸಂಸ್ಕೃತದ ಕಾವ್ಯಾಲಂಕಾರವನ್ನು ಬರೆದ ರುದ್ರಭಟ್ಟ ಕವಿಗೂ ಯಾವಸಂಬಂಧವೂ ಇಲ್ಲ.

ಪುರಮಥನರೂಪದಿಂ ನೀಂ
ಮರುಳ್ಗಳೊಡನಾಡಿ ದೈ (೪ ೧೦೬)
" ವಿಶ್ವರೂಪನ ಸಮೀಪಕ್ಕೆ ವಿರೂಪಾಕ್ಷನೇಳ್ತಂದು
*　　*　　*　　*　　*

ದ್ವಯಭಾವಂ ನಮಗಿಲ್ಲ ಬಲ್ಲರೆ ನಾನುಂ ನೀನುಂ " ೧೮–೬೬

' ಕೃತಿಶಾರದಾಭ್ರಚಂದ್ರಾತಪರುದ್ರ '[1] ' ಕವಿಕವಿರಾಜಂ '[2] ಎಂದು ಹೇಳಿಕೊಂಡಿರುವುದರಿಂದ ಈತನಿಗೆ ಕೃತಿಶಾರದಾಭ್ರಚಂದ್ರಾತಪ, ಕವಿರಾಜ ಎಂಬ ಬಿರುದುಗಳಿದ್ದಂತೆ ಕಾಣುತ್ತದೆ.

ಈ ಕವಿ ರಸಕಲಿಕೆ ಎಂಬ ಒಂದು ಲಕ್ಷಣಗ್ರಂಥವನ್ನು ಬರೆದಿರುವುದಾಗಿ ಸಾಳ್ವನು ತನ್ನ ರಸರತ್ನಾಕರದಲ್ಲಿ ಹೇಳುತ್ತಾನೆ. ಈ ಗ್ರಂಥವು ಇದುವರೆಗೂ ಎಲ್ಲಿಯೂ ದೊರೆತಿಲ್ಲ

ಈ ಕವಿಯ ದೇಶಕಾಲಗಳೊಂದೂ ಇದುವರೆಗೂ ನಿಷ್ಕೃಷ್ಟವಾಗಿ ಗೊತ್ತಿಲ್ಲದೆ ಅನೇಕರು ಅನೇಕವಿಧವಾಗಿ ಅಭಿಪ್ರಾಯಪಡುತ್ತಿದ್ದರು. ಕೆಲವರು ಹೀಗೆ ಹೇಳುತ್ತಿದ್ದರು " ಈ ಕವಿ, ರಾಜಶೇಖರವೇ ಮೊದಲಾದ ಗ್ರಂಥಗಳನ್ನು ಬರೆದ ಷಡಕ್ಷರಿದೇವನ ಕಾಲದವನು , ಆತನ ಯಶಸ್ಸಿನಲ್ಲಿ ಮಾತ್ಸರ್ಯಪಟ್ಟು ಅವನಿಗಿಂತ ಅತಿಶಯವಾದ ಕೀರ್ತಿಯನ್ನು ಪಡೆಯಬೇಕೆಂಬ ತಾತ್ಪರ್ಯದಿಂದ (ಶಿವಕಲಾಬ್ದ) 1611ರಲ್ಲಿ — ಎಂದರೆ ಕ್ರಿ. ಶ. 1689ರಲ್ಲಿ — ಈ ಜಗನ್ನಾಥವಿಜಯವನ್ನು ಬರೆದನು. ಪಂಡಿತರು ಈ ಎರಡು ಗ್ರಂಥಗಳನ್ನೂ ಪರೀಕ್ಷಿಸಿನೋಡಿ ರಾಜಶೇಖರವೇ ಉತ್ತಮತರವಾದ ಗ್ರಂಥವೆಂದು ನಿರ್ಣಯಿಸಿದರು. ಬಳಿಕ ಷಡಕ್ಷರಿದೇವನು ತಾನು ಕಿತ್ತುಕೊಂಡಿದ್ದ ಬಿರುದುಗಳನ್ನೆಲ್ಲಾ ಪುನಃ ಇವನಿಗೆ ಕೊಟ್ಟನು. ಈ ಸಂಗತಿಯನ್ನೆಲ್ಲಾ ಈತನ ಸ್ನೇಹಿತನಾದ ಲಕ್ಷ್ಮೀಶನು ಕೇಳಿ ಚಿಂತಾಕ್ರಾಂತನಾಗಿ ಬ್ರಾಹ್ಮಣರಿಗುಂಟಾದ ಅಪಮಾನವನ್ನು ನಿವಾರಿಸಬೇಕೆಂದು ನಿಶ್ಚಯಿಸಿ ಜೈಮಿನಿ ಭಾರತವೆಂಬ ಗ್ರಂಥವನ್ನು (ಗುಣೇಂದುಕಲೆಸರಿ



[1] ಆಶ್ವಾಸ ೧ ಪದ್ಯ ೧೩.　　[2] ಆಶ್ವಾಸ ೧ ಪದ್ಯ ೨೨.

ಮಿತಾಬ್ದದಿ) 1613ರಲ್ಲಿ—ಎಂದರೆ ಕ್ರಿ.ಶ. 1691ರಲ್ಲಿ—ಬರೆದ ವಿದ್ವಾಂಸರನ್ನು ಮೆಚ್ಚಿಸಿ ಅವರಿಂದ 'ಕವಿಚೂತಚೈತ್ರ'[1] ಎಂಬ ಬಿರುದನ್ನು ಪಡೆದು ಬ್ರಾಹ್ಮಣರ ಗೌರವವನ್ನು ಉಳಿಸಿದನು" ಈ ಅರ್ಥವನ್ನೇ ಹೇಳುವ ಈ ಪದ್ಯಗಳೂ ಪ್ರಚಾರದಲ್ಲಿದ್ದಂತೆ ಕಾಣುತ್ತದೆ.

ಶಿವಕಲಾಬ್ಧಿಶಕ ಶುಕ್ಲವರ್ಷಮಾ
ಧವಸಿತಾರ್ಕದಿನಜೀವವಾರದೊಳ್ ।
ಭುವಿಗಳೆಲ್ಲ ವರರುದ್ರಭಟ್ಟನೇ
ಕವಿಯೆನಲ್ಕೊರೆದನೊಂದು ಕಾವ್ಯಮಂ ॥

ಅರಸಲ್ ಜಗನ್ನಾಥವಿಜಯಮೆನಿಪಾಕಬ್ಬ
ಮುರುದೋಷಪೂಗಪರಿಚಿತಮಾಗ ಲಾಕ್ಷಣಿಕ
ವರರದಂ ರಾಜಶೇಖರವಿಳಾಸಕೆ ಪಡಿಯನೊರೆಯುದಿರೆ ರುದ್ರಭಟ್ಟಂ ।
ಪರಿಭವಕೆ ಗುರಿಯಾದನೆಂದು ಸಭಿಕರ್ ಪೇಳ್ದ
ಪರಿಯರಿತು ಕರುಣದಿಂದಾಷಡಕ್ಷರಿದೇವ
ಬಿರುದುಗಳ ಕೊಂಡು ಮಗುಳಿತ್ತು ಮನ್ನಿಸಿ ಪೊರೆದನದ ಕೇಳಿ ಲಕ್ಷ್ಮೀಶನು ॥

ಹರಿಚರಿತದಿಂ ಕೂಡಿ ಹರಿಮೇಧಪರ್ವಕಥೆ
ಯೊರೆದ ವಾರ್ಧಿಕಷಟ್ಪದಿಗಳಿಂದ ಜೈಮಿನಿಯ
ವರಸೂಕ್ತಿತಾತ್ಪರ್ಯಭರಗರ್ಭಿತಮದಾಗೆ ರಸಿಕರ್ಕಳನುಮೋದಿಸಲ್ ।
ಪರಿಪರಿಯಲಂಕಾರರಸಭಾವಪುಷ್ಟಿಯಿಂ
ಮೆರೆದುದು ಗುಣೇಂದುಕಲೆಪರಿಮಿತಾಬ್ದದ ಶಕದಿ
ಹರಿವಾರಕಾರ್ತಿಕದ ಸಿತಪಂಚಮೀಪ್ರಜಾಪತಿಶರದಿ ಸಾಂಗಮೆನಲು ॥

ಕನ್ನಡಗಬ್ಬಿಗರಾತನ
ಮನ್ನಿಸಿ ಲಕ್ಷ್ಮೀಶನೂರ್ವನೇ ಕವಿರತ್ನಂ ।
ಸನ್ನುತನೆಂದುರೆಬಿರುದಂ
ಚೆನ್ನದಿ ಕವಿಚೂತಚೈತ್ರನೆನೆ ಬರೆದಿತ್ತರ್ ॥

ಕೆಲವು ಕಾಲಕ್ಕೆ ತರುವಾಯ, ಈ ಜಗನ್ನಾಥವಿಜಯದ ಮಂಗಳ ಶ್ಲೋಕವು, 1604ರಲ್ಲಿ ರಚಿತವಾದ ಭಟ್ಟಾಕಳಂಕನ ಶಬ್ದಾನುಶಾಸನ

---

[1] ಇದು ಜೈಮಿನಿಯಲ್ಲಿ 'ಕವಿಚೂತವನಚೈತ್ರ' ಎಂದಿದೆ ಸಂಧಿ ೧ ಪದ್ಯ ೧೧

ದಲ್ಲಿ ಉದಾಹೃತನಾಗಿರುವುದಾಗಿ ತಿಳಿಯಬಂದಿತು ಅನಂತರ ಮೇಲಿನ ಸಂಗತಿಗಳೆಲ್ಲಾ ಕಲ್ಪಿತಕಥೆಗಳೆಂದು ಗೊತ್ತಾಗಿ ರುದ್ರಭಟ್ಟನು 1604ಕ್ಕೆ ಹಿಂದೆ ಇದ್ದವನೆಂದು ನಿರ್ಣಯವಾಯಿತು. ಇದಾದಮೇಲೆ ಜಗನ್ನಾಥ ವಿಜಯದಿಂದ ಉದ್ಧೃತವಾದ ಅನೇಕ ಪದ್ಯಗಳು ಶಬ್ದಮಣಿದರ್ಪಣ ಕಾರನ ತಂದೆಯಾದ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ದೊರ ಕಿದುವು. ಈ ಮಲ್ಲಿಕಾರ್ಜುನನು ತನ್ನ ಗ್ರಂಥವನ್ನು 1243 ರಿಂದ 1254 ರವರೆಗೆ ರಾಜ್ಯವಾಳಿದ ಹೊಯ್ಸಳವೀರಸೋಮೇಶ್ವರನ ಕಾಲದಲ್ಲಿ ಬರೆದಂತೆ ಅದೇ ಗ್ರಂಥದಿಂದ ತಿಳಿಯಬರುವ ಕಾರಣ ರುದ್ರಭಟ್ಟನು 1245ಕ್ಕೆ ಹಿಂದೆಯೇ ಇದ್ದಿರಬೇಕೆಂದು ಊಹಿಸಬೇಕಾಯಿತು.

ಇದೂ ಅಲ್ಲದೆ ಸೂಕ್ತಿಸುಧಾರ್ಣವದಲ್ಲಿ ಕುಸುಮಾವಳಿಯೆಂ ಬೊಂದು ಗ್ರಂಥದಿಂದ ಅನೇಕ ಪದ್ಯಗಳು ಉದ್ಧೃತವಾಗಿವೆ. ಈ ಕುಸುಮಾವಳೀ ಕಾವ್ಯವನ್ನು ಬರೆದ ದೇವಕವಿಯು ರುದ್ರಭಟ್ಟನನ್ನು

ಕವಿನಿರ್ವಾಣಂಗೆ ಬಾಣಂಗವನಿಗೆಸೆವ ಹರ್ಷಂಗೆ ಹರ್ಷಂಗೆ ವಿಖ್ಯಾ
ತವಿಜನ್ಮಾಘಂಗೆ ಮಾಘಂಗಖಿಳಸುಕವಿರತ್ನಂಗೆ ರತ್ನಂಗೆ ಸಾದೊ |
ಪ್ಪುವಿಳಾರುದ್ರಂಗೆ ರುದ್ರಂಗೊದವಿದಪದೆಪಿಂದಗ್ಗಳಂಗಗ್ಗಳಂಗು
ತ್ಸವದಿಂದಾವಾ ದಿಟಂ ವಂದಿಸುವದಟನವಂ ಸತ್ಕವೀಂದ್ರಾವತಂಸಂ ||

ವಿದಿತಕಥಾವಿಚಿತ್ರಮೆಸೆವೀ ಕುಸುಮಾವಳಿಯೆಂಬ ನವ್ಯಕಾ
ವ್ಯದೊಳಿದು ಸ .... ಶೋಭೆಶ ಬಾಣನ ಸೂಕ್ತಿಕಳಾಕಳಾಪವ |
ಗ್ಗದ ಕವಿಮಾಘಹರ್ಷರ ವಚಶ್ಚಿ ನತಿ ರುದ್ರಭಟ್ಟನೊಳ್
ಪುದಿದ ಪದಪ್ರಗಲ್ಭಗುಣಮಗ್ಗಳದೇವನ ಭಾವಗೌರವಂ ||

ಎಂಬ ಪದ್ಯಗಳಲ್ಲಿ ಸ್ಮರಿಸಿದ್ದಾನೆ.

ಈ ದೇವಕವಿಯು ಸುಮಾರು 1200ರಲ್ಲಿದ್ದಂತೆ ಊಹಿಸುವು ದಕ್ಕೆ ಕಾರಣವಿದೆ ಆದಕಾರಣ ಇವನಿಂದ ಸ್ತುತನಾದ ರುದ್ರಭಟ್ಟನು 1200ಕ್ಕೆ ಹಿಂದೆಯೋ ಅಥವಾ ಸಮಕಾಲದಲ್ಲಿಯೋ ಇದ್ದಿರಬೇಕು. 1245ಕ್ಕೆ ಹಿಂದೆಯೇ ಇದ್ದನೆಂಬ ವಿಷಯದಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ.

ಈ ರೀತಿಯಾಗಿ ರುದ್ರಭಟ್ಟನು 1245ಕ್ಕೆ ಈಚೆಯಿದ್ದವನಲ್ಲ ವೆಂದು ನಿರ್ಣಯಿಸಿದಂತೆಯೇ ಇವನು 1140ಕ್ಕೆ ಹಿಂದೆ ಇದ್ದವನಲ್ಲ ವೆಂದು ನಿಶ್ಚಯಿಸುವುದಕ್ಕೂ ಕೆಲವು ಆಧಾರಗಳಿವೆ. ಜಗನ್ನಾಥವಿಜಯ ದಲ್ಲಿ ಪೂರ್ವಕವಿಗಳನ್ನು ಸ್ತೋತ್ರಮಾಡುವ ಕಾಲದಲ್ಲಿ ರುದ್ರಭಟ್ಟನು ಇತರ ಕವಿಗಳೊಡನೆ 'ಕಣ್ಣಪನ ಜಾಣ್ನುಡಿ'[1] ಎಂದು ಕರ್ಣಪಾರ್ಯ ನೆಂಬ ಕವಿಯನ್ನು ಸ್ತುತಿಸಿದ್ದಾನೆ. ಈ ಕರ್ಣಪಾರ್ಯನು ಸುಮಾರು 1140ರಲ್ಲಿದ್ದುದಾಗಿ ಊಹಿಸುವುದಕ್ಕೆ ಕಾರಣವಿದೆ ಆದುದರಿಂದ ರುದ್ರ ಭಟ್ಟನು 1140ಕ್ಕೆ ಈಚೆ ಇದ್ದಿರಬೇಕಾಯಿತು ಆದಪ್ರಯುಕ್ತ ರುದ್ರ ಭಟ್ಟನು 1140ಕ್ಕೆ ಈಚೆಯೂ 1245ಕ್ಕೆ ಹಿಂದೆಯೂ ಇದ್ದಿರಬೇಕು

ಈ ಗ್ರಂಥಸ್ಥವಲ್ಲದ ಇತರವಾದ ಆಧಾರಗಳಿಂದ ಹೀಗೆ ಈತನ ಕಾಲವನ್ನು ಇಷ್ಟುಮಟ್ಟಿಗೆ ನಿರ್ಣಯಿಸಲಾಯಿತು ; ಇನ್ನು ಮೇಲೆ ಈ ಗ್ರಂಥಸ್ಥವಾದ ಕೆಲವು ಆಧಾರಗಳಿಂದ ಈ ಕವಿಯು ಮೇಲೆ ಸೂಚಿಸಿದ ಕಾಲದಲ್ಲಿಯೇ— ಎಂದರೆ 1180ರಲ್ಲಿಯೇ—ಇದ್ದಂತೆ ನಿರ್ಣ ಯಿಸಲಾಗುತ್ತದೆ. ಹೇಗೆಂದರೆ :— ಈತನು 'ಚಂದ್ರಮೌಳಿಪ್ರಮುಖ ನಿಖಿಳವಿದ್ವಜ್ಜನಂ ಮೆಚ್ಚೆ ರುದ್ರಾಂಕನೆ ಪೇೞ್ದಂ'[2] ಎಂದು ಹೇಳಿ ಕೊಂಡಿದ್ದಾನೆ, ಆದುದರಿಂದ ಈತನ ಕಾಲದಲ್ಲಿ ಚಂದ್ರಮೌಳಿಯೆಂ ಬೊಬ್ಬ ವಿಖ್ಯಾತನಾದ ಪಂಡಿತನಿದ್ದಿರಬೇಕು. ಇದನ್ನು ನಿಶ್ಚಯಿಸುವು ದಕ್ಕಾಗಿ ಆಕಾಲದಲ್ಲಿ ಹುಟ್ಟಿದ ಕೆಲವು ಶಾಸನಗಳನ್ನು ನೋಡುವಲ್ಲಿ 1172ರಿಂದ 1219ರವರೆಗೆ ಆಳಿದ ವೀರಬಲ್ಲಾಳನೆಂಬ ರಾಜನಲ್ಲಿ ಚಂದ್ರ ಮೌಳಿಯೆಂಬ ಹೆಸರಿನ ಒಬ್ಬ ಪ್ರಖ್ಯಾತನಾದ ಪಂಡಿತನು ಮಂತ್ರಿಯಾಗಿ ದ್ದಂತೆ ತಿಳಿಯಬರುತ್ತದೆ. 1182ರಲ್ಲಿ ಬರೆದ ಶ್ರವಣಬೆಳ್ಗೊಳದ 124[3]ನೆಯ ಶಾಸನದಲ್ಲಿ ಆತನ ವಿಷಯವಾಗಿ—

ವರತರ್ಕಾಂಬುಜಭಾಸ್ಕರಂ ಭರತಶಾಸ್ತ್ರಾಂಭೋಧಿಚಂದ್ರಂ ಸಮು
ದ್ಧುರಸಾಹಿತ್ಯಲತಾಲವಾಲನೆನಿಸಿದಂ ನಾನಾಕಳಾಕೋವಿದಂ ।

---

1 ಆಶ್ವಾಸ ೧ ಪದ್ಯ ೧೦ 2 ಆಶ್ವಾಸ ೧. ಪದ್ಯ ೨೨.

3 ಮಿ॥ ರೈಸ್ ಸಾಹೇಬರವರು ಮೈಸೂರುಸರ್ಕಾರಕ್ಕಾಗಿ ಮುದ್ರಿಸಿರುವ ಶಾಸನದ ಪುಸ್ತಕಗಳಲ್ಲಿ ಕೊಟ್ಟಿರುವ ಸಂಖ್ಯೆ.

ಸ್ಥಿರವೆಂತ್ರಂ ದ್ವಿಜವೆಂಶಶೋಭಿತನಶೇಷಸ್ತುತ್ಯನುದ್ವೃದ್ಧ್ಯಶಂ
ಧರೆಯೊಳ್ ವಿಶ್ರುತಚಂದ್ರಮೌಳಿಸಚಿವಂ ಸೌಜನ್ಯಜನ್ಮಾಲಯಂ ||

ಪತಿಭಕ್ತ್ಯಂ ವರಮಂತ್ರಶಕ್ತಿಯುತನಿಂದ್ರಂಗೆಂತು ಭಾಸ್ವದ್ಬೃಹ
ಸ್ಪತಿ ಮಂತ್ರೀಶ್ವರನಾದನಂತೆ ವಿಳಸದ್ಬಲ್ಲಾಳದೇವಾವನೀ |
ಪತಿಗೀವಿಶ್ರುತ ಚಂದ್ರಮೌಳಿವಿಬುಧೇಶಂ ಮಂತ್ರಿಯಾದಂ ಸಮು
ನ್ನತತೇಜೋನಿಲಯಂ ವಿರೋಧಿಸಚಿವೋನ್ಮತ್ತೇಭಪಂಚಾನನಂ ||

ಎಂಬೀ ಪದ್ಯಗಳು ಬರೆದಿವೆ ಇವುಗಳಲ್ಲಿ ವರ್ಣಿತನಾದ ಮಂತ್ರಿ ಚಂದ್ರಮೌಳಿಯೂ ರುದ್ರಭಟ್ಟನ ಚಂದ್ರಮೌಳಿಯೂ ಒಬ್ಬನೇ ಆಗಿರಬೇಕೆಂದು ತೋರುತ್ತದೆ. ಈ ಅಭಿಪ್ರಾಯವನ್ನೇ ಜಗನ್ನಾಥವಿಜಯದ ಮಂಗಳ ಶ್ಲೋಕಗಳ ಮಧ್ಯೇ ದೊರಕುವ—

ಅರಿಕಾಮಧ್ವಂಸಿನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾ
ನಿರತಂ ಲೀಲಾಕ್ರಮೋಪಾಂಚಿತನಿರವಧಿಗಾಂಗೇಯಕಂ ದ್ವಿಟ್ಪುರಧ್ವಂ |
ಸರತಕ್ರೋಧಂ ವೃಷಾಂಕಂ ವಿಬುಧನುತನುಮಾಕಾಮಿನೀ ಜೀವಿತೇಶಂ
ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ ||

ಎಂಬ ಪದ್ಯದಲ್ಲಿರುವ ಅರಿಕಾಮಧ್ವಂಸಿ, ರಾಜರಾಜಪ್ರತಿಷ್ಠಾನಿರತಂ, ಉಮಾಕಾಮಿನೀ ಜೀವಿತೇಶಂ ಎಂಬ ವಿಶೇಷಣಗಳೂ ದೃಢೀಕರಿಸುವಂತಿವೆ. ಏಕೆಂದರೆ ಈ ಮೂರು ವಿಶೇಷಣಗಳೂ ಕಾವ್ಯದಲ್ಲಿ ಈ ಪ್ರಕರಣದಲ್ಲಿ ವರ್ಣನೀಯನಾದ ಈಶ್ವರನಿಗೆ ಮಾತ್ರವಲ್ಲದೆ ಚಂದ್ರಮೌಳಿಯ ರಾಜನಾದ ವೀರಬಲ್ಲಾಳನಿಗೂ ಅನ್ವಯಿಸುತ್ತವೆ. ಹೇಗೆಂದರೆ :— ಮೇಲೆ ಹೇಳಿದ ಶ್ರವಣಬೆಳ್ಗೊಳದ ಶಾಸನದಲ್ಲಿ ದೊರೆವ—

ಚಿರಕಾಲಂ ರಿಪುಗಳ್ಗಸಾಧ್ಯಮೆನಿಸಿರ್ದುಚ್ಚಂಗಿಯಂ ಮುತ್ತಿದು
ರ್ಧರತೇಜೋನಿಧಿಧೂಳಿಗೋಂಟೆಯಸ ಕೊಂಡಾಕಾಮದೇವಾವನೀ |
ಶ್ವರನಂ ಸಂದೊಡೆಯಕ್ಷಿತೀಶ್ವರನನಾಭಂಡಾರಮಂ ಸ್ತ್ರೀಯರಂ
ತುರಗವ್ರಾತಮುಮಂ ಸಮಂತು ಪಿಡಿದಂ ಬಲ್ಲಾಳಭೂಪಾಳಕಂ ||

ಎಂಬ ಪದ್ಯದಿಂದ ‘ ಅರಿಕಾಮಧ್ವಂಸಿ ’ ಯೆಂಬ ವಿಶೇಷಣವು ವೀರಬಲ್ಲಾಳನ ವಿಷಯದಲ್ಲಿಯೂ ಸಾರ್ಥಕವಾಗಿದೆ.

ಬಲ್ಲಾಳರಾಜರಿಗೆ ' ಚೋಳರಾಜಪ್ರತಿಷ್ಠಾಚಾರ್ಯ ' ಎಂಬ ಬಿರುದು ಇರುವುದಾಗಿ ಅನೇಕ ಶಾಸನಗಳಿಂದ ತಿಳಿದುಬರುವುದರಿಂದಲೂ ಈ ಚೋಳರಾಜರಲ್ಲಿಯೇ ' ರಾಜರಾಜ ' ಎಂಬ ಹೆಸರು ವಿಶೇಷವಾಗಿರುವುದರಿಂದಲೂ ' ರಾಜರಾಜ ' ಶಬ್ದವು ಚೋಳಪರವಾಗಿ ಪ್ರಯೋಗಿಸಿರಬಹುದಾಗಿ ಕಾಣುತ್ತದೆ. ಅಲ್ಲದೆ ಶಾಸನಗಳಲ್ಲಿ ದೊರಕುವ–

ಕಮನೀಯಚಕೋರೇಕ್ಷಣೆ
ಕುಮುದಾನನೆಯೆನಿಸಿ ನೆಗಳ್ದುಮಾದೇವಿಗೆವಿ ।
ಕ್ರಮಿಸೋಮವಂಶಬಲ್ಲಾ
ಳಮಹೀಶಂ ಕೂರ್ಪನಾದನದು ತಕ್ಕುದೆ ದಲ್ ॥

ಎಂಬ ಇದೇ ಮೊದಲಾದ ಹಲವು ಪದ್ಯಗಳಿಂದ ಈ ವೀರಬಲ್ಲಾಳರಾಜನಿಗೆ ಉಮಾದೇವಿ ಎಂಬ ಮಹಿಷಿ ಇದ್ದುದಾಗಿ ತಿಳಿಯುಬರುತ್ತದೆ ಇದರಿಂದ 'ಉಮಾಕಾಮಿನೀಜೀವಿತೇಶಂ ಎಂಬ ವಿಶೇಷಣವು ಸಾಭಿಪ್ರಾಯ ವಿಶೇಷಣವೇ ಆಗಿರಬೇಕೆಂದು ತೋರುತ್ತದೆ. ಚಂದ್ರಮೌಳಿಯ ಹೆಸರೂ ಅವನ ಸ್ವಾಮಿಗೆ ಅನ್ವಯಿಸುವಂತೆ ಕೊಟ್ಟಿರುವ ಈ ಮೂರು ವಿಶೇಷಣಗಳೂ ಉದ್ದೇಶಪುರಸ್ಸರವಾಗಿ ಬರೆದುವಾಗಿರಬೇಕೇ ಹೊರತು ಕಾಕತಾಳೀಯವಾಗಿ ಬೇರೆ ಸೇರಿದುವಲ್ಲವೆಂದು ತೋರುತ್ತದೆ.

ಈ ಕಾರಣಗಳಿಂದ ರುದ್ರಭಟ್ಟನು 1180ರಲ್ಲಿ ವೀರಬಲ್ಲಾಳನ ಕಾಲದಲ್ಲಿಯೇ ಇದ್ದಿರಬೇಕು.

ಬ್ರಾಹ್ಮಣರು ದೇಶಭಾಷೆಯಲ್ಲಿ ಪ್ರೀತಿಯನ್ನು ಕೈಕೊಳ್ಳದಿದ್ದ ಆ ಕಾಲದಲ್ಲಿ ಈತನು ಕನ್ನಡದಲ್ಲಿ ಗ್ರಂಥವನ್ನು ಬರೆದುದೇ ಈತನು ಕರ್ಣಾಟಕ ದೇಶದವನೆಂಬುದನ್ನು ದೃಢಪಡಿಸುತ್ತದೆ. ಈತನು ವೀರಬಲ್ಲಾಳನ ರಾಜಧಾನಿಯಾದ ದೋರಸಮುದ್ರವೆಂಬ ಹಳೆಯಬೀಡಿನಲ್ಲಿ ಕೆಲವು ಕಾಲವಾದರೂ ಇದ್ದಿರಬಹುದು. ಆದರೂ ವೀರಬಲ್ಲಾಳನನ್ನು ತನ್ನ ಪೋಷಕನೆಂದು ಸಾಕ್ಷಾತ್ತಾಗಿ ಹೇಳದೆ ' ರಕ್ಷಿಸುಗೆವಸುಧೆಯುಂ ಯುದ್ಧರಂಗತ್ರಿಣೇತ್ರಂ ' ಎಂದು ಸಾಮಾನ್ಯವಾಗಿ ಹೇಳಿರುವುದನ್ನು

ನೋಡಿದರೆ ಇವನು ಆಸ್ಥಾನದಲ್ಲಿ ಕವಿಯಾಗಿದ್ದಂತೆ ಕಾಣುವುದಿಲ್ಲ. ಚಂದ್ರಮೌಳಿಯೇ ಮೊದಲಾದವರು ಮೆಚ್ಚುವಂತೆ ಬರೆದುದಾಗಿ ಹೇಳಿಕೊಂಡಿರುವುದರಿಂದ ಆ ಕಾಲದ ವಿದ್ವದ್ಗೋಷ್ಠಿಯಲ್ಲಿ ಸಮ್ಮಾನಿತನಾಗಿದ್ದಿರಬೇಕು.

ಈತನೇ ಕನ್ನಡದಲ್ಲಿ ಬ್ರಾಹ್ಮಣರ ಪುರಾಣವನ್ನು ಕಾವ್ಯವಾಗಿ ರಚಿಸಿದ ಮೊದಲನೆಯ ಬ್ರಾಹ್ಮಣಕವಿ. ಈತನು ಕರ್ಣಾಟಕ ಭಾಷೆಯ ಅತ್ಯುಚ್ಛ್ರಾಯಕಾಲದಲ್ಲಿದ್ದವನಾದುದರಿಂದಲೂ ವಿದ್ವದ್ಗೋಷ್ಠಿಯಲ್ಲಿ ಸಮ್ಮಾನಿತನಾದವನಾದುದರಿಂದಲೂ ಬಹಳ ದೊಡ್ಡ ಕವಿಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈತನನ್ನು ದೇವಕವಿ, ಚಿಕುಪಾಧ್ಯಾಯ ಇವರೇ ಮೊದಲಾದ ಕರ್ಣಾಟಕ ಕವಿಶ್ರೇಷ್ಠರು ಶ್ಲಾಘಿಸಿರುವರು. ಸಾಳ್ವನು ತನ್ನ ರಸರತ್ನಾಕರದಲ್ಲಿ ಈ ಕವಿಯ ರಸಕಲಿಕೆ ಎಂಬ ಅಲಂಕಾರಗ್ರಂಥದಿಂದ ಅನೇಕ ಭಾಗಗಳನ್ನು ತೆಗೆದುಕೊಂಡಿರುವುದಾಗಿ ಹೇಳುತ್ತಾನೆ. ಮಲ್ಲಿಕಾರ್ಜುನದೇವನ ಸೂಕ್ತಿಸುಧಾರ್ಣವದಲ್ಲಿಯೂ ಅಭಿನವವಾದಿವಿದ್ಯಾನಂದನ ಕಾವ್ಯಸಾರದಲ್ಲಿಯೂ ಈತನ ಗ್ರಂಥದಿಂದ ಉದ್ಧೃತವಾದ ಅನೇಕ ಪದ್ಯಗಳು ದೊರೆಯುತ್ತವೆ. ಸರಸ್ವತೀ ತಿಲಕಕಾರನು ತನ್ನ ಗ್ರಂಥದ ವ್ಯಂಗ್ಯ ಪ್ರಕರಣದಲ್ಲಿ ಈ ಗ್ರಂಥದ ಪದ್ಯಗಳನ್ನು ಉದಾಹರಣವಮಾಡಿ ವ್ಯಾಖ್ಯಾನ ಮಾಡಿದ್ದಾನೆ. ಶಬ್ದಾನುಶಾಸನಕಾರನು ಇಲ್ಲಿಯ ಪದ್ಯಗಳನ್ನು ತನ್ನ ವ್ಯಾಕರಣದಲ್ಲಿ ಲಕ್ಷ್ಯ ಪದ್ಯಗಳನ್ನಾಗಿ ಉದಾಹರಿಸಿದ್ದಾನ. ಯಾವನೋ ಒಬ್ಬ ಸಂಸ್ಕೃತ ಪಂಡಿತನು ಈ ಗ್ರಂಥದ ಮಂಗಳ ಶ್ಲೋಕಗಳಿಗೆ ಪಂಚಪಾಷಾಣ ವ್ಯಾಖ್ಯಾ ಎಂಬ ಹೆಸರಿನಿಂದ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾನೆ ಇದನ್ನೆಲ್ಲಾ ನೋಡಿದರೆ ಈ ಗ್ರಂಥದ ಉತ್ಕೃಷ್ಟತೆಯು ಸ್ವತಃ ವೇದ್ಯವಾಗುತ್ತದೆ.

ಈತನು ರಸಕಲಿಕೆ, ಜಗನ್ನಾಥವಿಜಯ ಇವೆರಡನ್ನೂ ಬರೆದಿದ್ದಾನ. ಮೊದಲನೆಯ ಗ್ರಂಥವು ಅದ್ಯಾಪಿ ದೊರೆತಿಲ್ಲ.

ಜಗನ್ನಾಥವಿಜಯವು ಚಂಪೂರೂಪವಾಗಿದೆ. ಇದೊಂದು ಮಹಾಕಾವ್ಯ, ಹದಿನೆಂಟು ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. 'ಕಥೆ ವಿಷ್ಣು

ಪುರಾಣಂ ' ಎಂದು ಕವಿಯೇ ಹೇಳಿದ್ದಾನೆ, ವಿಷ್ಣುಪುರಾಣದ 5,6 ನೆಯ ಅಂಶಗಳಲ್ಲಿ ದೊರಕುವ ಕೃಷ್ಣಚರಿತವೇ ಈ ಗ್ರಂಥದಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಕವಿಯು ಕಲವು ಕಡೆಗಳಲ್ಲಿ ವಿಷ್ಣುಪುರಾಣದಲ್ಲಿ ದೊರಕುವ ವರ್ಣನೆಗಳನ್ನೂ ಪದಗಳನ್ನೂ ಕನ್ನಡಿಸಿದ್ದಾನೆ, ಕೆಲವು ಕಡೆ ಮೂಲದ ಆನುಪೂರ್ವಿಗಳನ್ನೂ ವರ್ಣನೆಗಳನ್ನೂ ವ್ಯತ್ಯಾಸಮಾಡಿಸಿದ್ದಾನೆ, ವರ್ಣನಾಭಾಗಗಳಲ್ಲಿ ಅನೇಕ ಪದ್ಯಗಳನ್ನು ಸ್ವಪ್ರತಿಭಾಶಕ್ತಿಯಿಂದಲೂ ಕೆಲವು ಕೆಲವನ್ನು ಪಂಪಾದಿಗಳಂತೆ ಪೂರ್ವ ಕವಿಗಳ ಭಾವಾನುವಾದದಿಂದಲೂ ರಚಿಸಿದ್ದಾನೆ ಈ ಗ್ರಂಥದಲ್ಲಿ ಕೃಷ್ಣನ ಜನನ ಮೊದಲುಗೊಂಡು ಸಾಲ್ವವಧದವರೆಗೆ ಕಥೆ ಹೇಳಿದೆ. ಈ ಭಾಗದಲ್ಲಿ 'ನಿಕೋತ್ತರಶತಕೃತ್ಯಗಳು' ವರ್ಣಿತವಾಗಿರುವಂತೆ ಗ್ರಂಥಾಂತ್ಯದಲ್ಲಿ ದೊರಕುವ ವಿಷಯ ಸಂಗ್ರಹದಿಂದ ಗೊತ್ತಾಗುತ್ತದೆ.

ಈ ಕಾವ್ಯವು ಪ್ರೌಢವಾಗಿಯೂ ಬಹಳ ಮಟ್ಟಿಗೆ ಜೈನಸರಣಿಯಲ್ಲಿಯೇ ಗ್ರಥಿತವಾಗಿಯೂ ಇದೆ. ಕವಿಯು ತನಗೆ 'ಪೊಸತೆನಿಪ್ಪ ವ್ಯುತ್ಪತ್ತಿದುರ್ಗಾಣ್ಮವು' ಉಂಟೆಂಬುದಾಗಿ ತಿಳಿಸಿ ತಾನು 'ವಚಸ್ಸುಂದರೀನೃತ್ಯನಿವಾಸ' ನೆಂದೂ ತನ್ನ ಕಾವ್ಯವು 'ಅನವದ್ಯಂ ರೀತಿಚೋದ್ಯಂ ಸಕಳವಿಬುಧಹೃದ್ಯಂ' ಎಂದೂ ಹೇಳುತ್ತಾನೆ. ಈ ಅಭಿಪ್ರಾಯವನ್ನೇ ಸಮರ್ಥಿಸುವಂತೆ ದೇವಕವಿಯೂ ಕೂಡ 'ರುದ್ರಭಟ್ಟನಪುದಿಪ ನವಪ್ರಗಲ್ಭಗುಣ' ವನ್ನು ಶ್ಲಾಘಿಸಿದ್ದಾನೆ. ಈ ಗ್ರಂಥವು ಕಲವು ಮಟ್ಟಿಗೆ ಜೈಮಿನಿಯಂತೆಯೇ ಪಂಡಿತರಿಂದಲೂ ಪಾಮರರಿಂದಲೂ ಸಹ ಪರಿಗೃಹೀತವಾಗಿದ್ದಂತೆ ಕಾಣಬರುತ್ತದೆ.

---

# ವಿಷಯಾನುಕ್ರಮಣಿಕೆ.

---

# ಶುದ್ಧಿಪತ್ರಿಕೆ

| ಪ್ರುಟಂ. | ಪಙ್ಕ್ತಿ | ಅಶುದ್ಧಂ. | ಶುದ್ಧಂ. |
|---|---|---|---|
| ೬ | ೧೯ | ವೇದಶಾಸ್ತ್ರ | ವೇದಶಾಸ್ತ್ರಾರ್ಥ |
| ೮ | ೧ | ನವಗಾದೀ | ಎವಗಾದೀ |
| ,, | ೮ | ನೈರೃತಿಯುಭಿ್ದಪಂ | ನೈರೃತಿಯುಬ್ಧಿಪಂ |
| ,, | ,, | ಪವದನಂ | ಪವನಂ |
| ೯ | ೧೨ | ಕಳಿದು | ಕೞಿದು |
| ೧೪ | ೯ | ಆರ್ದಿಟ್ಟಮಾತ್ರಂ | ಆರ್ದಿಟ್ಟಮತ್ರಂ |
| ,, | ೧೬ | ಬೌದಾಕೃತಿ | ಬೌದ್ಧಾಕೃತಿ |
| ೧೬ | ೬ | ಸೆಱೆಗೆಯ್ವುಜೇಯ | ಸೆಱೆಗೆಯ್ದುಜಯ್ಯ |
| ೧೯ | ೨೩ | ವ್ರಜಕೆಲ್ಲ | ವ್ರಜಕ್ಕೆಲ್ಲ |
| ೨೨ | ೧೯ | ನೊೞ್ಪನು | ನೋೞ್ಪನು |
| ೨೯ | ೧೯ | ಬ್ರಹ್ಮಪುತ್ರಂ | ಬ್ರಹ್ಮಪುತ್ತ್ರಂ |
| ೩೩ | ೨೦ | ವಾರಿದಿ | ವಾರಿಧಿ |
| ೪೮ | ೧೦ | ದೊಳಾಗಳಾಗಲಿ | ದೆ ಳಾಗಳಾಗಳ್ |
| ೫೯ | ೬ | ರಾಮನಾಂ | ರಾಮನಾ |
| ,, | ೧೮ | ಮುಷಿವರ್ | ಮುೞಿವರ್ |
| ೬೯ | ೧೯ | ಕಟಿಪೆ | ಕೞಿಪೆ |
| ೭೧ | ೨೦ | ನುಱಿ | ನುೞಿ |
| ೮೩ | ೧೯ | ಪುತ್ರ | ಪುತ್ತ್ರ |
| ೯೨ | ೧೯ | ದಧಿಹ್ರದಶತಾವರ್ತಮು | ದಧಿಹ್ರದಶತಾವೃತಮು |
| | | | { ಕ. ದರಿಹ್ರದಸತ್ತ್ವಾವರ್ತಮು<br>ಖ. ದಧಿಹ್ರದಶತಾವರ್ತಮು<br>ಗ ದದಿಹ್ರದಸತ್ತ್ವಾವರ್ತಮು } |
| ೯೫ | ೨೨ | ಭೆಷೇಕಂಮೂಡಿ | ಭಿಷೇಕಂಮಾಡಿ |

| ಪುಟಂ. | ಪಜ್ಕ್ತಿ | ಅಶುದ್ಧಂ. | ಶುದ್ಧಂ. |
|---|---|---|---|
| ೧೧೫ | ೧೭ | ಮುಖ್ರವಾದುದು | ಮೂರ್ಖವಾದುದು |
| ೧೧೮ | ೬ | ಹೃಷ್ಟತೆಯಿ ಂ | ಹೃಷ್ಟತೆಯಿಂ |
| ೧೨೦ | ೧೩ | ನೆನಗುವರ್ | ನೆನೆಗುವರ್ |
| ೧೩೦ | ೨೨ | ನೀಲಟುಪ | ನೀಲಪಟ |
| ೧೩೪ | ೧೮ | ಸಿರಿಗಂಧ | ಸಿರಿಗಂದ |
| ೧೪೨ | ೨೨ | ವಿರಳ ಾದ | ವಿರಳವಾದ |
| ೧೫೧ | ೧೮ | ಮಾಕೊರ್ಂತರಂಬಂತು | ಮಾಕೊರ್ಂದರೆಂಬಂತು, ಎಂದು ಪಾಠವಿದ್ದರೆ ಚೆನ್ನಾಗಿ ತೋರುತ್ತದೆ |
| ೧೬೫ | ೨೩ | ಘೂರ್ಣಿಸುವ | ಘೂರ್ಣಿಸುವ |
| ೧೯೭ | ೧೮ | ನಪ್ರುಕೆಯ್ದು | ನಪ್ಪುಕೆಯ್ದು |
| ೨೦೨ | ೨೧ | ಶಿಶರಹತಿಯಿಂ | ಶರಹತಿಯಿಂ |
| ೨೦೫ | ೧೯ | ಕುಟಂಬ | ಕುಟುಂಬ |
| ೨೦೬ | ೧ | ತ್ರಿಗಳ್ | ತ್ರಿಗಳ್ |
| ,, | ೨ | ತ್ರಿಗಳೇ | ತ್ರಿಗಳೇ |
| ೨೧೫ | ೧೦ | ಪಿನದಂ | ಪಿನದ್ಧಂ |
| ೨೩೪ | ೭ | ಧಿತಿನುನ್ನತಿ | ಧಿತಿಯುನ್ನತಿ |
| ೨೪೦ | ೧೧ | ರುದ್ರಮುದ್ರಾ | ರುದ್ರಮುದ್ರಾ |
| ೨೪೧ | ೧೨ | ರವಾ | ನೆರವಾ |
| ,, | ೧೮ | ನೆಕಶೋಭೆ | ಕಶೋಭೆ |
| ೨೪೪ | ೧೯ | ಕಾಮುನ ಮಂಗಳ | ಕಾ ಮನಮಂಗಳ |
| ೨೫೩ | ೧೫ | ತುಷಕಿ | ತುಡುಕಿ |
| ೨೫೪ | ೧೫ | ಪುಷ್ಷ | ಪುಷ್ಪ |
| ,, | ೧೭ | ಪುಷ್ಷ | ಪುಷ್ಪ |
| ೨೭೭ | ೪ | ನೊಬ್ಬಿದೆಂದು | ನೋಬ್ಬಿದೆಂದು |
| ,, | ೬ | ಲೇಖೆಯೊತನ್ದೆ | ಲೇಖೆಯೊಡನೆ |
| ,, | ೭ | ನೆಯ್ದಿ ಸಲೆಯಿ | ನೆಯ್ದಿ ಸಲೆಯಿ |

| ಪುಟಂ. | ಪಙ್ಕ್ತಿ. | ಅಶುದ್ಧಂ. | ಶುದ್ಧಂ. |
|---|---|---|---|
| ೨೮೩ | ೧೮ | ದೇವದೆವೇ | ದೇವದೇವೇ |
| ೨೯೬ | ೧೮ | ಕೊಟಾಟ್ಟ್ಕಾಳವುಂ | ಕೋಟಾಟ್ಟ್ಕಾಳವುಂ |
| ೩೦೪ | ೧೭ | ನಿಶ್ಜಿತ | ನಿಶ್ಚಿತ |
| ೩೨೨ | ೨೩ | ಪದಾರವುಂ | ಪದಾರ್ಥವುಂ |
| ೩೨೪ | ೧ | ವಿಂರಿಚ | ವಿರಿಂಚ |
| ೩೩೧ | ೧೭ | ಪೀಳ್ಗ | ಪೀಗಳ್ |
| ೩೩೫ | ೩ | ಕತಕೃತ್ಯರ್ | ಕೃತಕೃತ್ಯರ್ |
| ೩೭೮ | ೨೧ | ಪಾಡುನಂದನನ | ಪಾಂಡುನಂದನನ |
| ೩೯೬ | ೪ | ಯುಧಿಷಿರ | ಯುಧಿಷ್ಠಿರ |
| ೩೯೭ | ೧೩ | ಕ ಗ. — | । ಕ. ಗ — |
| ೪೪೦ | ೨ | ರೋಚನನನೊಳ್ | ರೋಚನನೊಳ್ |
| ೪೬೨ | ೯ | ನೀಳಾಳಕೌಫಂ | ನೀಳಾಳಕೌಘಂ |
| ೪೮೪ | ೧೭ | ಮದವಸ್ತುಪ್ರೌಢಿ | ಮದವಸ್ತ್ರಪ್ರೌಢಿ |
| ೪೯೫ | ೧೬ | ಕೋಸಲಕಾದಿ | ತೋಸಲಕಾದಿ |

ಶ್ರೀರಸ್ತು

---

ರುದ್ರಭಟ್ಟವಿರಚಿತಂ

# ಜಗನ್ನಾಥವಿಜಯಂ

---

## ಪ್ರಥಮಾಶ್ವಾಸಂ

ಶ್ರೀರಾಮಾನಟ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೇಪವ
ಕ್ಷೋರಂಗಸ್ಥಿತೆಯಾದ ಪಾದನಖರೋಚಿರ್ಗಂಗೆ ಪೃಥ್ವೀಶಕೋ ।
ಟೀರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದು ಭೂ
ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ ॥ ೧

ಜನನುತರಾಜಹಂಸನಯನಂ ಕಮಳಾವಸಥಂ ಕಳಾನಿಕೇ
ತನನೆನಿಸಿರ್ದ ಪೆಂಪುಪಮೆವೆತ್ತುಡಮೇನೊ ಹಿರಣ್ಯಗರ್ಭನೆಂ ।
ದೆನಿಸಿ ಯುದಾರನೆಂಬ ರಜಮೊಂದಿಯೆ ಸತ್ತ್ವನಿಧಾನನೆಂಬ ಪೆಂ
ಪನುಗುಣಮಾದ ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ ॥ ೨

ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾ
ನಿರತಂ ಲೀಲಾಕ್ರಮೋದಂಚಿತನಿರವಧಿಗಾಂಗೇಯಕಂ ದ್ವಿಟ್ಪುರಧ್ವಂ ।
ಸರತಕ್ರೋಧಂ* ವೃಷಾಂಕಂ ವಿಬುಧನುತ ನುಮಾಕಾಮಿನೀಜೀವಿತೇಶಂ
ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ ॥ ೩

ಜನಚಿತ್ತಾಹ್ಲಾದಪಾದಂ ಸಕಲಧರಣಿಭೃನ್ಮಸ್ತಕನ್ಯಸ್ತಮಾಗಿ
ರ್ಪಿನಮುಚ್ಚಂಡಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿ।

---

* ಕ—ಕ್ರೋಡಂ

ರ್ಪಿನಮುದ್ಯನ್ಮಂಡಲಾಗ್ರಂ ಸಲೆ ಘನಪದವೀಶೋಭೆಯಂ ಪೆರ್ಚಿಸುತ್ತಿ
ರ್ಪಿನವೊಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಂಡ
ದೇವಂ ॥ ೪

ಅರಿರೌದ್ರಂ ಕರದೈಶ್ವರ್ಯ ಮುಲ್ಲಸದಹೀನಾಲಂಕೃತಂ ಮೂರ್ತಿ ಸಾ
ಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ ।
ವರದಾನಂ ನತಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾ
ಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ ॥ ೫

ಕೆಸಱೊಳ್ ಪುಟ್ಟಿದುದಂತುಮಲ್ಲದೆ ರಜಸ್ಸಂಲೀಢಮೆಂತುಂ ಜಡಾ
ವಸಥಂ ಚಿಃ ಮಧುಪಪ್ರಸಂಗಿ ಖರದಂಡಂ ಮತ್ತೆನುತ್ತಬ್ಜಮಂ ।
ಬಿಸುಟತ್ಯುತ್ತಮಮಿಂತುಟೆಂದು ಪಿರಿದುಂ ಸಂತೋಷದಿಂ ವಾಣಿ ಬಂ
ದು ಸಮಂತಿರ್ಕೆ ನವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ ॥ ೬

ಕೋಕನದಗರ್ಭನಿಂ ವಾ
ಲ್ಮೀಕಿಯೆ ಕವಿ ಮುನಿನಿಕಾಯದೊಳ್ ಸಂದತ್ತೀ ।
ಲೋಕಕ್ಕೆ ನಾನೃಷಿಃ ಕುರು
ತೇ ಕಾವ್ಯಮೆನಿಪ್ಪ ಮಹಿಮೆ ತನ್ಮುನಿವರನಾ ॥ ೭

ಸ್ತುತಿಗೆಯ್ವೆಂ ಕೃತಪಂಚಮಶ್ರುತಿಪುರಾಣವ್ಯಾಸನಂ ವ್ಯಾಸನಂ
ಕೃತಿಲೋಕಶ್ರುತಿಪೂರಕಲ್ಪಕವಿತಾಗೀರ್ಬಾಣನಂ ಬಾಣನಂ ।
ಚತುರೋಕ್ತಿಪ್ರಚುರಾರ್ಥಕಾವ್ಯಜನಿತೋರ್ವೀಹರ್ಷನಂ ಹರ್ಷನಂ
ಶತಪತ್ರಾಕ್ಷಕಥಾಮೃತಚ್ಯುತಬುಧಸ್ತೋಮಾಘನಂ ಮಾಘನಂ ॥ ೮

ಸುಕವಿಜನಗಣನೆಯೊಳ್ ದ
ತ್ತಕನಿಷ್ಠಿಕನಾಗೆ ಕಾಳಿದಾಸಂ ಮೊದಲೆಂ ।
ದು ಕರಂ ಬಣ್ಣಿಪರದಱಿಂ
ದೆ ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ ॥ ೯

---

* ಕ—ಶ್ರೀಜಗನ್ನಾಥದೇವಂ, ಗ. ಘ—ಶ್ರೀಜಗನ್ನಾಥಸೂರ್ಯಂ.

ಇನಿತುಮವಿರ್ಕೆ ಮತ್ಕೃತಿಯೊಳೀಧರೆ ಬಣ್ಣಿಸೆ ಸಂದ ಶಂಖವ
ರ್ಮನ ಬಗೆ ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ ।
ಮನಸಿಜನೋಜೆ ಕಣ್ಣಮನ ಜಾಣ್ನುಡಿ ಪಂಪನ ರೀತಿ ಚಂದ್ರಭ
ಟ್ಟನ ಜತಿ ಪೊನ್ನಮಯ್ಯನ ಬೆಡಂಗು ಗಜಾಂಕುಶನುಳ್ಳ ಬಿನ್ನಣಂ ॥ ೧೦

ಉತ್ಸವಕರಮೆನೆ ಬೆಳಪ ಶ
ರತ್ಸಮಯದೊಳಿಂದುಕಾಂತಿ ದಳವೇಱುವವೊಲ್ ।
ವತ್ಸಳರೆನಿಸುವ ಬುಧರಿನ
ಮತ್ಸರರಿಂ ಕೃತಿ* ಕೃತಾರ್ಥಮಕ್ಕುಮಮೋಘಂ ॥ ೧೧

ತುಡುಕಿದ ದೋಷಿಯನಲ್ಲದೆ
ಪಿಡಿಯದು ಘಟಸರ್ಪನಂತುಟಲ್ಲದೆ ತನ್ನಂ ।
ತುಡುಕದ ನಿರ್ದೋಷಿಯುಮಂ
ಪಿಡಿವುದು ಖಳಮುಖಘಟೋಗ್ರಜಿಹ್ವಾಸರ್ಪಂ ॥ ೧೨

ಕವಿತಾಪ್ರೌಢನೆ ಸೋಲ್ವವೊಲ್ † ಕೃತಿಯೊಳಜ್ಞಂ ಸೋಲ್ವನೇ ‡ ಚಂದ್ರಕಾಂ
ತವೊಸರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ ತುಂಬಿ ಪೀ।
ರ್ವವೊಲೇಂ ಪೀರ್ದಪುದೇ ಕಡಂದುಱುತೆ ನವ್ಯಾಮೋದಮಂ ಪೂಗಳೊಳ್
ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ ॥ ೧೩

ಅರ್ಥಾಭಾಸದಿನಕ್ಷರ
ಸಾರ್ಥಮನುಚ್ಚರಿಸೆ ಕಾವ್ಯಮೆಂತೆಸೆಗುಂ § ತ ।
ತ್ತ್ವಾರ್ಥಮನಱಿಯದ ಮುನ್ನಮ
ಪಾರ್ಥಂ ರಂಜಿಸದ ¶ ಪಳಿಕು ಮಣಿಯವೊಲಿರದೇ ॥ ೧೪

---

* ಕ—ಅಮತ್ಸರಮತ್ಕೃತಿ † ಕ. ಖ.—ಸೊಲ್ವವೊಲ್.
‡ ಕ. ಖ.—ಸೊಲ್ವನೇ. § ಖ—ಮಂತೆಸೆಗುಂ. ¶ ಕ.—ರಂಜಿಸಿದ.

ಪೊಸತೆನೆ ಪೇೞ್ವ ತಿರ್ದುವೞಿವೆನ್ನೊಳ್ ಸನ್ನಿದವಾದೊಡಂ ಕರಂ
ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ತವೆಂತೆ ತಿ ।
ರ್ದಿಸುವುದೆ ನಲ್ನಯಂ ಬೆಳಗೆ ಕನ್ನಡಿ ಸೋದಿಸೆ ಪೊರ್ಲ್ ವಿರಾಜಿಪಂ
ತೆಸೆದು ಬೞಿಕ್ಕೆ ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ॥

ಇನಿಯುಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ
ದನರಸದಣ್ಪಿನಂತೆ ನನೆಯೇೞಿದ ಮಲ್ಲಿಗೆಯಂತೆ ಪೂರ್ಣಚಂ ।
ದ್ರನ ಸಿರಿಯಂತೆ ಬಂದೆಸಪ ತೆಂಕಣ ತಂಬೆಲರಂತೆ ರುದ್ರಭ
ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ ॥ ೧೬

ಈತೆಱದಿಂ ಬುಧರ್ ಪೊಗೞ್ದೆ ಮತ್ಕೃತಿಯಂ ನೆಱೆ ಶಾರದಾಭ್ರಚಂ
ದ್ರಾತಪ ರುದ್ರ ಕೃಷ್ಣಕಥೆವೇೞೆನೆ ಕಾವ್ಯಸಮಾಧಿಯಿಂ ಪರಂ ।
ಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳತತ್ತ್ವಬೋಧಮು
ದ್ದ್ಯೋತಿಪುದೆಂಬುದಂ ಬಯಸಿ ಪೇೞಲೊಡರ್ಚಿದೆನೀಪ್ರಬಂಧಮಂ ॥

ಅಳವಲ್ಲೀಸ್ತುತಿ ಯೆನ್ನ ಚಿತ್ತವಣುಮಾತ್ರಂ ಜಿಹ್ವೆಯೊಂದಕ್ಕರಂ
ಗಳುಮೈವತ್ತೆರಡೆಂಬ ಚಿತ್ತವಖಿಳೋರ್ವೀವ್ಯಾಪಕಂ ಜಿಹ್ವೆ ಕೇ ।
ವಳಮಲ್ತೇನುಮನೆಂಬುದಕ್ಕರಮುಮೆಲ್ಲಾ ವೇದಶಾಸ್ತ್ರಂಗಳಂ
ಬಳಸಿತ್ತಂತುಮತರ್ಕ್ಯಮಲ್ಲವೆ ಮಹತ್ತ್ವಂ ವಿಷ್ಣು ಸರ್ವಜ್ಞನಾ ॥ ೧೮

ಪಿರಿಯಂ ಬ್ರಹ್ಮಾದಿದೇವರ್ಕಳಿನೆನುತುಮದೇಂ ವಿಷ್ಣುಗಶ್ಲಾಘೆಯಂ * ಬಿ
ತ್ತರಿಪೆಂ ಕುಂಭಾಂಬುವಿಂದಂಬುಧಿಜಳ ಮಣುವಿಂ ಪರ್ವತಂ ಕ್ಷುದ್ರ ಶಂಖೋ ।
ದರದಿಂ ಬ್ರಹ್ಮಾಂಡಗರ್ಭಂ ಪಿರಿದೆನೆ ಪೊಗೞ್ವೆಂದಮೇ ವೇದಶಾ
ಸ್ತ್ರರಹಸ್ಯಾಚಿಂತ್ಯಸಾಮರ್ಥ್ಯದ ಮುರಹರನಂ ಬಣ್ಣಿಸಲ್ ಬಲ್ಲನಾವಂ ॥

ಏದೊರೆಪೆಂಪೊ † ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪ
ದ್ಮೋದಕಮಿಂದ್ರಮುಖ್ಯದಿವಿಜರ್ ಸ್ವಪರಿಗ್ರಹಮಬ್ಜಜಂ ಸ್ವಕೀ ।
ಯೋದರಪದ್ಮಯೋನಿಭವನಾತ್ಮತನೂಭವನೆಂದೆನಿಪ್ಪ ದು
ಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ ॥ ೨೦

* ಕ ಖ.—ನೆನೆಯುಮದೇಂ ವಿಷ್ಣುಗಶ್ಲಾಘ್ಯಮಾಂ. † ಕ—ಮೋದಮ ಮೂರ್ತಿ.

ಇತಿ ವಿಷ್ಣು ಪುರಾಣಂ ಸ
ತ್ಕೃತಿವೇಟ್ಟಿಂ ಸುಕವಿರುದ್ರ ನೀಕೃತಿಗೆ ಕಥಾ ।
ಪತಿ ಕೃಷ್ಣಂ ಕೃತಿಯುಂ ಭೂ
ನುತಮೆ ಜಗನ್ನಾಥವಿಜಯಮೆನೆ ಮೆಚ್ಚದರಾರ್ ॥ ೨೧

ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ ವಚಸ್ಸುಂದರೀನೃ
ತ್ಯನಿವಾಸಂ ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚಿ ರುದ್ರಾಂ ॥
ಕನೆ ಪೇಟ್ಟಿಂ ದೇವಚೂಡಾಮಣಿಮಣಿಮುಕುರಂ ವಿಷ್ಣು ಕೈಕೊಳ್ವನೆಂದಂ
ದನವದ್ಯಂ ರೀತಿಚೋದ್ಯಂ ಸಕಲವಿಬುಧಹೃದ್ಯಂ ಸಮಂತೀಪ್ರಪದ್ಯಂ ॥

ವ॥ ಅದೆಂತೆಂದೊಡೆ—

ನಳಿನೀಗರ್ಭಾಂಡಮಾಲಾಫಲಿತಮೆನಿಪ ಪೃಥ್ವೀಮಹಾವಲ್ಲಿಯಂ ತಾಂ
ಬಳಸಿರ್ದಾವಾಲದಂತಿರ್ಪುದು ಜಲಚರಸಂಭೂತಸಂಪದ್ವಿಧಾನಂ ।
ವಿಳಸದ್ರತ್ನಪ್ರತಾನಂ ಕುಲಗಿರಿಶರಣಸ್ಥಾನಮುತ್ಕೀರ್ಣಫೇನಂ
ಬಳವದ್ವೀಚೀವಿತಾನಂ ಪ್ರಬಳಘುಳುಘುಳುಧ್ವಾನಮಂಭೋನಿಧಾನಂ ॥

ಆನೆಗಟ್ಟಿ ಮಹಾವಾರಿನಿ
ಧಾನಂ ಪರಿವೇಷ್ಟಿಸಿರ್ದ ಜಂಬೂದ್ವೀಪಂ ।
ತಾನೆಸೆದುದು ವೃತ್ತತೆಯಿಂ
ದಾನವಮರ್ದನನ ಕೂರ್ಮಮೂರ್ತಿಯ ತೆಱದಿಂ ॥ ೨೪

ನೆಗಟ್ದಾ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ ಪಲ್ಲವಂ
ಭಗಣಂ ಪಂಜರಮಂಬುದಾಳಿಯೆನೆ *ಪೂರ್ಣಾಬ್ಜಾಸನಂ ಪ್ರೀತಿ ಕೈ ।
ಮಿಗೆ ದೈತ್ಯಾಂತಕನಾಮದಿಂದೆಸೆವ ಲಕ್ಷ್ಮೀವಲ್ಲಭಂಗೆತ್ತಿದಾ
ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ ॥ ೨೫

ವ॥ ಆಮೇರುಗಿರಿಯ ಶಿಖರನಿವಾಸದೊಳ್,

ನತನಾನಾಮರಮೌಳಿರತ್ನ ಕಿರಣಂ ನಾನಾಪ್ಸರಃಕೇಕರ
ದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗ ।

* ಕ. ಖ.—ಪಂಜರಂ ಭಗಣಂ, ಪಲ್ಲವಮಂಬುರಾಶಿಯೆನೆ.

ತ್ಪ್ರತಿಯೊಡ್ಡೋಲಗದೊಳ್ ಚತುರ್ಮುಖನತರ್ಕ್ಯಬ್ರಹ್ಮತೇಜಶ್ಶಿಖಂ
ಶ್ರುತಿಗಾನೈಕಸುಖಂ ನಮಚ್ಛ್ರಿತಮಖಂ ವಾಣೀವಧೂಟೀಸಖಂ ॥ ೧೬

ವ॥ ಅಂತಿರ್ಪನ್ನೆಗಂ, *

ಗರ್ವಿತನೃಪಾಲಕಾಧಮ
ದುರ್ವಿಳಸನಜನಿತಘೋರಭಾರದೊಳಸುಂ ।
ನಿರ್ವಿಣ್ಣೆಯಾಗಿ ಭೂವಧು
ಗೀರ್ವಾಣಾವೃತವಿರಿಂಚಿಸಭೆಯಂ ಪೊಕ್ಕಳ್ ॥ ೧೭

ವ॥ ಅಂತು ಪೊಕ್ಕು ಮುಕುಲಿತಾಂಜಲಿಯಾಗಿ ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ,

ಹೃದಯದಯಾಮೃತಮಾಹಿನಿ
ವದನದೆ ಕಡೆಗೋಡಿವರಿದುದೆನೆ ನಿಜದಶನಾ ।
ಘದ ವಿಶದಪ್ರಭೆ ಸಭೆಯಂ
ಪುದಿಯೆ ಮಹೀವಧುಗೆ ವನಜಭವನಿಂತೆಂದಂ ॥ ೧೮

ಇನಿತೊಂದುದ್ವೇಗ ಮೇವಂ ಮರುಕಮದವೆಳಲ್ಬೇವಸಂ ನಿನ್ನೊಳೇಕಾ
ಯ್ತುನಿಮಿತ್ತಂ ಪುಟ್ಟತೇಕಾರಣದಿನುದಯಿಸಿತ್ತೇತಱಿಂ ಪ್ರಾಪಿಸಿತ್ತಾ ।
ವನಿನಾದತ್ತೆಂತು ಪೊಣ್ಮಿತ್ತೆನೆ ವನರುಹಗರ್ಭಪ್ರಸಾದೋಕ್ತಿಯಂ ಕೇ
ಳ್ದನಿತಾನುಂ ಗದ್ಗದತ್ವಂ ನೆಗಪೆ ವಸುಮತೀಕಾಂತೆ ಯಿಂತೆಂದಳಾಗಳ್ ॥

ತ್ರಿದಿವಂಬೋಲ್ ದಿಗ್ಗಜರಾಜಿ ಗೋಣ್ಗುಸಿದು ವಕ್ತ್ರಶ್ವಾಸಮಂ ಬೀಱುತಿ
ರ್ಪುದು ನಾಲ್ಬಟ್ಟೆಯ ಪಿಟ್ಟೆವೋಲ್ ಕುಲನಗೌಘಂ ನುರ್ಗ್ಗಿದತ್ತಾನೆ ಮೆ ।
ಟ್ಟಿದೆಸರ್ಮುಱ್ಱೆವೊಲಾಗಿ ಕೂರ್ಮನೊಡೆದಂ ಶೇಷಂ ಫಣಂ ಬಳ್ಕಿ ಸು
ರ್ಕಿದಪಂ ಸೀರೆಯ ಸಿಂಬಿವೋಲ್ ಖಳನೃಪಾಲಾಕ್ಷೌಹಿಣೀಭಾರದಿಂ ॥ ೨೦

* ಕಥಾವತಾರವೆಂತೆಂದೊಡೆ ಅಂಬುಧಿಪರಿವೃತಜಂಬೂದ್ವೀಪಮಧ್ಯದ ಮೇರುಗಿರಿಯ ಶಿಖರದ ನಿಜನಿವಾಸದೊಳ್ ಸಕಲದೇವಗಣಪರಿವೃತನಾಗಿ ಲೀಲೆಯಿಂದೊಡ್ಡೋಲಗದೊಳಿರ್ದ ಪಿತಾಮಹಂಗೆ ಪೇೞಲೆಂದು ಭೂಕಾಂತೆ ತಳರ್ದಳ್—ಎಂಬ ಗದ್ಯವು ಕ, ಖ —ಪುಸ್ತಕಗಳಲ್ಲಿದೆ.

ಪ್ರಕಟಂ ವಾರಿಧಿವೇಲೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾ
ಧಕಭಾವಂ *ನೆಗಟ್ಟಿಲ್ಕೆ ನಿನ್ನ ತೆಱದಿಂದೀಸೃಷ್ಟಿಗನ್ಯೋನ್ಯಸೈ।
ನಿಕಸಂಗ್ರಾಮದೆ ಬಾಧ್ಯಬಾಧಕತೆ ಪುಟ್ಟಲ್ ನಿಲ್ವೆನಾನಿಂತು ಸೃ
ಷ್ಟಿಕರಂ ಪೆರ್ಚಿದೆ ದೇವ ತಾಳ್ದು ನಿಲಲಾಱೆಂ ತನ್ಮಹಾಭಾರವಂ ॥ ೩೧

ವ॥ ಎಂದು ಮೇದಿನೀದೇವಿ ಬಿನ್ನಪಂಗೆಯ್ಯೆ ಸರೋಜಸಂಭವಂ ದೇ
ವೇಂದ್ರಮಂತ್ರಿಯಪ್ಪ ಬೃಹಸ್ಪತಿಯ ಮೊಗಮಂ ನೋಡಲಾಂಗಿರಸಂ
ಕರ ಕಮಲಂಗಳಂ ಮುಗಿದು, †

ಪಾವಕನೇತ್ರನಾಗಿ ತಮದಿಂ ರಜದಿಂದಜನಾಗಿ ಸತ್ತ್ವದಿಂ
ಶ್ರೀವರನಾಗಿ ತೋಱುವ ಗುಣತ್ರಯಧಾಮನಮೇಯನವ್ಯಯಂ ।
ದೇವರ ದೇವನಾದಿಪುರುಷಂ ಜಳಶಯ್ಯೆಯೊಳಿರ್ದಪಂ ತ್ರಿಲೋ
ಕಾವನನಾಮಹಾವಿಭುಗೆ ಪೇೞದೆ ಪದ್ಮಜ ತೀಱದಾರೊಳಂ ॥ ೩೨

ಸುರರ್ಗೆ ಗುರು ವಜ್ರಿ ವಜ್ರಿಗೆ
ಗುರು ವಾನೆನಗಬ್ಜಗರ್ಭ ನೀಂ ಗುರು ನಿನಗಂ ।
ಪರಮಗುರು ವಿಷ್ಣು ವಿಷ್ಣುಗೆ
ಪಿರಿಯರ್ ಮತ್ತಿಲ್ಲ ದೇವರಿದುವೆ ಯಥಾರ್ಥಂ ॥ ೩೩

ವ॥ ಎನೆ ವನಜಸಂಭವನದಂ ಮನದೆ ಕೊಂಡು,

ಜನಕನೆ ನಾಂ ನಿನಗೆನಗಾ
ದನುಜಹರಂ ಜನಕನದಱಿನಾನಭಿಮತವಂ ।
ನಿನಗೆನಗಭಿಮತವಂ ವಿ
ಷ್ಣು ನೆಗಟ್ಟಿದೊಡೆಮಗದಾರ ‡ಚರಣಂ ಶರಣಂ ॥ ೩೪

ವ॥ ಎಂದು ತಮ್ಮೊಳಾಳೋಚಿಸಿ ಮೇದಿನೀದೇವಿಗತಿ ಪ್ರಮೋದವಂ
ಪಡೆದು ಕಳಿಪಿ ತದೀಯಖೇದಮಂ ತನಗಪ್ಪ ಕೆಯ್ದುರ್ಪುದಂ ಕಂಡು,

---

* ಕ. ಖ.—ಭಾರಂ. † ಇದು ಘ—ಪುಸ್ತಕದಲ್ಲಿ ಮಾತ್ರ ದೊರೆಯುತ್ತದೆ.
‡ ಕ—ಡೆಂತುಮಾರ

ನಮಗಾದೀಖೇದಮಂ ಬಿನ್ನವಿಪಮೆಹಿಪ * ತಲ್ಪಂಗೆ ದರ್ಪೋನ್ಮಿಳದ್ದಾ
ನವ ‡ ಸೇನಾಕಾಲಕಲ್ಪಂಗಘಕುಲವನದಾವಂಗೆ ರಕ್ಷಾರ್ಥಮೊಂದೊಂ ।
ದವತಾರಂಗೆಯ್ದು ದೇವಂಗೆನುತೆ ತೆರಳಲುದ್ಯುಕ್ತರಾದರ್ ಸಭೂಭಾ
ರವಿಷಾದರ್ ದೈತ್ಯಪೀಡಾಕುಪಿತನಿಜಮನಃಪದ್ಮರಾನಾಕಸದ್ಮರ್ ॥ ೩೫

ವ॥ ತದನಂತರಂ,

ಭೋರೆನೆ ತೂರ್ಯ್ಯವಂಚೆಯನಜಂ ಗಜಮಂ ಬಳವೈರಿ ಮೇಷಮಂ
ಮಾರುತಬಂಧು ಸೈರಿಭಮನಂಬುಜಮಿತ್ರಸುತಂ ನೃವಾಹಮಂ ।
ನೈರೃತಿಯಬ್ಧಿಪಂ ಮಕರಮಂ † ಮೃಗಮಂ ಪವದನಂ ವಿಮಾನಮಂ
ಮಾರಹರಪ್ರಿಯಂ ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ ॥ ೩೬

ಧವಳಾಬ್ಜಗೌರಹಂಸ
ಪ್ರವರನ ಮೇಲಬ್ಜರಾಗರುಚಿಯೆನಿಪಬ್ಜೋ ।
ದ್ಭವನೇಂ ಬೆಳಗುತ್ತಿರ್ದ್ದನೊ
ಧವಳಾಭ್ರದ ಮೇಲೆ ಬೆಳಗುವೆಳನೇಸಱವೋಲ್ ॥ ೩೭

ಅಮರನದೀಹಂಸಕುಳಂ
ಕಮಳಜಹಂಸೇಂದ್ರಸೇವೆಗೆಱ್ತರ್ಪವಿಳಾ ।
ಸಮದೆನಿಸಿ ದೆಸೆವೆತ್ತುವು
ಕಮಳಭವಂಗಿಕ್ಕುವಮಳ ಚಮರರುಹಂಗಳ್ ॥ ೩೮

ವಳಯರವಂಗಳುಣ್ಮೆ ಸುರಕನ್ಯೆಯರಿಕ್ಕುವ ಚಾಮರಂ ತೆಱಿಂ
ಬೊಳೆಯೆ ಸುರೇಭಕಂಧರದೊಳಿರ್ದ್ದ ಸಹಸ್ರವಿಳೋಚನಂ ಮನಂ ।
ಗೊಳಿಸಿದನಿಂಚರಂ ಬೆರಸಿದಂಚೆಗಳಾಡುವ ಗಾಂಗತುಂಗನಿ
ರ್ಮ್ಮಳಪುಳಿನಾಗ್ರದೊಳ್ ಮಿಸುಪ ನೀಳಸರೋಜವನಾಳಿಯಂದದಿಂ ॥

ವ॥ ಆಗಳುಂ,

---

*ಕ, ಖ, ಗ—ಬಿನ್ನವಿಸಪಣಿಪ. † ಘ—ಮತ್ಸ್ಯಮಂ ವನಧಿಪಂ.
‡ ಕ, ಖ, ದರ್ಪೋನ್ಮದದ್ದಾನವ.

ಹಿಮಶೈಲೇಂದ್ರಮೆಱಿಂಕೆಯಂ ತಳೆದು ಬಂದಾಕಾಶದೊಳ್ ನೋಡೆ ಮೇ
ರುಮಹಾಶೈಲಮನಾಂತು ಪಾಱಿದಪ್ಪುದೆಂಬನ್ನಂ ಮಹಾಪಾಂಡುಬೇ ।
ಹಮುಮುಜ್ಜೃಂಭಿಪೆಱಂಕೆಯುಂ ಬಗೆಗೊಳಲ್ ಪದ್ಮೋದ್ಭವಂ ಭೂರಿರಾ
ಗಮೆಯಾಂಗಂ ತನಗೊಪ್ಪಲಬ್ಜಭವಹಂಸಂ ಪಾಱಿತಬ್ದಾಧ್ವದೊಳ್॥ ೪೦

ನಿಜನಿಜರಾಜಚಿಹ್ನನಿವಹಂ ಪರಿರಂಜಿಸೆ ಶಂಖಕಾಹಳಾ
ಪ್ರಜವಿಜಯಾನಕಧ್ವನಿ ವಿಜೃಂಭಿಸೆ ಕಿನ್ನರಗೇಯನಿಸ್ವನಂ ।
ವಿಜಯಿಸೆ * ದಿವ್ಯಭೂಷಣಮರೀಚಿ ರವಿಪ್ರಭೆಯಂ ಪಳಂಚೆ ನಾ
ಕಜರಜನಿರ್ಕೆಲಂಬಿಡದದೇಂ ನಡೆಗೊಂಡರೊ ಮೋಕ್ಷಮಾರ್ಗದೊಳ್॥ ೪೧

ಪವನಪಥಾಂತರದೊಳ್ ಪವ
ನವೇಗದಿಂ ಸಾಮಜಾದಿವಾಹನಸಹಿತರ್ † ।
ದಿವಿಜರನೇಕದ್ವೀಪಾ
ರ್ಣವಂಗಳಂ ಕಳಿದು ಮುಟ್ಟೆವರ್ಪವಸರದೊಳ್ ॥ ೪೨

ಬಳಪೊಯ್ದಾಗಸಮಂ ಸಮುದ್ರಮೆಸೆದತ್ತಾಕಾಶಮಾರ್ಗಶ್ರಮಂ
ಗಳನೊಲ್ದಾಱಿಸಲುಷ್ಣರೋಚಿಗೆ ನಿಜೋತ್ಫೇನಾತಪತ್ರಂಗಳಂ ।
ತಳೆವುಚ್ಛೀಕರಪುಷ್ಪಮಂ ಕೆದಱುವುನ್ಮುಕ್ತಾಕ್ಷತವ್ರಾತಮಂ
ತಳೆವುದ್ವೀಚಿವಿಲೋಲಚಾಮರಮನೆತ್ತಂ ಬೀಸುವೊಂದಂದದಿಂ ॥ ೪೩

ಚಕಿತತರಂಗಸಂಘಹತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂ
ನಿಕರದ ತೊಟ್ಟ ಮುತ್ತಿನೊಳೊಡಂಬಡೆ ಸೂಸುವ ಶೀಕರಾಳಿ ತಾ ।
ರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕರತ್ನಗರ್ಭಶು
ಕ್ತಿಕೆ ಪೆಱೆಯೊಳ್ ತಡಂಬಡೆ ಸುಧಾರ್ಣವವೊಪ್ಪಿದುದುದ್ಗತಾರ್ಣವಂ ॥ ೪೪

ವ॥ ಆಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ ; ಭಂಗವ್ಯಾಕುಳಿತಮಾಗಿಯುಮಚ್ಯುತಪ್ರಭಾವಭಾಸುರಮುಂ ; ಅಪ್ಪ್ರತಿಷ್ಠಿತಮಾಗಿಯುಂ ಲಕ್ಷ್ಮೀಜನ್ಮಭವನಮುಂ ; ಮದ್ಯಜನ್ಮಸ್ಥಾನ

---

ಕ.ಖ.—ಭಜಿಯಿಸೆ. † ಖ.—ಕಾಮಗಾಮಿವಾಹನಸಹಿತರ್.

ವಾಗಿಯುಂ ಬಾಡಬೋಪಭೋಗಯೋಗ್ಯವುಂ ; ಕಾಲಕೂಟಪ್ರಭವ ವಾಗಿಯುಂ ಅಮೃತೋದಯಕ್ಷೇತ್ರವುಂ , ಜಡಪ್ರಕೃತಿಯಾಗಿಯು ಮುದಾತ್ತಸತ್ತ್ವಮುಂ ; ವಜ್ರಾವಲಂಬಿಯಾಗಿಯುಂ ಕುಲಶೈಲಪಾಲ ನಸ್ವಭಾವಯುಕ್ತಮುಂ ; ಮುಕ್ತಾಧಾರವಾಗಿಯುಮನಂತಾಧಾರ ಮುಂ ; ಮತ್ತಮದು ರಸಾತಳದಂತೆ ವಿಷಧರಸಿಷೇವ್ಯಮುಂ ; ಸಾರ್ವಭೌ ಮಭವನಾಂಗಣದಂತನೇಕವಾಹಿನೀಪ್ರಸಂಗಿಯುಂ , ಗಾಣಿಕ್ಯಗೇಹರಾಜಿ ಯಂತೆ ಪಲ್ಲವಿಕಸಂತಾನಕ್ರೀಡಾಪ್ರಪಂಚಿಯುಂ ; ಅರಣ್ಯದಂತಗಣ್ಯ ವಿದ್ರುಮವಲ್ಲರೀವೇಲ್ಲಿತಮುಂ ; ತಾರಾಧ್ವದಂತೆ ದುರ್ಧರಗ್ರಹನಿರುದ್ಧ ಮುಂ ; ನಾಕಲೋಕದಂತನಿಮಿಷಪ್ರಕೀರ್ಣಕಮುಂ ; ಕಂದರ್ಪನಂತೆ ಶಂಬರಮದವಾರಣೋದಾರಮುಂ , ಐರಾವತದಂತೆ ಪುಷ್ಕರಶೀಕರೋ ದಾರಮುಂ ; ತ್ರಿಪುರಾರಿಯಂತೆ ವಿಷೋರಗಧಾರಿಯುಂ ; ಪುರುಷೋತ್ತಮ ನಂತೆ ಶಂಖಚಕ್ರಾಂಕಿತಮುಂ ; ಚತುರ್ಮುಖನಂತೆ ಸರಸ್ವತೀಪತಿಯು ಮೆನಿಸಿದುದು. ಅಂತುಮಲ್ಲದೆ,

ಪದಿನಾಲ್ಕುಂ ಲೋಕಮಂ ಕಿಬ್ಬೊಡೆಯೊಳ್ ತಳೆದಾವಿಷ್ಣು ತನ್ನೇಕದೇಶಾ
ಗ್ರದೊಳಿರ್ಪಂ ವರಿದಂ ತನ್ನೊಳ್ ಕತಿಪಯವಾರ್ಧಿಂದುವಂ ಪೇಟಿ ತಂದಂ ।
ತದಱಿಂದಂ ಲೋಕಮಂ ತೀವುವುದು ಪವಿಭಯಭ್ರಾಂತಿಯಿಂದಂ ಶರಣೊಬ
ಕ್ಕುದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪರ್ಣವಕ್ಕೇನೊ ಚೋದ್ಯಂ ॥ ೪೫

ವ॥ ಎಂದು ಸುಧಾರ್ಣವಮಂ ಪೊಗಟುತ್ತರವಿಂದನಾಭನಂ ಪುರಂ ದರಾದಿ ವೃಂದಾರಕವೃಂದಮಾನಂದದಿಂ ನೋಡುತ್ತುಂ ಬರೆವರೆ.

ಸುರಯೋಗೀಂದ್ರಸಮಾಜಸಂಸ್ತವಜಯಧ್ವಾನಂ ಚಳಚ್ಚಾಮರಾ
ಮರಕಾಂತಾಜನರತ್ನಕಂಕಣಝಣತ್ಕಾರಸ್ವನಂ ಕಿನ್ನರೋ ।

ತ್ಕರವೀಣಾಕ್ವಣಿತಾರವಂ ವಿಬುಧವಂದಿವ್ರಾತಮಾಂಗಲ್ಯಪಾ
ಠರವಂಭೋಂಕನ ಕೇಳಲಾಯ್ತು ಗೆಲೆವಂದಂಭೋಧಿಸಿಘೋಷಮಂ ॥

ವ॥ ಆಪ್ರಘೋಷದೊಳ್, *

ಶೀತೋಷ್ಣ ಭಾವರಹಿತ
ಜ್ಯೋತಿರ್ಮಂಡಲವನಂತಕೋಟಿದಿನೇಶ ।
ದ್ಯೋತಾಭಮಿರ್ದುದನಿಮಿಷ
ಜಾತಂ ಚಿರನಿಮಿಷಮಾಗೆ ಕಣ್ಣಳ್ಕ † ವಿನಂ ॥ ४೩

ವ॥ ಆಮಹಾಪ್ರಕಾಶಮಂ ಕುಶೇಶಯಗರ್ಭಂ ನೋಡಲಳ್ಕಿ ಬಳ್ಕುತ್ತುನ್ಮೀಲಿತನೇತ್ರನಾಗಿ ‡ ನಿಜಾಂತರಂಗದೊಳ್,

ಅತಿದುರ್ನಿರೀಕ್ಷ್ಯಮಾದೀ
ದ್ಯುತಿಯಂ ತೊಲಗಿಪುದು ತೋರ್ಪುದಾಕಾರಮನ ।
ಚ್ಯುತ ನೀನೆಂದಬ್ಜಜಂ
ಸ್ತುತಿಯಿಸೆ ತೊಲಗಿದುದು ತತ್ಪ್ರಕಾಶವಿಶೇಷಂ ॥ ४೮

ವ॥ ಅಂತುಮಲ್ಲದೆ, §

ನವನೀಲೋತ್ಪಲಸನ್ನಿಭಾಂಗರುಚಿಯಿಂ ಸತ್ಕಿಂಕಿರಾತೋದ್ಗಮ
ಚ್ಛವಿಪೀತಾಂಬರಕಾಂತಿಯಿಂ ಸಮುದಿತಾರ್ಕಾರಚಕ್ರಾಂಶುವಿಂ ।
ಧವಳಾಂಶೂಜ್ಜ್ವಳಶಂಖದೀಧಿತಿಯಿನಾರತ್ನಾಕರಂ ಕೂಡೆ ಬ
ಣ್ಣವುರಂ ತೀವಿದ ಮಾಟ್ಕೆಯಿಂದೆಸೆವಿನಂ ಚೆಲ್ವಾದನಬ್ಜೋದರಂ ॥ ४೯

ವ॥ ಮತ್ತಮಂತಂತೆ ನಡೆಯೆ,

ಲಲಿತವೃತ್ತಂ (ಲಯಗ್ರಾಹಿ)

ಶ್ರೀಸ್ತನಸುಕುಂಕುಮರಜಸ್ತತಿವಿಲೇಪನಗ
ಭಸ್ತಿಪರಿರಂಜಿತನಿಜೋನ್ನತವಿಶಾಲೋ ।

---

* ವ. ಅ.—ಆಪ್ರದೇಶದೊಳ್.

† ಕ— ಕಣ್ಮುಕ್ಕು ‡ ಮೊ. ಅ.—ಬಳ್ಕುತ್ತುಂ ನಿಮೀಲಿತನೇತ್ರನಾಗಿ.

§ ಕ.—ಅನ್ತುಮಲ್ಲದೆಯುಂ.

ರಸ್ತಲಪರಿಸ್ಫುರಿತಕೌಸ್ತುಭಪಿಭೂಷಣರು
ಚಿಸ್ತಬಕಿತಾಖಿಳನಭಂ ದಿವಿಜಕಾಂತಾ ॥

ಹಸ್ತಚಮರಾನಿಳಮುಹುಸ್ತರಳಿತಪ್ರಥಿತ
ಮಸ್ತಚಯಕುಂಡಲವಿಮಂಡಿತಕಪೋಲಂ ।
ಧ್ವಸ್ತದಿತಿಜಂ * ನತಸಮಸ್ತವಿಬುಧಂ ಭುವನ
ವಿಸ್ತರಣಪಾದನೆಸೆದಂ ಫಣಿಪತಲ್ಪಂ ॥ ೨೯

ವ॥ ಮತ್ತ ಮನಂತರಮಾಕಮಳನಾಭನಭಿಮುಖದೊಳಿರ್ದ ವ್ಯನ
ತೇಯನಂ ಕಂಡು,

ವಿನತಾನಂದನನಿಂದಮಕ್ಕೆ ವಿನತಾನಂದಂ ಪದಂ ಚಾರುಕಾಂ
ಚನವರ್ಣಂ ಸ್ಫಟಿಕಾಶ್ಮವರ್ಣಮುದರಂ ಮಾಣಿಕ್ಯವರ್ಣಂ ಕೊರಲ್ ।
ಘನನೀಲೋತ್ಪಲವರ್ಣಮಾಸ್ಯಮೆಸೆದತ್ತೀವರ್ಣಮಾವರ್ಣಶೂ
ನ್ಯನ ಭೃತ್ಯಂಗೆನೆವೆಂದಮಚ್ಚರಿಯೆನುತ್ತಂ ಬಂದು ವೃಂದಾರಕರ್ ॥ ೩೧

ತಮಗಿದಿರ್ವಂದುದಧಿಪನಿ
ತ್ತಮಳಮಣಿವ್ರಜದೆ ಕಲ್ಪಕುಜಮಿತ್ತ ಮಹಾ ।
ಸುಮನಃಪುಂಜದೆ ಹರಿಗ
ರ್ಘ್ಯಮನಿತ್ತರ್ ಜಯಜಯಾನ್ವಿತರ್ ಬ್ರಹ್ಮಾದ್ಯರ್ ॥ ೩೦

ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವಿ ನಿದ್ರಾಂಗನಾನಿ
ರ್ಭರಸಂಭೋಗಾಂತ್ಯದೊಳ್ಸ್ವೇದಬೆಮರ್ವನಿಯುಂ ಪೋಲೆ ವಾರಾಶಿಧೀರ
ಸ್ವರಮಂ ತಳ್ಪ್ರಯ್ವ † ಜೇಂದ್ರಾದ್ಯಮರಜಯಜಯಧ್ವಾನದಿಂದಾಗಳೆಚ್ಚ
ದರದಿಂ ಕುಳ್ಳಿರ್ದನಾಲೋಕನಕೃತವಿಬುಧಾನಂದಕಂದಂ ಮುಕುಂದಂ ॥

ವ॥ ತದನಂತರಂ,

ತಾರಗೆದುಱುಂಗಲ್ ನವಸಂ
ಧ್ಯಾರಾಗದೊಳೆಸೆವ ತೆಱದೆ ಪದನಖರುಚಿಗಳ್ ।

* ಕ—ಸ್ವಸ್ತಿವಚನಾ. † ಕ—ತಳ್ಪ್ರಯ್ದ.
‡ ಮೊ ಅ—ರುಚಿಯುಂ, ಕ, ಖ, ರುಚಿರಂ.

ಚಾರುಮಣಿಮಕುಟರುಚಿಯೊಳ್
ರಾರಾಜಿಸೆ ವಿಷ್ಣುಗೆಱಗಿ ನುಡಿದಂ ಬ್ರಹ್ಮಂ ॥ ೩೪

ಸುಮನಸ್ಸಿಂಧುವ ರೂಪದಿಂ ಮಱೆಯು ಪಾಂಗಿಂದಿನ್ನುವೆಟ್ಟಿಪ್ಪುದಂ
ದು ಮಹಾವಾಲದ ಪೊಯ್ಲೊಳುಚ್ಚಲಿಸಿದಾವುನ್ನೀರ ನೀರೆಂಬಿನಂ ।
ತಮನಂ ದೈತ್ಯಕದಂಬವೀರತಮನಂ ನಿರ್ಧೂತಬೃಂದಾರಕೋ
ತ್ತಮನಂ ಮರ್ದಿಸಿ ಮತ್ಸ್ಯರೂಪದೊಳ್ ತಂದೈ ವೇದಮಂ ಮಾಧವಾ ॥

ಬಸಿಱೊಳ್ ಸರ್ವಾಂಗಮಂ ಬೈತಿಡುವುದಿತರಕೂರ್ಮಕ್ಕಮಾಗಳ್ ನಿಜಂಬೆ
ತ್ತೆಸೆದತ್ತಂತಾತ್ಮಕೂರ್ಮಾಕೃತಿಗುದಧಿತಳಂ ಸಾಲದಂಗಂಗಳಂ ನೀಂ ।
ಬಸಿಱೊಳ್ ಬೈತಿಟ್ಟಭಿಪ್ರಾಯದಿನೆನೆ ಕಮಠಾಕಾರಮಂ ತಾಳ್ದಿದೈ ರಾ
ಕ್ಷಸವಂಶಧ್ವಂಸಿ ನೀನಂದುದಧಿಮಥನದೊಳ್ ಮಂದರೋದ್ಧಾರಣಾರ್ಥಂ ॥

ಭುವನಂ ತಾಂ ಭುವನಾತ್ಮಮಾಗೆ ಧರಯುಂ ಕಳ್ದಾ* ಹಿರಣ್ಯಾಕ್ಷನಂ
ದಿವಿಜಾಧೀಶ್ವರರೂಕ್ಷನಂ ಸಕಲಲೋಕಾಸ್ಫೋಟನಾಪೇಕ್ಷನಂ ।
ತವೆ ಕೊಂದಾದಿವರಾಹರೂಪದೊಳ್ ನೀನಂದೆತ್ತಿದೈ ಗೋವಿಂನೀ
ಧವೆ ದಂಷ್ಟ್ರಾಗ್ರವ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ ॥

ಘನಮಾರ್ಗಂ ನಖಟಂಕಭಿನ್ನದಿತಿಜಾಸೃಕ್ಪಂಕದಿಂ ಕೆಂಕಮಾ
ಗಿ ನಿಲಲ್ ಸಂಜೆಯೊಳಂದಿನಿಂ ಬೞಿಕೆ ಪಿಟ್ಟಂ ಸಂಜೆಗೆಂಪೆಂಬುದಾ ।
ಯ್ತೆನೆ ದೈತ್ಯಾಂತಕ ನೀಂ ನಿರಸ್ತಜಗದಂಹಂ ರೌದ್ರರಂಹಂ ನೃಸಿಂ
ಹನೆನಿಪ್ಪಾಕೃತಿಯಿಂ ಹಿರಣ್ಯಕಶಿಪುಪ್ರಧ್ವಂಸಮಂ ಮಾಡಿದೈ ॥ ೩೮

ಜಲದಾಧ್ವಂಬರಮೆತ್ತಿದಂಘ್ರಿಯ ನಖಾಂಶುಶ್ರೇಣಿ ತಾರಾಗಣಾ
ಚ್ಛಲದಿಂದಿರ್ಪಿನಮಿನ್ನುಮಂದವೆನಿಚಕ್ರಂ ಪಿಕ್ರಮಕ್ಕೆಯ್ದದಾ ।
ಬಲಿಯುಂ ದೈತ್ಯಕದಂಬಕೈಕಬಲಿಯುಂ ಯತ್ನೀಕೃತಶ್ಮಶ್ರುಭೃ
ದ್ಬಲಿಯುಂ ಮೆಟ್ಟೆ ರಸಾತಳಕ್ಕೆ ಱಿಪಿದೈ ನೀಂ ವಾಮನಾಕಾರದಿಂ ॥ ೩೯

---

* ಖ.—ಭುವನಂಗಳ್ ಭುವನಾತ್ಮಮಾಗೆ ಧರೆಯುಂ ತಾಳ್ದಾ.

ಪರಶುಸ್ಪರ್ಶಶತಂಗಳಿಂ ನೆಗೞ್ದವೀಪ್ರೊಂದೊಳ್ಗಳೀತಂಗೆನಲ್
ಪರಶುತ್ರುಟ್ಯದಯಃಕಠೋರಭುಜಮೂಲಾಸೃಕ್ಪಯೋಧಾರೆ ಸಾ ।
ಸಿರಮುಣ್ಮಲ್ ತಱಿದೈ ಸಹಸ್ರಭುಜನಂ ಮತ್ತಿರ್ಪತೊಸರ್ಗೊಳ್ನರೇ
ಶ್ವರರಂ   ನೀಂ ತಱಿದೊಟ್ಟಿದೈ ಪರಶುರಾಮಾಕಾರದಿಂದಚ್ಯುತಾ ॥ ೬೦

ದೇವ ನಿಜೋಗ್ರಬಾಣಹತಿಯಿಂ ತಲೆಗಳ್ ಗಗನಕ್ಕೆ ಪೀರಲ
ಕ್ಷ್ಮೀವಧುವಾಡುತಿರ್ಪ ತಿಱಿಕಲ್ಲೆನೆ ಸೂಟೊಳ್ ಪಾಱುತಿರ್ಪಿನಂ ।
ರಾವಣನಂ ಜಗತ್ತ್ರಿತಯರಾವಣನಂ ವಿಜಿತೋರುಪೀಡಿತೈ
ರಾವಣನಂ ರಘುಪ್ರಭವರೂಪದೆ ಮರ್ದಿಸಿದೈ ಜನಾರ್ದನಾ ॥ ೬೧

ಅರಿಯಂತೀಯರಿಯಂ ಕಱುತ್ತರಿಯೆನುತ್ತಾದಿಟ್ಟಮಾತ್ರಂ ನಭೋಂ
ತರದೊಳ್ ತಾಂ ಶಿಶುಪಾಲಮಸ್ತಕಸಮೇತಂ ಪಾಱೆ ಧರ್ಮಾತ್ಮಜಾ ।
ಧ್ವರದೊಳ್ ಬಾಯಿನಮಂ ಸುರಾಂಗನೆಯರೀವಂತಾಯ್ತುನಿಪ್ಪಂಬುಜೋ
ದರ ನೀಂ ತನ್ನನುಜಾತನಾದ † ಬಲಭದ್ರಾಕಾರಮೇಂ ವಂದ್ಯಮೋ ॥

ಜಗಮೆಲ್ಲಂ ನಿಜಬೋಧದೃಷ್ಟಿಯೊಳೆ ಕಾಣ್ಬಂದುದೀಚರ್ಮಚ
ಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ ನೀಂ ರಾಗಕ್ಕುತಿರ್ದತ್ತು ದೃ ।
ಗ್ಯುಗಳಂ ವ್ಯರ್ಥತೆಯಿಂದಮೆಂಬಿನೆಗಮಾನಂದಾಶ್ರುಧಾರಾಳಿ ಕೈ
ಮಿಗೆ ಬೌದ್ಧಾಕೃತಿಯಿಂದೆ ಯೋಗದೊಳೆ ಕೂಡಿರ್ದೈ ಸರೋಜಾಂಬಕಾ॥

ಅತಿಮಲಿನಾಂಗಮಾದ ಜಗಮುಂ ಭವದೀಯಹಯಸ್ಖುರಕ್ಷುರಾ
ಹತಿಯಿನುದಗ್ರಖಡ್ಗಹತಿಯಿಂ ಲಯಮೆಯ್ದಿಸುವಲ್ಲಿ ನಿನ್ನ ಸಂ ।
ಗತಿಯೊಳೆ ಕಿಲ್ಬಿಷಂ ಕಿಡುವುದುಂ ‡ ಕಲಿಕಾಲಮನೊಕ್ಕು ಭೂತಳಂ
ಕೃತಯುಗದಂತೆ ವರ್ತಿಸುವುದೇಂ ಪೊಗೞ್ವೆಂ ನಿಜಕಲ್ಕಿಮೂರ್ತಿಯಂ ॥ ೬೪

ಆ ನಿನ್ನವತಾರಂಗಳ
ದಾನವರುಂ ಮುನ್ನಿನವರೆ ಮೆಗುೞ್ದರ್ ಗಡ ಮೇಂ § ।

---

* ಕ. ಖ. ಗ.—ಮತ್ತಿರ್ಪತೊಂದುರ್ವರೇಶ್ವರರಂ.

† ಕ. ಖ.—ಜಾತಮಾದ. ‡ ಕ. ಖ.—ಕಿಡುವುದೇಂ. § ಮೊ-ಅ.—ಗಡಮೇಣ್.

ನೀನಳವಡಿಸಿದ ಕಾರ್ಯವಿ
ಧಾನಂಗಳವೆಮಗೆ ಪ್ರೊಸತೆ ಪೇೞಬ್ಜಾಕ್ಷ ॥ ೬೫

ವಿದಿತವ್ಯಾಪಾರ ನೀಂ ಭಾವಿಸು * ಕೃತಯುಗದಿಂದಾದವರ್ ತ್ರೇತೆಯೊಳ್ ಪು
ಟ್ಟಿದವರ್ ಮತ್ತೀಗಳೀದ್ವಾಪರದೊಳೊಗೆದವರ್ ದೈತ್ಯರಿರ್ದಪ್ಪರಾದು ।
ರ್ಮದರಾರೆಂತಪ್ಪರಾರ್ಗಾವುದು ಪೆಸರವರಿಂದಾದುದುದ್ವೃತ್ತವೇನಂ
ಬುದನಾನಿಂ ಪೇೞ್ವೆನಲ್ಲಿಂ ವಿಭುಗಪರಿಮಿತಾಳಾಪವಂಶ್ಲಾಘ್ಯಮಲ್ತೆ ॥ ೬೬

ವ॥ ಎಂದು ಭಾರತೀಪತಿ ಚತುರಪರಿಮಿತೋದಾರಗಂಭೀರಭಾಷಿ
ತಂಗಳಿಂ ಬಿನ್ನಪಂಗೆಯ್ಯೆ ತದೀಯಹೃದಯಾಭಿಪ್ರಾಯಮಂ ಸಕಲ
ಲೋಕವೃತ್ತಾಂತಮಂ ನಿಜಸ್ವಾಂತದೊಳ್ ತಿಳಿದು,

ಉದರಾಬ್ಜದಿಂ ನಿಜಾಸ್ಯಾ
ಬ್ಜದ ಕಂಪಿಂಗೆಱಗುವಳಿಕುಲಂ ಬೆಳ್ಪಡರ್ವಂ ।
ತೊದವೆ † ದಶನಾಂಶು ಪೊಲ್ಗಡ
ಲಿದೊಂದೆನಲ್ ಪುದಿಯೆ ಹರಿ ವಿರಿಂಚಿಗೆ ನುಡಿದಂ ॥ ೬೭

ಭಯಮಂ ದೇವಗಣಕ್ಕೆ ಮಾಡಿ ಪದಿನಾಲ್ಕುಂ ಲೋಕಮಂ ದೈತ್ಯನಾ
ಜ್ಞೆಯೊಳಿಟ್ಟುಕೊಂಡಿರೆ ನಾಕಿಗಳ್ಗ ಭಯಮಂ ಕೊಟ್ಟೇೞ್ ತೇೞಿಂ ಜಗ ।
ತ್ತ್ರಯಮಂ ‡ ಕಾದು ಸುರಾಸುರಾಹವದೊಳಾಂ ಕೊಂದಂದಿನಾಕಾಲನೇ
ಮಿಯೆ ಕಂಸಾಸುರನಾಗಿ ಪುಟ್ಟಿದುದನಾಂ ಬಲ್ಲೆಂ ವಚೋವಲ್ಲಭಾ ॥ ೬೮

ಮೊದಲೊಳ್ ದಾನವನುಯ್ದು ತದ್ಭುಜಗಸದ್ಮಕ್ಕೈದಿಸಲ್ ಕ್ರೋಡರೂ
ಪದಿನಾಂ ಧಾತ್ರಿಯನೆತ್ತಲಾವೆಸುಮತೀಸ್ತ್ರೀಗೆನ್ನ ಸಂಭೋಗಕಾ ।
ಲದ ಸಂಸರ್ಗದೆ ಪುಟ್ಟಿದಂ ನರಕನಾತಂ ಲೋಕಸಂಹಾರಮೂ
ರ್ತಿ ದಶಾಸ್ಯಾದಿಗಳಿಂ ಬಲಾಧಿಕನದಂ ಬಲ್ಲೆಂ ಸರೋಜಾಸನಾ ॥ ೬೯

---

* ಕ—ವಿದಿತವ್ಯಾಪಾರನೆಂ ಭಾವಿಸು, ಮೊ. ಅ. ವಿದಿತವ್ಯಾಪಾರನೆಂ ಭಾವಿಸೆ

† ಮೊ, ಅ. ಸೊಂಪಿಂಗೆಱಗುವಂಚೆವಿಂಡುಗಳೆನೆ ಬೆಳ್ಪಿದವೆ.

‡ ಕ, ಖ.—ಜಗನ್ಮಯಮಂ.

ಗಿರಿಗಳನೆತ್ತಿ ಪೆರ್ಮರಗಳಂ ಪಿಡಿದಾಂತ ಮಹಾಬಲಸ್ಥವಾ
ನರಭಟಕೋಟಿಯಂ ಶ್ವಸಿತವಾತದೆ ಪಾಱಿಸುವಂಘ್ರಿಯುಗ್ಮದಿಂ ।
ದೊರಸುವ ಕೈಗಳಿಂ ಪೊಸೆದು ಮುಕ್ಕುವಗುರ್ವಿನ ಕುಂಭಕರ್ಣನೀ
ಧರಣಿಗೆ ದಂತವಕ್ರನೆನಿಸಿರ್ದು(ರ್ದ)ದನಾನಱಿವೆಂ ಚತುರ್ಮುಖಾ ॥ ೩೦

ಹರಸಖನಲ್ಲಿ ಪುಷ್ಪಕಮನಿಳ್ಕಿಕೊಂಡು ಹರಾದ್ರಿಯಂ ಹರಂ
ಬೆರಸು ಭುಜಂಗಳಿಂ ನೆಗಪಿ ಶಕ್ರನುಮಂ ಸೆಱೆಗೆಯ್ದಜೇಯನಾ ।
ಗಿರಿ ಬಹುಯತ್ನಗೌರವದಿನಾಂ ಪೊಣರ್ದಿಕ್ಕಿದ ರಾವಣಂ ವಚೋ
ಧರ * ಶಿಶುಪಾಲನೆಂಬಸುರನಾದುದನಾಂ ತಿಳಿದೆಂ ನಿರಾಕುಳಂ ॥ ೩೧

ಕ್ರಮದೆ ವಿಜೃಂಭಣಕ್ರಮದೆ ಕೊಂತು ಧರಾತಳಮಂ ರಸಾತಳ
ಕ್ಕಮರವಿರೋಧಿಯಂ ಕಳುಪಿದೆಂ ಬಳಿಯಂ ಬಳಿಯಂ ತದಾತ್ಮಜಂ ।
ಯಮಸಮಭೀಕರಂ ಉಮೆಸಮಾಧಿಯಿನೀಶ್ವರನಿಂ ವರಂ ವರಂ
ಸಮನಿಪ ಬಾಣನೀಸುರರ್ಗೆ ಹೃದ್ಗತಬಾಣನೆ ಬಲ್ಲೆ ನಬ್ಜಜಾ ॥ ೩೨

ಚಕ್ರಧರತ್ವಮೊಂದು ಸಫಲಂ ಭುಜಸಾಹಸಮೆಂದು ಧನ್ಯಮಾ
ಚಕ್ರತುವೆಂದು ಪೂರ್ಣಮಸುರಾಂತಕನಾಮಮದೆಂದು ಸಾರ್ಥಕಂ ।
ಶಕ್ರವಿರಿಂಚಿಮುಖ್ಯಸುರರಕ್ಷಣಮೆಂದು ಕೃತಾರ್ಥಮೆನ್ನೊಳಾ
ವಿಕ್ರಮಸಾಲ್ವನಂ ತವಿಸಿದಂದಿವನಾನಱಿದೆಂ ಪಿತಾಮಹಾ ॥ ೩೩

ಇವರಂ ಕೊಲ್ವ ಸಮೀಪದೊಳ್ † ಮಗಧಭೂಭೃದ್ಯುದ್ಧದೊಳ್ ಷಟ್ಪುರಾ
ಹವದೊಳ್ ಪಾಂಡವಕೌರವಾಜಿಯೊಳನೇಕಾಕ್ಷೌಹಿಣೀಸೈನ್ಯಸಂ ।
ಘವನುನ್ಮೂಲಿಸಿ ಭೂಮಿಭಾರವನಮೋಘಂ ‡ ಪಿಂಗಿಸಲ್ವೇೞ್ಪುದೀ
ಭುವನವ್ಯಾಪ್ತಿಯನೆಲ್ಲಮಂ ತಿಳಿದೆನಾಂ ವಾಣೀವಧೂವಲ್ಲಭಾ ॥ ೩೪

---

* ಮೊ- ಅ. ವಚೋವರ. † ಮೊ- ಅ. ಸಮಾಕದೊಳ್.
‡ ಮೊ- ಅ. ಭೂರಿಭಾರವನಮೋಘಂ.

ಆದಿತ್ಯನ ಪಿತೃಮಾತೃಗ
ಳಾದಾಕಶ್ಯಪನುಮದಿತಿಯುಂ ವರುಣನ ಶಾ ।
ಪಾದೇಶದೆ ಯದುವಂಶಜ
ರಾದರ್ ವಸುದೇವದೇವಕೀಸಂಜ್ಞೆಗಳಿಂ ॥ ೩೫

ಗೋಸಂಬಂಧದ ತೋಟಿಯೊ
ಳಾಸಾಗರನಾಥನಿತ್ತ ಶಾಪದಿನವರ್ಗಾ ।
ದಾಸುತರುಂ ಗೋಪಾಲ
ವ್ಯಾಸಂಗದೆ ಕೆಲವುಕಾಲಮಿರ್ಕುಂ ವ್ರಜದೊಳ್ ॥ ೩೬

ಆಗೋಪತನಯರೊಡನುಪ
ಭೋಗಿಸಲೆಂದಪ್ಸರೋಗಣಂ ದಿವದಿಂ ಬಂ ।
ದಾಗೋಕುಲದೊಳ್ ಗೋಪ
ಸ್ತ್ರೀಗಣವಾಗಿರ್ದು(ರ್ಪು) ದೀಗಳಂಬುಜಗರ್ಭಾ ॥ ೩೭

ಶ್ರೀವೇದದುಪನಿಷದ್ವಾ
ಕ್ಯಾವಳಿ ಗೋವೃಂದಮಾಯ್ತು ಗೋಕುಲದೊಳದಂ ।
ಕಾವ ಬಿನದಮೆ ಪವಿತ್ರಂ
ಕೇವಲಮೋ ಕಾರ್ಯಸೂತ್ರಮಿಂತಿದು ಚಿತ್ರಂ ॥ ೩೮

ಸುತನಪ್ಪಂ ದೇವಕಿಗಾಂ
ಕತಿಪಯದಿನಮೊಲ್ದು ರಮಿಯಿಪೆಂ ಗೋಕುಲದೊಳ್ ।
ದಿತಿಸುತರಂ ಕಂಸಾದ್ಯರ
ನತಿಬಲರಂ ಕೊಲ್ವೆನಿಳಿಪುವೆಂ ಭೂಭರಮಂ ॥ ೩೯

ಪುಳಕಂ ತಳೆದ್ವೊಪ್ಪಿರ್ಪಿನಂ ತತ್ಸಭೆಗಭಯಮನಿಂತಿತ್ತು ನೀಮುಂ ನಿಜಾಂಶಂ
ಗಳನೀಭೂಭಾಗದೊಳ್ ಬಂದವತರಿಸುವುದೆಂದಾಜ್ಞೆಯುಂ ಮಾಡಿ ಗಂಡ ।

ಸ್ಥಳದೊಳ್ ಶ್ರೀಕುಂಡಲಂ ಮೆಲ್ಲನ ತೊನೆಯೆ ಚಲದ್ಭ್ರೂಲತಾಕೋಟಿಯಿಂ ಬೀ
ಜೊಕ್ಕಳವೇಟ್ಟಿಂದಾದಿಗೀರ್ವಾಣರನವತರಿಪುದ್ಯೋಗದಿಂ ದೇವನಿರ್ದ೦॥ ೪೦

ಇದು ಸಮಸ್ತಕಾಲಭವಾಂತವಾಲಾ ಘಟೀಘಟಿತಾರಘಟ್ಟಘಟನಾಸ್ವತಂತ್ರ ನಿಜ
ಸ್ವರೂಪನಿರೂಪಣಚಕಿತಸಕಲಸಮಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತಸುಕವೀಂದ್ರರುದ್ರ ಪ್ರಣೀತ ಶ್ರೀಜಗ
ನ್ನಾಥ ವಿಜಯಮಹಾಪ್ರಬಂಧದೊಳ್ ಸುರಜ್ಯೇಷ್ಠ
ವಿಜ್ಞಾಪನಾಕರ್ಣನ ಸುಧಾರ್ಣವಾವತರಣೋ
ದ್ಯೋಗವರ್ಣನಂ ಪ್ರಥಮಾಶ್ವಾಸಂ.

---

## ದ್ವಿತೀಯಾಶ್ವಾಸಂ

ಶ್ರೀವರನ ಚರಣಮಂ ಕ
ಲ್ಪಾವನಿಜಪ್ರಸವಚಯದಿನರ್ಚಿಸಿ ಬೀಡ್ಕೊಂ।
ಡಾವಿಬುಧರ್ ಮುದದಿಂ ನಾ
ನಾವಿಧವಾಹನದೆ ಮೇರುಗಿರಿಗೆಟ್ಟಿಂದರ್*॥ ೧

ವ॥ ಆಮೇರುಗಿರಿಯ ದಕ್ಷಿಣದಿಶಾಭಾಗದೊಳನೇಕನಗರನಿಗಮಾಗ್ರಹಾರಗ್ರಾಮನಿಕರಖೇಟಖರ್ವಟಮಟಂಬಪತ್ತನದ್ರೋಣಾಮುಖಸಂವಾಹನಿಚಯನಿಚಿತಮುಂ, ಹರಿಹರಹಿರಣ್ಯಗರ್ಭಾದಿಸಕಲಗೀರ್ವಾಣಮಣಿಭವನವಾಪೀಕೂಪದೀರ್ಘಿಕಾತಟಾಕತಟನೀನಿಕರಶೋಭಾಕರಮುಂ, ಅಗಣ್ಯಪುಣ್ಯಾರಣ್ಯಪುಣ್ಯಾಶ್ರಮಪುಣ್ಯಶೈಲಪುಣ್ಯಹ್ರದಸಮಾಜವಿಭ್ರಾಜಿತಮುಂ, ಸಿತಾಸಿತೇಕ್ಷುವಾಟೀನಾನಾಪುಷ್ಪವಾಟಬಹುವಿಧಸುಗಂಧಬಂಧುರಗಂಧಶಾಲಿವನಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯ

---

* ಕ—ವಿಬುಧಸಂಕುಲಂ.

ದೊಳ್ ಮಧ್ಯದೇಶಮುಂಟು ಅದಱ ಪೆಂಪನಭಿವರ್ಣಿಸುವೊಡೆ ವರ್ಣಸಂಕರಂ ಚಿತ್ರದೊಳ್, ದೋಷಾಭಿಸಂಧಿ ದಿವಸವಿರಾಮದೊಳ್, ಅವ್ಯವಸ್ಥೆ ಜಡಾಶ್ರಯದೊಳ್, ಪರಾಭವಂ ಸಂವತ್ಸರದೊಳ್, ಆಕ್ರೋಶಂ ಪಥಪ್ರಮಾಣಂಗಳೊಳ್, ಉಪಪ್ಲವಂ ಚಂದ್ರಾರ್ಕಬಿಂಬಂಗಳೊಳ್, ಉತ್ತುಂಗಭಂಗಂ* ಕಡಲೊಳ್, ವಿಶ್ವಾಸಘಾತಂ ವನದ್ರುಮನೀಡದೊಳ್,† ಸ್ವಾಮಿವಿರೋಧಂ ತಾರಕಚಿತ್ರಕಥೆಯೊಳ್, ಪರಾರ್ಥಸ್ಪೃಹೆ ಗುಣವಿಶೇಷದೊಳ್, ಅಸತ್ಕಾರಂ ನೀರಸಕ್ಷೇತ್ರದೊಳ್, ಪವಮಾನವಿಸ್ತಾರಂ ವ್ಯೋಮದೊಳ್, ಕೃತಘ್ನಭಾವಂ ತ್ರೇತಾಪ್ರವೇಶದೊಳ್, ವಕ್ರವಾಕ್ಯಂ ಕೋಕಿಳಂಗಳೊಳ್, ಉತ್ಕಂಠತೆ ಮಯೂರಂಗಳೊಳ್, ಆಱಿಡಿ ತುಂಬಿಯೊಳ್, ಅಭಿಮಾನಹಾನಿ ವಿರಹಿಗಳೊಳ್, ಹಾಹಾಕಾರಂ ಹೋಮಮಂತ್ರಾಕ್ಷರಾಂತ್ಯದೊಳ್, ವಂಶಚ್ಛೇದಂ ಮೇದರೊಳ್, ನಿಷ್ಕಾರುಣ್ಯಂ ಭೂಷಣಂಗಳೊಳ್, ನಿರ್ಗುಣತ್ವಂ ಬಿಡುವೂಗಳೊಳ್, ಅಗ್ರಹಾರಪೀಡೆ ಯುವತೀಕುಚಂಗಳೊಳ್, ನಿಗಳನಿರೋಧಂ ಮದಗಜಂಗಳೊಳ್, ಉನ್ಮಾರ್ಗತೆ ಜಾತ್ಯಶ್ವಂಗಳೊಳ್, ವಕ್ರಚಾರಂ ಸರ್ಪಂಗಳೊಳ್, ಪಙ್ಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ. ಅದಲ್ಲದೆಯುಂ,

ದಳಿತಾಬ್ಜಪ್ರಸರಂ ಸರಂ ಕುಸುಮಮಾಳಾರಾಮಮಾರಾಮ ಮು
ಜ್ಜ್ವಳರತ್ನಾರ್ಚಿರಲಂಕೃತಂ ಕೃತಕಶೈಲಂ ರಾಜಕೀರಚ್ಛದಾ ।
ನಿಳಲೋಲತ್ಕಣಿಶಾಳಿ ಶಾಳಿ ಜನ‡ ಚೇತೋನಂದನಂ ನಂದನಂ
ಲಳಿತಶ್ರೀಪರಿರಂಜನಂ ಜನಮೆನಲ್ ಚೆಲ್ವಾದುದುರ್ವೀತಳಂ ॥ ೨

ಬಲಿರಾಜ್ಯಂ ಸತತಂ ಪ್ರಜಾಪ್ರತತಿಗೆಲ್ಲಂ ಯೌವನಶ್ರೀಭರಂ
ಸಲೆ ಕಾಂತಾತತಿಗೆಲ್ಲಮೂರ್ಜಿತವಸಂತಂ ಸಂತತಂ ನಂದನಾ ।
ವಲಿಗೆಲ್ಲಂ ರತಕೇಳಿರಾಗವನಿಶಂ ಸ್ತ್ರೀಪುಂವ್ರಜಕ್ಕೆಲ್ಲಮು
ಜ್ಜ್ವಲಚಂದ್ರಾತಪಮೊಪ್ಪುಗುಂ§ ರಜನಿಜಾತಕ್ಕೆಲ್ಲಮಾದೇಶದೊಳ್ ॥ ೩

* ಕ. ಖ.—ಭಂಗತರಂಗಂ. † ಕ. ಖ.—ವನದ್ರುಮನಿಬಿಡದೊಳ್.
‡ ಕ—ನನ. ಗ—ವರ § ಕ ಖ—ಮೊಮ್ಮೆಯುಂ.

ದಾರಿಯ ನಂದನಂಬಿಡಿದು ಪೂತ ಕೊಳಂ ಕೊಳದೊಳ್ ಬೞಲ್ಕೆಯಂ
ಆರಿಸಲೆಂದು ಬಂದ ಪಥಿಕರ್ ಪಥಿಕಾನಯನಪ್ರಭಾವೃತಾ ।
ಸಾರದೆ ತೀವಿ ಬರ್ಪ ಪರಿಕಾಲ್ ಪರಿಕಾಲ್ಗಳ ನೀರನುಣ್ಬ ಕೇ
ದಾರವನಂ ಮನಂಗೊಳಿಸುತಿರ್ಪುದು ಭೂವನಿತಾವಿಭೂತಿವೋಲ್ ॥ ೪

ಸಲೆ ಕಾಲಂ ಪಿಡಿದೞ್ತರಲ್ ಭುವನಮನ್ನಿರ್ದಲ್ಲಿಗಾಂ ಮುನ್ನಮಾ
ದೊಲವಿಂದಂ ತಲೆಗೊಯ್ಸಿಕೊಂಡೆನೆನುತುಂ ಲಜ್ಜಾಮಹಾಭಾರದಿಂ ।
ತಲೆವಾಗಿತ್ತಿನೆ ಪಕ್ವಶಾಳಿ ಕಣಿಶಾಳೀನಮ್ರಮೊಪ್ಪಿರ್ದದೇಂ
ಗೆಲೆವಂದತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆವೋಲ್ ॥ ೫

ಕಳಮಕ್ಷೇತ್ರದುಪಾಂತನಂದನದೊಳಿರ್ಪಾನಂದದಿಂ ಪಕ್ಕಿಸೋ
ವ ಳತಾಂಗೀಜನದೊಂದು ಮೊೞ್ಲಲಿಪುಮಂ ಕೇಳ್ದಂತದಂ ತದ್ವನಾಂ ।
ತಳತಾನೀಕದಿನುಣ್ಮುತಿರ್ಪ ಕಳಕಂಠಧ್ವಾನಸಂತಾನಮಂ
ದಿಟಿಕೆಯ್ದಂತುಮಗಲ್ದು ಪೋಗವು ರುವತ್ಕೀರಾಳಿ ಕೇದಾರದಿಂ ॥ ೬

ಭೋಂಕನೆ ಬಂದುವಂದು ತೊನೆದಿಕ್ಕೆಯ* ನಿರ್ಕೆಲದೊಳ್ ಕಲಂಕುವ
ನ್ನಂ ಕುಡುಕಿಂಗೆ † ಪಾಯ್ದುಲಿವ ತಮ್ಮುಲಿಪಿಂ ಗಿಳಿಸೋವ ಪಾಮರೀ ।
ಸಂಕುಳದೊಂದುಮೊಲ್ಲುಲಿಪುಮಂ ನಸುಗೇಳದೆ ನಿಂದ ಕೀರವೃಂ
ದಂ ಕಳಕೂಜಿತಾನುಮಿತಮಾದುದು ಶಾದ್ವಲಗಂಧಶಾಲಿಯೊಳ್ ॥ ೭

ವಿಕಸಿತಮಾದ ಕಾಂಚನಸರೋರುಹಷಂಡದ ಪರ್ಬುಮಂ ತದಂ
ತಿಕದ ಸುವರ್ಣವರ್ಣಕಣಿಶಾಳಿಯ ಶಾಳಿಯದೊಂದು ಪರ್ಬುಮಂ ।
ಶುಕತತಿ ನೋಡಿ ನೋಡಿ ನೆಱೆ ನಿಟ್ಟಿಸಲಾಱದೆ ಮಂಜುಳಾರವಂ
ಪ್ರಕಟಿಸೆ ಪರ್ಬುಗೊಂಡು ಸುೞಿದಾಡುವುದಲ್ಲಿಯ ಕೆಯ್ವೊಲಂಗಳೊಳ್ ॥

ವನಲಕ್ಷ್ಮೀಶ್ವಸಿತಂಬೊಲಾಡುವೆಲರಿಂದಂ ಕಂಪಿಸುತ್ತಿರ್ಪ ಕ
ರ್ಬಿನ ಕೋಲ್ಗಳ್ ಬಿಡದೊಂದನೊಂದೊರಸೆ ಪರ್ವಾಘಾತದಿಂದುರ್ಬಿ
ಭೋ ।

* ಮೊ—ಅ. ತೊನೆದಕ್ಕೆಯ. † ಕ. ಖ. —ಕುಟಿಕಿಂಗೆ.

ರೆನೆ ಪೊಯ್ತುರ್ಪ ರಸಪ್ರವಾಹಚಯಮಾವಾಳಂಗಳಂ ತೀವ್ರತಿ
ರ್ಪಿನವಿರ್ದತ್ತ್ರಿಮೃತಾಕರಾವನಿಯವೊಲ್ ಪುಂಡ್ರೇಕ್ಷುವಾಟೀಕುಲಂ ॥೯

ಅಲರ್ದಲರ್ವಂಡನುಂಡು ಕಳನಾದದಿನಾಣತಿಗೆಯ್ವ ತುಂಬಿ ಕೋ
ಮಲಕಳಕಾರಸಾಸವಮನೀಂಟ ಮದೋತ್ಸವದಿಂ ಕುಕಿಲ್ವ ಕೋ
ಗಿಲೆ ಮಿಡಿಯುಂ ಕರ್ದುಂಕಿ ನಲಿದಾಡುವ ರಾಜಶುಕಂ ಸರೋಜಕಂ
ದಲಮನೊಱಲ್ದು ಕರ್ಚಿ ಸುಚಿವಂಚೆಗಳಿಲ್ಲದುದಿಲ್ಲ * ನಂದನಂ ॥ ೧೦

ಪೊರದೆ ಕಾಮುಕವ್ರಜಮನಾರ್ದಿಸುವಂಗಜವೀರನಸ್ತ್ರಭೀಂ
ಕಾರಮುಮೆಯ್ಕೆಱಿಂ ನೆರೆವ ನಲ್ಲರ ಸಪ್ರಣಯಪ್ರಕೋಪಹೂಂ ।
ಕಾರಮುಮುಲ್ಲಸತ್ಕುಸುಮದಿಂ ಮೊರೆದೇಳ್ವಳಿಜಾಲದೊಂದು ಝಂ
ಕಾರಮುಮೊರ್ಮೆಯುಂ ತವದು ಭಾವಿಪೊಡಲ್ಲಿಯ ನಂದನಂಗಳೊಳ್ ॥

ವ॥ ಅಂತತಿಶಯಶೋಭಾವಿಷಯಮಾದ ವಿಷಯಾಂತರಾಳದೊಳ್,

ಬಿದಿ ಮನದಚ್ಚಿಯಿಂ ಭುಜಗಲೋಕದ ಮಾನವಲೋಕದಿಂದ್ರಲೋ
ಕದ ಬಹುಸಾರವಸ್ತುಗಳನೊಂದೆಡೆಗೆಯ್ದೆ ತೆರಳ್ಚಿ ತಂದು ಮಾ ।
ಡಿದನತಿರಮ್ಯಮಂ ಪುರಮನೆಂಬಿನೆಗಂ ಯಮುನಾತಟಪ್ರದೇ
ಶ † ದೊಳಸೆದಿರ್ಪುದಲ್ತೆ ಮಧುರಾಪುರಮರ್ಧಶಶಾಂಕಸನ್ನಿಭಂ ॥ ೧೨

ತಿಳನೀರಿಂ ನೆಯ್ದಿಲಿಂ ತಾವರೆಯಿನೆಸೆವ ಲೀಲಾಸರಸ್ಸಂಕುಳಂ ಕೆಂ
ದಳಿರಿಂ ಪೂವಿಂ ಫಲವ್ರಾತದಿನಿಡಿದ ರಸಾಳದ್ರುಮಶ್ರೇಣಿ ಪೊನ್ನಿಂ ।
ಪಳುಕಿಂ ಮಾಣಿಕ್ಯದಿಂ ತೀವಿದ ಕೃತಕನಗೇಂದ್ರಾಳಿ ತಳ್ತಂಚೆವಿಂಡಿಂ
ಗಿಳಿವಿಂಡಿಂ ಸೋಗೆವಿಂಡಿಂ ಸೊಗಯಿಸಲೆಸೆಗುಂ ತತ್ಪುರೋದ್ಯಾನ
ಮೆಂದುಂ॥ ೧೩

ಲತೆಯೊಳಲತೆ ಮಾವಿಮ್ಮಾ
ವು ತೆಂಗು ಚೆಂದೆಂಗು ಕೌಂಗು ಪೂಗೌಂಗೆಲೆವ ।
ಳ್ಳಿ ತೊವಲ್ತೆಲೆವಳ್ಳಿ ನಗಂ
ಕೃತಕನಗಂ ಪಲಸು ಬಕ್ಕೆವಲಸಾಬನದೊಳ್ ॥ ೧೪

* ಕ.ಖ.—ಇಲ್ಲದವಿಲ್ಲ. † ಕ.ಖ.—ತಟಸ್ಥದೇಶ.

ತಿಂತ್ರಿಣಿವಣ್ಣ ನಾಂತ ಕದಳಿಂ ಪದನೆಯ್ದಿದೀಳೆ ಬೀಡೆವೆ
ಣ್ಣಿಂ ತುಱುಗಿರ್ದ ದಾಡಿಮಚಯಮುಂ ಕಿಸುವಣ್ಣ್ಮಸುಕಿರ್ದ ನಾಗರಂ ।
ಗಂ ತನಿವಣ್ಣ ಪೊದಱ್ದೆಸೆವ ಮಾವೆಳಗಾಯ್ಗೊಂಚಿ ತಳ್ತು ತೆಂಗು ಬೇ
ರಿಂ ತುದಿಮುಟ್ಟೆ ಕಾಯ್ತು ಪಲಸೆಂಬಿವು ಕಾಂದವು ನಂದನಂಗಳೊಳ್ ॥೧೫

ಫಳಮೆಂದುಂ ಕೞಿವಣ್ಣಾಗವಲರೆಂದುಂ ಬೀಯುವಬ್ಜಾಕರಂ
ತ್ರಿಳಿದೆಂದುಂ ಬಗೆಗೊಳ್ವುದುರ್ಕುಡುಗದೆಂದುಂ ತುಂಬಿಗಂ ಹಂಸೆಗಂ ।
ಗಿಳಿಗಂ ಕೋಗಿಲೆಗಂ ವಿಯೋಗಿಮಥನಕ್ಕೆಂದುಂ, ವಸಂತಪ್ರಿಯಂ
ಮುಳಿಸಿಂದಾರ್ದಲರಂಬುಮೊಯ್ದು ತೆಗೆದಿರ್ಪಂ ಬಿಲ್ಲನುದ್ಯಾನದೊಳ್॥೧೬

ನೆರೆದಿಭಶಿಕ್ಷಕರ್ ಕಲಿಸಲೇರ್ವಸನಂ ಕಲುತಿರ್ಪ ಗಂಧಸಿಂ
ಧುರಚಯಮೇಱಿದಾತನ ಮನಂ ಮನವಾಗೆ ಮನೋಜವಂಗಳಿಂ ।
ಪರಿವ ಹಯಾಳಿ ಶಸ್ತ್ರವಿದರೊಳ್ ಭರದಿಂ ನಿಜಶಸ್ತ್ರವಿದ್ಯೆಯಂ
ಪರಿವಿಡಿಗೆಯ್ವ ರಾಜಸುತರೊಪ್ಪುಗುಮಾಪುರಗೋಪುರಂಗಳೊಳ್ ॥ ೧೭

ಬಡಪಾರ್ವಂ ಜಾಮದಗ್ನ್ಯಂ ತುಡೆ ವಿಶಿಖಮನೀರೆಳ್ಪುತೆಣ್ಗಾವುದಂ ಮು
ಯ್ಸಡೆದೋಡಿತ್ತೊರ್ಬಗಸ್ತ್ಯಂ ತನುಮುನಿ ಮುನಿದಾಪೋಶನಂಗೊಂಡೊ
ಡೆತ್ತಂ ।
ಪುಡಿವಿಟ್ಟತ್ತೊಂದೆ ಧೀಂಕಾದುದು ಕಪಿಗಣುವಂಗೆಂದಗಳ್ ವಾರ್ಧಿಯುಂ ಕೀ
ೞ್ಪಡಿಕಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ ॥ ೧೮

*ವ॥ ಅಂತತಿಗಂಭೀರಮಾದ ಪರಿಖಾಚಕ್ರದಿಂದೊಳಗೆ,

ಶ್ರೀಪತಿ ಲೀಲೆಯಿಂ ವಸುಮತೀಭರಮಂ ತವಿಸಲ್ಕೆ ಬಾಲ್ಯದಿಂ
ದೀಪುರದಲ್ಲಿ ಪುಟ್ಟಿದಪಸಿಂ ಗಡ ನೋಳ್ಪನು ಮರ್ತ್ಯವೇಷಸ ।

---

*ಈವಚನದಿಂದ ೩೫ ನೆಯ ಪದ್ಯದ ಮುಂದಣವಚನದವರೆಗೂ ಇರುವ ಗ್ರಂಥಕ್ಕೆ ಪ್ರತಿಯಾಗಿ ಕೆಲವು ಪುಸ್ತಕಗಳಲ್ಲಿ ಈ ರಗಳೆಯಿದೆ:—

॥ರಗಳೆ॥ಎನೆ ಪೆಂಪಂ ತಳೆದಗಳಿಂದೊಳಗೆ । ನಿಜವೀಧಿತಿ ದೆಸೆತತಿಯಂ ಬೆಳಗೆ । ಮುಗಿಲಟ್ಟಳೆಗಳ್ಮುಗಿಲ ಮುರುಂಟೆ । ಪೞವಿಗೆಗಳ್ ದಿವಮಂ ಮಿಳಿರ್ದಪ್ಪಿಂಟೆ *।

---

*ಮೊ,—ಅ.—ಮಿಳಿರ್ದೀಂಟೆ.

ದ್ರೂಪನನೆಂದು ಭೋಗಿಪತಿ ತನ್ನ ಸಹಸ್ರಫಣಾಮಣಿದ್ಯುತಿ
ವ್ಯಾಪಿಸೆ ಸುತ್ತಿ ನಿಂದನೆನೆ ಕೋಂಟೆಯ ಪೊಂದೆನೆಗಳ್ ವಿರಾಜಿಕುಂ ॥೧೯

ಮಿಗಿಲೆನಿಪಟ್ಟಣೆಯಿಂದಂ
ಮುಗಿಲಂ ಮುಟ್ಟುವ ಪತಾಕೆಯಿಂ ತೋರಣದೋ ।
ಳಿಗಳಿಂ ರವಿಹಿಮಕರಪೀ
ಥಿಗಳಿಂದಂ ಪುರಮದೇಂ ಮನಂಗೊಳಿಸಿದುದೋ ॥ ೨೦

ಕರಿಯಂ ಶಿಕ್ಷಿಪ ವಾಜಿಸಂಕುಳಮನಂತೊಲ್ದೆತ್ತಿಯಿಂ ತಿರ್ದುವ
ಕ್ಕರಮಂ ಪೇೞುವ ಶಸ್ತ್ರಕೌಶಲಧನುರ್ವಿದ್ಯಂಗಳಂ ಬೋಧಿಪಿ ।
ರ್ತರದಿಂ ಮಲ್ಲರ ಹೋರಿಪಾಸಕಲವಾದ್ಯಶ್ರೇಣಿಯುಂ ಬಾಜಿಪ
ಬ್ಬರಮೆತ್ತಂ ನೆರೆ ಕುಂದದಿರ್ಕುಮನಿಶಂ ರಥ್ಯಾ ಜನಾತಿಧ್ವದಿಂ* ॥ ೨೧

ವ॥ ಅಂತೆಸೆವ ಮಹಾರಭಸದಿನತಿಮನೋಹರತೆಯನೊಳಕೊಂಡಿರ್ಪ ರಮ್ಯಹರ್ಮ್ಯನಿರ್ಮಿತಮಣಿಪ್ರಭಾಪುಂಜರಂಜಿತದಿನಿರ್ತರಂಬಿಡಿದು ಮೆಱೆವ ನಾನಾಸದನಪಙ್ಕ್ತಿಗಳೊಳತಿಸೊಬಗುವೆತ್ತಿರ್ಪುದದೆಂತೆಂದೊಡೆ:-

ಪರದರ ಪಾರ್ವರ ಗೋಪಾ
ಳ್ಲರ ಜೋದರ ಮೂಲೆಗಾಱಮಣಿಗಾಱರ ಮ ।

ಚೆಂಬೊನ್ನ ಕೋಂಟೆ ಥಳಥಳಿಸಿ ಪೊಳೆದು । ಪರಿರಂಜಿಸೆ ನಭಮುಂ ಮುಟ್ಟಿಬಳೆದು । ನಡೆನೋೞ್ಪರಕಣ್ಗಳ್ ಪಸವೋಡೆ । ಪೊಸಪೊಂಗಳಸಂಗಳನಾಂತು ಕೂಡೆ । ದೇವಾಯತನಂಗಳ್ ಚೆಲ್ವುಬೀಱೆ । ಸಂಗೀತಕಮುಪಱೊಳಗೊಪ್ಪಿ ತೋಱೆ । ರತಿಯಂ ಸೌಭಾಗ್ಯದಬಲದಿನಲೆವ । ಬಹುಕಳೆಯೊಳ್ಭಾರತಿಗೆಡರಿ ಮಲೆವ । ಮೇನಕೆಯವಿಳಾಸಮನೀೞ್ದುಕೊಂಡ । ರಂಭೆಯ ರೂಪಂ ನೆರೆ ಸೂಱೆಗೊಂಡ । ಪೆಸರೂರ್ವಸಿಯುಂ ಕೀೞ್ಪಿಡಿಸಲಾರ್ಪ । ಫಣಿಕಾಂತೆಯರಂದದಿನೊಪ್ಪಿ ತೋರ್ಪ । ಕಿನ್ನರಿಯರ ಚೆನ್ನಂ ಪಱಿದು ನಗುವ । ಖಚರಿಯರಂ ಭಾವದೊಳೆಯ್ದಿ ಮಿಗುವ । ಚಿತ್ತಕರಂ ಸುತ್ತಿಂದೊಳಗುವಪ್ಪಿ । ವಾತ್ಸ್ಯಾಯನನಂ ಪೊಱಪೊರಸುವಪ್ಪಿ । ಕಂಪವರಂ ಮೂಪಣ್ಣಿಂಬಱಿಪ । ನವವಾರವಿಳಾಸಿನಿಯರಿರುತಿರ್ಪ । ನೆಲೆವನೆಗಳಿನೊಪ್ಪುವ ಸೂಳೆಗೇರಿ । ನೊಗಯಿಸುತಿರೆವಿಟಜನಹೃದಯಹಾರಿ । ಗಡಿಯಿಲ್ಲದೆ ನೀಳ್ದಂಗಡಿಗಳಿಂದ । ಮಲ್ಲಲ್ಲಿಗೆ ಬಜ್ಜರತಸರದಿಂದ । ಮಲ್ಲಲ್ಲಿಗೆ ಘಟ್ಟವಳಕ್ಕಳಿಂದ । ಮಲ್ಲಲ್ಲಿಗೆ ಪೂವಿನಸಂತೆಯಿಂದ ।

*ಖ. ಮೊ. ಅ-ರಥ್ಯಂ ಜನಾತಿಧ್ವದಿಂ

ಲ್ಲರ ಮಂಡಳಿಕರ ಸಾಮಂ
ತರ ದಂಡಾಧೀಶರಾಲಯಂಗಳ್ ಮೆಱೆಗುಂ ॥ ೨೨

ವಿವಿಧಮಣಿಶಬಲಿತಂ ರ
ಮ್ಯವಿಧಾನಸುವರ್ಣಕಲಶಕಿರಣೋದ್ದ್ಯೋತಂ ।
ಅವಿರಳವಾದ್ಯಸಮೇತಂ
ಧವಳಪ್ರಾಸಾದಸಾರದೇವಾಗಾರಂ ॥ ೨೩

ಪಳುಕಿನ ನೆಲೆಗಟ್ಟುಗಳುಂ *
ಕಳಧೌತಬುರತ್ನಕೃತಕಭಿತ್ತಿಸ್ತಂಭೋ ।
ಜ್ಜ್ವಳಮುಕ್ತಿಕಾವಿತಾನಂ
ಥಳಥಳಿಪುವು ಪುರದ ನಿಳಯನಿಳಯದೊಳೆಲ್ಲಂ ॥ ೨೪

ವ॥ ಅಂತತಿರಮಣೀಯತೆಯನೊಳಕೊಂಡಖಿಳಜನಮನೋರಂಜನಮಾದ ಬೀದಿಗಳೊಳ್,

ಸೌರಭಕುಸುಮವಿಹಾರಂ
ಪೌರವಧೂಶ್ವಸಿತಪದ್ಮಗಂಧವಿಚಾರಂ ।
ಸಾರತರಶೈತ್ಯಭಾರಂ
ಸ್ವೈರಚರಂ ಸುೞಿವುದಲ್ಲಿ ಚಾರುಸಮೀರಂ ॥ ೨೫

† ಸಾಲಿಡೆ ಕಟಾಕ್ಷ ಮಾಲೆ ವಿ
ಲೋಲತರಭ್ರಮರಮಾಲೆಯೇೞಿಸೆಸುಮನೋ ।

---

ಮಲ್ಲಲ್ಲಿಗೆಪೆಸರರವನೆಗಳಿಂದ । ಮಲ್ಲಲ್ಲಿಗೆ ಮಂದುರದೋಳಿಯಿಂದ । ಮಲ್ಲಲ್ಲಿಗೆ ಕಾಗಳ ಸಾಲೆಯಿಂದ । ಮಲ್ಲಲ್ಲಿಗೆ ತೀವಿದ ಕೊಳಗಳಿಂದ । ಮಲ್ಲಲ್ಲಿಗೆ ದೂಸಿಗವಸರದಿಂದ । (ಮಲ್ಲಲ್ಲಿಗೆ ಗಂಧಿಗವಸರದಿಂದ) ಮಲ್ಲಲ್ಲಿಗೆ ಕಂಚಿನ ವಸರದಿಂದ । ಮಲ್ಲಲ್ಲಿಗೆ ತಂಬುಲವಸರದಿಂದ। ಮಲ್ಲಲ್ಲಿಗೆ ಲೀಲೋದ್ಯಾನದಿಂದೆ। ಮಧುರಾಪುರಮೊಪ್ಪಮನಪ್ಪುಕೆಯ್ದು । ಸುರಪತಿಪುರದಳವುಮನಿೞಿಕೆಯ್ದು । ಮಧುರಿಪುಕೃಪೆಯತಿಶಯದೆಸೆವುದಿಂತು ‡ । ಪೊಗೞಲ್ಫಣಿಪತಿಗಮಸಾಧ್ಯಮಿಂತು.

---

* ಖ—ನೆಲೆಗಟ್ಟುಗಳಿಂ. † ಮೊ. ಅ. - ವ॥ ಮತ್ತಲ್ಲಿಂ ಬೞಿಯಂ, ಎಂದು ಹೆಚ್ಚಾಗಿದೆ.
ಮೊ—ಅ. ಕೃಪೆಯಿಂ ನಯಮೆಸೆವುದಿಂತು.

ಮಾಲೆಯು ಬಂಬಲ್ವೆಳಗುಂ
ಲೀಲೆಯುಮೊಡನೆಸೆಯೆ ಮಾಲೆಗಾರ್ತಿಯರೆಸೆವರ್ ‖ ೨೬

ಬಂದುಗೆಯೊಳ್ ನಯನದ್ಯುತಿ
ಬಂದುಗೆ ಮಲ್ಲಿಗೆಯ ಪೂಗಳಿಂದೀವರ ಕಂ ।
ಪಂ ದಳವೇಱಿಪರಳಿಗಿಂ
ಪಂದಳವಡೆ ಪುಲ್ಲವಡಿತಿಯರ್ ಸೊಗಯಿಸುವರ್ ‖ ೨೭

ಮಲ್ಲಿಗೆಯಂ ನಗೆಯಿಂ ಕರ
ಪಲ್ಲವದಿಂದರುಣಸರಸಿರುಹಮಂ ರದನದಿ * ।
ಮೊಲ್ಲೆಯ ಮುಗುಳಂ ತೋರ್ಪರ್
ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್ ‖ ೨೮

ಎತ್ತಿದ ಪುಷ್ಪಮಾಲೆ ಲಲಿತೇಕ್ಷಣತೀಕ್ಷ್ಣಮರೀಚಿ ಗಾಡಿಯಂ
ಬಿತ್ತುವ † ಪುರ್ವುಗಳ್ ಪೊಸತಿದೆಂದು ನಿರೀಕ್ಷಿಸಲೊಂದು ದೇಸೆಯಂ ।
ಪೆತ್ತು ಮದಾಳಿಶಿಂಜಿನಿಯನಾಕುಸುಮಾಸ್ತ್ರಮನಿಕ್ಷುಚಾಪಮಂ
ಚಿತ್ತಜನಾಂತು ನಿಂದನೆನ ವಿಕ್ರಯಿಪರ್ ಸತಿಯರ್ ಲತಾಂತಮಂ ‖ ೨೯

ವ॥ ಇಂತೆಸೆವ ಮಾಲಾಕಾರವಧೂಜನಂಗಳಿಂ ಚೆಲ್ವುವೆತ್ತು ಪಲ್ಲವೋಲ್ಲಸಿತಮಪ್ಪ ಮಾಣಿಕ್ಯಸದನಪಙ್ಕ್ತಿಗಳೊಳ್,

ರತಿಯಂ ಕಳ್ಗುಂದಿಪ ಭಾ
ರತಿಯಂ ಜಾಣಿಂದೆ ಪಟಿವ ಸೊಬಗಿಂದಂ ಸುರ ।
ಸತಿಯರನಿಱಿಕೆಯ್ವಗ್ಗದ
ಸತಿಯರ್ ಪೆಸರ್ವೆತ್ತ ವಾರನಾರಿಯರೆಲ್ಲಂ ‖ ೩೦

* ಈಪದ್ಯಗಳಲ್ಲಿ ದ್ವಿತೀಯಪಾದಾಂತ್ಯದಲ್ಲಿ ಗುರುವಿಗ ಪ್ರತಿಯಾಗಿ ಲಘುದ್ವಯವಿದೆ. ಕ್ರಮವಾಗಿ ಅಲ್ಲಲ್ಲಿ ರದದಿಂ, ಸ್ವರ್, ಯೆಂದು ತಿದ್ದಿದರೆ ಕಂದದ ಗಣನಿಯಮವು ನೇರ್ಪಡುವುದು.

† ಮೊ—ಅ—ಗಾಡಿಯಬೆಳ್ಗೊತ್ತಿದ.

ಸ್ಮರನಂ ಪೂಜಿಪ ರತಿಯುಂ
ಪಿರಿದರ್ಚಿಪ ಪರಕೆಯುಂ ವಸಂತಂಗೆತ್ತುವ* ।
ನೆರೆದಿಂದುವನೊಲಿಸುವ ವಾ
ರಿರುಹದಳಾಕ್ಷಿಯರ ಕಳಕಳಂ ಮನೆಮನೆಯೊಳ್ ॥ ೩೧

ಓದಿಸುವ ಗಿಳಿಯನಂಚೆಯ
ನಾದರದಿಂ ನಡೆಯಿಪ್ಪುಲಿವ ಪಾರಾವತದ ಪ ।
ನೋದಮನೊಲ್ದೀಕ್ಷಿಸುವ ತ
ಳೋದರಿಯರ್ ಗುರುನಿತಂಬೆಯರ್ ಸೊಗಯಿಸುವರ್ ॥ ೩೨

ಲಲಿತಭ್ರೂ ಕಾರ್ಮುಕಂ ಕೇಕರರುಚಿ ನನೆಗೋಲ್ ಕುಂತಳಂ ಪಾರ್ವಿ ಮೆಂಜೇ
ರಲಸದ್ಧ್ಯಾನಂ ಧನುಷ್ಟಂಕೃತಮೆನೆ ವಿಭ್ರಮಾರೋಪಿತಾಕರ್ಣಚಾಪಂ ।
ಲಲನಾಯೂಥಂ ಬರಲ್ ಬೆಂಬಲಕೆ ಬೆಸಸಿ ಕಾಮಾತುರವ್ರಾತಮಂ ಪೊ
ಲ್ಲಲರಿಂ ಪಂಚೇಷು ಗೆಲ್ಲಂಬಡೆವಿನಮೆಸೆಗುಂ † ವಾರನಾರೀಕದಂಬಂ ॥ ೩೩

ವ ॥ ಅಂತೆಸೆದು ಕಮನೀಯತರಸ್ವಾಂತಬಂಧುರವಾಗಿ ಸೊಬಗುವೆತ್ತ ಪಣ್ಯಾಂಗನಾವೀಧಿಗಳೊಳಂದಂಬಡೆದಿರ್ದುವತಿಮನೋಹರಮನಪ್ಪುಕೆಯ್ಪೆಪುರ್ದವದೆಂತೆಂದೊಡೆ,

ಮೇಳವಿಸಿರ್ದ ದಂಪತಿಜನಂ ನಲಿದಾಡುವ ರಮ್ಯಹರ್ಮ್ಯದಿಂ
ಕೇಳಿವನಂಗಳಿಂದೆಸೆವ ತಣ್ಗೊಳಸಿಂ ಕಳಕಂಠನಾದದಿಂ ।
ಬಾಳರಸಾಲದಿಂ ನರೆವ ಭೋಗಿಗಳಿಂ ಮಣಿಕುಟ್ಟಿಮಂಗಳಿಂ
ಬಾಳೆಯರೊಪ್ಪಿಸಿಂ ಸಕಲವೈಭವದಿಂದಸೆದಿರ್ಪುದಾಪುರಂ ॥ ೩೪

ವ॥ ಅಂತುಮಲ್ಲದೆ,

ಚೆಲುವಿಕೆಗಿಂಬು ಚೈತ್ರನೊಲಿದಾಸೆಗವಿರ್ಪೆಡೆ ಕಂತುಗಿಂತಿದೇ
ನೆಲೆವನೆ ಸಂಪದಂ ಪದಪಿಗಿಂಪಿಡಿದೊಪ್ಪುವ ತಾಣ ಸೌಖ್ಯ ಸಂ ।

* ಈ ಪದ್ಯಗಳಲ್ಲಿ ದ್ವಿತೀಯಪಾದಾಂತ್ಯದಲ್ಲಿ ಗುರುವಿಗ ಪ್ರತಿಯಾಗಿ ಲಘುವ್ವ ಯುವಿದೆ. ಕ್ರಮವಾಗಿ ವಸಂತಂಗುಯ್ವಾ, ಪಾರಾವತದಾ ಯೆಂಬವು ತಿದ್ದಿದರೆ ಗಣನಿಯಮವು ನೇರ್ಪಡುವುದು, † ನೊ-ಅ-ಎಸುಗುಂ. ‡ ಖ-ಅಂತೆಸೆವ.

ದೊಲಿದಿಹ ಬೀಡು ಮೈಮೆಗೆ ತವರ್ಮನೆ ನನ್ನಿಗೆ ಮೇರೆಯಾಗಿ ನಿ
ಚ್ಚಲುಮೆಸೆದಿರ್ಪುದಾನಗರಮಿಂದ್ರಪುರಕ್ಕಮುದಾತ್ತಮಗ್ಗಳಂ ॥ ೩೫

ವ॥ ಅಂತೆಸೆವನಗರಮಧ್ಯಪ್ರದೇಶದೊಳ್,

ಇದು ಬನಮಿದು ನೃಪಗೃಹಮೆಂ
ಬುದಮೋಘಂ ಸ್ಪರ್ಶನಾನುಮಿತಮಪ್ಪುದು ಷ ।
ಟ್ಪದಶುಕಪಿಕಾಳಿಗೆನೆ ನೃಪ
ಸದನಂ ಸೊಗಯಿಪುದು ಚಿತ್ರಮಣಿಶಬಲತೆಯಿಂ ॥ ೩೬

ಅಹಿರಾಜಂ ದ್ವಿಸಹಸ್ರಜಿಹ್ವನೆಱಿಯಂ ವ್ಯಾವರ್ಣಿಸಲ್ ಬಲ್ಲನೇ
ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾಭೂಭುಜಾಗಾರಮಂ ।
ಬಹುವಿಸ್ತಾರಮನಿಂದ್ರಪುಷ್ಪಕವಿಮಾನಾಕಾರಮಂ ತನ್ಮಹಾ
ಮಹಿಮಾಧಾರಮನತ್ಯುದಾರಮನಿಳಾಚಕ್ರೋತ್ತಮಸ್ಕಾರಮಂ ॥ ೩೭

ವ॥ ಆರಾಜನಿಳಯದೊಳ್,

ಯದುವಂಶಾಭರಣಂಗೆ ರಾಜ್ಯಭರಧುರ್ಯಂಗುಗ್ರಸೇನಂಗೆ ಪು
ಟ್ಟಿದನಭ್ರಕ್ಕೆ ಸಿಡಿಲ್ ಸುಧಾಬ್ಧಿಗೆ ಮಹಾಹಾಳಾಹಳಂ ಕಾನನ ।
ಕ್ಕೆ ದವಾಗ್ನಿ ಕಡಂಗಿ ಪುಟ್ಟುವವೋಲಂತಾಕಂಸದೈತ್ಯಂ ವಿಳಾ
ಸದಿನಿರ್ದಂ ¹ ಸೆಱೆಗೆಯ್ದು ತಜ್ಜನಕನಂ ಸಾಮ್ರಾಜ್ಯಸಂಪತ್ತಿಯೊಳ್ ॥

ಮಸಕದ ಹಾಳಾಹಳ ದೊಷ
ನೆಸೆವಿಂದುವ ಲೇಖೆ ಪುಟ್ಟುವಂತದಿನಾರಾ ।
ಕ್ಷಸನೊಡನೆ ಪುಟ್ಟೆ ದೇವಕಿ
ವಸುದೇವಂಗರಸಿಯಾಗಿ ಸುಖದಿಂದಿರ್ದಳ್ ॥ ೩೯

ವ॥ ಅಂತಿರ್ಪುದುಮೊಂದು ಸಮಯದೊಳ್, ಉಗ್ರಸೇನನ ಸೂನು ಸಿಂಹಾಸನಾಸೀನನಾಗಿ ಲೀಲೆಯಿಂದೊಡ್ಡೋಲಗಂಗೊಟ್ಟಿರ್ದಲ್ಲಿ, ಚಿತ್ರ ಚೀನಾಂಶುಕಸುಗಂಧಾನುಲೇಪನನೂತ್ನರತ್ನಾಭರಣಂಗಳಿಂ ಶೃಂಗಾರಂ

¹ ಕ—ವಿಲಾಸದಿನಿರ್ಪಂ.

ಗೆಯ್ದು ಪರಿವೇಷ್ಟಿಸಿರ್ದಂಗನಾಜನಂಗಳಿಂ ಶೃಂಗಾರರಸಮುಂ; ನಮುಚಿಸೂದನಪ್ರಚೋದಿತವಜ್ರಾಕರ್ಷಣಲೇಖಾವಿಸಂಕಟವ್ಯೂಢವಕ್ಷಸ್ಸ್ಥಲರುಂ ಐರಾವತದಂತಿದಂತೋತ್ಪಾಟನಪಟುಬಾಹುಪರಿಘರುಮಪ್ಪನೇಕವೀರದಾನವಸೇನಾಗ್ರಣಿಗಳಿಂ ವೀರರಸಮುಂ, ಅಕ್ರೂರಾದಿಚತುರುಪಧಾವಿಶುದ್ಧಯಾದವಪ್ರಧಾನಸಂತಾನದಿಂ ಶಾಂತರಸಮುಂ, ಎತ್ತಲಾನುಮವಸರಂಬಡೆದು ಬಂದೋಲೈಸುವಷ್ಟಲೋಕಪಾಲಕರ ಕಳಕಳಮನಾಲಿಯಿಮೆಂದು ಜಡಿದು ನುಡಿವ ಕಣ್ಣಿಂ ಬಿಡುವ ಪಡಿಯರರ ತಂಡದಿಂ ರೌದ್ರರಸಮುಂ, ಆಸ್ಥಾನವಲ್ಲಭನ ಮನಮನರಿದು ನಗಿಸುವ ಕುಬ್ಜವಾಮನಬಧಿರಮೂಕರ್ ಮೊದಲಾದ ಪಲತೆಱದ ಸಬ್ಬವಗಾಱರಿಂ ಹಾಸ್ಯರಸಮುಂ, ತಂತಮ್ಮ ಸರ್ವಸ್ವಮಂ ಕೊಟ್ಟನುಗ್ರಹಂಬಡೆಯದೆ ನಿಗ್ರಹಶಂಕಾಭರಾತಂಕಿತಹೃದಯರಾದ ಅಂಗ ವಂಗ ಕಳಿಂಗ ಕೊಂಗ ಮಾಳವ ಚೋಳ ನೇಪಾಳ ಸಿಂಹಳ ಪಾಂಡ್ಯ ಗೊಲ್ಲ ಪಲ್ಲವ ಘೂರ್ಜರ ಬರ್ಬರ ಪಾರಸೀಕ ಪಾರಿಯಾತ್ರ ಹಂಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ, ಇತ್ತಲಸುರೋತ್ತಮಕೋಪದಿಂ ಪುರ್ಬಿನ ಜರ್ಬಿನಿಂ ಪೊಗೆ ನೆಗೆಯಲ್ಕತ್ತ ನಾಕಲೋಕಮುರಿಯುತಿರ್ದುದೆಂಬ ವಾರ್ತಾಪರಂಪರೆಯಿನದ್ಭುತರಸಮುಂ, ಅಧಿನಾಥನಾಜ್ಞೆಯಿಂ ರಕ್ಷಾವಿನಿರ್ದಿಷ್ಟರೂಕ್ಷರಾಕ್ಷಸರ ತೋಳ ಬಾಳ ನೇಣಲೊಳ್ ಕಱಂಗಿ ಕರಿಗರಿಗಂದಿ ಕುಂದಿ ಮಿಡುಕಲಣ್ಮದಿರ್ಪ ಪಾಯಾದಯಾದವರಿಂ ಕಾರುಣ್ಯರಸಮುಂ,ಕಂಸನೊಳಡಱಿ ಮಿಱಿ ಮಾಱಾಂತು ಬರ್ದುಂಕುವನಾವನೆಂಬ ತಲ್ಲಣದಿಂ ಪುಲ್ಲಂ ಕರ್ಚಿ ಕೊಲ್ಲದಿರೆಂದು ಪಲತೆಱದೆ ನಾಣಂ ತೊಱೆದು ಬೆಂಗೊಟ್ಟೋಡಿದಿಂದ್ರನೋಟಮಂ* ನಭಿನಯಿಸಿಯಾಡಿ ತೋರ್ಪ ವೈತಾಳಿಕರಿಂ ಬೀಭತ್ಸರಸಮುಂ; ಇಂತು ನವರಸಂಗಳಿಂದಭಿನವರಸಂಗಳಾಗಿ ನೆಗಟುತ್ತುಮಿರೆ,

ಆನೆಗ●ದ್ದಸಭೆಗೆ ಗಗನ
ಸ್ಥಾನದಿನಿಟಿತಂದನೊರ್ವನೊದಲ್ ಪಗಲುಳ್ಕಂ ।

* ಖ—ಇಂದ್ರನನೋಟವು.

ತಾನೆನೆ ಮುನಿ ವಿಖ್ಯಾತಂ
ದಾನವಕುಲನಿಧನದೂತನಜಸಂಜಾತಂ ॥ ೪೦

ಬಂದು ಸಭೆವುಗೆ ಮುನೀಶಂ
ಗಂದಿದಿರೆೞ್ದರ್ಘ್ಯಹಸ್ತನೆೞಗಿದನಸುರಂ ।
ಸಂದೆಯುಮೇನೆಱಗಿಸುವುದ
ದೊಂದುಗ್ರತಸಃಪ್ರಭಾವಮೆಂತಪ್ಪವರಂ ॥ ೪೧

ಪ್ರತ್ಯುತ್ಥಾನಾನಂತರ
ಮತ್ಯುನ್ನತಕನಕಪೀಠಮಂ ಮುನಿಗಿತ್ತಾ ।
ದೈತ್ಯಂ ಬೆಸಸುವುದೆನಗಾ
ದಿತ್ಯಪ್ರಭ ನಿಮ್ಮ ಬಂದ ಕಾರ್ಯಾಂತರಮಂ ॥ ೪೨

ವ॥ ಎನೆ ತದೀಯಕರ್ಣಾಭ್ಯರ್ಣಮಂಪೊರ್ದಿ,

ಅತಿದುಸ್ಸಹವಾರ್ತಾ ವಿಷ
ಲತೆಯಂ ನಾಂಟಿಸಲಿದಲ್ತೆ ಕಂಸಶ್ರೋತ್ರ ।
ಕ್ಷಿತಿಖನನಪವಿಶಲಾಕಾ
ತತಿಯೆನೆ ದಶನಾಂಶು ನಿಮಿರೆ ಮುನಿಯಿಂತೆಂದಂ ॥ ೪೩

ಚತುರಾಸ್ಯೇಂದ್ರಾದಿದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರುದ್ವೃ
ತ್ತತೆಯಂ ಪುಯ್ಯಲ್ಚೆ ಕಂಸಪ್ರಭೃತಿದಿತಿಜರಂ ಕೊಲ್ವೆನಾನೆಂದು ಪೂಣ್ದ
ಚ್ಯುತದೇವಂ ದೇವಕೀಗರ್ಭದೊಳುದಯಿಸಲೆಂದಿರ್ದನೆಂದಿಂತಿದಂ ಪೇ
ೞ್ದತಿಮಾತ್ರಂ ಪಾಂಡುಗಾತ್ರಂ ತಳೆದನಘಲತಾದಾತ್ರನಾಬ್ರಹ್ಮಪುತ್ರಂ ॥

ವ॥ ಆಗಳತ್ಯಂತವಿಸ್ಮಿತಸ್ವಾಂತನಾಗಿ ಕಂಸಂ ನಿಜಾಂತಿಕದೊಳಿರ್ದ ಮಂತ್ರಿಗಳ್ಗಾ ವೃತ್ತಾಂತಮಂ ಪೇೞ್ದುದುಮಾಕಾರ್ಯಮಾಕದರ್ಯಂಗೆ ವಿಪರ್ಯಯಪ್ರದಮೆಂದು ಸಕಳಸಂಯುತಜನಮುಂ ಮನದೊಳನುಮಾನಿಸೆ ತತ್ಪ್ರಯೋಜನಪ್ರತೀಕಾರವಿಸಮ್ಮತಮತಿಗಳಕ್ರೂರಾದಿಯಾದವಪ್ರಧಾನರ್ ನಾರದನ ತಥ್ಯವಚನಮನತಥ್ಯಂಮಾಡಲೆಂದು,

ಕಿಸುೞಿಂಪೊತ್ತಿಕ್ಕುವೀದಂದುಗಮೆ ತನಗನುಷ್ಠಾನಮುಂ ಧ್ಯಾನಮುಂ ತ
ತ್ತ್ವಸುಖೈಕಜ್ಞಾನಮುಂ ಕೇವಳಮೆನೆ ಕುಟಿಲಂ ಕ್ಲಿಷ್ಟಕಂ * ಸಾಧುದುಷ್ಟಂ |
ಪಿಸುಣರ್ ಮತ್ತಾರೊ ಪೇೞ್ ನಾರದಮುನಿಯವೊಲೆಂಬೀಪ್ರಧಾನೋಕ್ತಿಯಂ ರಾ
ಕ್ಷಸರಾಜಂ ಕೇಳ್ದು ದಂಷ್ಟ್ರಾಕಿರಣಧವಳಿತಾಸ್ಥಾನನಿಂತೆಂದನಾಗಳ್ ||

ತೊದಳಲ್ತು ನಾರದಂ ಪೇ
ೞ್ದದೆಂತೆನಲೆನ್ನ ತೇಜನೞಿಸಿ ವಿಭವಾ |
ಸ್ಪದಮೆನೆ ದೇವಕಪುತ್ರಿಯ
ಮದುವೆಯನಾನೊಲ್ದು ಮಾಡಿ † ಕಟಿಪುವ ಪಥದೊಳ್ || ೪೬

ಅಮರಾಧ್ವದೊಳೊಂದಶರೀ
ರಮಹಾಧ್ವನಿ ಕಂಸ ಕಂಸ ಕೇಳ್ ದೇವಕಿಯ |
ಷ್ಟಮಗರ್ಭದಾತನಿಂದ
ಷ್ಟಮಚಂದ್ರಂ ನಿನಗೆ ನರೆಗುಮೆಂಬುದಮೋಘಂ || ೪೭

ವ|| ಅದಂ ಕೇಳ್ದು ಮದೀಯಜೀವಾಪಹರಣಕಾರಿವಿರೋಧಿಪಕ್ಷಸಸ್ಯಮವಶ್ಯಮುದಯಿಸುವೀದೇವಕೀಗಾತ್ರಕ್ಷೇತ್ರಮನೀಗಳೆ ವಿನಾಶಮನೆಯ್ದಿಸುವೆನೆಂದು ಬಗೆದಂದು ,

ಪೇೞ್ವಬಗೆಯಿರ್ಕೆ ಪಕ್ಕದ
ಕೀೞ್ವಾಳನ ‡ ಕೈಯೊಳಿರ್ದ ಬಾಳಂ ಕೊಂಡಾ |
ನೇೞ್ವುದುಮಾವಸುದೇವಂ
ಬಾೞ್ವಾಸೆಯೊಳಾದ ಖೇದದಿಂದಿಂತೆಂದಂ || ೪೮

ಅಹಿಮರ್ತ್ಯಾಮರವಿಷ್ಟಪತ್ರಿತಯಮುಮಂ ಗೆಲ್ದು ನಿನ್ನೊಂದು ದು
ಸ್ಸಹದೋಸ್ಸಾಹಸದಿಂದಮಾದ ಜಸಮೆಲ್ಲಂ ಮಾಸುಗುಂ ತ್ವತ್ಪ್ರತಾ |

* ಕ ಖ ಕೃಷ್ಣಕಂ.  † ಮೊ—ಅ. ನಾನಂದುಕೂರ್ತು ಕ. ನಾನಂದುಮಾಡಿ.
‡ ಕ. ಖ. -ಕೀೞ್ವಾಳಿನ.

ವಹುತಾಶಂ ಕಡುದಣ್ಪನೇಱುಗು ಮಮೋಘಂ ಸ್ತ್ರೀವಧಂಗೆಯ್ಯೆ ಮಾ
ಣಹಹಿನ್ನೆತ್ತೆ ದಿರೀನಿಜಾನುಜೆಗೆ ನೀಂ ನಿಸ್ತ್ರಿಂಶ ನಿಸ್ತ್ರಿಂಶಮಂ ॥ ೪೯

ನೆಟ್ಟನೆ ಮೃತ್ಯುವೀಕೆಯು ಸುತರ್ ನಿನಗೆಂದೊಡೆ ಕೊಲ್ವುದೀಕೆಗಂ
ಪುಟ್ಟಿದ ಮಕ್ಕಳಂ ಪರಸಿ ಸೇಸೆಯನಿಕ್ಕಿದ ಕೈಯೊಳಂತು ಕೈ ।
ಮುಟ್ಟೆಱಿದಪ್ಪೆ ಪೂಮುಡಿಯ ಬಾಲೆಯನೀಕೆಯನೆಂದು ಬಾಸಿಗಂ
ಗಟ್ಟಿದ ಶೀರ್ಷದಿಂದೆಱಗಿದಂ ವಸುದೇವನತೀವಭೀತಿಯಿಂ ॥ ೫೦

ವ॥ ಅದಂ ಕಂಡು ,

ಆಂ ನಯೆಗೈದು ಕಾದನುಜೆಯುಂ ವಸುದೇವಸಮೇತಮೆಂದು ಮ
ನ್ಮಂದಿರ । ಮಧ್ಯಕೇಳಿಗೃಹದೊಳ್ ಸೆಱೆಗೆಯ್ದು ತದೀಯಗರ್ಭನಿ ।
ಷ್ಯಂದಿಗಳಪ್ಪ ಕೂಸುಗಳನಿಂ ಕೊಲಲಿರ್ದೆನದಿಂತುಟೆಂದು ನೋ
ಟ್ಪಂದನುರೂಪನಾದುದಶರೀರಸಹೋಕ್ತಿಗೆ ನಾರದೇರಿತಂ ॥ ೫೧

ವ॥ ಎಂದು ನುಡಿದು ದೇವಕೀಗರ್ಭಾರ್ಭಕದ್ವೇಷಿ ಸುರದ್ವೇಷಿ ಕತಿ
ಪಯದಿನಂಗಳಂ ಕಳಿಪಲಿರ್ಪಲ್ ,

ನಂದನವನಮಧ್ಯದ ಕೊಳ
ದಿಂದಗಲದ ಹಂಸಮಿಥುನಮೆನೆ ಕಂಸಮಹಾ ।
ಮಂದಿರಮಧ್ಯದ ಮಣಿಗೃಹ
ದಿಂದಗಲದೆ ನಲಿಯುತಿರ್ದರಾದಂಪತಿಗಳ್ ॥ ೫೨

ವ॥ ಅಂತನಿಕಾಮಪ್ರೇಮದಿಂ ಕಾಮಸುಖಮನನುಭವಿಸುತ್ತಿರ
ಲನ್ಯೋನ್ಯಪ್ರೀತಿಬೀಜದಿಂ ಜನಿಸಿದ, ನಿರ್ಭರಸ್ವೇದಸಲಿಲಸೇಚನದಿಂ
ನಯಂಬಡೆದ, ಪುಳಕಜಾಳದಿಂ ಜಾಳಕಮನಪ್ಪುಕೆಯ್ದು, ಚುಂಬನಾದಿ
ಬಹುಕಳಾಕಳಾಪದಿಂ ಪಲ್ಲವಿಸಿದ, ಸಮಪದಸ್ಖಲನಸುಖನಿಮೀಳಿತೋ

* ಕ. ಖ. - ಕಡುದಣ್ಣನೇಱುಗು † ಕ.ಖ.- ತನ್ಮಂದಿರ

ನ್ಮೀಲಿತನಯನಂಗಳಿಂ ಮುಕುಳಿತಮುಂ ಕುಸುಮಿತಮುಮಾದ, ನಿಶ್ವಾಸಪವನನಿಂ ಪರಿಮಳಮಂ ಬೀಱುವ ವಧೂವರರಾಗವಿಷಯವಲ್ಲರಿ ಫಲಿತಮಾದುದೆನಿಸಿ,

ಆಗುಣವತಿ ಫಲವತಿ ತಾ
ನಾಗೆಯುಮಿದು ವಿಫಲಮೆಂದು ಪತಿಗುತ್ಸವಮಂ ।
ತಾಗದು * ಸಂಸ್ಕೃತಿ ಫಲವತಿ
ಯಾಗಿರೆಯುಂ ಯೋಗಿಗುತ್ಸವಂ ಪುಟ್ಟಿದಪೋಲ್ ॥ ೫೩

ವ॥ ಅನ್ನೆಗಂ ನವಮಾಸಂ ತೀವಿ ದೇವಕಿ ಬಸಲೆಯುಪ್ಪುದುಮದಂ † ಗೃಹಾಧ್ಯಕ್ಷನಿಂದಾಕ್ಷಣದೊಳ್ ಕೇಳ್ದು ಕಂಸಂ ತದೀಯಬಾಲಹಿಂಸಾಪರನಾಗಿ ಸೂತಿಕಾಸದನಮಂ ಪೊಕ್ಕು, ವಿಕ್ರಾಂತಮಂತರಿಸೆ, ಪೆಂಪು ಸೊಂಪೞಿಯೆ, ಭುಜಬಳಮೊಳಸರಿಯೆ, ಮಾನಂ ಮ್ಲಾನತೆಯನೆಯ್ದೆ, ಜಸಂ ಮಸುಳೆ, ಧೃತಿ ಗತಿಗಿಡೆ, ಪೊಡರ್ಪಡೆಯುಡುಗೆ, ಕರುಣಾವಪಸರಣಂಗೆಯ್ಯೆ, ರೂಢಿ ಗೊಡ್ಡುಗೊಳೆ, ‡ ಧರ್ಮಂ ನಿರ್ಮದಮಾಗೆ, ಪೈಮೆ ಮೆಯ್ಮಱೆಯೆ, ಪಾೞೆ ಪೂೞೆ, ಪೇಸುಗೆ ಪಸರಱೆಯೆ, ಪೇಯಂ ಮಾಯುಮಾಗೆ, ಸತ್ತ್ವಂ ಸತ್ತ್ವಂಗಿಡೆ, ಕಣ್ಬರಿ ಬೆಂಬಱಿಯೆ, ಕುಲಂ ಮಲಿನಮೆನಿಸೆ, ವಿಳಾಸಮೋಸರಿಸೆ, ಬೆಡಂಗಡಂಗೆ, ಮಯ್ಯಮಾಸಾಱದಕೂಸಂ ತಲೆಕೆಳಗಾಗೆ ಪಿಡಿದುಕೊಂಡು ನಡೆವನ್ನಂ, ಜನ್ನನ ಬೞಸಂದು ಮಂತ್ರಿಗಳಮಂತ್ರಮೆನೆ, ವಯಸ್ಯರಪಹಾಸ್ಯಮೆನೆ, § ಧರ್ಮಜ್ಞರಧರ್ಮಮೆನೆ ವೃದ್ಧರಸಂಬದ್ಧಮೆನೆ, ಪಾರ್ಥಿವರಪಾರ್ಥಮೆನೆ, ಸೋದರರಪವಾದಮೆನೆ, ಸೇವ್ಯರಸೇವ್ಯಮೆನೆ, ಯೋಗಿಗಳಭಿಯೋಗಮೆನೆ, ಧಿಷಣರ್ವಿಷಮಮೆನೆ, ಶಿಷ್ಟರಶಿಷ್ಟಮೆನೆ, ವಂಶಜರವಂಶಮೆನೆ, ಪರಿಚಾರರಪಚಾರಮೆನೆ, ¶ ನಾಕಿಗಳವಿವೇಕಮೆನೆ, ವಾರ್ತಿಕರಕೀರ್ತಿಯೆನೆ, ಮಾರ್ಗಣರಮಾರ್ಗಮೆನೆ, ಬಂಧುಗಳಬಂಧುರಮೆನೆ, ವಂದಿಗಳ್ನಿಂದ್ಯಮೆನೆ, ಮಾಗಧರಾಗದೆನೆ, ಸೂ

* ಕ. ಖ. —ತಾಗದೆ.    † ಕ. ಖ.—ಬೆಸಲೆಯುಪ್ಪುದನಱಿಪುವುದುಂ.
‡ ಮೊ—ಅ.—ಗೋಡುಗೊಳೆ.    § ಕ. ಖ ವೈಶ್ಯರಪಹಾಸ್ಯಮೆನೆ.
¶ ಕ. ಖ.—ಪರಿಚಾರರಪರಿಚಾರಮೆನೆ.

ತರನೀತಿಯೆನೆ, ವಲ್ಲಭೆಯರ್ ಪೊಲ್ಲದೆನೆ, ಪುರಸ್ತ್ರೀಯರನ್ಯಾಯಮೆನೆ, ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ಳದೆ,

ದಿವಿಜವಧಪಟುಗೆ ನಿನಗಭಿ
ಭವಮೀಶಿಶುವಧಮೆನಲ್ಕೆ ಮೊಣ್ಬಸೆ ಮತ್ತೀ ।
ಭವಧಪ್ರಚಂಡಯಮದಂ
ಪವದೇಂ ಮೊಣ್ಬುದೆ ಪಿಪೀಲಿಕಾವಧವಿಧಿಯಂ ॥ ೫೪

ವ॥ ಎಂದೊದಱಿ ಪಾಸಱೆಯೊಳ್ ಕೂಸನಪ್ಪಳಿಸಿ ಬಾಲನಿಬರ್ಹಣಗರ್ಹಣಾತಿರೇಕದಿಂ ಗತಶ್ರೀಕನಾಗಿ ನಿಜರಾಜಮಂದಿರಮಂ ಪೊಕ್ಕಂ.

ಅದಲ್ಲದೆಯುಂ,

ಕುತ್ಸಿತಮಿದೆಂಬಿನಂ ಪ್ರತಿ
ವತ್ಸರಮೀಕ್ರಮದೆ ಶಿಶುಗಳಾಱುಮನಳಿದಂ ।
ಹೃತ್ಸಂತಾಪದೆ ನಯನಗ
ಳತ್ಸಲಿಲಂ ಕುಚದೊಳಿೞಿಯೆ ದೇವಕಸುತೆಯಾ ॥ ೫೫

ಶೋಕಮನುೞ್ವಿನಂ ಶಿಶುಗಳಾಱುಮನೀಕ್ರಮದಿಂದೆ ಕಾಲಕಾ
ಲಾಕೃತಿಕಂಸನಿಂ ಲಯಮನೆಯ್ದಿರೆ ದೇವಕಿ ಪೊತ್ತಳಂತತಿ ।
ವ್ಯಾಕುಳವೃತ್ತಿಯಂ ನಿಜಫಲಸ್ತಬಕಂ ವನಮತ್ತಹಸ್ತಿಹೇ
ಳಾಕರಭಗ್ನವಾಗೆ ಕಡುಪಾಡೞಿದೊಂದು ನವಾಮ್ರವಲ್ಲಿವೋಲ್ ॥ ೫೬

ವ॥ ಅನ್ನೆಗಮತ್ತಲ್ ಪನ್ನಗಶಯನನವತರಣೋದ್ಯೋಗದಿಂ ನಾಗೇಂದ್ರನಂ ನೋಡಿ,

ಎಲೆ ಫಣಿರಾಜ ನಿನ್ನ ಫಣರತ್ನಸಹಸ್ರದ ಮಧ್ಯರತ್ನದೊಳ್
ಜಲಧಿವೃತೋರ್ವಿಯಂ ಸರಸಕಿಂಶುಕಕುಟ್ಮಳಸಂಗಿಭೃಂಗಿಯಂ ।
ಗೆಲೆ ತಳೆದಾಮಹಾಮಹಿಮ ನೀಂ ತಳೆದುರ್ವರೆಗಾದ ಭಾರಮಂ
ತೊಲಗಿಪನಿಂ ಮದಂಶವಿಭುವಾವಿಭುಗಗ್ರಜನಾಗು ಲೀಲೆಯಿಂ ॥ ೫೭

ಎಲೆ ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆ ಯುಷ್ಮ
ತ್ಕಲೆ ದಿವ್ಯಾಕಾರದಿಂ ಪುಟ್ಟುಗೆ ಭಗವತಿಯುಂ ಚಂಡಿಯುಂ ದುರ್ಗಿಯುಂ ಪೇ|
ಕಲುಲಾಯುಧ್ವಂಸಿಯುಂ ಕನ್ಯಯುಮೆನಿಸುಗೆ ಪೂಜೆಕ್ಕೆ ಮಾಂಸಾದಿನಾನಾ
ಬಲಿಯಿಂ ದೇವರ್ ಸರಲ್ ತ್ವಚ್ಚರಣಕಮಲಮಂ ಶ್ರೀಜಯಶ್ರೀನಿಮಿತ್ತಂ ||

ಮೊದಲೊಳ್ ನೀಂ ದೇವಕೀಗರ್ಭದ ಶಿಶುವನನಂತಾಂಶಮಂಕರ್ಷಣಂಗೆ
ಯ್ದದನಿಂಬಿಂ ತತ್ಸಪತ್ನೀಜಠರದೊಳಿರಿಸಲ್ಲಿಂಬಳಿಕ್ಕಂ ವ್ರಜಸ್ಥಾ|
ನದ ನಂದಸ್ತ್ರೀಯ ಗರ್ಭಕ್ಕವತರಿಸಿ ಮದೀಯಾನುಸಂಜಾತೆಯಾಗೀ
ತ್ರಿದಶತ್ರಾಣಾರ್ಥಮಾಂ ದೇವಕಿಯ ಬಸಿಱೊಳಂಶಾಂಶದಿಂ ಪುಟ್ಟಿದಪ್ಪೆಂ ||

ವ|| ಎಂದು ಬೆಸಸುತಿರ್ಪನ್ನಗಮಿತ್ತಲೊಂದುದಿವಸಂ ದೇವಕೀದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ ಮಂಗಳಪ್ರಸಾಧನಮನಪ್ಪುಕೆಯ್ದು ವಸುದೇವನೊಡನೆ ಧವಳಶಯ್ಯಾತಳಮನಲಂಕರಿಸಿ ಬಹುವಿಧಪ್ರಣಯಕೇಳೀಕಳಾವಿಡಂಬಸಂಭೋಗಸುಖಸುಧಾರಸತೃಪ್ತಿಯಿಂ ಸುಖಸುಪ್ತೆಯಾಗಿರ್ಪಿನಂ,

ಧರೆಗವತರಿಸುವ ಲಕ್ಷ್ಮೀ
ವರನವತಾರಕ್ಕೆ ಪೀಠಿಕಾಪ್ರಕರಣದಂ |
ತಿರೆ ಬಂದನಂತಭೋಗೀ
ಶ್ವರನಾದೇವಕಿಯ ಗರ್ಭದೊಳ್ ಜನಿಯಿಸಿದಂ || ೬೦

ವ|| ಅಂತನಂತನನಂತಶಯನನಾಜ್ಞೆಯಿಂ ಬಂದು ದೇವಕಿಯ ಗರ್ಭದೊಳ್ ನೆಲಸೆ ಕತಿಪಯಮಾಸಂಗಳ್ಗೆ,

ವನಜಾಕ್ಷಂ ಬೆಸವೇೞ್ದುದಂ ನೆನೆದು ಮಾಯಾದೇವಿ ಬಂದೆಯ್ದಿ ಕಂ
ಸನ ಮಾಟ್ಪ್ರಂದಪಕಾರದಿಂ ಪಿಸಿದುದಿಂ ದೇವಕೀಗರ್ಭಮಂ |
ಬಿನಮಾದೇವಿಯ ಗರ್ಭದರ್ಭಕನನತ್ತಲ್ ಗೋಕುಲಕ್ಕಯ್ದಿ ಪೋ
ಪನಸಾಮರ್ಥ್ಯದೆನಿಂದು * ಯೋಜಿಸಿದಳಂತಾರೋಹಿಣೀಗರ್ಭದೊಳ್ ||

* ಕ-ಸಾಮರ್ಥ್ಯವಿನಿಂತು.

ವ॥ ಆಗಳಾದೇವಕಿ ಪುಷ್ಪವತಿಯಾದಂತೆ ಮಣಿಭೂಷಣಂಗಳಂ ತೊಲಗಿಸಿ ಕಂಸಕೃತಾಪಕಾರದಿಂ ನಿರ್ವಿಕಾರವು ಪೊಲ್ಲವೆಯಾದುದೆಂದು ಖೇದಿಸುತ್ತಿರಲದಂ ಕಂಡು,

ಸ್ನಿಗ್ಧತರಾಂಗಚೇಷ್ಟೆ ವದನೇಂದುಮರೀಚಿ ಕಪೋಲಪಾಂಡು ವಿಂ *
ವೃಗ್ಧವಿಳಾಂಶುವೆಂಬಿಕೆಗೆ ಗರ್ಭದ ಚಿಹ್ನಮದೆತ್ತವೋದುದೀ ।
ಮುಗ್ಧೆಗದೆಂತು ಪುಟ್ಟಿದುದೊ ಖೇದಮೆನುತ್ತುಮೆ ತತ್ಪ್ರಪಂಚಸಂ
ದಿಗ್ಧೆಯರಾತ್ಮವೋಹಶಿಖಿದಗ್ಧೆಯರೀಕ್ಷಿಸಿದರ್ । ಏದಗ್ಧೆಯರ್॥ ೬೦

ವ॥ ಅವರೊಳಗೂರ್ಬಳ್ ಮನದನ್ನಳಪ್ಪ ಕೆಳದಿ ತತ್ಪ್ರಪಂಚಮಂ ತಿಳಿಯಲೆಂದಾದೇವಕಿಯಂ ಮೆಲ್ಲನೆ ಪೊರ್ದಿ,

ಉಗುಳ್ದಪುದಿಲ್ಲ ಚಂದ್ರಿಕೆಯನುಜ್ಜ್ವಳಲೋಚನ ಲೋಚನಂ ಮನಂ
ಬುಗೆ ನಯಮಂ ಪುದುಂಗೊಳಿಸಿತಿಲ್ಲ ಲತಾಂಗಿ ಲತಾಂಗಲೇಖೆ ಮೆ।
ಲ್ಲಗೆವೆಳಗಂ ತುಳುಂಕಿದಪುದಿಲ್ಲೆ ಸವಿಂದುಮುಖೀ ಮುಖೇಂದುವೇ
ಕೆಗ ನಿನಗಾವಕಾರಣದಿನಾದುದು ಪೇಳಿಸಿತೊಂದು ಬೇವಸಂ ॥ ೬೩

ವ॥ ಎಂದುಬೆಸಗೊಳ್ವುದುಂ,

ಮುತ್ತಂ ಕೊಯ್ದೆಱಲಿಕ್ಕಿದ
ಬಿತ್ತರದಿಂ ಸುರಿವ ತೋರಕಣ್ಬನಿಯಿಂ ತ ।
ನ್ನುತ್ತುಂಗಕುಚಕೆ ಹಾರಮ
ನಿತ್ತಳ್ ಸತಿಯಿತ್ತುದಿಲ್ಲ ಸಖಿಗುತ್ತರಮಂ ॥ ೬೪

ವ॥ ಅಂತು ಕಿಱಿದಾನುಂ ಬೇಗಮಿರ್ದು ಮನವನೆಂತಾನುಂ ಸಂತೈಸಿ ಕೆಳದಿಗಿಂತೆಂದಳ್ :—

ಪ್ರಸವಸಮಯದೊಳ್ ಪಾರ್ದು
ರ್ದಸುರಂ ಬಂದೆನ್ನ ಶಿಶುವನುಯ್ವುದುಗೆಟ್ಟೇ ।

* ಪಾ—ಅ. ಪಾಂಡುಪೇ । ಕ. ಖ —ದಗ್ಧೆಯನೀಕ್ಷಿಸಿದರ್.
ಪಾ—ಅ. ಮುಖೇಂದುವೇಕೆಗ.

ಬಸಿಱೊಳ್ ಕರಗಿಸೆ ಪಡೆದೆಂ
ಪೊಸತಪ್ಪದವೆಱಲನೆನ್ನೊಳಿಂದಿಂದುಮುಖೀ ‖ ೬೫

ಕಳಹಂಸಂ ಸುೞಿಯದ ಪೂ
ಗೊಳನಮೃತಮರೀಚಿಯಿಲ್ಲದಂಬರಚಕ್ರಂ ।
ಕಳಭಂ ಸಂಚರಿಸದ ವನ
ವಳಯಂ ಸುತನಾಡದಂಗಳಂ ರಂಜಿಕುಮೇ ‖ ೬೬

ಮೂಗಮುಂ ನೋಡುವೆ ಲಲ್ಲೆಗೆಯ್ವ ಮೊಲೆಯುಂಬಬ್ಬುಬ್ಬು*ಜಾಬಂಬ ಕ
ಮ್ಮಗೆ ಕಾಲ್ಪತ್ತುವ ದೂರದಿಂದೆ ಪರಿತಂದಪ್ಪಪ್ಪೆನುತ್ತಪ್ಪು ವೊ ।
ಯ್ಯಗೆಚೆಯ್ಯಾಡುವಮೇಲುದಂಮುಸುಕಿಡುತ್ತೋಯೆಂಬ।ಪಾಯೆಂಬಮು
ದ್ದುಗಳಂ ಬೀಱುವ ಕಂದನೊಳ್ ನಲಿವ ಪೆಣ್ಣಿಂ ನೋಂಪಿಯಂ
ನೋಂತಳೋ ‖ ೬೭

ಆನತಭೂಮಿಪಾಲಕಕುಲಂಗೆ ಹಿಮಾಂಶುಕುಲಂಗೆ ಕೀರ್ತಿಸಂ
ತಾನಕುಲಂಗೆ ವೃಷ್ಣಿಯ ಕುಲಾಂಗನೆಯುಪ್ಪಿಸಿತರ್ಕೆ ನೋಂತೆನಾಂ ।
ನೋನನೆ ನೋಡೆ ಕಂಸನ ವಿಜೃಂಭಣಮಂ ಜಯಿಸಲ್ ಸಮರ್ಥನಂ
ಭೂನುತನಂ ಯಶೋವಿದಿತನಂ ಸುತನಂ ಪಡೆವೊಂದು ನೋಂಪಿಯಂ ‖

ವ ‖ ಎನಲತಿ ಪ್ರೌಢೆಯೆನಿಸಿದ ಕೆಳದಿ,

ಜನಸುಂ ನಿನ್ನ ತಪಕ್ಕೆ ಮೆಚ್ಚಿ ವರವಿತ್ತಂ ಶ್ರೀವರಂ ತಾನೆ ನಂ
ದನನಪ್ಪೆಂ ನಿನಗೆಂದು ಪೂರ್ವಭವದೊಳ್ ವೃದ್ಧೋಕ್ತಿಯಿಂ ದೇವಿ ಕೇ ।
ಳ್ದನಿದಂ ನೀಂ ಪಡೆದಪ್ಪೆಯಿನ್ನವಿತಥಂ ಕ್ಷತ್ರಾರ್ಥಮಾಕ್ಷೋಹಿಣೀ
ವನದಾಹೋಗ್ರ‡ಕೃಶಾನುವಂ ರಿಪುರವಿಸ್ವರ್ಭಾನುವಂ ಸೂನುವಂ ‖ ೬೮

ವ ‖ ಎಂದು ನುಡಿಯೆ,

ನವಘನವರ್ಣಲಾರವದಿಂ
ದವನೀದೇವಿಯ ನಿದಾಘಪರಿತಾಪಮಡಂ ।

* ಮೊ—ಅ.—ನೂಲೆಯುಣ್ಬಬ್ಬುಬ್ಬುಜಾಬಂಬ.
| ಕ. ಖ. ಗ —ಮುಸುಕಿ ಪತ್ತೋಯೆಂಬ.
‡ ಕ. ಖ. ಗ, —ದಾಪೋಗ್ರ.

ಗುವವೊಲ್ ಸಖಿಯ ಸುಭಾಷಿತ
ರವದಿನಡಂಗಿದುದು ದೇವಕೀಹೃತ್ತಾಪಂ ॥ ೨೦

ವ॥ ಆಗಳಾಗರ್ಭಸ್ಖಲನಸಮಯಮುಮೆ ಋತುಸಮಯಮುಮಾಗೆ ಚತುರ್ಥ ದಿವಸನಮನಂತರಂ ಮಜ್ಜನಂಬೊಕ್ಕು ಮಂಗಳಾಚಾರಮನಪ್ಪುಕೆಯ್ದು,

ಮಿಸುಪ ದುಕೂಲದೊಳ್ಪುಡಿಗೆ ಚಂದನಕರ್ದಮಮೊದಪ್ಪು ಮಲ್ಲಿಕಾ
ಕುಸುಮಮಮನಾಂತ ಕುಂತಳಭರಂ ಸುಲಿಪಲ್ಗಳ ಕಾಂತಿಯಿಂ ಬೆಳ |
ರ್ತೆಸೆವಧರಂ ತಳತ್ತಳಿಪ ಮುತ್ತಿನ ಪಚ್ಚಮನಂಗ ಕೀರ್ತಿಯಂ
ಪಸರಿಸಿ ಕೊಂಡ ಬೆಳ್ಪಸದನಂ ಬಗೆಗೊಂಡುದು ಕಾವಲಾಂಗಿಯ ॥೨೧

ಇದು ಚಿತ್ರಂ ನಿಜವಕ್ತ್ರಶೋಭೆಯೊಳ ತಾರಾಧೀಶನಂ ಗೆಲ್ದುದ
ಲ್ಲದೆ ತತ್ತಾರಕಚಂದ್ರಿಕಾಬಲಮುಮಂ ¹ ಮುಕ್ತಾಫಲಾಲಂಕೃತಾ |
ಘದುಕೂಲಂಗಳನೀಕೆ ಗೆಲ್ದಪಳನಲ್ ತನ್ನಂಗಿಗೇಂ ಚೆಲ್ವುವೀ
ಈದುವೋ ಮುತ್ತಿನ ಪಚ್ಚಮುಂ ದುಗುಲಮುಂ ಮಾಂಗಲ್ಯಶೃಂ
ಗಾರಮುಂ ॥೨೨

ವ॥ ತದನಂತರಂ,

ನಗೆಯುಡೆನೂಲ ಗೆಜ್ಜೆಯುಲಿ ಕೀರದ ಸಾರಿಕೆಯಿಂಚರಂಗಳಂ
ಮಿಗೆ ಚರಣಾಸ್ಫುರನ್ನಖಮಯೂಖದ ಬೆಳ್ಪುಪಹಾರಪುಷ್ಪಮಂ |
ದ್ವಿಗುಣಿಸೆ ಸುಯ್ಯ ಕಂಪಗುರುಧೂಪದ ಕಂಪನದಿರ್ಪ ದೀಪಕಾಂ
ತಿಗೆ ತನುಕಾಂತಿ ಮಾರ್ಮಲೆಯೆ ಪೊಕ್ಕಳಾಸುತೆ ಸೆಜ್ಜೆವಾಡಮಂ। ॥೨೩

ಜಳಶಯನವತರಿಸುವುದಂ
ತಿಳಿದಲ್ಲಿಂ ಮುನ್ನ ದುಗ್ಧವಾರಿಧಿ ತಳ್ಪ |
ಚ್ಚಳದಿಂದವತರಿಸಿತ್ತಾ
ನಿಳಯದೊಳನೆ ಧವಳತಲ್ಪಮುಸೆದುದನಲ್ಪಂ ॥ ೨೪

೧. ಗ—ತತ್ತಾರಕಚಂದ್ರಿಕಾಜ್ವಲಮುಮಂ, ಪ—ಅ ತತ್ತಾರಕ ಚಂದ್ರಿಕೋಜ್ಜ್ವಲಮುಮಂ.
। ಕ.—ಶಯ್ಯೋಗೇಚಮಂ.

ಸ್ಮಿತಧವಳಕಮಳವನದೊಳ್
ರತಿರಾಗದೆ ಹಂಸಿ ಹಂಸನಂ ಸೋಂಕುವವೋಲ್ ।
ಅತಿಶಯಯಶಯುಸಸ್ಥಳದೊಳ್
ಪತಿಯೊಡನಾಕಾಂತೆ ಸುರತಸುಖದಿಂದಿರ್ದಳ್ ॥ ೩೪

ವ ॥ ಅಂತಪ್ರಾಂತರಾಗದಿಂ ಸಂಭೋಗಸುಖಸಾಗರದೊಳೋಲಾಡಿ ಪರಿಶ್ರಮ ನಿಮೀಳಿತಲೋಚನೆಯಾಗಿ ವಸುದೇವನೊಡನೆ ಪವಡಿಸಿರ್ದು ಯಾಮಿನೀ ಯಾಮತ್ರಯವಿರಾಮ ಸಮಯದೊಳ್,

ದ್ಯುತಿಧೌತವ್ಯೋಮಚಂಡಾಂಶುವನಮಲಸುಧಾಸೂತಿಯಂ ದರ್ಪಾದ್ಯೈರಾ
ವತಮಂ ಪ್ರೋದ್ದಾಮಹೇಮಾಚಲಮನಭಿನುತಾಂಭೋಜಮಂ ತ್ವಂಗ
ದುತ್ತುಂ ।
ಗತರಾಂಭೋರಾಶಿಯಂ ಸತ್ಸಲಿಳಿತ * ಸುರೋರ್ವೀಜಮಂ ಶೈಲಶೃಂಗ
ಸ್ಥಿತಗರ್ಜತ್ಸಿಂಹಮಂ ಸ್ವಪ್ನದೊಳತಿಮುದದಿಂ ದೇವಕೀದೇವಿ ಕಂಡಳ್ ॥

ವ॥ ಅಂತುಮಲ್ಲದೆ,

ಮಿಗುವಂಗದ್ಯುತಿ ಲೋಕಮಂ ಬಳಗೆ ಚಂಚತ್ಕುಂಡಲಂ ಗಂಡಭಿ
ತ್ತಿಗಳಂ ಚಿತ್ರಿಸೆ ಕೌಸ್ತುಭಂ ಪೊಳೆಯೆ ವಕ್ಷೋದೇಶದೊಳ್ ಶಂಖಚ|
ಕ್ರಗದಾಪದ್ಮಧರಂ ಸುಪೀತವಸನಂ ಬಂದಾಸ್ಯದೊಳ್ ಪೊಕ್ಕುದಂ
ದ್ಮೃಗಲಕ್ಷ್ಮಾನನ ಕಂಡಳುಣ್ಮೆ ನಭದೊಳ್ ದೇವೇಂದ್ರ ತೂರ್ಯಸ್ವನಂ॥

ವ॥ ಆಮಹಾಶ್ಚರ್ಯಸ್ವಪ್ನದರ್ಶನೋತ್ಸವಾನಂತರಂ ಸಹಸ್ರಕಿರಣೋದಯಸಮಯದೊಳ್,

ಕಳಕಾಂಚೀಮಂಜುಮಂಜೀರಕವಳಯರವಂಪೊಣ್ಮೆ ನೇತ್ರಾಂಬುಜಂಪಾ
ಟಳಕಾಂತಿಶ್ರೀಯಿನೊಪ್ಪುತ್ತಿರ ತನುಲತೆ ಭಾರಭ್ಯಾಮಂ ಬೀಜಿ ಸೂಸಿ ।
ದಳಕಂ ಜೋಲ್ದಿರ್ದ ಬಂಬಲ್ಮುಡಿ ಶಿಥಿಲತೆವೆತ್ತಿರ್ದ ನೀವೀಭರಂ ಕ
ಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳ್ ನೀರ್ದಾಂಗಿ † ಶಯ್ಯಾಗ್ರ
ದಿಂದಂ ॥ ೩೮

* ಕ ಖ ಗ.—ಸಳಿತ.
† ಕ, ಖ, ಗ.—ಸಿದ್ರಾಂಗಿ ವೆ. ಅ. ಹೃದ್ಯಾಂಗಿ.

ದೇವಗುರುದ್ವಿಜರಂ ಸ
ದ್ಭಾವದಿನರ್ಚಿಸಿಸು ವಸ್ತ್ರಭೂಷಾದಿಗಳಿಂ ।
ದೇವಕಿ ಕೈಗೆಯ್ದೆಸೆದಳ್
ಲಾವಣ್ಯದ ಪೊಸಲಕ್ಷ್ಮಿ ಪೊಳೆದೀಱುವವೊಲ್ ॥ ೭೯

ವ॥ ಅನ್ನೆಗಂ ನಿರ್ವರ್ತಿತನಿತ್ಯನಿಯಮನಾಗಿ ವಸುದೇವನಿರೆ,

ಇಂದಿದು ಚಿತ್ರಪಿಶಾಗಮೆಕಪೀಪರಿಯೀದರಹಾಸಮೀಬೆಡಂ
ಗೆಂದಿನ ಭಂಗಿಯುಳ್ಳಿದೆನುತುಂ ಜನಮೀಕ್ಷಿಸೆ ತನ್ನ ಲೀಲೆಯಿಂ ।
ಬಂದಳದೊಂದು ವಿಭ್ರಮಮದೊಂದು ವಿಳಾಸಮದೊಂದು ಚೆಲ್ವದೊಂ
ದಂದಮದೊಂದು ದೇಸೆ ಪೊಸತಾಗಿರೆ ವಲ್ಲಭನಲ್ಲಿಗಕ್ಕಱಿಂ ॥ ೮೦

ವ॥ ಅಂತು ಬಂದು ನಿಜಕಾಂತನರ್ಧಾಸನಮನಲಂಕರಿಸಿ ಕುಳ್ಳಿರ್ದು,

ಪಗಲೊಳಗೆಳವೆಳ್ದಿಂಗಳ
ನುಗುೞ್ದಿಪ್ಪುದಿದೊಂದು ಚಂದ್ರಮಂಡಲಮೆನೆ ದಂ ।
ತಗಭಸ್ತಿಗಳ್ ನಿಜಾಸ್ಯದಿ
ನೊಗೆತರೆ ಸತಿ ಪತಿಗೆ ಕಂಡ ಕನಸಂ ಪೇೞ್ದಳ್ ॥ ೮೧

ವ॥ ಆ ಕನಸುಗಳನನುಕ್ರಮದಿಂ ಕೇಳ್ದು,

ಪರಮಾನಂದರಸಾರ್ಣವ
ಪರಿಸರವೃಕ್ಷಮೆ ಕೊನರ್ತುದೆನೆ ವಸುದೇವಂ ।
ಭರಯಿಸಿ ಪುಳಕಮನಾಶುಭ
ಚರಿತೆಗೆ ತತ್ಫಲಮನಱಿಪಲೆಂದಿಂತೆಂದಂ ॥ ೮೨

ರವಿಯಿಂ ಭಾಸುರಮೂರ್ತಿ ಪೂರ್ಣಶಶಿಯಿಂ ಸದ್ವೃತ್ತನಿಂದ್ರೇಭದಿಂ
ದವನೀಭರ್ತೃ ಸುರಾದ್ರಿಯಿಂ ಸ್ಥಿರತರಂ ಪಂಕೇಜದಿಂ ಶ್ರೀವಧೂ।

† ಗ— ಸದ್ಭಾವದಿನರ್ಚಿಸುವ.

ಧವನಾಪಾರಿಧಿಯಿಂದಪಾರಮೆಹಿಮಂ ಕಲ್ಪದ್ರುಮಂ ಸತ್ತ್ವಗಾ
ರವಯುಕ್ತಂ ಮೃಗರಾಜನಿಂ ಪುರುಷಸಿಂಹಂ ಪುಟ್ಟುಗುಂ ನಂದನಂ ॥೮-೩

ವ॥ ಅಂತುಮಲ್ಲದೆ,

ಪೋದ ಭವಂಗಳೊಳ್ ನೆರಪಿದೊಂದು ತಪಂ ಫಲಮಾಯ್ತು ನಿನ್ನೊಳಿಂ
ದಾದನುಜಾರಿ ಬಂದು ಭವದಾನನದೊಳ್ ಪುಗೆ ಕಂಡುದೊಂದು ಪು ।
ಣ್ಯೋದಯದಿಂ ಚತುರ್ಭುಜನೆ ಪುಟ್ಟುವಪಂ ಯದುವಂಶರಾಜ್ಯಸಂ
ಪಾದನನುಗ್ರಸೇನಭಯಭೇದನನುದ್ಧತಕಂಸಸೂದನಂ ॥ ೮-೪

ಮಡದೀ ನೀಂ ಪಡೆಪಾಸುತಂ ರಿಪುಚಯಮೂಸಂಹಾರವಂ ಹಾರವಂ
ಪೊಡರಲ್ ಮೊಚ್ಚುಮನಾಕ್ಷ್ಮಂ ತವಿಕುವಿಂದೇವಾರಿಯುಂ ವಾರಿಯುಂ ।
ಪಡಬಾಸ್ಯಂ ತವಿಪಂತಿರಾವ್ರುಕನಸೀ* ನಿರ್ಬಂಧದಿಂ ಬಂಧದಿಂ
ಬಿಡಿಕುಂ ತನ್ನಯ ತೇಜದಿಂದೆಮಿಗುವುದ್ಯದ್ಭಾನುವಂ ಭಾನುವಂ ॥೮-೫

ಎನಲಪ್ರತಿಹತಸುತಲಾ
ಭನಿವೇದಕವಾರ್ತೆ ತೀವೆ ಪುಳಕಮನಾಂತಳ್ ।
ವನಿತೆ ವಸಂತಾನಿಳನಿಂ
ವನಲತೆ ಕಳಿಕಾಕಳಾಪಮಂ ತಾಳ್ದುವವೊಲ್ ॥ ೮-೬

ವ॥ ಅನ್ನೆಗಮಿತ್ತಲ್,

ದೇವಕಿ ವಿಷ್ಣುವಂ ಬಸಿಱೊಳಾಂತಿರೆ ವೈಷ್ಣವಮಾಯೆಯುಂ† ಯಶೋ
ದಾವಧು ನಂದಗೋಪನ ಮನಃಪ್ರಿಯೆ ಗರ್ಭದೊಳಾಂತಳಿಂದ್ರದಿ ।
ಗ್ದೇವಿ ಸವಾರ್ಕಮಂಡಲಮನಾಂತಿರೆ ತತ್ಪ್ರಭೆಯುಂ ನಭೋಂಗಣ
ಶ್ರೀವಧುವೊಂದೆ ಕಾಲದೊಳ್ ತಾಳ್ದಿ ವಿರಾಜಿಸುವೊಂದು ಮಾಳ್ಕೆಯಿಂ॥

ವ॥ ಆಗಳಾಗೋಕುಲದೊಳಿರ್ದ ವಸುದೇವನಧಾರ್ಂಗಿ ರೋಹಿಣೀ ದೇವಿ ಪರಿಪೂರ್ಣಗರ್ಭನಿರ್ಭರಭಾರವತಿಯಾಗಿರೆ ಶುಭಮುಹೂರ್ತದೊಳ್ ,

*ಕ, ಖ, ಗ —ರಾವೃಕನಸೇ. † ಕ ಖ. ಗ.—ವಿಷ್ಣುವ ಮಾಯೆಯಿಂ

ಜಲಧರಪಥಪರ್ಯಟನ
ಕ್ಕಲಸಿ ಸುಧಾಸೂತಿ ಧಾತ್ರಿಯೊಳ್ ಶಿಶುರೂಪ ।
ಚ್ಛಲದಿಂ ನೆಲೆವಡೆದವೊಲು
ಜ್ಜ್ವಲತನು ರೋಹಿಣಿಗನಂತನಂದುದಯಿಸಿದಂ ॥ ೮೮

ವ॥ ಅಂತು ಪುಟ್ಟುವಿನಮಿತ್ತಲ್ ,

ಗರ್ಭಸ್ಥನಪ್ಪ ಶೌರಿಯು
ನಿರ್ಭರಸರಸಪ್ರಕಾಶಮೀಜನನಿಯೊಳಾ ।
ವಿರ್ಭವಿಸಿದುದೆನೆ ತನು ಸಂ
ದರ್ಭಿತಗೌರಿಮದಿ * ನೆಸೆದುದಾದೇವಕಿಯಾ ॥ ೮೯

ಎಳವಯಕೆಯಿಂ ಬೆಳರ್ತಂ
ಗಳೆಱೆ ಕರ್ಪಡರ್ದ ಬಾಸೆಯಂ ತಳೆದೆಸೆದ ।
ತ್ತಳಿನೀಮಾಲೆಯ ತಿಱುವಂ
ತಳೆದಂಗಜಪುಷ್ಪಚಾಪಮೆನೆ ದೇವಕಿಯಾ ॥ ೯೦

ತ್ರಿದಶಾರಿಧೂಮಕೇತುವ
ನುದರದೊಳೀದೇವಿ ತಳೆದುದರ್ಕಿದೆ ದೃಷ್ಟಾಂ ।
ತದ † ಧೂಮಲೇಖೆಯೆನೆ ಕ
ರ್ಪೊದವಿದ ರೋಮಾಳಿ ರಂಜಿಕುಂ ದೇವಕಿಯಾ ॥ ೯೧

ತರಣಿಪ್ರಭನರ್ಭಕನೀ
ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಬಹಿ ।
ಷ್ಕರಿಸಿದನೆನಲೆಸೆಗುಂ ಕುಚ
ಭರಚೂಚುಕಯುಗಳಕಾಳಿಮಂ ದೇವಕಿಯಾ ॥ ೯೨

ಮೇದಿನಿಯ ಭಾರಮಮರರ
ಖೇದಂ ಖಳರೆಸಕಮೆಂಬರಿಷ್ಟತ್ರಯಮಿಂ ।

* ಕ. ಖ. ಗ.—ಗೌರವದಿ. † ಗ.—ತಳೆದಳೆನೆ ತದ್ವ್ಯಧುಗರ್ಭದ.

ಪೋದಪುವೆಂದಱಿಪುವವೊಲ್
ಪೋದುವು ಮಧ್ಯದ ವಳಿತ್ರಯಂ ದೇವಕಿಯಾ ॥ ೯೩

ಘನತೀವ್ರತೇಜನಂ ಮಾ
ನಿನಿ ಗರ್ಭದೊಳಾಂತು ಗೌರವರ್ಣಿನಿ ಮಧ್ಯಂ ॥
ದಿನರವಿಯಂ ಮಧ್ಯದೊಳಾಂ
ತು ನಿಂದ ಶರದಭ್ರಲೇಖೆವೊಲ್ ಸೊಗಯಿಸಿದಳ್ ॥ ೯೪

ಸುದತಿಯು ಗರ್ಭಚಿಹ್ನಮನದೇವೊಗಳ್ದಪ್ಪುದೊ ಬಾಸೆ ಕರ್ಪನಾಂ
ತುದು ನಡು ಕೂಡೆ ಪೊಂಗಿದುದು ಬೀಗಿದುದುರ್ಬಿ ಕುಚಂ ಮೊಗಂ ಬೆಳ ।
ರ್ತುದು ವಳಿ ಪಿಂಗಿಪೋಯ್ತು ನಯುವೇಱಿದುದಂಗಶಲಾಕೆ ಗುಜ್ಜುಗೊಂ
ಡುದು ನಡೆ ಮೆಲ್ಪುಗೊಂಡುದು ಸರಂ ಕುಡಿಗೊಂಡುವು ಕಾಂತಳೋ
ತ್ಕರಂ ॥ ೯೫

ವ॥ ಅಂತಿರ್ದ ದೇವಕಿಯ ಸಮೀಪದೊಳಂದೇಕಾಂತಸಮಯದೊಳ್ ಸಮಸ್ತಸುರಗಣಂ ನೆರೆದು ಬಂದಂತರ್ಹಿತರೂಪದಿಂದಂತರಿಕ್ಷದೊಳ್,

ಪಿರಿದು ಸಮಸ್ತವಿಷ್ಟಪವದಂ ಪಡೆದಂ ಪಿರಿಯಂ ವಿರಿಂಚನಾ
ಸರಸಿಜಯೋನಿಯಂ ಜಠರಹೇಮಪಯೋರುಹದಲ್ಲಿ ಪುಟ್ಟಿಪಂ ।
ಬುರುಹವಿಲೋಚನಂ ಪಿರಿಯನಾದನುಜಾರಿಯನಾತ್ಮಗರ್ಭದೊಳ್
ಧರಿಯಿಸಿ ನಿಂದನೀಂ † ಪಿರಿಯಳಿಂ ಪಿರಿಯರ್ ಪೆಱರಿಲ್ಲ ಲೋಕದೊಳ್ ॥ ೯೬

ವ॥ ಇಂತು ವಿಶ್ವರೂಪಗರ್ಭಿಣಿಯಪ್ಪ ದೇವಿ, ನೀಂ ಬ್ರಹ್ಮಗರ್ಭಪ್ರಕೃತಿಯಂತೆಯುಂ, ಪ್ರಾಗಲ್ಭ್ಯಗರ್ಭದೃಷ್ಟಿಯಂತೆಯುಂ, ವಿವೇಕಗರ್ಭವಿದ್ಯೆಯಂತೆಯುಂ, ವೇದಗರ್ಭವಾಣಿಯಂತೆಯುಂ, ಯಜ್ಞಗರ್ಭಶ್ರುತಿಯಂತೆಯುಂ, ಆಚಾರಗರ್ಭಸ್ಮೃತಿಯಂತೆಯುಂ, ಹೋಮಗರ್ಭಸ್ವಾಹೆಯಂತೆಯುಂ, ವಹ್ನಿಗರ್ಭಾರಣಿಯಂತೆಯುಂ, ಮಣಿಗರ್ಭ

* ಕ.—ವಿಷ್ಟಪವರಂಪಿರಿಯಂಜಗದೊಳ್. † ಕ. ಖ. ಗ.—ನಿಂದಳೀ.

ಜ್ಯಾಯಂತೆಯುಂ, ಜ್ಞಾನಗರ್ಭಸನ್ಮತಿಯಂತೆಯುಂ, ಅವಬೋಧಗ
ರ್ಭವೇಧೆ * ಯಂತೆಯುಂ, ಕಾಮಗರ್ಭೇಚ್ಛೆ † ಯಂತೆಯುಂ, ನಯಗ
ರ್ಭನೀತಿಯಂತೆಯುಂ, ಪ್ರಭಾವಗರ್ಭಶಕ್ತಿಯಂತೆಯುಂ, ಪರಿಣಾಮಗ
ರ್ಭತುಷ್ಟಿಯಂತೆಯುಂ, ಧೈರ್ಯಗರ್ಭ ಧೃತಿಯಂತೆಯುಂ, ಪ್ರಣ
ಯಗರ್ಭಭಕ್ತಿಯಂತೆಯುಂ, ಅಭ್ಯುದಯಗರ್ಭಧರೆಯಂತೆಯುಂ, ಐಶ್ವ
ರ್ಯಗರ್ಭಾಜ್ಞೆಯಂತೆಯುಂ, ಪ್ರಕಾಶಗರ್ಭಪ್ರಭೆಯಂತೆಯುಂ, ಪ್ರಸಾ
ದಗರ್ಭದಯೆಯಂತೆಯುಂ, ಶೃಂಗಾರಗರ್ಭವಿಭೂತಿಯಂತೆಯುಂ, ಆನಂ
ದಗರ್ಭಲೀಲೆಯಂತೆಯುಂ, ಮಹತ್ತ್ವಮಂ ಪಡೆದೆಯೆಂದು ಸ್ತುತಿಗೈದು
ಪೋಗೆ ಕತಿಪಯಮಾಸಂಗಳಿಂ ಬಳಿಯಂ,

ಲಾಳಿತವಾಗಿ ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂ
ಸಾಳಿಯ ಬೆನ್ನೊಳೈದೆ ನಡೆಯಲ್ ಬಸವಲ್ಲದೆ ನಿಂದು ಕೈಗಳಿಂ ।
ಲೀಳೆಯನಾಂತು¶ ರಾಗರಸಮೊರ್ಬುಳಿಯಾದವೊಲೆಟ್ಟಿ ಮುಟ್ಟೆ ಭಾ
ರಾಳಸದಿಂದವಾದ ಗಮನಾಲಸವೃತ್ತಿಯನೇನನಂದಪೆಂ ॥ ೯೭

ಗುರುಕಬರೀಭರಸ್ತನಭರೋರುಭರಸ್ಥಿತಿಯಿಂ ಸ್ವಭಾವಮಂ
ಥರಗತಿಯಪ್ಪ ತನ್ವಿಗೆ ಚತುರ್ದಶಲೋಕಮನೆಯ್ದೆ ಗರ್ಭದೊಳ್ ।
ಧರಿಯಿಸಿದಚ್ಯುತಂ ಬಳೆಯೆ ತನ್ನುದರಾಂತರದೊಳ್ ತದೀಯನಿ
ರ್ಭರಭರದಿಂದವಾದಗಮನಾಲಸವೃತ್ತಿಯನೇನನೆಂದಪೆಂ ॥ ೯೮

ಮೊಲಗೆ ವಿಚಿತ್ರಪತ್ರಲತೆ ದುರ್ವಹಮೆಂಬ ವಿಲೋಚನಕ್ಕೆ ಕ
ಜ್ಜಲವತಿಭಾರಮೆಂಬ ತನುಲೇಖೆಗೆ ಚಂದನದಣ್ಪುಬಿಣ್ಣಿತೆಂ ।
ಬಲಸಪದಕ್ಕಲಕ್ತಕರಸಂ ಪೊರೆಯೆಂಬಿನಿತೊಂದುಚಿತ್ತಮಾ
ಲಲನೆಗೆ ದೇವಕೀವನಿತೆಗಾದುದು ನಿರ್ಭರಪೂರ್ಣಗರ್ಭದೊಳ್ ॥ ೯೯

*ಕ. ಖ. ಗ.—ಅವರೋಧಗರ್ಭವೇಧೆ † ಕ. ಖ. ಗ.—ಕಾಮಗರ್ಭಶ್ರೀ.
ಕ. ಖ. ಗ.—ಜಯಗರ್ಭ ¶ ಕ. ಖ —ಕೈಗಳಿಂ ಲೀಲೆಯಿನಾಂತು.

ವ॥ ಅಂತು ನಿರ್ಭರಗರ್ಭ * ಪ್ರಾದುರ್ಭಾವಮಾಗಿ ನವಮಾಸಂ ತೀವೆ ಸಮನಂತರಂ ಶ್ರಾವಣಕೃಷ್ಣಪಕ್ಷಾಷ್ಟಮೀರೋಹಿಣೀನಕ್ಷತ್ರದೊಳ್ ಮಹೋತ್ಕೃಷ್ಟಮಪ್ಪ ಮುಹೂರ್ತದಿಂ ಸನಾಥಮಾದ ನಿಶಾಮಧ್ಯಸಮಯದೊಳ್, †

ಅತಸೀಪುಷ್ಪಾವಭಾಸಂ ತನುವೆಸೆವಿನೆಗಂ ಕಿಂಕಿರಾತಪ್ರಸೂನ
ಪ್ರತಿಮಂ ಪೀತಾಂಬರಂ ರಂಜಿಸುವಿನಮುದಿತಾರ್ಕಪ್ರಭಂ ಕೌಸ್ತುಭಪ್ರ
ದ್ಯುತಿಬೀಱುತ್ತಿರ್ಪಿನಂ ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂ
ಕಿತಹಸ್ತಂ ವಾಸುದೇವಂ ದನುಜವಿಪಿನದಾವಂ ಸಮಸ್ತಪ್ರಭಾವಂ ॥೧೦೦

ಇದು ಸಮಸ್ತಕಮಲಭವಾಂಡಮಂಡಲಾಘಟಿತಘಟನಾಘಟಿತಘಟನಾ
ಸ್ವತಂತ್ರನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ
ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತಸುಕವೀಂದ್ರರುದ್ರ
ಪ್ರಣೀತ ಶ್ರೀಜಗನ್ನಾಥವಿಜಯಮಹಾಪ್ರಬಂಧ
ದೊಳ್ ಬಲಭದ್ರಾವತಾರಕೃಷ್ಣೋತ್ಪತ್ತಿ
ವರ್ಣನಂ ದ್ವಿತೀಯಾಶ್ವಾಸಂ

---

*ಕ. ಖ. ಗ --ಗರ್ಭನಿರ್ಭರಂ. ಮೂ- ಅ.-ಗರ್ಭನಿರ್ಭರ. †ಕ ಖ ಗ.ಮುಹೂರ್ತ ಸನಾಥವಾದನಿಶಾವಸಾನಸಮಯದೊಳ್.

# ತೃತೀಯಾಶ್ವಾಸಂ

ಶ್ರೀರಮಣಂ ಪ್ರಸ್ಫುರತ್ಕೌ
ಮೋದಕ್ಯಾಭರಣಚಕ್ರಮುಖ್ಯಾಯುಧನಾ ।
ನಾರಶ್ಮಿಯನುವಿಜೃಂಭಿಸೆ
ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ ॥ ೧

ವ॥ ಆಗಳಭೂತಪೂರ್ವಮಪ್ಪ ಪ್ರಸೂತಿಕಾಕೌತುಕಮನಾತ್ಮೀಯಾಪ್ತಗುಪ್ತವಾಕ್ಯದಿಂ ಕೇಳ್ದಕ್ರೂರಾದಿಯಾದವರ್ ಬಂದು ನೋಡಿ,

ಇದು ತೇಜೋದುರ್ನಿರೀಕ್ಷ್ಯಂ ತೊಳಗಿ ಬೆಳಗಿ ಕಣ್ಗೊಪ್ಪುತಿರ್ದಪ್ಪುದಿಂತೀ
ಮದವತ್ಕಂಸಂಗಕಾಂಡಕ್ಷಯಸಮುದಿತಚಂಡಾಂಶು ಚಂಡಾಂಶುವೆಂಬಂ।
ದದಿನೊಪ್ಪುತ್ತಿರ್ಪುದಂದಬ್ಧಿಯೊಳುದಯಿಸಿದಾ ಕೌಸ್ತುಭಂ ಕೌಸ್ತುಭಂದಾ
ಳ್ದದನೀತಂ ಕೇವಲಂ ಮಾನವನೆಪ್ಪನೇ ಪೆಱಂಗೆಲ್ಲಿತೀದಿವ್ಯರೂಪಂ ॥ ೨

ವ॥ ಎಂದು ಪರಮಾನಂದದೊಳವರ್ ತಮ್ಮೊಳೋರೊರ್ಬರೊಂದೊಂದು ಮಾತಂ ತಮ್ಮ ಮನಕ್ಕೆ ತೋಱಿದಂತೆ ನುಡಿಯುತ್ತಿರಲಾ ಪ್ರಸ್ತಾವದೊಳ್,

ಘನಪಥವಾಹಿನೀಲಹರಿಕಾರವಮೆಂಬಿನಮುಣ್ಮಿದತ್ತು ಭೋ
ರೆನೆ ದಿವಿಜೇಂದ್ರತೂರ್ಯರವಮಂಬರಲಕ್ಷ್ಮಿಯ ಮಂದಹಾಸಮೆಂ ।
ಬಿನಮೆಸೆದತ್ತರಲ್ವಲರ ಬೆಳ್ಸರಿ * ತತ್ಸುರನಂದನಾಳಿನೀ
ನಿನದಮಿದೆಂಬಿನಂ ಪಸರಿಸಿತ್ತಮರೀಮೃದುಗೇಯನಿಸ್ವನಂ ॥ ೩

ವ॥ ಅಂತುಮಲ್ಲದೆ,

ದನುಜಕ್ಷತ್ರಾಧಮಾನೀಕಮನಗಣಿತಮಂ ಕೂಡೆ ನಿರ್ಮೂಲನಂಗೆ
ಯ್ದನಿತುಂ ಭೂಭಾರಮಂ ಪಿಂಗಿಸಲುದಯಿಸಿದಂ ಚಕ್ರಿ ನಮ್ಮಾಭರಾಕ್ರಾಂ

---

* ಕ ಖ— ಮಂಟಪಕ್ಕೆ ಬಂ॥ ದನಿಮಿಷರೆಲ್ಲರುಂ ನಲಿದರಂತತಿ

ತಿಸಿರೋಧಂ ಮೊಳ್ಗುದಿಸ್ಸೆಂದಹಿಪತಿ ಪೆಡೆಯಂ ಬಿರ್ಚಿದಂ ದಿಗ್ಗಜಂ ಘೀ
ರೆನೆ ದಾನಾಸಾರಮಂ ಸೂಸಿದುವು ಕಮಠನುಂ ತೂಗಿದಂ ಹರ್ಷದಿಂದಂ ॥೪

ವ॥ ಅಂತು ಸಕಲಲೋಕಂಗಳೊಳುತ್ಸವಪರಂಪರ ನೆಗೞುತ್ತುಮಿರಲಿತ್ತಲವತಾರಂಗೆಯ್ದು ಮುಂದೆ ನಿಂದಿರ್ದ ಜನಾರ್ದನಂಗೆ ಬದ್ಧಾಂಜಲಿಯಾಗಿ,

ಮತಿಯೊಳ್ ನಿರ್ಭರಭಕ್ತಿ ಕಣ್ಮಲರೊಳಾನಂದಾಶ್ರು ಮಯ್ಯೊಳ್ ಸಮು
ದ್ಗತರೋಮಂ ಮುಖದೊಳ್ ವಿಲಾಸಮೆಸೆಯುತ್ತಿರ್ಪನ್ನಮಿಂತೆಂದರಾ ।
ನತಮೂರ್ಧರ್ ಪಿತೃಮಾತೃಗಳ್ ದಯೆಯಿನಸ್ಮದ್ಗರ್ಭದೊಳ್ ಗೋಪಿಸೀ
ಪತಿ ನೀಂ ಪುಟ್ಟಿದೆ ಧನ್ಯರೆಮ್ಮವೊಲದಾರ್ ಮುನ್ನಾದವರ್ ಯಾದವರ್ ॥೫

ವ॥ ಎಂದು ನುಡಿದನಂತರಂ ಕಂಸಕೃತಾಪಚಾರಮಂ ತತ್ಪ್ರಪಂಚಮನಱಿಪೆ, ಕಮಲನಾಭಂ ಕರುಣಾರಸಾರ್ದ್ರಹೃದಯನಾಗಿ ಮುನ್ನಂ ನಿಮಗೆ ಪುಟ್ಟಿದುವಾಱುಂ ಮಕ್ಕಳಂಬಿವು ಪಾತಾಳದೊಳಿರ್ದ ಹಿರಣ್ಯಕಶಿಪುವಿನ ಮಕ್ಕಳ್, ಮದೀಯಸಂದೇಶದಿಂ ಪುಟ್ಟಿಪೋದುವು ಮತ್ತೊಂದುಶಿಶುವಂಬುದಂ ಬಸಿಱೊಳಿರ್ದುದೆಂಬಂತೆ ಗರ್ಭದಿಂ ತೆಗೆದುಯ್ದು ರೋಹಿಣಿಯ ಗರ್ಭದೊಳ್ ನಿಲಿಸಿದೆಂ ಅತ್ತ ಗೋಕುಲದೊಳಾಮಹಾತ್ಮನುದಯಿಸಿರ್ಪಂ. ಅಂತುಮಲ್ಲದೆಯುಂ,

ಮುನಿದಸ್ಮತ್ಸಹಜಾತರಂ ಶಿಶುಗಳಂ ಕೊಂದುಗ್ರಸೇನಂಗೆ ಬಂ
ಧನಮಂ ತಂದು ತದೀಯರಾಜ್ಯಪದದೊಳ್ ನಿಂದಾತನಂ ಘಾತ ಕೊ ।
ಲ್ವೆನಮೋಘಂ ದನುಜಾವತಂಸನನತರ್ಕ್ಯೈಶ್ವರ್ಯಕಾಸಾರಹಂ
ಸನನತ್ಯಂತನೃಶಂಸನಂ ಸುರಬಲಪ್ರಧ್ವಂಸನಂ ಕಂಸನಂ ॥ ೬

ವ॥ ಎಂದು ವಿಶ್ವರೂಪಂ ಕರ್ತವ್ಯಮನಱಿಪಿ ತನ್ನ ದಿವ್ಯರೂಪಮನಡಂಗಿಸಿ ವಿಷ್ಣುಮಾಯೆಯಂ ಪಸರಿಸಿ ಸಾಮಾನ್ಯಶಿಶುರೂಪಮಂ ಕೈಕೊಂಡು ನಿಲ್ವುದುಂ, ಆವಸುದೇವನುಂ ದೇವಕಿಯುಮಿದಾರೊಡನೆ ನುಡಿದೆವೆಮಗುತ್ತರಮಂ ಕೊಟ್ಟರಾರ್, ಇದು ಶಿಶು ತಾಂ ಬೇಱೆ, ನಾರಾ

ಯೞನೆ ಬಂದು ನುಡಿದು ಪೋದನೆಂಬ ವಿಭ್ರಾಂತಿಯುಮಪ್ಪುಕೆಯ್ದುದೆಮ್ಮಂ ತಾದೊಡಮೀಶಿಶುವಂ ನಮ್ಮಸಂತಾನಕ್ಕುೞಿಪಿ ಕೃತಕೃತ್ಯರಪ್ಪುದರ್ಕೆ ಪಾಯಮಾವುದು. ಈ ಶಿಶುವಿನಪ್ಪೆಯುಂ ರಕ್ಕಸಂ ಕೇಳ್ದುದುೞಿಯ ಲೀಯಂ, ಇದಂ ಕೇಳ್ದೊಡೆ ಕಂಸಂ ಕೊಂಡುಯ್ಗುವೆಂದು ನಾಡೆಯುಂ ಮಱುಗಿ ಸಿಡಿಮಿಡಿಗೊಳುತ್ತಿರ್ಪನ್ನೆಗಂ,

ಇಂದೆನಿತಾನುಮಂಬುಧರಕಾಲದ ಕಾಳದಿರುಳ್ಗಳೆಲ್ಲಮೇಂ
ನಿಂದುವೊ ಗಟ್ಟಿಗೊಂಡೆನೆ ಭಯಂಕರಮಾದುದು ವಿಷ್ಣುಮಾಯೆಯಿಂ
ದಂದಿನ ಕಾರಿರುಳ್ ನೆಗೆದ ಕಾರ್ಮುಗಿಲಿಂ ದಳಮೇಱಿದೊಂದುಮ
ಬ್ರಿಂದಮಜಾಂಡಮಂಜನಕರಂಡಕದಂತೆ ಕಱಂಗಿ ನಿಲ್ವಿನಂ ॥ ೭

ನೆಗೆದ ಮುಗಿಲೆಂಬ ನೀಲಾ
ದ್ರಿಗಳಿಂ ನಿರ್ಝರಮೆ ಸೂಸಿ ಸುರಿದಪುವೆಂಬ ।
ನ್ನೆಗಮೇಂ ಕಱೆದುದೊ ಪೆರ್ಮೞೆ
ಜಗಮೆಲ್ಲಂ ಸಲಿಲಪೂರದಿಂ ತೇಂಕುವಿನಂ ॥ ೮

ವ॥ ಅಂತಗುರ್ವಾಗಿ ಪರ್ಬಿದಮಂದಗತ್ತಲೆಯೊಳಂ ಧಾರಾವರ್ತವೆ ನಿಸಿ ಕಾರ್ಮುಗಿಲಿಂ ಕಱೆವ ಪೆರ್ಮೞೆಯೊಳಮಂಜದೆ ಮಗನನೆತ್ತಿಕೊಂ ಡು ವಸುದೇವನೆಂತಾನುಮಾರಾಕ್ಷಸರಕ್ಷಿತಪ್ರಸೂತಿಕಾನಿಳಯದಿಂ ತಳ ರ್ದು ನಡೆವಾಗಳಾಯೋಗನಾಥಂ ಪುರಜನಂಮೆಯ್ಯಱಿಯದಂತು ನಿದ್ರೆ ಯಂ ಕವಿಸೆ ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆ ಯೊಳುದ್ದೇಶಕ್ಕೆ ಬರ್ಪಲ್ಲಿ,

ಅರಿದಾಯ್ತೀ ಶಿಶುಗೆತ್ತ ಸಾರ್ವನಱಿಸಲ್ ಕಂಸಾಸುರಂ ಪೇೞ್ದ ಚಾ
ರರ ಕೈದೀವಿಗೆ ಮಾಲೆಗೊಂಡು ಬೆಳಗುತ್ತೀಬಂದುದೆಂಬೊಂದು ಭೀ।
ತಿರಸಂ ಶ್ರೀವಸುದೇವನೊಳ್ ನೆಗೞ್ವಿನಂ ನಾನಾಫಣಾರತ್ನಮೊ
ಪ್ಪಿರೆ ಬಂದಂ ಮೞೆಯಂ ನಿವಾರಿಸಲನಂತಂಗಂದನಂತೋರಗಂ ॥ ೯

ವ॥ ಅಂತು ಬಂದುರಗಪರಿವೃಢಂ ಪ್ರಸಾರಿತಫಣಾಸಹಸ್ರನಾಗಿ ಕೊಡೆವಿಡಿದಂತೆ ಬರೆ ಪಡೆವಣಿಯು ಬೇಗಿನಿಂ ಬಟ್ಟೆಗೊಂಡತಿತ್ವರಿತಗತಿಯಿಂ ಪೋಗೆವೋಗೆ ತನ್ಮಹಾವೃಷ್ಟಿಯಿಂ ತೆಕ್ಕನೆ ತೀವಿ ಬಂದ ಕಾಳಿಂದಿಯಂ ಕಂಡು,

ಪಿರಿದುಂ ಕಂಸನ ಭೀತಿಯಿಂದೆ ವಸುದೇವಂ ಮುಂದುಗೆಟ್ಟಲ್ಲಿ ಕ
ಮ್ಮರಿವಾಯ್ದಂತಿರ ಪೊಕ್ಕಡಂಗೆ ತನಗಾತೀವಿರ್ದ ಕಾಳಿಂದಿ ಚಕೆ ।
ಚಕ ರವಾಗಳ್ ನೆಲಯಾಗೆ ದಾಂಟಿ ನಡೆದಂ ದುರ್ವಾರಸಂಸಾರಸಾ
ಗರಮಂ ದಾಂಟಿಸುವಾನುಹಾವುಹಿಮನಂ ಪೆತ್ತಂಗಿದೇಂ ಚಿತ್ರಮೋ ॥ ೧೦

ತೀರದೊಳಿರ್ದ ಗೋಕುಲಮನಾನಕದುಂದುಭಿ ಪೊಕ್ಕು ಸೂತಿಕಾ
ಗಾರದೊಳಾಗಳಾಗಲೆ ಯಶೋದೆಗೆ ಸಂಭವಿಸಿರ್ದ ಕನ್ನೆಯೊಳ್ ।
ಶೌರಿಯುನಂದು ಪಲ್ಲಟಿಸಿ ಚಕ್ರವಾಕೆಯನೆತ್ತಿಕೊಂಡು ದು
ರ್ವಾರತಮೋನಿಗೂಢಗತಿಯಿಂ ಪರಿದೈದಿದನಾತ್ಮಗೇಹಮಂ ॥ ೧೧

ವ॥ ಅಂತೆಯ್ದಿ ಪೊಕ್ಕು ಸುತ್ರಾಮಾರಿಗೆ ಮಾರಿಯುಂ ತರ್ಪಂತೆ ತಂದಾ ಕುಮಾರಿಯುಂ ದೇವಕಿಯ ಮುಂದೆ ಪಟ್ಟಿರಿಸಿ ಪೋದ ಬಂದ ವೃತ್ತಾಂತಮಂ ಪೇಳ್ದು ತತ್ಸ್ವರ್ಪ್ರಸವೋರ್ಜಿತಮಿಥ್ಯಾಸಂಭ್ರಮಮನಪ್ಪುಕೆಯ್ದಿರ್ದುಂ,

ಘನಘೋರನಿಷ್ಠುರಾಂಗ
ಧ್ವನಿಯಿಂದಾಶಿಶುವಿನಟ್ಟ ತೆಕ್ಕನೆ ತೀವಿ
ತ್ತನಿತುಂ ದಿಕ್ತಟಮಂ ಭೋ
ರೆನೆ ಶಂಕಾಕುಳಿತಮಪ್ಪಿನಂ ಭುವನಜನಂ ॥ ೧೨

ಸಕಳಬ್ರಹ್ಮಾಂಡಭಾಂಡೋದರಮೊಡೆವುದಿದೆಂತಪ್ಪ ಕೋಳಾಹಳಂ ಕೌತುಕದಿಂದ್ರಂ ಪಾಯ್ದನಕ್ಕುಂ ಕವಿಯಲೆಲೆಲೆ ಸನ್ನಾಹಮಂ ತಾಳ್ದಿ ಸೈನ್ಯಪ್ರಕರಂ ಬರ್ಕೆಂಬುದುಂ ತತ್ಸಮಯದೊಳ್ ಗೃಹಾಧ್ಯಕ್ಷನಿಂತೀರವಂ ದೇವಕಿ ಪೆತ್ತಾ ಕೂಸಿನೊಂದಪೆಕ್ಕೆಯ ದನಿಯೆನೆ ಕೇಳ್ದಲ್ಲಿಗೆಯ್ತಂದು ಕಂಸಂ॥

ಕ— ದಾಂಟಿದನದಂ.

ವ|| ಅಂತು ಸೂತಿಕಾಸದನಮಂ ಪೊಕ್ಕು ದೇವಕಿಯ ಮುಂದೆ ಪೆಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು ನಡೆತಂದು,

ಅಸುರಂ ಕನ್ನೆಯನುಯ್ದು ವಧ್ಯಶಿಲೆಯೊಳ್ ಪೊಯ್ವಲ್ಲಿ ಕೈಯಿಂ ಸಿಡಿ
ಲ್ದು ಸಿಡಿಲ್ ಪೋಪವೊಲಂಬರಕ್ಕೆ ನೆಗೆದೆಂದಳ್ ನಿನ್ನನಾಂ ಕಂಸ ರಾ |
ಕ್ಷಸಕೇಳ್ಕೊಲ್ವೊಡೆ ಕಾವರಾರಲವೊ ಮಾಣ್ ನಿನ್ನಂ ಕೊಲಲ್ವೇಡಿ ಪು
ಟ್ಟಿ ಸರೋಜೇಕ್ಷಣನತ್ತಲೊಂದೆಡೆಯೊಳಾಯಿರ್ದಪ್ಪನೆಮ್ಮಗ್ರಜಂ || ೧೪

ವ|| ಎನೆ ಕೇಳ್ದು ತದೀಯಪರುಷಭಾಷಿತಂ ತನಗೆ ಕರ್ಣಶೂಲವಾಗೆ,

ಈಕೃತಕಿಯೇಕೆ ಪುಟ್ಟಿದ
ಳೀಕಾರಣದಿಂದೆ ಪಾಱಿಪೋದಳ್ ಗಗನ |
ಕ್ಕೀಕೆಯುದಾವಳೊ ಮೃತ್ಯುವೊ
ಮಾಕಾಳಿಯೊ ಚಂಡಿಯೋ ಮಹಾಭೈರವಿಯೋ || ೧೫

ವ|| ಎಂದನಿಮಿಷದ್ರೋಹನನಿಮಿಷಮಾರ್ಗದೊಳಿರ್ದ ದುರ್ಗಿಯನನಿಮಿಷನೇತ್ರನುಮು * ತ್ತಾನಿತಾನನನುಮತ್ಯಂತವಿಸ್ಮಯಸ್ವಾಂತನುಮಾಗಿ ನೀಡುಂ ನೋಡುತ್ತುಮಿರೆ,

ವದನಂ ಪೂರ್ಣಶಶಾಂಕನಂತೆಸೆಯೆ ಮೇಘಶ್ಯಾಮಳಾಂಗಂ ತ್ರಿಭಂ
ಗದಿನಿಂಬಾಗಿರೆ ನೀಲಚೇಲದುಡೆಯುಂ ಮೇಲ್ಕೊಂಡ ಪೊಂಬಟ್ಟೆಯುಂ |
ಕದಪಂ ಮೋದುವ ಕುಂಡಲದ್ವಿತಯಮುಂ ಚೆಲ್ವಾಗೆ ತಾನಾಗಳಾ
ಡಿದಳೆಂಟುಂ ನಳಿತೋಳ್ಗಳಂ ಪಸರಿಸುತ್ತುಂ ಕನ್ನೆ ರೋದೋಂತದೊಳ್||

ವ|| ಅಂತು ಗಗನರಂಗದೊಳ್ ನೃತ್ಯಲೀಲೆಯಂ ಮೆಱೆದು ವಾಸವನಿವಾಸಕ್ಕಭಿಮುಖಿಯಾಗಿ ಪೋದಳ್ ಅನ್ನೆಗಮತ್ತಲ್,

ಇದಿರ್ವಂದೊಪ್ಪುವ ದೇವದುಂದುಭಿಯೊಳಂ ದೇವಾಂಗನಾನೃತ್ಯಗೀ
ತದೊಳಂ ದೇವಮಹೀರುಹಪ್ರಜದೊಳಂ ದೇವಾಪಗಾತೋಯಕಂ |
ಭದೊಳಂ ದೇವವರಂ ಸ್ತವಂಗೆಯೆ ವರಂಗೊಟ್ಟಾಮಹೇಂದ್ರಂಗೆ ಸ
ಮ್ಮದದಿಂ ದುರ್ಗಿ ಬೞಕ್ಕೆ ತಾಂ ನೆಲಸಿ ನಿಂದಳ್ ಯೋಗಪೀಠಾಗ್ರದೊಳ್ ||

* ಖ. ನೇತ್ರಯನು.

ದನುಜಂ ದುರ್ಗಿಯು ತೇಜದೊಂದು ತೆಱನಂ ಕೈವಿಕ್ಕು ಪೋದಂದಮಂ
ತನಗೆಂದುಗ್ರದುರುಕ್ತಿಯಂ ನೆನೆದಿದೇನಾಶ್ಚರ್ಯವೆಂದಂದು ನೆ ।
ಟ್ಟನೆ ಚಿಂತಾಗಿರಿ ಮೇಲೆ ಬೀಡೆ ಪಿರಿದಂ ಬೆಂಬಿೞ್ದು ಬಂದೆಯ್ದಿ ಪೊ
ಕ್ಕು ನಿಜಾವಾಸಮನಾಪ್ತ*ಮಂತ್ರಿನಿವಹಕ್ಕಿಂತೆಂದನಾಸ್ಥಾನದೊಳ್ ॥ ೧೮

ಅಶರೀರಧ್ವನಿಯಂತೆ ನಾರದನ ಪೇೞ್ದಾದೇಶವಿಂದಾಯ್ತು ವ
ಧ್ಯಶಿಲೋಚ್ಛೃಂಖಲೆಯಾಗಿ ದುರ್ಗೆ ನುಡಿದಳ್ ಪುಟ್ಟಿರ್ದ ನೀಗಳ್ ಚತು ।
ರ್ದಶಲೋಕಪ್ರಭು ವಿಷ್ಣು ನಿನ್ನ ಪಗೆಯೆಂದಾಗೆಲ್ಲರೀಭದ್ಮಬಾ
ಲಿಶನಂ ದೈವವಿಸೂತ್ರಮಂ ಪುರುಷಕಾರಂ ನಿ[illegible]ಲೇನಕ್ಕುಮೋ ॥ ೧೯

ಆನೆಗಟ್ಟಿಂದ್ರನೆಕ್ಕತುಳದೊಳ್ ಘೋರದೊಳ್ ಬಲದೊಳ್ ಕಡಂಗಿ ನಿಂ
ದಾನಲೊಡರ್ಚಲಾಂಕಗೊಳಲಾಱದೆ ಪೋಗಿ ಗಡಂ ಮುರಾಂತಕಂ ।
ಗಾನತನಾಗಿ ಪುರ್ಯ್ಯಲಿಡೆ ಕೇಳ್ದು ಮದೀಯವಧಾರ್ಥಮಾಸುಧಾಂ
ಭೋನಿಧಿತಳ್ಪನಿಂದು ಗಡ ಪುಟ್ಟಿದನಿಲ್ಲಿಗದಾವುದುದ್ಯಮಂ ॥ ೨೦

ವ॥ ಎಂದು ಸಚಿವರೊಳ್ ಸಮಾಳೋಚನಂಗೆಯ್ದಾಗಳಂತೆ ನಿಜವಿವೇಕವನಮಂ ಸ್ವಕೀಯಕೋಪವಹ್ನಿ ಸುಡಲೊಡರ್ಚೆ

ತೊಡೆವಂ ಶಕ್ರನ ನಾಮಮಂ ತುಡುಕಿ ನೀರೊಳ್ ಮುಟ್ಟುವೆಂ ವಹ್ನಿಯಂ
ಪೊಡೆವೆಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ ಕಟ್ಟುವೆಂ ।
ಜಡರಾಶೀಂದ್ರನನೆಯ್ದುವೆಂ । ಪವನನಂ ಸರ್ವಸ್ವಮಂ ಕೊಂಡು ಕ
ಗಿಡಿಪೆಂ ವಿತ್ತಪನಂ ಪರಾಭವಿಸುವೆಂ ದಕ್ಷಾಧ್ವರಧ್ವಂಸಿಯಂ ॥ ೨೧

ವ॥ ಎಂದಾಸ್ಫೋಟಿಸಿ ಲೋಕಪಾಲಕರಂ ನೀರ್ದಾಂಟಿಸಿ,

ಅಸುಹೃದ್ದ್ವೇಷಾಂಕುರಮುದ
ಯಿಸಿದತ್ತುಗುರೊಳ್ ಚಿವುಂಟುವಂ ಕೊಡಲಿಗೊಳಲ್ ।
ಬಸವಲ್ಲದು ಬಳೆದೊಡೆ ಬಳ್
ಯಿಸುವುದು ನೀತಿಯೆ ವಿರೋಧಿಯುಂ ವ್ಯಾಧಿಯುಮಂ ॥ ೨೨

* ಖ. ನಾತ್ಮ. † ಮೊ—ಅ—ನೆಟ್ಬುವೆಂ. ‡ ಕ. ಖ— ನಿರ್ದಾಟಿಸಿ.

ವ॥ ಎಂದು ನಿಶ್ಚಯಿಸಿ ನಿಜವಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ, ಸ್ವಕೀಯಪರಿಧಾವನವೇಗವಿಘಟಿತವೈರಿಬಾಲಶಕಟನೆಂಬ ಶಕಟನುಮಂ, ರಾಕ್ಷಸವೀರದಕ್ಷಿಣಕಟೀತಟಪ್ರಬದ್ಧಾಸಿಧೇನುಕನೆಂಬ ಧೇನುಕನುಮಂ, ನಿಸ್ಸೀಮನಿಕಾಮಬಾಹುಸಾಹಸಾಡಂಬರಪ್ರಳಂಬನೆಂಬ ಪ್ರಳಂಬನುಮಂ, ಮಾನವಭುಜಾವಷ್ಟಂಭಾರಿಷ್ಟನೆಂಬರಿಷ್ಟನುಮಂ, ಹೇಷಿತಘೋಷಣಶ್ರವಣವಾತ್ರವಿತ್ರಾಸನರಚಿತಜಂಭಾರಿದೇಹಪರಿರಂಭರಂಭಾತಿಲೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ, ಮತ್ತಮನೇಕರೂಪಪರಾವರ್ತನರಸಾದಾನವರೆಂಬದಾನವರುಮಂ, ಕರೆದೆನ್ನ ಶತ್ರುವದೊಂದುತಾಣದೊಳ್ ಪುಟ್ಟಿರ್ಪನಾತನಂ ಸಕಲಭೂತಳದೊಳುಳ್ಳ ಚತುರ್ವರ್ಣಜಾತಶಿಶುಜಾತದೊಳನ್ಯರೂಪಾವಷ್ಟಂಭಸಾಪ ವವಿಶೇಷದಿಂದಱಿದೊಡಂಬಡಿಸಿದಂದದೊಳೋರೊರ್ಬರೊಂದೊಂದು ನೆವದಿನೊರ್ವ ತಪ್ಪಿವಡೊರ್ಪ ಕೊಂದಿಕ್ಕುವುದೆಂದು ಬೆಸಸಿ ವಸುದೇವನ ದೇವಕಿಯು ಸೆಱೆಯಂ ಬಿಟ್ಟು—ಎನ್ನ ಪೆಸೆಯೆಸಿಸಿರ್ದ ವನಜನಾಭಂ ಮತ್ತೊಂದುತಾಣದೊಳ್ ಪುಟ್ಟಿದಂ; ಕಮ್ಮನೆ ನಿಮ್ಮನಚ್ಚಿಗಂ ಬಡಿಸಿದೆನೆಂದು ಚಾಟುವಚನಂಗಳಂ ಮೆಱೆದು ಮಿಥ್ಯಾವಿನಯವಿನೋದೋಪಗೂಹಿತಸ್ವಾಂತಚಿಂತಿತಚಿತ್ತನಾಗಿರ್ದಂ. ಆಗಳಾ ಭೋಜರಾಜಂಗೆ ಕರವಂತೆಱಲೆಂದು ಬಂದ ನಂದಗೋಪನಂ ಕಂಡು ಕಪಟನಾಟಕಸೂತ್ರಧಾರನಾರಾಯಣಪ್ರೇರಿತಮನಸ್ಕನಾಗಿ ವಸುದೇವನಿಂತೆಂದಂ—

ಪ್ರಿಯು ಕೇಳುತ್ಸವವಾರ್ತೆಯಂ ತನಯನಂ ಪೆತ್ತಳ್ ಗಡಂ ನಿನ್ನಪ
ತ್ನಿಯಶೋದಾವಧು ತತ್ತನೂಜನೊಡನಿಂಬಿಂ ಭಾವನಿರ್ದ್ವಂದ್ವನಾ।
ಗಿಯೆ ನೀಂ ರಕ್ಷಿಸು ರೌಹಿಣೇಯನೆನಿಪಸ್ಮತ್ಪುತ್ರನಂ ಪಿಕ್ರವೋ
ದಯರಾರಾದೊಡೆ ಕಾವರೆಂದು* ನುಡಿದಂ ಶ್ರೀನಂದಗೋಪಾಲನೊಳ್ ॥

ವ॥ ಎನೆ ಸಂತೋಷಂಬಟ್ಟು ನಂದಗೋಪಂ ನಂದನಮುಖಾರವಿಂದಾವಲೋಕನೋತ್ಸುಕಂ ಗೋಕುಲಕೆ ಪೋಗಿ ನೀಲೋತ್ಪಲದಳಶ್ಯಾಮ

* ಕ. ಗ. —ಕಾವುದೆಂದು.

ನಪ್ಪತಾಮರಸನೇತ್ರನಂ ನೋಡಿ ಪರಮಪ್ರೇಮರೋಮಾಂಚಿತಗಾತ್ರನುಮಾನಂದಬಾಷ್ಪಜಲಲುಳಿತನೇತ್ರನುಮಾಗಿ ಸುಖದಿನಿರಲ್, ಆ ಪ್ರಸೂತಿಕಾಸದನಕ್ಕೆ ದನುಜವೈರಿ ಪುಟ್ಟಿದಷ್ಟಮದಿನದೊಳ್ ಯಶೋದೆ ಪೊಱಮಟ್ಟ ಸಮಯಮಂ ಪಾರ್ದು,

ಪ್ರಣಯಾಲಂಬಿನಿಯಂತೆ ಪೂತನೆ ಯಶೋದಾಕಾರದಿಂ ಬಂದು ನಿ
ರ್ಘೃಣೆ ನಂಜೂಡಿದ ತನ್ನ ಪೆರ್ಮೊಲೆಯನೂಡಲ್ ಬಾಲಕಂ ನೆತ್ತುಱಂ ।
ನೆಣನಂ ಖಂಡಮನೆಯ್ದೆ ಪಿಂಡಿ ಪೀರ್ವುಂಡೋ ಹೋ ಹೋ ಹಾ ಹಾ ಹಾ ದಾ
ರುಣ ಮಾಣೆಂದೊಱಲುತ್ತೆ ಬೀೞೆ ತವೆ ಪೀರ್ದಂ ಪೂತನಾಜೀವನಂ ॥

ವ॥ ಆಗಳಟ್ಟಾಸುರಮಾಗಿ ಬಿಟ್ಟು ಕೆಡೆವಂತೆ ಭೂತಳದೊಳ್ ಕೆಡೆದ ಪೂತನೆಯ ಮೇಲೆ ಮೊಲೆಯಂ ಕಡೆವಾಯೊಳಿಟ್ಟು ಪಟ್ಟಿರ್ದ ಶಿಶುವಂ ಯಶೋದೆ ಬಂದು ಕಂಡು,

ಪೂತನೆಯ ಕೆಡೆದ ವಿಕೃತಿಗೆ
ಭೀತಿಯನೊಳಕೊಳ್ಳದೆತ್ತಿಕೊಂಡಳ್ ಮಗನಂ ।
ಕೌತುಕಮೇಂ ಪೆಂಡಿರೊಳಂ
ಭೀತಿರಸಂ ಮೋಹರಸಮನೊತ್ತರಿಸುಗುಮೇ ॥ ೭೫

ತತ್ಸಮಯೋಚಿತಶಾಂತಿಯ
ನುತ್ಸವದಿಂ ಮಾಡಿ ವಿವಿಧರಕ್ಷಾವಿಧಿಯಂ ।
ವತ್ಸಂಗೆ ನೆಗೞ್ದು ಸಕಲಸು
ಹೃತ್ಸಂತತಿ ಪರಸೆ ನಂದನಿರ್ದಂ ಸುಖದಿಂ ॥ ೭೬

ವ॥ ಅನ್ನೆಗಂ ವಸುದೇವನಾದೇಶದಿಂ ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ ತಿರೋಹಿತವೇಷನಾಗಿ ಬಂದು ಯಥೋಚಿತಮಂಗಳಾಚಾರಮಂ ಮೆಱೆದು ರೋಹಿಣೀಸುತಂಗಂ ರಾಮನಾಮಮಂ ಮೊದಲಾಗೆ ಪೆಸರಿಟ್ಟು ದೇವಕೀಸುತಂಗೆ ಕೃಷ್ಣಾಭಿಧಾನಮುಮಂ ಮಾಡಿ ತನಯರ್ಗೆ ರಾಮಕೃಷ್ಣರೆಂಬ ನಾಮ ಕರಣಂ ಮೊದಲಾಗೆ ಪಲವುಮನ್ವರ್ಥನಾಮಮನಿಟ್ಟು ಮತ್ತಮಾಗಾಮಿಕಾರ್ಯಮನಱಿಪಿ ಪರಸಿ ಪೋಪುದುಮನಂತರಂ,

ಬಲಿಬಾಯನಂಗಳುಂ ಮಂ
ಗಲತೂರ್ಯಮುಮೆಸೆಯೆ ಗೇಯರವಮುಂ ಪೊಂದೆ |
ಟ್ಟಿಲ ಪೊಳಪುಂ ರಂಜಿಸುತಿರೆ
ಕಲನಾದದ ಗೋಪಕಾಂತೆಯರ್ ನೆರದಾಗಳ್ ‖ ೧೩

ಉದರಮ ತೊಟ್ಟಿಲಾಗ ಭುವನತ್ರಯಮುಮಂ ನೆಱೆ ತಾಳ್ದಿ ದೇಹಿಮ
ಗ್ದದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯುಂ |
ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರಚ್ಯುತ ಜೋ ಮಹಾತ್ಮ ಜೋ
ಸಗಮಲಬೋಧ ಜೋ ಪರಮ ಜೋ ಹರಿ ಜೋಯೆನುತುಂ ಲತಾಂಗಿ
ಯರ್ ‖೧೪

ವ‖ ಆಮಹೋತ್ಸವದಿಂ ಬಳಿಕ್ಕೆ ಕತಿಪಯದಿನಂಗಳ್ಗೆ,

ಅನಿಮಿತ್ತದರಸ್ಮಿತದಿಂ
ದನಕ್ಷರಾಳಾಪದಿಂದಸಂಕೇತವಿಳಾ |
ಕನದಿಂದಕಾರಣಾನಂ
ದನದಿಂದುತ್ತಾನಶಯನದಿಂ ಹರಿಯೆಸೆದಂ ‖ ೧೫

ವ‖ ಅಂತೆಸೆಯುತ್ತಿರ್ಪನ್ನೆಗಮೊಂದುದಿವಸಂ ಯಶೋದೆ ಪರಿ
ಚಾರಿಕಾಜನಂ ಬೆರಸು ಕಾಳಿಂದೀನದಿಗೆ ಪೋದ ಪಿಂದೆ,

ತೊಟ್ಟಿಲನೊದೆದಾಡುತ್ತುಂ
ಪಟ್ಟಿರ್ದನನುರುಳಿವರಿದು ಶಿಶುವಂ ಕೊಲಲೆಂ |
ದಿಟ್ಟೊತ್ತಿತದಂಘ್ರಿತಳಂ
ಮುಟ್ಟೆಸಿಡಿಲ್ ಪೊಡೆವ ತೆಱದೆ ಕೆಡೆದಂ ಶಕಟಂ ‖ ೨೦

ಶಕಟಂ ಬೀಪ್ಪಡೆಯೊಳ್ ಮಹಾಕುಲನಗಂ ಬೀೞ್ವಂತೆ ಬೇಱೊಂದು ದೈ
ತ್ಯಕರಾಳಾಕೃತಿ ಬೀೞೆ ಗೋಪರಿದನಿಂ ಕಂಪಂಜುಗುಂ ನೋಡೆ ಕಾ |
ತುಕಮಿಾಕೂಸಿನ ಸಾಸಮೆಂದುಮಿದು ಪ್ರೊಲ್ಲೆಂದಚ್ಯುತಂ ನುರ್ಗಿದಾ
ಶಕಟಂ ತೋರ್ಪ * ನಿಶಾಟರೂಪವ ನದೃಶ್ಯಂಮಾಡಿ ಪಟ್ಟಿರ್ಪನಂ ‖ ೨೧

* ಮೊ. ಅ. ತೋಱೆ.

ಗುರುಕುಚಕೆ ಗೋಪಿ ಬಂದು ಶಕಟಂ ಶತಧಾಕೃತಮಾದುದಿಂತಿದೆಂ
ದಿರದ ಬೞಿಕ್ಕೆ ಕೇೞಶುಕಜಲ್ಪಿತದಿಂ ಬಗೆವೋಗಿ ಕಂದನ |
ತ್ವರುಣತಳಾಂಘ್ರಿಯಿಂದಱಿದು ತತ್ಕಮಳಾಕ್ಷನನೆತ್ತಿಕೊಂಡು ಘೂಂ
ಕರಿಸಿ ನಿಜೇಶ್ವರಂಗಱಿಪಿ ಮಾಡಿಸಿದಳ್ ಬಹುಶಾಂತಿಕರ್ಮಮಂ ॥ ೩೨

ಅಲಿಗಳ ಸೋಂಕಿಂ ಪ್ರಾತ
ರ್ಜಲರುಹಮಲರ್ವಂತೆ ಗೋಪಿಯರ್ ಪದೆಪಿಂ ಜ |
ಕ್ಕುಲಿಸೆ ಲಲಿತಾ * ನನಾಂಬುಜ
ಮಲರ್ದೆಸೆದುದು ಮಂದಹಾಸದಿಂ ಮುರಹರನಾ ॥ ೩೩

ಅಲಿಗಳೆಱಗಿರ್ದ ತಾವರೆ
ಯಲರಂ ಸಕಳಂಕಮಾದ ಶಶಿಮಂಡಲಮಂ |
ಗೆಲೆವಂದುದಂಜನಂ ಪೞ
ದಲರ್ದ ಮೊಗಂ ಸಕಳಸುರಮನೋರಂಜನನಾ ॥ ೩೪

ಕುಸುಮಾಕರಸಮಯದೊಳತಿ
ಮಸೃಣತರಂ ಚೂತಪೋತಕಂ ನನೆಯಿಂ ರಂ |
ಜಿಸುವಂತಿರೆ ತನಯಂ ರಂ
ಜಿಸಿದಂ ಶೈಶವದೊಳಾಕುಶೇಶಯನಯನಂ ॥ ೩೫

ವಿವಿಧಸಟಾವಳಿ ಕಿಱುಜಡೆ
ನವಕೇಸರಕಾಂತಿ ಕೊರಲ ರಕ್ಕಯ । ರತ್ನಾ |
ಚ್ಛವಿಯಱಗಲಂಬೆಗಾಲಿ
ಕು ವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ ॥ ೩೬

ತನ್ನ ದಟಿಂದೆ ಮಾಱದೆ ಗೃಹಾಂಗಣಮಂ ಪೊಱಮಟ್ಟು ಪೋಪನಂ
ಬೆನ್ನನೆ ಪೋಗಿವೋಗಿ ಪಿಡಿತಂದನಸುಂ ಜಡಿದೊರ್ಮೆ ಗೋಪಿ ಪಾ |
ವಿನ್ನಡುವಂ ತೊಡರ್ಚೆ ವೃಥವಾಗಲುಲೂಖಲದಲ್ಲಿ ಕಟ್ಟಿ ಪೋ
ಗಿನ್ನೆಲೆ ಪೋಗಲಾರ್ಪೊಡೆಲೆ ಚಂಚಲಚೇಷ್ಟಿತ ನೋಟ್ಪೆನೆಂಬುದುಂ॥ ೩೭

* ಖ. ಗ. ಯುಸಿತಾ. † ಖ. ಗ. ಭೂಷಿತ.

ಪನೆ ಪಿಂಜುಗಲ್ ಪುಗುಳ್ವಗೆನಗುತ್ತೊರಲಂ ತೆಗೆಯುತ್ತುಮೊಯ್ಯನೊ
ಯ್ಯನೆ ಮುರಿದಂಬಿಕಾಮುಖಮನೀಕ್ಷಿಸುತುಂ ನಡೆಯಲ್ ಮಹಾಯುಮಾ।
ರ್ಜುನಕುಜವಲ್ಲಿ ಸಿಲ್ಕಿದೊರಲಂ ತೆಗೆಯಲ್ಕನುಗೆಯ್ದೊಡಾಯುಮಾ
ರ್ಜುನತರು ಕಿೞ್ತು ಬೇರ್ವೆರಸು ಬಿೞ್ದರೆ ಮಧ್ಯದೊಳಿರ್ದನಚ್ಯುತಂ॥೩೮

ವಿಯದಾಶಾವಧಿಯಾಗಿ ಪೆರ್ಚಿ ಬೆಳೆದಿರ್ದಾಮತ್ತಿಯಂ ಕೃಷ್ಣನ
ಟ್ಟಿಯು ಕೂಸಾಟದೆ ಕಿೞ್ತಮಾನುಷಚರಿತ್ರಂ ನೋೞ್ಪ ಗೋಪಾಲರೊಳ್।
ಭಯಮಂ ಮಾಡದೆ ಮುದ್ದಿದೆಂಬದಟದೆಂಬಂತಾಯ್ತು ಯುಕ್ತಂ ಜಗ
ತ್ತ್ರಯರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾೞ್ಕುಮೇ॥

ವ॥ ಆಗಳಾಕಳಕಳಧ್ವನಿಯುಂ ಕೇಳ್ದೇನೆಂದು ನಂದಗೋಪಂ ಪೊಱವೊೞಲಿಂ ಬಂದು ಭಗ್ನವಾಗಿರ್ದಾಮಹಾಸ್ಕಂಧಶಾಖಾರ್ಜುನವಿಟಪಿಯುಮಂ ದರಸ್ಮಿತಭಿನ್ನೋಷ್ಠಪುಟನಾಗಿರ್ದ ದಾಮೋದರನುಮಂ ಕಂಡು ಕೌತುಕಾನಂದನಿರತಿಶಯಹೃದಯನಾಗಿರ್ಪಿನಂ ಯಶೋದೆ॥

ಪರಮಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ ಸರೋರುಹೋ
ದರನನಿದಾರ ಮಾಣಿಕವಿದಾರ ನಿಧಾನವಿದಾರ ಮುದ್ದಿದಾ।
ರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹಮೆಂ
ದಿರದಮರ್ದಪ್ಪಿದಳ್ ಪದೆಪಿನಿಂ ಮೊಲೆವಾಲ್ತೊಱೆದೆೞ್ಚು ಪಾಯ್ವಿನಂ॥೪೦

ತರುಣೇಂದು ದಿನಕ್ರಮದಿಂ
ಪರಿವರ್ಧಿಸಿ ವಾರಿನಿಧಿಯನೊದವಿಪ ತೆಱದಿಂ।
ಮುರರಿಪು ದಿವಸಕ್ರಮದಿಂ
ಪರಿವರ್ಧಿಸಿ ಜನದ ಮುದಮನೊದವಿಸುತಿರ್ದಂ॥ ೪೧

ಬಂದಡಿಯನಿಟ್ಟು ಹರಿಮು
ತ್ತೊಂದಡಿಗಡಿಯೆತ್ತುವಾಗಳುಂ ವಿಕ್ರಮನಾ।
ವಂದಿನ ಸಂಸ್ಕಾರಂ ಬಿಡ
ದೆಂದೆನೆ ಬಗೆಗೊಳಿಸಿದಂ ತಳರ್ನಡೆವೆಡೆಯೊಳ್॥ ೪೨

ಕಮಲಭವಾದ್ಯರುಂ ಪಡೆವರೇ ಹರಿಪಾದರಜೋಲವಪ್ರಸಾ
ದಮನೆನೆಲತ್ಯಲಭ್ಯತರವಾದ ತದಂಘ್ರಿಗಳನ್ನ ಮೇಲೆ ಸಂ।
ಕ್ರಮಿಸಿದುವೆಂದು ತನ್ನ ಕೃತಕೃತ್ಯತೆಗೇಂ ತಲೆದೂಗುತಿರ್ದಳೋ
ಕ್ಷಮೆಯೆನೆ ಕಂಪಿಕುಂ ಧರೆ ತಳರ್ನಡೆವಂಘ್ರಿಭರಕ್ಕೆ ಕೃಷ್ಣನಾ ॥ ೪೩

ಒಡೆಗಿಱಿದಿರೆ ಪೊಂಗವಡಿಕ
ಬಿಡೆ ಘಲ್ಕೆನ ಗೆಜ್ಜೆ ಮಿಱುಗೆ ದಶನಾಂಶು ಕುರುಳ್ ।
ಜಡಿಯೆ ತೊದಳ್ನುಡಿಯು ತಳ
ರ್ನಡೆಯು ಬೆಡಂಗಸುರವೈರಿಗಡಿಗಡಿಗೆಸೆಗುಂ ॥ ೪೪

ಒಡವುಟ್ಟಿದ ಕೌಸ್ತುಭಮಿ
ರ್ಪೆಡೆಗಂ ದಾಯಾದನಪ್ಪೆನೆನ್ನೆಗವೆಂದು ।
ದುಡುಪತಿಕಳೆ ನೆಲೆಸಿತ್ತೆನೆ
ಪೊಡೆಯಲರನ ಕೊರಲ ಪುಲಿಯುಗುರ್ ಕರಮೊಸೆಗುಂ ॥ ೪೫

ನೊಸಲೊಳ್ ಕಣ್ಣುಳ್ಳ ಮನೋ
ಜಸೂದನಂ ಪೆಱನದಾವನಾಸ ದಲೆಂದೀ ।
ವಸುಮತಿಗೆ ಸೂಚಿಪಂದದಿ
ನೆಸೆದಂ ಹರಿ ನೊಸಲಕಣ್ಬೊಲೆಸೆವರಲೆಲೆಯಿಂ ॥ ೪೬

ವಿಕ್ರಮಮೂರ್ತಿಗೆ ತಾರಾ
ಚಕ್ರಂ ಕಟಿಸೂತ್ರವಾಗೆ ತತ್ಕಟಿಸೂತ್ರಂ ।
ಚಕ್ರಿಗೆ ಬಾಲ್ಯಕ್ಕನುರೂ
ಪಕ್ರಮವಾಯ್ತೆನಿಸಿ ಮುತ್ತಿನುಡೆವಣಿಯೆಸೆಗುಂ ॥ ೪೭

ಸಲೆ ಪಾಟಿಗಿಡದೆ ಗುಣದಿಂ
ತೊಲಗಿರದೀ ಕೃಷ್ಣಪದಮನಾಶ್ರಯಿಪೆವ್ಮಂ ।
ತೆಲೆ ಮರ್ತ್ಯ ಪದಮನಾಶ್ರಯಿ
ಸೆಲೊಲ್ವನೆಂಬಂತೆ ಹರಿಯ ನೂಪುರವುಲಿಗುಂ * ॥ ೪೮

* ಕ. ಖ. ಗ. ಮೊಸೆಗುಂ.

ಎನಿತೊಂದು ಪದೆಪು ಮೋಹಂ
ವನಜಾಕ್ಷನೊಳನಿತು ಪದೆಪು ಮೋಹಂ ಬಳನೊಳ್ ।
ತನಗಾಗೆ ನಂದವಧು ತ
ತ್ತನಯದ್ವಯಕೇಳಿಯಿಂದೆ ಸುಖಮಂ ಪಡೆದಳ್ ॥ ೪೯

ಬಡನೊಡನಾಡಿಗಳ್ ಗಡಣದಿಂ ಬರೆ ಗೆಜ್ಜೆಯ ನುಣ್ಬರಂ ಪೊದ
ಳ್ದುಡೆವಣಿಯಿಂಚರಂ ನೆಗಟೆ ಕಣ್ಮಲರ್ಗಳ್ ಪೊಳ್ದಾಡೆ ಧೂಳಿ ಮೆ ।
ಯ್ಗಡರ್ದಿರೆ ಮುಗ್ಧಜಲ್ಪನಮೊಡಂಬಡೆ ರಂಜಿಸಿ ತಾಯ ದಿಟ್ಟಿ ತ
ಮ್ಮೊಡನೊಡನೆತ್ತಲುಂ ಪರಿವಿನಂ ಪರಿದಾಡಿದರಾಬಳಾಚ್ಯುತರ್ ॥ ೫೦

ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾರ್ತೆಗೆ ಪೋಗೆ ಗೆಜ್ಜೆಯಿಂ
ದನಿ ನಸುಪೊಣ್ಮದಂತು ಪರಿತಂದೆಡಗೆಯ್ಯೊಳ್ ತೋಡಿ ಬೆಣ್ಣೆಯಂ ।
ತಿನುತಿರೆ ಗೋಪಿ ಕಂಡೆಲೆಲೆ ಕಳ್ಳತನಂಗಳನಣ್ಣ ಕಂಡೆವಾ
ವೆನೆ ಕಡೆವಾಯ ಬೆಣ್ಣೆವೆರಸೊಯ್ಯನೆ ಪಿಂಗುವ ಕೃಷ್ಣನೊಪ್ಪಿದಂ ॥ ೫೧

ವ॥ ಮತ್ತೊಂದು ಸಮಯದೊಳ್ ಪಾಲ್ಗುಡಿಯಲೊಲ್ಲದಾಟಿಗು
ಟ್ಟುವ ದಾಮೋದರನಂ ಯಶೋದೆ ಕಂಡು,

ಶಕಟವಿಮರ್ದನಾ ಮುಸಲಿ ಬಾರದ ಮುನ್ನಮೆ ನಮ್ಮ ಹೇಮಘಂ
ಟಿಕೆ ಘಣಿಲೆಂಬ ನಂದಿನಿಯ ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಜೆಂ ।
ಡಿಕೆ ಬಳೆದಪ್ಪುದೆಂವಬಲೆ ನಂಬಿಸೆ ಪಾಲ್ಗುಡಿದೀಗಳಬ್ಬೆ ಜೆಂ
ಡಿಕೆಯೆನಿತುದ್ದಮಾದುದೆನುತುಂ ಬೆಸಗೊಳ್ವ ಮುಕುಂದನೊಪ್ಪುಗುಂ ॥ ೫೨

ಮಲ್ಲಿಕಾಮಾಲೆ.

ಚಾರಿಮೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ ಮಂಜುಮಂ
ಜೀರಕಂಕಣಕಿಂಕಿಣೀರುತಿ ಪೊಣ್ಮೆ ವಕ್ರಿತಕಂಧರಂ ।
ಸ್ಮೇರವಕ್ತ್ರಸರೋರುಹಂ ಲಲಿತಾಯತೇಕ್ಷಣನಾಗಿ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಱೆಗಾಡಿದಂ ॥ ೫೩

ನೀರದೋತ್ಪಲ * ವರ್ಣನಾಡಿದನಾಡಿದಂ ಕಮಲೇಕ್ಷಣಂ
ಚಾರುಹಾಸನಿವಾಸನಾಡಿದನಾಡಿದಂ ಸುಭಗಂ ಶುಭಾ ।
ಕಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ॥ ೫೪

ಕ್ಷೀರಲಂಪಟನಾಡಿದಂ ನವನೀತಚೋರಕನಾಡಿದಂ
ದಾರಕವ್ರಜಮಲ್ಲನಾಡಿದನಾಡಿದಂ ಹರಿ ಗೋಕುಲಾ ।
ಧಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ॥ ೫೫

ದಾರುಣಾಕೃತಿಪೂತನಾಂತಕನಾಡಿದಂ ಶಕಟಪ್ರಸಂ
ಹಾರನಾಡಿದನಾಡಿದಂ ಯಮಳಾರ್ಜುನದ್ರುಮಘಾತಿಯೆಂ ।
ಬೀರವಂ ನಗಬಿಲ್ಕೆ ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ॥ ೫೬

ವೀರದೈತ್ಯರಸಿಕ್ಕಲಾಡಿಯೆ † ಪುಟ್ಟಿದಂ ಹರಿಯೆಂದು ಕೈ
ವಾರದಿಂದವೆ ಮಾತನಾಡೆ ವಿರೋಧಿಗಳ್ ಯಮಲೋಕಮಂ ।
ಸಾರಲಾಡೆ ಯಶೋದೆ ರಾಗರಸಾಬ್ಧಿಯೊಳ್ ತುಳುಕಾಡೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ॥ ೫೭

ಆನಂದಮೂರ್ತಿ ಸುಖಿಲ
ಕ್ಷ್ಮೀನಿಳಯಂ ಸಕಲಸಾರಸರ್ವಸ್ವನೆನಿ ।
ಪ್ಪಾನೀರಜನೇತ್ರನ ಲೀ
ಲಾನುಷ್ಠಿತಬಾಲಕೇಳಿ ಬಣ್ಣಿಪರಳವೇ ॥ ೫೮

ವನಜಜ ಬನ್ನಿ ಮಿತ್ರ ಹರ ಕುಳ್ಳಿರಿಮುನ್ನತಪೀಠದೊಳ್ ಪದಾ
ವನತಿಯಿನೇಟ' ಮಹೇಂದ್ರ ದಿವಿಜರ್ ಪುಗೆ ಬಾರಿಸವೇಡೆನುತ್ತೆ ಮು ।
ನ್ನಿನ ನಿಜಲೀಲೆಯೋಲಗದ ಪೆರ್ಮೆಯ ಮಾತನದೊರ್ಮೆ ಸುಪ್ತಿಯೊಳ್
ಕನವರಿಸುತ್ತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನಗಚ್ಚಿದಂ ॥ ೫೯

---

* ಕ. ಮೊ. ಅ.—ನೀರಜೋತ್ಪಲ. † ಖ. ಗ — ನಿಕ್ಕಲೋಸುಗ

ಬಂದಲ್ಲದೊಂದನೆನುತುಮ
ದೊಂದುದಿನಂ ಕೃಷ್ಣನಾಱಿಗೆಂಟ್ಟಿದೊಡದನೇ ।
ನೆಂದುಂ ಮೋಣಿಸಲಱಿಯದ
ದೊಂದು ಕಥಾಂತರದೆ ಗೋಪಿ ಮೋಣಿಪ ಬಗಯಿಂ ॥ ೬೦

ಕತೆಯಂ ಕೇಳಲೆ ಕಂದ ಹಂ ರಘುಜನೆಂಬಂ ಹಂ ಸಕಾಂತಂ ವನ
ಸ್ಥಿತನಾದಂ ಗುರು ಪೇಟೆ ಹಂ ದಶಶಿರಂ ಕೊಂಡುಯ್ದನಾರಾವನಾಂ ।
ಸತಿಯಂ ತಾನೆನೆ ಪೂರ್ವಮಂ ನನೆಯುತಂ ಹುಂಕೊಳ್ಳಿದುತ್ಕ್ಷೇಪಹುಂ
ಕೃತಿಯಂ ಮಾಡುತಮೊಂಡುಗರ್ಚಿ ಕಿಸುಗಣ್ಬಿಟ್ಟೆಚ್ಯುತಂ ರಂಜಿಕುಂ॥

ಆಡುತ್ತುಂ ಸಹಪಾಂಸು
ಕ್ರೀಡಿತರೊಳ್ ಕೃಷ್ಣನಬ್ಬ ಮಣ್ಣಂತಿಂದಂ ।
ನೋಡೆಂದು ಹಳಧರಂ ಪಿಸು
ಣಾಡಲ್ ಕೇಳ್ದುರ್ವಿ ಗೋಪಿ ಸೆಳೆಪಿಡಿದೊಲವಿಂ ॥ ೬೧

ಹರಿ ನೀಂ ಮಣ್ದಿಂದೆ ತಿನ್ನಂ ಜನನಿ ಪುಸಿದನೆಮ್ಮಗ್ರಜಂ ತೋಱು ವಕ್ತ್ರಾಂ
ತರವಂ ನೋಡೆಂದು ಬಾಯಂ ತೆಱೆವುದುಮದಱೊಳ್ ವಾರ್ಧಿಯೇೞುಂ ಕುಲೋರ್ವೀ ।
ಧರವೇೞುಂ ದ್ವೀಪವೇೞುಂ ಬೆರಸು ಜಗಮನೀರೇೞುಮಂ ಕೂಡೆ ಕಂಡ
ಚ್ಚರಿವೆಟ್ಟಂ ಮುಚ್ಚು ಮುಚ್ಚಾ ನವಮನೆನುತುಮಾಕಾಂತೆ ವಿಭ್ರಾಂತೆಯಾದಳ್ ॥ ೬೨

ಕಮಳಾಕ್ಷನ ಮಹಿಮೆಯನಱಿ
ದುಮದಂ ತನ್ಮಾಯೆಯಿಂದೆ ಮಱೆವರ್ ಗೋಪರ್ ।
ಯಮಿಗಳುಮಂ ಮೋಹಿಪ ವಿ
ಷ್ಣು ಮಾಯೆ ಮೋಹಿಸದೆ ಗೋಪರಂ ತತ್ಕ್ಷಣದೊಳ್ ॥ ೬೪

ಪೂತನ ಬಿರ್ದುದಂ ಶಕಟನೊತ್ತಿದುದಂ ಯಮಳಾರ್ಜುನಾವನೀ
ಜಾತಮನಾಹತಂ ಕೆಡೆದುದಂ ನೆನೆದದ್ಭುತಮಿಲ್ಲಿ ಕಾಣಲಾ ।

ಯ್ತಾತಪತಾಪದಿಂದಮಿದು ನಿಸ್ತೃಣನಿರ್ಜಳನಿಷ್ಪ್ರವಾಳವ
ಲ್ಲೀತರುವಾದುದೀಯೆಡೆಯೊಳನ್ನಿರವಾಗದು ಪೋಪುದುತ್ತಮಂ ॥ ೬೫

ನಮಗಿಂ ನಿಪ್ಪೋಡವೊಂದೆ* ಸುಸ್ಥಳವತೀವಾಸೇವ್ಯವೀನಮ್ಮ ಗೋ
ಸಮುದಾಯಕ್ಕೆ ಬಹುಪ್ರಕಾರತೃಣಮುಂ ಸುಚ್ಛಾಯೆಯುಂ ತನ್ನೊಳ ।
ಪ್ರಮಿತಂ ಕೇಳಿಸುಖಪ್ರದೇಶಮಸೆಗುಂ ವೃಂದಾವನಂ ಕೀರಕೇ
ಕಿಮರಾಳವ್ರಜದಾವನಂ ಪ್ರಚುರಕಾಳಿಂದೀವನಂ ಪಾವನಂ ॥ ೬೬

ವ॥ ಎಂದು ನಂದಗೋಪಂ ಗೋಪವೃದ್ಧರೊಳ್ ಸಮಾಳೋಚನಂಗೆಯ್ದು ನಿಶ್ಚಯಿಸಿ ನಿಖಿಲಗೋಪಕಟಕಂ ಬೆರಸು ಕತಿಪಯ ಪ್ರಯಾಣಂಗಳಿಂ ಪೋಗಿ,

ವೃಂದಾವನತಟದೊಳ್ ಗೋ
ವೃಂದಾವನವಾಂಛೆಯಿಂದೆ ಮನೆಗಟ್ಟಿದನಾ ।
ನಂದಂ ಕೃತಗೋಪಜನಾ
ನಂದಂ ದುರ್ಭೇದಶಕಟರುಚಿ † ರಂಜಿಪಿನಂ ॥ ೬೭

ನಯಮುಂ ತೋರ್ಕೆಯುಮಿರ್ಪುದು ಮೋಡಿದ ಸಿದಾಘಾಕ್ರಾಂತಭೂಜಾಳಿ ಶೌ
ರಿಯ ಸಂಕಲ್ಪದೆ ಪತ್ರಪುಷ್ಪಫಲಭಾರಾಕ್ರಾಂತಮಾಗಿರ್ದುವೊ ।
ರ್ಮೆಯೆ ವೃಂದಾವನ ಭೂಮಿಯೊಳ್ ನಿಜನಿಮೇಷೋನ್ಮೇಷಮಾತ್ರಂ ಜಗ
ತ್ತ್ರಯಸೃಷ್ಟಿಕ್ಷಮನಾದ ಕೃಷ್ಣನ ಮಹತ್ತ್ವಕ್ಕೇಸಿದಾಶ್ಚರ್ಯಮೋ ॥

ಅಸುರಾರಿ ಕಾಕಪಕ್ಷದಿ
ನೆಸೆದಿರ್ದಂ ಕಾಕಪಕ್ಷವಿಸರದ ತಣ್ಪಿಂ ।
ದಸುರಗಣಮಿರ್ಕ್ಕುಮೀರಣ
ವಸುಧೆಯೊಳಂದಮರರೊಸಗೆವೆಱೆವಾಜಿಪಿನಂ ॥ ೬೮

ಆದಿಪುರುಷಂ ಸರೋಜಭ
ವಾದಿನುತಂ ತ್ರಿಭುವನಾದಿಗುರು ಗೋಪಪದ ।

---

*ಕ. ಗ.—ನಮಗಿಂತಪ್ಪಡವೊಂದೆ. † ಮೊ. ಅ.—ಕಟಕರುಚಿ.

ಕ್ಕಾದಿಪದಮಿಂತಿದೆನೆ ತುಱು
ಗಾದಂ ಲೀಲಾಯಿತಂ ಸ್ವಯಂಪ್ರಭುಗುಚಿತಂ ॥ ೭೦

ಮಿಳಿರ್ವನ್ನಂಕುಡಿವಾಲಮವ್ವೆಳಸುವನ್ನಂ ದಿಟ್ಟಿ ಸೂಚಿಕ್ಕಿ ಕೆ
ಕ್ಕಳಿಪನ್ನಂ ಕಿವಿ ಸೋಂಕಿನಿಂ ಕೊಣಕಿಡುತ್ತುಂ ಬರ್ಪಿನಂ ಪೋಗಿ ತಂ
ದೆಳವುಲ್ಲುಂ ಮೊಳೆವುಲ್ಲುಮೆಂಬ ಪಸುರ್ವುಲ್ಗೊಳ್ ತಾಂಗಿ ಕಾಳಿಂದಿಯೊಳ್
ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ ಮಹೋತ್ಸಾಹದಿಂ ॥ ೭೧

ಶೈಶವದೊಳಬಲೆಯರ್ಗೆ ಕು
ಶೇಶಯಲೋಚನನ ಮೂರ್ತಿ ಪಡೆದುದು ರಾಗಾ ।
ವೇಶಮನೆಳವೆಱೆಯ ಕಳಾ
ವೇಶಮದುತ್ಪಲಿನಿಗಳ್ಗೆ ಪಡೆವವೊಲೊಲವಂ ॥ ೭೨

ಅನುನಯದಿಂ ಬನಕೊಕ್ಕಡನೆ ಪೋಗಿ ಲತಾಗೃಹದಲ್ಲಿ ಗೋಪಿಯರ್
ವನರುಹನೇತ್ರನಂ ಪಿಡಿದು ಚುಂಬಿಸಿ ತಳ್ತಮರ್ದಪ್ಪಿ ಪೀವರ ।
ಸ್ತನಭರದೊಳ್ ಪೊರಳ್ಚಿ ನಿಬಿಡೋರುಯುಗಂಗಳೊಳಿಟ್ಟಮರ್ಚಿ ಸಂ
ಜನಿತಕಟೀತಟದ್ರವೆಯುರುತ್ಪುಲಕಾಂಗಿಯರಾಗಿ ರಂಜಿಪರ್ ॥ ೭೩

ಕಾಮಾಂಗಚೇಷ್ಟೆಯಿಲ್ಲದ
ದಾಮೋದರನಂಗಸಂಗದೊಳಗಾಸತಿಯರ್ ।
ಕಾಮಾವೃತಮಂ ತಳೆದರ್
ಸೋಮಮಣಿಸ್ಥಳಿಗಳೊಸರ್ವವೋಲ್ ಶಶಿರುಚಿಯಿಂ ॥ ೭೪

ವಿಕಸಿತತಿಲಾತಸೀಕುಸು
ಮಕಾಂತಿಗಳ್ ನೀಲಹೇಮರುಚಿಸಿಚಯರ್ ಗೈ ।
ರಿಕಲಸಿತಫಾಲಕರ್ ಬಾ
ಲಕರೆಸೆದರ್ ವತ್ಸಪಾಲಕರ್ ಬಲಕೃಷ್ಣರ್ ॥ ೭೫

ಸ್ಮಿತಕರ್ಣಿಕಾರಸುಮನ
ಶ್ಶ್ರುತಿಪೂರರ್ ಚಿತ್ರಕುಸುಮಮಯವನಮಾಲರ್ ।
ಶಿತಿಕಂಠಬರ್ಹಶೀರ್ಷರ್
ನುತವೇಣೀಸ್ಫುರಿತಚೂಡರಸಕೃತ್ಕ್ರೀಡರ್ ॥ ೭೬

ಅನುಕೃತಮಯೂರಕೇಕಾ
ನಿನಾದ* ಮೃದುಗಾನತಾನನಿಪುಣರ್ । ಮಧುರ ।
ಸ್ವನಪತ್ರವಾದ್ಯನಿರತರ್ ‡
ಮನೋಜ್ಞಗೋಪಾಲವೇಣುವಾದನಸುಭಗರ್ ॥ ೬೭

ತೋಯಜನಾಭನನಂತಸ
ಹಾಯಂ ನಲಿದಿಂತು ವತ್ಸಕುಲಮಂ ಕಾವಂ ।
ಕಾಯೆ ವಿರಹಿಣಿಗನಂಗಂ
ಕಾಯೆ ಮನೋರಥಮಹೀರುಹಂ ನಾಕಿಗಳಾ ॥ ೬೮

ಅಚ್ಛನವಪೀತ¶ ಪಟನ
ಭ್ರಚ್ಛವಿ ನವಕುಸುಮಭೂಷಿತಂ ಕಮಳಾಕ್ಷಂ ।
ಸ್ವಚ್ಛಂದಗಾಮಿ ಯಮುನಾ
ಕಚ್ಛಂಬಿಡಿದೆಯ್ತರುತ್ತು ಮೊಂದವಸರದೊಳ್ ॥ ೬೯

ಘುಳುಘುಳನುತ್ತೆ ಬುದ್ಬುದಚಯಂ ನಗೆದಪ್ಪುದಿದೇಕೆ ನೀರಜಂ
ಗಳ ರಜದಂತದೊಂದರುಣಕಾಂತಿ ಪೊದೞ್ದಪುದೇಕೆ ಧೂಮಮಂ ।
ಡಳ ಮೊಗೆದಪ್ಪುದೇಕಿದಱೊಳೀಹ್ರದಮುದ್ಧತಮೆಂದು ಗೋಪರಂ
ಜಳರುಹನಾಭನಂದು ಬೆಸಗೊಳ್ವುದುಮಿಂತಿದು ಕಾಳಿಯಹ್ರದಂ ॥ ೭೦

ವ॥ ಈಕರ್ಮಡುವಿನೊಳ್ ಕಾಳಿಯಮಹಾಸರ್ಪಸಿರ್ಪಂ ಈಘುಳುಘುಳುಧ್ವಾನೋದ್ಗತಬುದ್ಬುದಪ್ರಕರಮಾಸ್ಫುಟಾಧರನತಿಸ್ಫಾರಸ್ಫುಟಾಫೂತ್ಕಾರವಾತೋದ್ಗತಬುದ್ಬುದಪ್ರಕರಂ ಈಯರುಣಕಿರಣಮಂಜರೀಪುಂಜಮಾಫಣೀಂದ್ರನ ಫಣಾಮಣಿಗಣಾರುಣಕಿರಣಮಂಜರೀಪುಂಜಂ. ಈ ಸಮುದ್ದಾಮಧೂಮಸ್ತೋಮಮಾಲೇಲಿಹಾನನಾಭೀಲಹಾಳಾಹಳೋದ್ದಾಮ ಧೂಮಸ್ತೋಮಂ. ಅದಲ್ಲದೆಯುಂ,

---

* ಖ—ನಿನದರ್. † ಖ—ನಿಯತರ್ ‡ ಖ—ಚತುರರ್

¶ ಖ. ಗ.—ಅಚ್ಛನ್ನಪೀತ.

ಆವಿಷಮೋಹಿಯು ವಿಷಮುಖ
ಪಾವಕನಿಂ ಪಾಱುತಿರ್ಪ ಖಗಕುಳಮುಂ ತೀ ।
ರಾವನಿಜ ಭೂಜಕುಳಮುಂ
ಬೇವುದು ಯೋಜನಪರಿಪ್ರಮಾಣಾಂತರದೊಳ್ ॥ ೮೧

ವ॥ ಆಪ್ರದೇಶಮಂ ಪೂರ್ವಲಾಕಾಳಕೂಟಮಂ ಧರಿಸಿದ ಪುರಹರಂಗಮಱಿದು, ನಾಮತ್ತ ಪೋಗಲಾಗದೆಂದು ಸಹಪಾಂಸುಕ್ರೀಡಿತರಪ್ಪ ಗೋಪಾಲಕರ್ ಪೇೞೆ,

ತ್ರಿದಶಾಸುರರಂ ಸುಡುವ
ಗ್ಗದ ವಿಷಮಂ ನುಂಗಿದಾತ್ರಿಣೇತ್ರನುಮಾನಂ ।
ಬುದನರಿಯರ್ ಮಾನವರೆಂ
ವದರ್ಕೆ ನಗುವಂತೆ ದನುಜರಿಪು ನಸುನಗುತುಂ ॥ ೮೨

ದುಷ್ಟೋರಗನಂ ತಗುಳ್ವಂ
ಶಿಷ್ಟಜನಂ ಸೇವಿಪಂತು ಮಾಡುವೆನಿದನು ।
ತ್ಕೃಷ್ಟಮೆನೆ ದುಷ್ಟನಿಗ್ರಹ
ಶಿಷ್ಟಪ್ರತಿಪಾಲನಾರ್ಥಮೆನ್ನವತಾರಂ ॥ ೮೩

ವ॥ ಎಂದು ಮನದೊಳ್ ಕೃತಪ್ರತಿಜ್ಞನಾಗಿ ನೋಡುವೆನೆಂದು ತತ್ಸಮೀಪಕ್ಕೆ ಬಂದು ನೋೞ್ಪಲ್ಲಿ,

ವದನೋಚ್ಛ್ವಾಸದಿನುಣ್ಮುತಿರ್ಪ ಯಮುನೋರ್ಮಿಶ್ರೇಣಿಯುಂ ತನ್ನಪೆ
ಕ್ಕದ ಸೇವಾಗತಭೋಗಿಭಂಗುರವಪುಃಕಾಂಡಂಗಳಿಂ ಮಿಕ್ಕು ನಿ ।
ಲ್ಲದೆ ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯುಂ ಭೋಗರ
ತ್ನದಚೆಲ್ವಿಂ ದ್ಯುತಿಮಾಲಿಯುಂ ಮಸಕದಿಂ ದಂಭೋಳಿಯುಂ ಕಾಳಿಯಂ ॥

ವ॥ ಆಕುಂಭೀನಸನ ಸಂರಂಭಮಂ ಕಂಡುಮಿರ್ಕೆಲನಂ ನೋಡೆ,

ಅಮರಪತಿಯೊಡನೆ ತಳ್ತಿಱಿ
ದಮೃತವನುಯ್ವಲ್ಲಿ ಗರುಡಹಸ್ತದಿನಂದೊಂ ।

ದಮೃತದ ಪನಿ ತನ್ನೊಳ್ ಪನಿ
ತು ಮಹೀಜಂ ವಿಷದೆ ಬೇಯದಿರ್ದುದು ತಡಿಯೊಳ್ ॥ ೮೫

ಆಗಸದಿಂ ವಧ್ಯಶಿಲಾ
ನಾಗಂಗೆ ಗರುತ್ಮನೆಱಗುವಂತಾಮರದಿಂ ।
ನಾಗಾರಿಕೇತು ಕಾಳಿಯ
ನಾಗಂಗೆಱಗಿದನಮರ್ತ್ಯರೀಕ್ಷಿಸೆ ನಭದೊಳ್ ॥ ೮೬

ಸಿಡಿವ ಪಿಡೆವಣಿಗಳಂ ನೂ
ರ್ಮಡಿಸುತ್ತುಂ ನೆಗೆವ ತದ್ವಿಷಾಗ್ನಿಯ ಕಿಡಿಯಿಂ ।
ದೊಡನಯ ಗೋಪರ್ ತಂತ
ಮ್ಮೊಡಲೊಳ್ ಪುಗುಳೇೞೆ ಪೋಗಿ ಪುಯ್ಯಲ್ಚುವುದುಂ ॥ ೮೭

ಶಿಶಿರಪಯಃಕಣವೆರಸಿದ
ಕುಶೇಶಯಚ್ಛದಮೆನಕ್ಷಿಗಳ್ ಬಾಷ್ಪಜಲ ।
ಪ್ರಶಮಿತರುಚಿಗಳ್ ಪೋಲ್ತಿರೆ
ಯಶೋದೆಯುಂ ನಂದಗೋಪನುಂ ನಡೆತಂದರ್ ॥ ೮೮

ಉದಯಿಪ ವಿವೇಕಲಕ್ಷ್ಮಿಯ
ಸಿದಿಗೊಳ್ವರ್ಘ್ಯಾಂಬುವೆನಿಸಿ ಖೇದಾಶ್ರುಜಲಂ ।
ಮೊದಲೊಳ್ ಸೂಸೆ ಬೞಿಕಂ
ವಿದಿತಾಚ್ಯುತಮಹಿಮನಾಗಿ ಬಲನೆೞ್ದಂ ॥ ೮೯

ನಸುಜೋಲ್ದುಳ್ಳುಡೆಯುಂ ತೆೞಂಬೊಳೆದು ಪಾಱುತ್ತಿರ್ಪ ಸಂವ್ಯಾನಮುಂ
ನೊಸಲೊಳ್ ತಳ್ತ ಕುರುಳ್ಗಳುಂ ತುಱುಗಿ ನೀರೇಱಿರ್ದಲರ್ಗಣ್ಗಳುಂ ।
ಬಿಸುಸುಯ್ಯೊಂಕೆಯಿನಿರ್ಪುಗುಂದಿದಧರಂ ಬಿಟ್ಟಿರ್ದ ಧಮ್ಮಿಲ್ಲಮುಂ
ಪೊಸತೊಂದೊಪ್ಪಮನೀಯೆ ವಿಹ್ವಳತೆಯಿಂ ಬಂದತ್ತು ಗೋಪೀಜನಂ ॥

ದಾರಕಮಲ್ಲನೆಲ್ಲಿದನಮಾನುಷಖೇಳನದೆಲ್ಲಿದಂ ವ್ರಜಾಂ
ಭೋರುಹಮಿತ್ರನೆಲ್ಲಿದನನಂತಸಹಾಯನದೆಲ್ಲಿದಂ ಕನ ।

ನ್ನೀರದಕಾಂತಿಯೆಲ್ಲಿದನುದಂಚಿತಚಂದ್ರಕಳಾಪನೆಲ್ಲಿದಂ
ಚಾರುಸುವರ್ಣವರ್ಣಪಟನೆಲ್ಲಿದನೆಲ್ಲಿದನಬ್ಜಲೋಚನಂ ॥ ೯೧

ವ॥ ಎನುತ್ತಿರ್ಪಿನಂ * ನೋಳ್ಪಲ್ಲಿ,

ಘನಗರಳಂ ವಿಜೃಂಭಿಸೆ ಫಣಾಮಣಿ ರಂಜಿಸೆ ಘೋರಫೂತ್ಕೃತ
ಧ್ವನಿ ಮಿಗೆ ಪಾವು ಸುತ್ತಿರಲನಾಹತಲೀಲೆಯೊಳಂದು ಬಾಳಚಂ ।
ದನಕುಜದಂತೆ ಕೃಷ್ಣನೆಸೆದಿರ್ದುದನೊಯ್ಯನೆ ಕಂಡು ವೇ
ದನೆ ಪಿರಿದಾಯ್ತು ನಂದನ ಯಶೋದೆಯ ಗೋಪಿಯರಂತರಂಗದೊಳ್ ॥

ಭುವನೀಯಮನೋಹರಬಾ
ಲ್ಯವಿನೋದಾಮೃತದೊಳಿರ್ಪ್ದ ತೀವಿದ ಮತ್ತಾಪ್ಯಂ ।
ತವನಿಂತೀವಿಷದಿಂ † ತೀ
ವುವುದೇ ಶ್ರೀವತ್ಸವತ್ಸ ವತ್ಸ ಸವತ್ಸಾ ॥ ೯೩

ಪಿರಿದುಂ ಮದೀಯಜನ್ಮಾಂ
ತರಪುಣ್ಯದಿನೆಮಗೆ ನಿನ್ನ ದೊರೆಯ ತನೂಜಂ ।
ದೊರೆಕೊಂಡನೆಂಬ ಸುಖಸಾ
ಗರಮೆಂ ದುಃಖಾನಳಾರ್ಚಿ ಪೀರ್ದಪ್ಪುದಲ್ತೇ ॥ ೯೪

ಹರಿಯಿಲ್ಲದ ಪವನಾಧ್ವಂ
ಹರಿಯಿಲ್ಲದ ಲೋಕಪಾಲಪರಿಷದ್ವಲಯಂ ।
ಹರಿಯಿಲ್ಲದ ಕಾಂತಾರಂ
ಹರಿ ನೀನಿಲ್ಲದ ಮದೀಯಗೋಕುಲಮೆಫಲಂ ॥ ೯೫

ಎಂದು ನಂದಗೋಪನುಂ ಯಶೋದೆಯುಮಳವಿಗಿಡಿದಳಲನೊಳ ಕೊಂಡು ಚಂಡಾಹಿತುಂಡಖಂಡಿತಪುಂಡರೀಕಾಕ್ಷವದನವಿನ್ಯಸ್ತ ‡ ತರಳ ತಾರನೇತ್ರರುಂ ‡ ನಿಸ್ಸಂಜ್ಞತ್ರಿಸಂಜ್ಞಗಾತ್ರರುಮಾಗೆ, ತದನಂತರಂ,

* ಖ.—ಎನುತ್ತಿರ್ಪಂದು. † ಕ. ಖ. ಗ.—ನಾಶೀವಿಷದಿಂ

‡ ಕ, ಗ—ವಿನ್ಯಸ್ತ ನಿರಸ್ತತರಳತಾರಾನೇತ್ರರುಂ.

ರಮಣೀಯಸ್ಥಾನದೊಳ್ ನಿನ್ನೊಡನ ನಲಿದು ಸರ್ವೋತ್ತಮಸ್ಥಾನದೊಳ್ ಮಾ
ಣ್ದೆಮ ನೀನೆಲ್ಲಿರ್ಪೆ* ಯಿರ್ದಲ್ಲಿಯೆ ಸುಖಮುಮುಗ್ರಾಕಾಮಬಾಣಾಗ್ನಿಯಿಂ ಸ।
ರ್ವಮುಖಕ್ಷ್ವೇಡಾಗ್ನಿಯೇಂ ದುಸ್ಸಹಮೆ ಸುಭಗ ನಿನ್ನಲ್ಲಿಗೀಬರ್ಪೆವೆಂದ
ಕ್ರಮದಿಂ ಗೋಪೀಜನಂ ಕರ್ಮಡುವ್ರಗೆ ಪುಗವೇಡೆಂದು ಸಂತೈಸಿ ರಾಮಂ ॥ ೯೬

ಜನಕಂ ರಕ್ಷಕನಂತಕ
ನನಾದಿಮಧ್ಯಾಂತ ನಿನಗಪಾಸನಜಂಗಂ ।
ಜನಕಂ ರಕ್ಷಕನಂತಕ
ನೆನಿಸಿದೆ ಕೇಳ್ ಪೊಗಳ್ವರಳವೆ ನಿನ್ನ ಮಹತ್ತ್ವಂ ॥ ೯೭

ಪರನಪರಂ ಭವನಭವಂ
ಚರನಚರಂ ಸಗುಣನಗುಣನೇಕನನೇಕಂ ।
ಹ್ಞರನಕ್ಷರನಿಪಗಣಿತ
ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೋ ॥ ೯೮

ನೆನೆ ನಿನ್ನ ಮಹಿಮೆಯುಂ ನೀ
ನೆನಿತನಿದಂ ಕೊಂಡುಕೊನೆವೆ ನೀರ್ವಾವನಿದ ।
ಕಿನಿತೇಕೆ ಮಾನುಷತ್ವಮ
ನೆನಸುಂ ನಟಿಯಿಸುವೆ ಕೃಷ್ಣ ಪೂಜನಮಡು ಮಡುಪಿಂ ॥ ೯೯

ವ॥ ಎನಲೊಡಂ,

ತಿಳಿಯೆ ವಿನೋದನಿದ್ರೆ ಹರಿ ಮೆಲ್ಲನೆ ಮಯ್ಮುರಿವಂತೆ ಗೆಯ್ಯೆ ತ
ನ್ನಳವಟಿದೆದ್ದು ಸುತ್ತಿದ ಪಾವಿನ ಪೆರ್ಮಡೆಯುಂ ಪದಾಂಬುಜಂ ।
ಗಳ ಕೆಳಗಿಕ್ಕಿ ಮೆಟ್ಟಿ ಕರದಿಂದೆ ತದೀಯಶರೀರಕಾಂಡಮುಂ
ಜಳರುಹಕಾಂಡಮಂ ಪಿಡಿವವೋಲ್ ಪಿಡಿದಾಡಿದನಂದು ಲೀಲೆಯಿಂ ॥೧೦೦

* ಕ. ಖ ಗ.— ನೀನೆಲ್ಲಿರ್ದೆ

ಕಾಳಿಯನಂ ಮರ್ದಿಪ ವನ
ಮಾಳಿಗೆ ಸುಗಿದಿಂಗಳುಗುೞುತಿರ್ದನೊ ರಾಹು !
ವ್ಯಾಳಂ ಮುನ್ನುಂಡಮರ್ದಂ
ಪೆಂಟೆನಿಸಿದುದರಲ ಸುರಿವ ಬಲ್ಸರಿ ಸುರರಾ ॥ ೧೦೧

ವ॥ ಆಪ್ರಸ್ತಾವದೊಳ್,

ಮಿಱುವ ಸುಯ್ಯೆಲರ್ ಕೊಱಗಿ ತೋಱುವ ವಕ್ತ್ರಪಯೋಜವಶ್ರುವಂ
ಪೇಱುವ ಕಣ್ಮಲರ್ ಪೊಳ್ದು ಪಾಱುವ ಮೋಱುದು ಮಂಜುಸ್ವಾಪ್ನಮಂ ।
ಬೀಱುವ ಸಿಂಜಿನೀವಳಯಕಾಂಚಿಗಳಂಬಿವೞಿಂದದೊಂದು ಚೆ
ಲ್ವೇಱಿರೆ ಭೋಗಿಭಾಮಿನಿಯರಾಮಡುವಿಂ ಪೊಱಮಟ್ಟರಚ್ಚಿಯಿಂ॥೧೦೨

ಬಂದಚ್ಯುತನಭಿಮುಖದೊಳ್
ನಿಂದು ಕೃತಾಂಜಲಿಗಳಾಗಿ ಕಾಳಿಯಸತಿಯರ್ ।
ಸಂದ ಪತಿಭಕ್ತಿಗುಣದಿಂ
ದಂಮುದಯಿಸಿದವಮಲಬೋಧದಿಂದಿಂತೆಂದರ್ ॥ ೧೦೩

ಅನಿಮೇಷರಕ್ಷಣಾರ್ಥಂ
ನಿನಗೆ ತನುಗ್ರಹಣಮಾದುದದಱಿಂದಿನ್ನಾ* ।
ಮುನಿಸಂತತಿಗಮಚಿಂತ್ಯವ
ದೆನಿಪ ಪರಂಜ್ಯೋತಿ ನೀಂ ಕುಶೇಶಯನಯನಾ ॥ ೧೦೪

ಉದಯಸ್ಥಿತಿಸಂಹಾರ
ಪ್ರದಂ ಜಗಕ್ಕೆನಿಪ ಕಮಲಭವಹರಿಹರನಾ ।
ಮದ ಪುರುಷಾಕಾರತ್ರಯ†
ಮದು ನಿನ್ನ ವಿಡಂಬಮಲ್ತೆ ಪರಮಜ್ಯೋತೀ ॥ ೧೦೫

ಕ್ಷಮರಾರಿತರರ್ ನಿಜಪದ
ಮುಮನಱಿಯಲ್ ಪದ್ಮಭವನ ಮತಿಗಂ ಹರಿ ನಿ ।

---

* ಕ. ಖ. ಗ.—ಅದಱಿಂದಂನೀಂ. †ಕ. ಖ.—ಪುರುಷಕಾರಣತ್ರಯ

ನ್ನ ಮಹತ್ತ್ವಂ ಪ್ರಥಿತಮಗಾ
ಧಮಗಾಧಮುಮುನ್ನತೋನ್ನತೋನ್ನತಮಲ್ತೇ ॥ ೧೦೬

ವಿವಿಧಬ್ರಹ್ಮಾಂಡಂ [ಮಾ
ಧವ ನಿನ್ನವಕಾಶಮುದಱ]* ಸೂಕ್ಷ್ಮತರಾಂಶಾಂ ।
ಶವೆನಲ್ ನಿಜಸ್ವರೂಪದ
ಪವಣುಮನಾರ ಬಲ್ಲರೆಂತದಂ ಬಣ್ಣಿಸುವರ್ ॥ ೧೦೭

ನಾಕಿಗಳಿಂಪ್ರಾಪ್ಯರ್ ಪರ
ಮಾಕ್ಸ್ಕತಿ ದುರ್ಲಕ್ಷ್ಯವೆಂದೆನಲ್ ನಿನ್ನವತಾ ।
ರಾಕೃತಿಯುನರ್ಱಿಪರ್ ಮಹಿ
ಮಾಕರ ಪರಮಾರ್ಥವಾರ್ಗೆ ಲಕ್ಷ್ಯಂ ನಿನ್ನಾ ॥ ೧೦೮

ಯೋಗಾಕ್ಷಿಯಿಂದೆ ಕಂಡು ಮ
ನೋಗೃಹದೊಳ್ ನಿಲಿಸಿ ಭಾವಕುಸುಮೋತ್ಕರದಿಂ ।
ಯೋಗಿಗಳರ್ಚಿಪ ನಿನ್ನನ
ದೇಗಾಪ್ಪೆಬಲೆಯುರಾವದೆಂ† ತರ್ಚಿಪೆನ್ರೋ ॥ ೧೦೯

ಬಿತ್ತರಿಸಲರ್ಚಿಸಲ್ ಮುನಿ
ಪೋತ್ತಮರುಂ ಬಲ್ಲರೇ ಕ್ರಿಯಾಮಾತ್ರಮನೋ ।
ವೃತ್ತಿಗಳಿನೆಂತು‡ ನಿನ್ನಂ
ಬಿತ್ತರಿಸುವೆನೆಂತು ನಿನ್ನನರ್ಚಿಪೆನೀಶಾ ॥ ೧೧೦

ಜಗದಾಧಾರಕನೈ ನೀ
ನಗಧರ ನಿನ್ನಂಘ್ರಿಭಾರಮಂ ಕ್ಷೀಣಬಲೋ ।
ರಗನೆಂತು ಸೈರಿಪಂ ಕಂ
ರಗತಾಸು ಗತಾಸುವಕ್ಕುಮೇಕಕ್ಷಣದಿಂ ॥ ೧೧೧

---

*[ಭೂಪವನಾಗ್ನಿಜಲಾಪ್ಸ್ವರಪುವು]
† ಕ. ಖ. ಗ.—ದೇಗಾವ್ಪಬಲೆಯರೆನಾವದೆಂ. ‡ ಕ.ಖ. ಗ.—ನೆಂದು.

ರಿಕ್ಕಟೆದ ಶಕ್ತಿಯುಂ ಮುಂ *
ದಿಕ್ಕಿಯುಮಾತ್ಮಾಂತರಂಗದೊಳ್ ಮುಳಿಸಂ ಪಿಂ ।
ದಿಕ್ಕಿಯುಮೀಫಣಿಯುಂ ಕೊಂ
ದಿಕ್ಕದಿರಿಕ್ಕೆನಗೆ ಪುರುಷಭಿಕ್ಷಾದಾನರಸಾ ॥ ೧೧೨

ಸೃಷ್ಟಿಸಮಯದೊಳದರ್ಕಿದು
ಚೇಷ್ಟಿತಮೆಂದಖಿಳಜಾತಿಯೊಳ್ ಕಲ್ಪಿಸೆ ನೀಂ ।
ದುಷ್ಟತೆ ನಿಸರ್ಗಮಾಯ್ತೆನ
ದುಷ್ಟವಿಷೋರಗತೆ ನಿನ್ನ ಮಾಡಿದ ಮಾಟಂ ॥ ೧೧೩

ಅಪರಾಧಮಿಲ್ಲ ಪರಿಭಾ
ವಿಪೊಡೀತೆಱದಿಂದಮೆಮ್ಮ ಳದುಕಾರಣದಿಂ ।
ಕೃಪೆಗೆಯ್ವುದೆಮಗೆ ನೀಂ ರ
ಕ್ಷಿಪುದೀಕಾಳಿಯಫಣೀಂದ್ರನಂ ಫಣಿಶಯನಾ ॥ ೧೧೪

ವ॥ ಎಂದು ದಂದಶೂಕವನಿತಾಜನಮಭಿಷ್ಟುತಿಗೆಯ್ದು ಬಿನ್ನವಿಸೆ ಸಂತುಷ್ಟನಾಗಿ ಕಾಳಿಯ † ವ್ಯಾಳಕುಳಾಂಗನಾಜನದ ದೈನ್ಯವಚನಪರಂಪರೆಗೇಳ್ದು ಕರುಣಿಂಗೆಯ್ದು ಕಾಳಿಯನಂ ನೋಡಿ ನೀನಿಲ್ಲಿರಲ್ವೇಡ ಅಪತ್ಯಭೃತ್ಯಬಾಂಧವಾಂತಃಪುರಪುರಸ್ಸರಮುರಗೇಶ್ವರ ಸಮುದ್ರಮಂ ಪೋಗಿ ಪುಗು ನಿನ್ನ ಪಡೆದುಱುಗಲೊಳೆನ್ನ ಪದಪದ್ಧತಿಗಳರ್ದಪುವು. ಇವಂ ಕಂಡೊಡೆ ಪನ್ನಗವಿರೋಧಿಯುಂ ಕಾದು ಕಱಿಪುಗುಂ ಪೋಗೆಂದು ಪೇೞಿಕಳಿಪೆ ಕಾಳಿಯವ್ಯಾಳನುಂ ತನ್ಮಹಾಹ್ರದಮಂ ಕ್ರೀಡಾಹ್ರದಮೆಂದೆಂಬಿನಮಬಲಾಬಾಲಗೋಪಾಲಸುಲಭಮಪ್ಪಂತು ಮಾಡಿ ತದಾಶ್ರಯಕ್ಕೆಬರ್ಪನ್ನೆಗಮಿತ್ತ,

ಜಗಮೆಲ್ಲಂ ಪೊಗೞ್ವಂತು ಕಾಳಿಯಮಹಾಸರ್ಪಾಂಕನಂ ಕಾದು ಮಾ ‡
ತೆಗೆ ನಂದಂಗೆ ಬಲಂಗೆ ಗೋಪವಧುಗಳ್ಗಾನಂದಮಂ ಮಾಡಿ ದೇ

* ಕ.ಖ.ಗ.—ಅಕ್ಕಟಮುದುಕ್ತಿಯುಂಪಿಂ. † ಕ.ಖ.ಗ.—ತದೀಯ.
‡ —ಕಾದೆಶೋದೆಗೆ.

ವೆಗಣಿಂ ಕೀರ್ತಿಸೆ ತನ್ಮಹಾಹ್ರದದಿನೆತ್ತಂದೆತ್ತಲಾಶೀರವಂ
ಮಿಗೆ ಪೊಕ್ಕಂ ವ್ರಜಮಂ ಸವತ್ಸನಿವಹಂ ವಿಕ್ರಾಂತಚಕ್ರಾಯುಧಂ ॥೧೧೫

ಇದು ಸಮಸ್ತ ಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಳಾಮ್ನಾಯತಂತ್ರಲಕ್ಷ್ಮೀಕಾಂತಶ್ರೀ
ಪಾದಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತ ಶ್ರೀಜಗನ್ನಾಥ
ವಿಜಯಮಹಾಪ್ರಬಂಧದೊಳ್ ಬಾಲಲೀಲಾವಿನೋದ
ಪೂತನಾವಧಶಕಟಾಸುರಭಂಜನಯಮಳಾರ್ಜು
ನೋನ್ಮೂಲನವತ್ಸಗೋಪಾಲ ವಿನೋದ
ಕಾಳಿಂಗಸರ್ಪದರ್ಪದಳನಂ
ತೃತೀಯಾಶ್ವಾಸಂ.

---

## ಚತುರ್ಥಾಶ್ವಾಸಂ.

ಶ್ರೀವತ್ಸಾಂಕಂ ಸುಭಗಂ
ಶ್ರೀವತ್ಸಾಂಕೇಷುದಳಿತಗೋಪೀಹೃದಯಂ ।
ಗೋವರ್ಧನಪಟು ನಲಿದಂ
ಗೋವರ್ಧನಗಿರಿಯೊಳೆಸೆವ ವೃಂದಾವನದೊಳ್ ॥ ೧

ವರುಣವಧೂವರಶ್ವಸಿತಗಂಧವಹಂ ಮಕರೇಶಚಾರುಚಾ
ಮರಮರುತಂ ಜಳೇಶಮಕರೋದ್ಗತಪುಚ್ಛಸಮೀರನಂಜನ ।
ದ್ವಿರದನಕರ್ಣತಾಳಪವಮಾನನಿದೆಂದು ವಿತರ್ಕಿಪನ್ನಮ
ಸ್ಫುರಿತದವಾನಳಂ ಸುಟಿದುದೊಯ್ಯನೆ ಪಶ್ಚಿಮದಿಗ್ಭವಾನಿಳಂ ॥ ೨

ಪಡುವಣೆಲರಿರ್ಪು ಪಡೆಯಿಸ
ಲಡವಿಯೊಳೊತ್ತಂಬ † ದಿಂದಮುದ್ದಂ ಬರ್ಪಾ ।
ಸಡಿಯಿಂ ಮುನ್ನಂ ಬಂದಾ
ಸಡಿಯೊಳ್ ನಳನಳಿಸುವೆಳದಳಿರ್ಗಳ್ ರಯ್ಯಂ ॥ ೩

ಮುಗಿಲಿದಿರೇಱಿ ಕಾದಲಲರೇಱಿ ಪೊಲಂ ಪಸುರೇಱಿ ಕಾಡ ಮ
ಲ್ಲಿಗೆ ನನೆಯೇಱಿ ಮೊಲ್ಲೆ ನಯವೇಱಿ ಬಿಸಿಲ್ ಕಡುದಣ್ಣಸೇಱಿ ಕೇ ।
ದಗೆ ಸೂಜಿಯೇಱಿ ಪಂಸೆ ಭಯವೇಱಿ ನವಿಲ್ ನಲವೇಱಿ ಕಾಮಬಾ
ಣಗೆ ಜಯವೇಱಿ ಪತ್ತು ವಿರಹಿಪ್ರಕರಕ್ಕಳಲೇಱುತಿರ್ಪಿನಂ ॥ ೪

ಎಱಗದೆ ತನ್ನೊಳ್ ಮಧುಕರ
ನಱಗಿರೆ ಕೇದಗೆಯೊಳಱಲುದ್ದ ಕಣ್ಬಸಿವಡೆಯಂ ।
ಕಱಿವಂತಿರೆ ಕಱಿವೂಗಳಿ
ನುಱಿ ಬೀತುವು ಸುರಗಿ ಹೊನ್ನೆ ಮಲ್ಲಿಗೆ ವನದೊಳ್ ॥ ೫

---

* ಕ—ರಿಂಪು. † ಖ—ಳಂಬಣ್ಣ.

ಮೊದಲಿಡೆ ಕಾರ್ಮುಕಂ ಗಿಳಿಯೆಱಂಕೆಯ ಬಣ್ಣದ ಪುಲ್ಗೊನರ್ ಪೊದ
ಱ್ದುದು ಪೊಲದೊಳ್ ವಿರಾಜಿಸುವ ಮಾಣಿಕವಣ್ಣದ ಕೋರಕಂಗಳಿಂ ।
ಪುದಿದೆಸೆದತ್ತು ಸಾಳತರು ಮುತ್ತಿನ ಬಣ್ಣದ ಕುಟ್ಮಳೌಘವಾ
ದುದು ಕುಟಜಂಗಳೊಳ್ ಪವಳವಣ್ಣದ ಪೂಗಳನಾಂತುದರ್ಜುನಂ ॥ ೬

ಚಾದಗೆ ನಾಟಕಂನಲಿದುವದ್ರಿಕುಜಂಗಳ ಕೋಟರಂಗಳೊಳ್
ಪೋದಗೆ ತತ್ತಿಯಿಕ್ಕಿದುದು ಮಾನಸಪದ್ಮವನಕ್ಕೆ ಪೋಪ ಚಿ ।
ತ್ತೋದವುವಂಚೆಗಾಯ್ತು ಮಱಿಗೋಗಿಲೆಗಳ್ ಗಱಿವೊಯ್ದು ನಾಕುಳಂ
ಪೋದುವು ಪಾಱೆ ವಾಯಸದ ಗೂಡುಗಳಿಂ ನವಮೇಘಕಾಲದೊಳ್ ॥ ೭

ಹರಿಗೋಪಾಲಿಸಪಕ್ಕ ತೂರ್ಯಪಟುಸ್ವಾಪಂ ಕೇಕಿನಾಟ್ಯಕ್ಕೆ ಬಂ
ಧುರಢಕ್ಕಾಸಿನದಂ ವಿಯೋಗಿನಿಸಹಕ್ಕಂಗೋದ್ಭವಜ್ಯಾಲತೋ ।
ದ್ದುರನಾದಂ ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೆನೆ ನವ್ಯಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ ॥ ೮

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತಮ್ಮ ಮನಂ ಕಲಂಕಿ ಕ
ಟ್ಗಿರೆ ಮಱಿದುಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಸಂ।
ಕರುಹದ ಭಂಗಿಯುಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ ಪರಿಗೊಂಡುದು ಕೂಡೆ ಮರಾಳಮಂಡಲಂ ॥ ೯

ಅಱಿದಿನಿಸಂ ಬಟ್ಟೆದೆ ತಾ
ಪ್ಸೆಱೆ † ಗೊಂಡಿರಲೆಂದು ಬಿಲ್ಲಪಳ್ಳಿಗಳೆಲ್ಲಂ ।
ತೊಱೆದುವು ತೊಱೆದಡಿಗಳನಾರ್
ತೊಱೆಯುದರನುಕೂಲವೃತ್ತಿಗೆಟ್ಟೆಸಗುವರಂ ॥ ೧೦

ದಿನನಾಥಂ ನವವರ್ಷಾ
ವನಿತೆಯ ಪೀವರಪಯೋಧರಸ್ಪರ್ಶನದಿಂ ।

* ಖ, ಗ—ಪರಿಗೊಂಡುದು. | † ಕ ಗ—ಅರಿದಪಿಸಂ ಬೆಟ್ಟದ ತಾಪ್ಸೆಱೆ. ಮೊ, ಅ.—ಅರಿದಿನಿಸು ಬೆಟ್ಟದ ತಾಪ್ಸಿಱಿ

ವಿನತಾಂಶಕನಾದನೆನಲ್
ವನಿತೆಯ ಮೊಲೆಮುಟ್ಟೆ * ಶೌಚಿಯಾವಂ ಜಗದೊಳ್ ॥ ೧೧

ಮಾಕಂದಂ ಬೀತಿರೆ ಜಂ
ಬೂಕಜಫಳದಿಂ ಶುಕಾಳಿ ಸುಖಿಯಾಯ್ತು ಪಿಕಂ ।
ಮೂಕತೆವೆತ್ತಿರ್ದುದುಮು
ತ್ತೇ† ಕಗ್ರಾಹಿಗೆ ಸುಖೋದಯಂ ಸಮನಿಪುದೇ ॥ ೧೨

ವಿದಳಿಸೆ ಘನದಂತಿ ಬಿಸಿ
ಲ್ಗುದುರೆಗಳಂ ಪನಿತು ಪೆತ್ತನೆತ್ತರ ಪನಿಯಂ ।
ದದಿನಲ್ಲಲ್ಲಿಗೆ ಕಣ್ಗೊಳಿ
ಸಿದತ್ತು ಕಾರ್ಮುಕದೊಳಿಂದ್ರಗೋಪಕಳಾಪಂ ॥ ೧೩

ವಿಳಸಲ್ಲೋಲಪ್ರವಾಳಪ್ರತತಿ ಘನಪರಾಂಭೋಧಿವೀಚೀಚಯಂಕೆಂ
ದಳರಂ ತದ್ವಾರ್ಧಿವೇಳಾವನಸಮಿತಿ ದವಜ್ವಾಳೆಯಂ ನೀಲಶೈಲಾ ।
ವಳಿ ಕೈಕೊಂಡಭ್ರಮಂ ತಳ್ತಡರ್ದವೊಲಡದು ತ್ತೆತ್ತಲುಂ ಬಳ್ಳಿವಿಂಚಂ
ತಳದಾಶಾಮಂಡಲಂ ಕಟ್ಟನೆ ಕುನಿಯೆ ‡ ಜಳಸ್ಫೀತಜೀಮೂತಜಾತಂ ॥

ಜಳಮಂ ವಾರಾಶಿಯೊಳ್ಮೀನ್ಬೆರಸು ಮೊಗೆತರಲ್ ಮೇಘಮಾಲಾಳಿಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳನಲವಿಭಿನ್ನಾಂಜನಚ್ಛಾಯೆಯಿಂ ಗೊಂ।
ದಳಿಸಿದಂಭೋದದೊಳ್ ತಾಂ ಬಳಸಿ ಪೊಳೆವ ವಿದ್ಯುಲ್ಲತಾಜಾಳಮಾಗಳ್
ತಳೆದತ್ತಾಶ್ಚರ್ಯಮಂ ಕಟ್ತಲೆ ಬಿಡೆ ಬಿಸಿಲಂ ಕಾಯುತಿರ್ಪಂದದಿಂದಂ ॥

ಗಗನಶ್ರೀಯ ವಿಚಿತ್ರವಸ್ತ್ರವಿಳಸತ್ಸಂವ್ಯಾನಮೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನದಗ್ಗವಣೆ ¶ ಯೆಂಬಂತಬ್ಜಗರ್ಭಾಂಡಭೂ ।
ರಿಗೃಹದ್ವಾರದುದಾರತೋರಣಮಿದೆಂಬಂತಭ್ರದೊಳ್ ನೋಡೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಶಬಳಿತಂ ಗೀರ್ವಾಣಬಾಣಾಸನಂ ॥ ೧೬

---

* ಖ. ಗ—ಮುಟ್ಟೆ. † ಕ. ಗ—ಮೂಕತೆವೆತ್ತಿರ್ದುದಱಿಂದೇ.
‡ ಕ.ಗ—ಕನಿಯೆ. ಖ.—ಕವಿಯೆ. ¶ ಮೊ. ಅ.—ದಂಕವಣೆ.

ಮನದನುರಾಗದಿಂ ನೆಗೆದು ನೀಡಿದ ಕಂಠಮೆರಲ್ದು ತುಪ್ಪುೞು
ರ್ಬನಿಮಿಷಮಾದ ಕಣ್ ತೆಱೆದ ಚಂಚು ವಿಜೃಂಭಿಪೆಱಂಕೆ ರಂಜಿಸಿ ।
ತ್ತೆನೆ ನಲವೇಱೆ ತೋರವನಿ ತಣ್ಬನಿ ಮುಂಬನಿಯೆಂಬ ಕಾರ್ಮುಗಿ
ಲ್ವನಿಯುನಲಂಪಿನಿಂದಮಿದಿರ್ಗೊಂಡು ಕರ್ದುಂಕಿದುದುದ್ಘಚಾತಕಂ ॥

ಪಳುಕಿನ ಬಟ್ಟುಗಳ್ ಗಗನದಿಂದುದಿರ್ದಪ್ಪುವು ಚಿತ್ರಮೆಂಬಿನಂ
ಘಳಘಳನಭ್ರದಿಂದಮಿಡುಕುಂಬನಿ ಸೂಸೆ ಬಱಿಕ್ಕೆ ವೃಷ್ಟಿಕ ।
ಣ್ಗೊಳಿಸಿದುದಂದು ತೀವ್ರಪವನಾಹತಿಯಿಂ ತಟದಂಶುವೆಂಬ ಕೆಂ
ದಳಿರ್ಗಳನಾಂತ ಮೇಘಲತೆಯಿಂದಲರಲ್ಲುಗುತಿರ್ದುವೆಂಬಿನಂ ॥ ೧೮

ನಿಳಯದ ಸೂರ್ಗಳೊಳ್ ತಱಿಸಿ ಮುತ್ತಿನ ಸೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ ।
ವಳಿಯ ಕುರುಳ್ಗಳೊಳ್ ತಳೆದ ಸೇಸೆಗಳಂತೆಳವುಲ್ಗಳೊಳ್ ಘನೋ
ಪಳಕುಳದಂತೆ ತೋಱುವುವು ನವ್ಯಘನಚ್ಯುತತೋಯಬಿಂದುಗಳ್ ॥ ೧೯

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ
ಹರಿತಚ್ಛಾಯೆಯಿನಲ್ಲಿಗಲ್ಲಿಗೆಸೆಗುಂ ಮಾಣಿಕ್ಯದಿಂ ಮುತ್ತಿನಿಂ ।
ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮಂ
ಧರಣೀವಲ್ಲಭೆಗಂಬುದಾಗಮವಿಟಂ ತಂದಿಕ್ಕಿದೊಂದಂದದಿಂ ॥ ೨೦

ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುಮೊಯ್ದಿಂದ್ರಕೋದಂಡಮಂ ಕೊಂ
ಡು ನಿಜಾಗ್ರಸ್ಕಂಧದೊಳ್ ಕೇದಗೆಯೆಸೆವೆರಲೆಂದೆಂಬ ಕೂರಂಬು ತೀವಿ ।
ರ್ದ ನಿಷಂಗಂ ಕಣ್ಗೊಳಲ್ಮೊಲ್ಲೆಯ ನನಗಣೆಯುಂ ತೂಗುತುಂ ಕಂತು ವೀಬಂ
ದನೆನುತ್ತುಂ ಗರ್ಜಿಪಂತಾದುದು ವಿರಹಿಗಳಂ ಕೇಕಿಭೇಕಪ್ರಣಾದಂ ॥ ೨೧

ತವೆ ಮುಂ ತಿಂದು ನಿದಾಘಸಲ್ಲಕಿಯನಾದಿತ್ಯೇಂದುಬಿಂಬಂಗಳಂ
ಕವಳಂಗೊಂಡು ಸಿಡಿಲ್ಗಳೆಂಬ † ಕಿಸುಗಣ್ಬೀಡುಂ ಮರುಚ್ಛಾಪಮಂ ।

* ಘ—ಸವಿಗೊಂಡು.   † ಕ—ಬಿಸಿಲ್ಗಳೆಂಬ

ಬವಿಚಿತ್ರಾಂಬರದೊಂದು ಚೆನ್ನಮಿಳಿಯಂ ಪಿಂಚೆಂಬ ಕೊಂಬುಂಕರಾ
ಳವೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ ॥ ೭೨

ಮರಕತತರುಚಿಯೊಳ್ ದೂರ್ವಾಂ
ಕುರಮಂ ನಿಶ್ಚಯಿಸದಿರ್ದ ಮೃಗಶಿಶುಗೆ ನಗಾಂ ।
ತರದಲ್ಲಿ ಹರಿಣನಿತ್ತುದು
ಕರುಣಿಸಿ ನಿಜಸೃಕ್ವದೂರ್ವೆಯಂ ಕಾರ್ಮುಕದೊಳ್ ॥ ೭೩

ಕರಿಕಳಭಂಗಳ್ ಬಿಸವ
ಲ್ಲರಿಗೆತ್ತೞಗುತ್ತುಮಿರ್ಪ ಧಾರಾಧರಪು ।
ಷ್ಕರಧಾರೆಗಳಂ ಕರಪು
ಷ್ಕರದಿಂ ಬರೆ ತೆಗೆದುವೆಂದರಣ್ಯಾಂತರದೊಳ್ ॥ ೭೪

ದರಿಗೊಂಡೀಡಿಱಿದಾಡುತುಂ ಕೊಣಕುತುಂ ಬಾರುತ್ತುಮೊಳ್ಗಡೊಳಾ
ದರದಿಂ ಮೇದೆಳವುಲ್ಗಳಂ ತೊರೆದು ಪಾಲ್ಗಳ್ ಕೆಚ್ಚಲಿಂದೆಚ್ಚು ಪಾ ।
ಯ್ತರೆ ಪಟ್ಟಿರ್ದುವೆಲ್ಲ ಕರ್ಣಮರೆಮುಚ್ಚಿದಕ್ಷಿಗಳ್ ಪೊಯ್ವ ಸುಯ್
ನೊರೆವಿಂಡುಣ್ಮುವ ಸೃಕ್ವಮಂದೆಸೆಯೆ ಮಲ್ಕೊತ್ತುತ್ತೆ ಕಾಡೆಮ್ಮೆಗಳ್ ॥

ಅವಿಶಾಲಾಂಬರಮಪ್ರಸನ್ನದಿವಮಸ್ಪಷ್ಟಾಧ್ವಮಸ್ವಚ್ಛತೋ
ಯಮನುದ್ಯೋಗಜನೌಘಮಸ್ತದವಮಸ್ಮೇರಾಬ್ಜಮಶ್ಲಕ್ಷ್ಣಕೈ ।
ರವಮಕ್ರೀಡಿತಹಂಸಮಸ್ಫುರಿತಚಂದ್ರಾದಿತ್ಯಮಶ್ಲಿಷ್ಟಕೋ
ಕಮಯೂನಾಧ್ವಗಮಸ್ವರಾನ್ಯಭೃತಮೆಂದೊಪ್ಪಿರ್ದುದಭ್ರಾಗಮಂ ॥ ೭೬

ನವನೀಳಾಂಭೋದಮಂಭೋದದಿನೆಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ತೊಯ್ವ ಜಂಝಾನಿಳನನಿಳಸಿನಾಮೋದಮಂ ಪೇಱ ಪೂಮೇ।
ಱುವ ಕುಂದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲಮಂಭೋದಕಾಲಂ ॥

ತಳರ್ದಾತ್ಮಾಲಯದಿಂದಿರುಳ್ ಸುೞಿವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯುನ್ನಯನಾವಲೋಕದೊಳ್ ಕಂಡನ್ಯಾಯಮಾಯ್ತಾವಿಯ ।

ತ್ತಳಚೂಡಾಮಣಿಚಂದ್ರನಂ ಕಱಿದೆನೋ ವರ್ಷಾಂಬುವಿಂ ಕೂಡೆ ಭೂ
ವಳಯಕ್ಕೆಂಬಿನವಂತದೇಂ ಮೊಱಗಿತೋ ಮೇಘಂ ನಿಶೀಥಂಗಳೊಳ್ ॥

ಚಪಳಾಪಾಂಗಾಂಶು ವಿದ್ಯುಲ್ಲತೆಯನಡರೆ ಚಂದ್ರಾತಪಂ ನೀಳ್ದ ಬಾಳಾ
ತಪಮಂ ತಳ್ತಂದಮಾಗಲ್ ಸುಱದುದು ಪದಚಂಚನ್ನ ಖದ್ಯೋತಸುವ್ಯ ।
ಕ್ತಪದಂ ಮಾಣಾರ್ಳಜಾಳಂ ಬಳಸಿದ ಜಳದೇವೀಸಮೂಹಂಬೊಲಂಭೋ
ದಪಯೋಧಾರಾಳಿ ತಳ್ಪ್ರಯ್ವಿನಮೆಸೆದಿರುಳ್ಗೊಳ್ ಜಾರನಾರೀಕದಂಬಂ ॥

ಬದವಿದ ಕೇಗು ನೀಳ್ದ ಕೊರಲೆತ್ತಿದ ಪಕ್ಷವೊಪಲ್ಚುತಿರ್ಪಿನಂ
ಮದನನ ಪಂಚರತ್ನಮಯಖೇಟಕವಂತಿರೆ ಬಿರ್ಚೆ ಬರ್ಹಮಂ ।
ಪದೆದು ನವಿಲ್ಗಳಾಡೆ ಚಪಲಾಕ್ಷಿಘನಾಗಮಲಕ್ಷ್ಮಿಗಂದು * ಹ
ರ್ಷದಿನುಗುತಿರ್ಪ † ಕಣ್ಬಸಿಯಸೋನೆವೊಲಾದುವು ಭೂರಿವೃಷ್ಟಿಗಳ್ ॥

ಪರಿವ ಮುಗಿಲ್ ಪಳಂಚೆ ಖಚರೀನಿಚಯಸ್ತನತಾರಹಾರವ
ಲ್ಲರಿ ಪಱಿಯಲ್ ಪೊದಳ್ದು ಬಿಡುಮುತ್ತು ಘನೋಪಳದೊಂದುರೂಪದಿಂ ।
ಸುರಿಯಲನಂತರಂ ಬಱಿಯದಾರವೆಟಿಲ್ದಪುದೆಂಬ ಚೆಲ್ವನಾ
ವರಿಸಿದುವೆಂದು ಸಂದಣಿಸಿ ನೀಳ್ದ ಪಯೋಧರವಾರಿಧಾರೆಗಳ್ ॥ ೩೧

ಬಲ್ಸರಿ ಪಿಱುಸರಿ ಪೆರ್ಮೞೆ
ಮೆಲ್ಸರಿ ತುಂತುರ್ ತುಷಾರವಿಡುಕುಂಬನಿ ತಂ ।
ದಲ್ಸೋನೆ ನಟ್ಟಬಡಪಮೆ
ನಲ್ಸರಿದುವು ಬಿಡದೆ ಮೞೆಗಳಿರುಳುಂ ಪಗಲುಂ ॥ ೩೨

ಕೆಱೆ ಕಾಲ್ಪುರದಿಂ ತೀವಿರೆ
ಕೆಱೆಗಳ ಕಡೆಗೋಡಿ ಪಳ್ಳಮಂ ಪಳ್ಳಂಗಳ್ ।
ತೊಱೆಯಂ ತಾಂ ತೊಱೆಗಳ್ ಬಾಂ
ದೊಱೆಗೆಱೆಯೆನಲುರ್ಬೆ ಪೊಕ್ಕರಳ್ಕಱೆ ಪಥಿಕರ್ ॥ ೩೩

* ಕ, ಖ, ಗ—ಕಂಡು    † ಕ, ಖ—ರ್ಷದಿನಗುತಿರ್ಪ

ಸಂದಣಿಸಿರ್ದ ಕೇದಗೆಗಳೊಳ್ಗಱಿಯೊಳ್ ಗಱಿಸೋಂಕಿ ಕುಂದದೊಳ್
ಕುಂದದ ಲೀಲೆಯಿಂ ಸುೞಿದು ಕಂದಳದೊಳ್ * ದಳಮಂ ಕಲಂಕಿ ಕೈ ।
ವಂದ ಕದಂಬಪುಷ್ಪದ ಪರಂಪರೆಯೊಳ್ ಪರಿದಾಡಿ ತಣ್ಪುಕಂ
ಪೊಂದಿರೆ ಬಂದು ತೀಡಿದುದು ಮಾರುತನಾತ್ತಕಳಾಪಿನೀರುತಂ ॥ ೩೪

ವಿದಳಿತವಾದ ಕಂಟಕಕದಂಬದಿನುರ್ಬಿದ ವಾಹಿನೀಸಮೂ
ಹದಿನಭಿವೃದ್ಧಿವೆತ್ತ ಭುವನಾಶ್ರಯದಿಂ ಬಗೆಗೊಳ್ವ ಕುಂದದ ।
ಭ್ಯುದಯದಿನೇಱ್ಗೆಗೆಟ್ಟಳಱಿ ಪೋದ ಮಹೋದ್ಧತರಾಜಹಂಸತೇ
ಜದಿನೆಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ ॥ ೩೫

ಸುಮನೋಗೋಪಸಮಾವೃತಂ ಜಲಧರಶ್ಯಾಮಂ ಕದಂಬದ್ರುಮೋ
ದ್ಗಮಮಾಳಾಸುಭಗಂ ಮಯೂರನವಬರ್ಹಾಳಂಕೃತಂ ಕುಂದಹಾ ।
ಸಮನೋಜ್ಞಂ ಭುವನಾತ್ಮಕಂ ವಿಜಿತಚಂದ್ರಾದಿತ್ಯತೇಜಂ ಘನಾ
ಗಮದೊಳ್ ಶೌರಿ ಘನಾಗಮಂಬೊಲೆಸೆದಂ ಗೋಪಾಲಲೀಲಾಸ್ಪದಂ ॥ ೩೬

ತೊಲಗದ ಮೋಡವೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಲವಳಱಿತ್ತು ಮಿಂಚುವೆಳಗುಂ ಬರಮಾಯ್ತು † ಶಿಖಂಡಿ ತಾಂಡವ ।
ಕ್ಕಲಸಿದುದೆಯ್ದೆ ಕುಂದಲತೆ ಕುಂದಲೊಡರ್ಚಿದುದಂಚೆ ಚಂಚುವಿಂ
ನಲಿದು ಮೃಣಾಳಮಂ ಸವಿವುದಾಯ್ತು ಶರತ್ಪ್ರಥಮಪ್ರವೇಶದೊಳ್ ॥ ೩೭

ಕಿಱಿದಾನುಂ ಪೊೞ್ತು ಚೆಂಬೊಂದಳಿರ ಪಸೆಗಳೊಳ್ ಗೋಷ್ಠಿಯಿಂ ಕುಳ್ಳಿರುತ್ತುಂ
ಕಿಱಿದಾನುಂ ಪೊೞ್ತು ಮಲ್ಲಶ್ರಮದೆ ಪೊಣರ್ದು ಗೋಪಾಲರಂ ಜಾಳಿಸುತ್ತುಂ ‡ ।
ಕಿಱಿದಾನುಂ ಪೊೞ್ತು ನಾದಾಮೃತವೊಸರ್ವಿನೆಗಂ ವೇಣುವಂ ಬಾಜಿಸುತ್ತುಂ
ತುಱುಗಾದಂ ಗೋಪವೇಷೋಚಿತವನಕುಸುಮಾಲಂಕೃತಂ ಪಂಕಜಾಕ್ಷಂ ॥

* ಕ. ಖ. ಗ—ಕೆಂದಳದೊಳ್ † ಕ.ಗ.—ವೆಳಗಂಚಿರಮಾಯ್ತು

‡ ಕ—ಬಾಳಿಸುತ್ತುಂ.

ವ॥ ಅಂತು ಗೋಪಾಲವಿನೋದದಿಂ ಕಾಮಪಾಲಂಬೆರಸು ಗೋವರ್ಧನಗಿರೀಂದ್ರದಿಂದತ್ತಮತಿದೂರಾಂತರದೊಳ್ ಚರಿಸುತ್ತಿರ್ದಲ್ಲಿ,

ತಾಳದಳಾವಳೀಕಳಕಳಾನಿಳನುರ್ವಿಸಿ ತೀಡೆ ಪೇಟಿವಿಾ
ಗಾಳಿಯಿನಾದ ನಿಷ್ಠುರನಿನಾದಮಿದಾವುದೆನಲ್ಕೆ ಕೇಳ್ದು ಗೋ।
ಪಾಳರಿದಲ್ತೆ ಕಂಸವಧುಗಳ್ ಮಧುವಂ ಕುಡಿವೊಂದು ತಾಳಭೂ
ಜಾಳಿಯ ತೀವ್ರಸೂರರವವೆಲ್ಲಿಗೆ ಪೋಗಲೆ ಬಾರದಚ್ಯುತಾ ॥ ೩೯

ವ॥ ಅದೆಂತೆಂದೊಡಾಮಹೋತ್ತಾಳತಾಳವನಮಂ ಧೇನುಕನೆಂಬ ರಾಸಭರಾಕ್ಷಸಂ ಕಾದಿರ್ಪಂ. ಆರಾಸಭನ ರಭಸಮಂ ಪೇಟ್ವೊಡೆ ಮುನ್ನೊಂದು ಸಮಯದೊಳ್ ಪಾಲೋಮಿ ತಾಳಮಧುವಂ ಬಯಸಿ ಕಾಪಿಲ್ಲದ ಪೊಚ್ಚಱದಲ್ಲಿಗೆ ಪುರಂದರಪುರಸ್ಸರಂ ಬಂದು ಹೃದ್ಯಮಪ್ಪ ಮದ್ಯಮಂ ಕೇಳಿವಟ್ಟಲೊಳಜೆದು ಕುಡಿಯಲುಜ್ಜುಗಂಗೈವುದುಂ ಮರು. ಜ್ಜವದಿನಟ್ಟಾಸುರಂ ಮಸಗಿ ರಾಸಭಂ ಒಂದುಮಾವಾಸವಸೈನ್ಯಮಂ ಕರಿಬ್ಬಯುಮೊದೆದುಂ ಚಿಗುಳಿದುಟಿದುಂ ಪಡಲ್ವಡಿಸುತ್ತುಮಿರೆ ಸತ್ತು ಕಾಣ್ಬ ಸಗ್ಗದಿಂದಿರ್ದುಕಾಣ್ಬನರಕಮ ಲೇಸೆಂಬ ನಾಣ್ನುಡಿಯುಮುಂಟು ಅಲ್ಲದೆಯುಮಮಗೆ ವಿಶೇಷದಿಂದಿರ್ದುಕಾಣ್ಬ ಸಗ್ಗದಿಂ ಕಷ್ಟಮಿಂ ಸತ್ತು ಕಾಣ್ಬನರಕಮೇವುದು , ಆಂಮರುಳಲ್ಲೆಂ ಈಸಾಂಪರಾಯದಿಂ ಪಲಾಯನಮ ಲೇಸೆಂದು ವಾಸವನತಿಜವಾಶ್ರವಮೆಸಿಸಿದುಚ್ಚೈಃಶ್ರವಮ ನೇಱಿ ಮನೋವೇಗದಿಂ ಪೋಗೆ ದಿವಂಬರಂ ಬೆಂಬತ್ತಿ ಮರಳ್ದು ಬಂದಂ ಧೇನುಕನಿಂತುಟೆನೆ, ದರಹಸಿತವದನಾರವಿಂದನಾಗಿ,

ರಾಸಭವಿಜೃಂಭಣಕ್ಕೇ
ನೋಸರಿಪುದೆ ಪೋಗಿ ತಾಟಿ ಪಣ್ಗಳನೊಲವಿಂ।
ಲೇಸಪ್ಪವನಾಸ್ವಾದಿಸಿ
ಗೋಸಮಿತಿಯನಲ್ಲಿ ಮೆಲ್ಲನಾಡಿಸಿ ಬರ್ಪೆಂ ॥ ೪೦

---

* ಕ.ಗ —ಚರಿಯಿಸುತ್ತಿರ್ದಲ್ಲಿ.

ವ॥ ಎಂದು ಪೋಗಿ ತಾಳವನಮಂ ಪೊಕ್ಕು ಪಕ್ವಫಲಮಂ ಕಂಡೞ್ತಿವಟ್ಟುಮಿದನಿಟ್ಟು ಕೆಡಪುವೊಡೀಸ್ಥಳಂ ಕಾಷ್ಠಪಾಷಾಣವರ್ಜಿತಂ ಅಲ್ಲಾಡಿ ಕೆಡಪುವೆನೆಂದುಱದೆಗೊಂಡಳ್ಳಾಡಲಾಕಳಕಳಮಂ ಕೇಳ್ದು ರಾಸಭರಾಕ್ಷಸನತಿಕ್ಷೋಭಮಂ ತಳೆದಂತಕಂಗುರುಬಾಡು * ಪೋವರಿಗಳಂತಿರ್ದ ಘೋರಘೋಷಣಘೋಣಾವಿವರಂಗಳುಂ, ಸುರನರರುಧಿರಮಾಂಸಂಗಳಿಂ ತಣಿಪಿದಪೆನಂಜದಿರಿಮೆಂದು ಭೂತಪಿಶಾಚಂಗಳ್ಗಭಯಮಿತ್ತ ಮೃತ್ಯುದೇವತೆಯ ಕರತಳಂಗಳಂತಿರ್ದುದ್ಗತಸ್ಫುರಿತಕರ್ಣಂಗಳುಂ, ವದನಹ್ರದರೌದ್ರರಸದ ಪೊನಲ್ ಪೊಱಪೊಣ್ಮಿ ಸೂಸಿ ಪರಿಯದಂತು ಕಟ್ಟಿಗಟ್ಟಿದ ಶಿಲಾಶಕಲಂಗಳಂತಿರ್ದ ಕುಲಿಶಕರಿನದಶನಂಗಳುಂ, ಜಗಮೆಲ್ಲಮನುಡುಗಿ ಸುಡುವ ಕಲ್ಪಾಂತಹುತವಹಂಗಿದಱ ಕಣ್ಬೀಡೆ ಬೀಡುದಾಣಮೆಂಬಂತೆ ಕೆಂಪಡರ್ದ ಕೆಂಡಮಂ ಕೇಸುರಿಯನುಗುೞ್ವ ಕಣ್ಗಳುಂ, ಲೋಕಪಾಲಕರ ನೊಸಲಕ್ಕರಮಂ ತೊಡೆವ ಸಮ್ಮಾರ್ಜನಿಯಿದೆಂಬಂತೆ ದೆಸೆದೆಸೆಗೆ ಬೀಸುವುದ್ದಂಡಬಾಳದಂಡಮುಂ, ಪ್ರಳಯಜಲಧರದ ಮೊೞಗಿಂ ದೆಱಗುವ ಬಱಸಿಡಿಲ ಬಳಗಕ್ಕಮಿದಱ ಕಂಠನಾಳಮೆ ನಿರ್ಗಮಮಾರ್ಗಮೆಂಬಂತೆ ಗರ್ಗರಮಾಗಿ ನೆಗೆವ ಹೇಷಾವಿನಿರ್ಘೋಷಮುಂ, ಸ್ವಪಕ್ಷರಾಕ್ಷಸರ್ ಪೊಱಮಡಲೋಸುಗಂ ಪಾತಾಳತಳದ ಮುಚ್ಚುಳನೊಡೆದು ಕಳೆದಪುದೆಂಬಂತೆ ಭೂತಳಮನಪ್ಪಳಿಸಿ ಪೊಯ್ವ ನಿಷ್ಠುರಶಫಟಂಕಮುಂ, ಭಯಂಕರಮಪ್ಪಿನಂ ಬಂದು ಇತ್ತ ಗೋಪಾಲಗಣಮನತ್ತ ದೇವಗಣಮಂ ಕಂಡು ಮಹಾಹೂಂಕಾರಂ ಮಾಡಿ ಭರದಿಂ ಕರ್ಚೆ ಮುಱಿದೊದೆವ ಸಮಯದೊಳ್ ಮುರಾಂತಕನದಱ ಪಿಂಗಾಲ್ಗಳನಡಸಿ ಪಿಡಿದು ತಾೞಿ ಪಣ್ಗಳನಿಟ್ಟು ಕೆಡಪೆದೊಂದುಪಾಯಮಾದುದೆಂದು,

ಅರಿಜೀವಕ್ಕಂತಕಂ ಕಣ್ಣಿಡಲಹಿತಪುರಾಭ್ಯಂತರಂ ಗೋೞಿಡಲ್ ದೇ
ವರ ತಂಡಂ ರಾಗದಿಂ ಬೊಬ್ಬಿಡೆಯಿಡೆ ಖರನಿಂ ತಾೞಿ ಪಣ್ಣಂ ರಿಪುಸ್ತ್ರೀ
ಯರ ಬಾಷ್ಪಂ ಬೀೞೆ ದೈತ್ಯಪ್ರತತಿ ಭಯರಸಾಂಭೋಧಿಯೊಳ್
ಬೀೞೆ ಕಂಸಂ

---

* ಕ, ಗ.—ತಳೆದಂತಕನಂಗುರುಬಾಡು. ಖ. ತಳೆದಂತಕನಂಗುರುಬಾಡಿಸು. ಮೊ. ಅ ತಳೆದಂತಕನಂಗುಱುಚಾಡು.

ಪಿರಿದುಂ ಬೆಂಬೀೞೆಬೀೞ್ತಂದುವು ಧರೆಗೊಡನಾಕತ್ತೆಯುಂ ತಾಟಿಪಣ್ಣುಂ॥
ಪರುಷತರಸ್ವನೋನ್ಮುಖರನಂ ಖರನಂ ಖರನಂ ಮುರಾರಿ ಸಂ
ಹರಿಸೆ ಜಯಪ್ರಮೋದವಶಮನರ್ ಸುಮನರ್ ಸುಮನಸ್ಸುವೃಷ್ಟಿಯುಂ ।
ಸುರಿಯೆ ಲತಾಂತದೊಳ್ಪಸದನಂ ಸದನಂ ಸದನಂಗಲಕ್ಷ್ಮಿಗಾ
ಗಿರೆ ತಳರ್ದನಂ ಶುಭಾಚರಣದಿಂ ರಣದಿಂ ರಣದಿಂದ್ರಕಾಹಳಂ ॥ ೪೨

ವ॥ ಅಂತಲ್ಲಿಂ ತಳರ್ದು,

ಎಳವುಲ್ಲಂ ಮೇಯಿಸುತುಂ
ತಿಳಿನೀರ್ಗುಡಿಯಿಸುತುಮುಯ್ದು ತಣ್ಣೆೞಲೊಳ್ ಗೋ ।
ಕುಳಮಂ ನಿಲಿಸುತ್ತುಂ ಮಂ
ಗಳಚರಿತಂ ಕ್ರೀಡಮಾನನೆಸೆದಂ ಕೃಷ್ಣಂ ॥ ೪೩

ಪರಿವರಿ ಪಾಱುಂಬಳ್ ಮರ
ಗೆರಸಿ ಕುಳಿಲ್ಸೆಂಡು ಬಟ್ಟು ತಿಱಿಕಲ್ಲಟ್ಟುಂ ।
ಗರೆ ಹೊಣೆ ಗುಂಡೆಂಬಿವನಾ
ಮುರಹರನಲ್ಲಲ್ಲಿಗಾಡುತುಂ ಬರಲಿದಿರೊಳ್ ॥ ೪೪

ಗಗನೇಚರಿಯರ ಪದದಲ
ತೆಗೆವೊರೆದರುಣಂಗಳಾದುವಿದಱ ಫಲಶ್ರೀ ।
ಣಿಗಳನೆ ಪಣ್ಗಳ ಕೆಂಪಿಂ
ಸೊಗಯಿಸಿತುದ್ದಂಡಕಾಂಡಭಾಂಡೀರವಟಂ ॥ ೪೫

ವಸುಧೆಗೆ ಗುಡಿ ಕವಿದಂತೆ
ದ್ದೆಸೆಯಂ ಬಾಸಣಿಸಿ ಶಿಖರಶಾಖೆಯ ನೆೞಲಿಂ ।
ಮಸುಳಿಸಿ ಖಚರಶ್ರಾಂತಿಯು*
ನೆಸೆದುದು ಭುವನೈಕಭವನದಂತಾಭೂಜಂ ॥ ೪೬

ವ॥ ಆಭಾಂಡೀರವೆಂಬ ಮಹಾವಟವಿಟಪಿಯೊಳ್,

ನೀಲೋತ್ಪಲರುಚಿ ಧೃತ† । ವನ
ಮಾಲಂ ರಾಜೀವಲೋಚನಂ ಕ್ರೀಡಿಸಿದಂ ।

---

*ಕ. —ಖಚರಶ್ರುತಿಯ. †ಖ ಗ. ಕೃತಧೃತ.

ಪೀಲಿಯ ತಲೆಸುತ್ತಿನ ಪ
ಚ್ಚೋಲೆಯ ಪೊಂಬಟ್ಟೆಯುಡೆಯ ಚೆಲ್ವೆಸೆವಿನೆಗಂ ॥ ೪೭

ಖೇಡನನರ್ತನಹಾಸ್ಯವ
ನಾಡಂಬರನಟನವೇಣುವಾದನಗೇಯ ।
ಕ್ರೀಡೆಗಳಿಂ ಗೋವುಗಳೊಡ
ನಾಡುತ್ತುಂ ರಾಮಕೃಷ್ಣರಿರ್ದವಸರದೊಳ್ ॥ ೪೮

ಛಿದ್ರಾನ್ವೇಷಿ ನಿಶಾಟಂ
ರೌದ್ರತ್ವಮನುೞಿದು ಗೋಪವೇಷದೆ ಬಂದಂ ।
ತದ್ರಮಣೀಯರ ಪೊರೆಗಮೃ
ತದ್ರವನಿಭವೇಣುನಿನದನುಕ್ತಿಶ್ಲಾಘಂ ॥ ೪೯

ಸ್ರಕ್ಸುಭಗೋರಸ್ಸ್ಥಳನಂ
ದೃಕ್ಸೌಮ್ಯಶರೀರನಂ ಸವೇಣುಸ್ವನನಂ ।
ವಾಕ್ಸಾರನನಾಬಳವಿ
ಷ್ವಕ್ಸೇನರ್ ಗೋಪಬಂಧುಗೆತ್ತರ್ ಖಳನಂ ॥ ೫೦

ನಾಡೆ ಮನಮಂ ಪ್ರಬೋಧಿಸಿ
ಮಾಡೆ ಖಳಂ ಹರ್ಷಮಂ ಬೞಿಕ್ಕಂ ಹರಿಣಾ ।
ಕ್ರೀಡನಮೆಂಬುದನೆರೆವ
ಚ್ಚಾಡಲ್ ವಸುದೇವನಂದನರ್ ಬಗೆದಂದರ್ ॥ ೫೧

ಈವಸುದೇವತನೂಜರೊ
ಳಾವನೊಳಂ ಪೊಣರ್ವೆನೆಂದು ಹರಿಬಳರಂ ದು ।
ರ್ಭಾವದಿನೀಕ್ಷಿಸಿ ಹರಿಯ ಭು
ಜಾವಷ್ಟಂಭಕ್ಕೆ ಮನದೊಳಳ್ಕಿದನಸುರಂ ॥ ೫೨

ವ॥ ಅಂತಾಪ್ರಳಂಬನೆಂಬ ದಾನವಂ ಕೃಷ್ಣನದ್ಭುತಪರಾಕ್ರಮನಂ ದು ಸಂಕರ್ಷಣವಧಪ್ರಯತ್ನದಿಂದಿರ್ಪನೆಗಮೆರಲೆಧೀಂಕನಾಡಲೆಂದಿರ್ಬ

ರಿರ್ಬರೊಂದಾಗೆರೆವಚ್ಚೊಡುವಲ್ಲಿ ದಾಮೋದರಂ ಸುಧಾಧಾಮನೆಂಬ ಗೋಪ ಕುಮಾರಕನೊಡನೆ ರೌಹಿಣೇಯಂ ಮಾಯಾವೇಷನಾಗಿ ಗೋಪನಪ್ಪ ಪ್ರಳಂಬನೊಡನೆ ಮಿಕ್ಕ ಗೋಪಾಲರೆಲ್ಲಂ ಗೋಪಾಲರೊಡನೆ ಗಡೆಯಾಗಿ ಲಘುಕ್ರಮದೆ ಸಮಪಾದದಿಂ ಲಂಘಿಸಿ ಗೆಲ್ಲಂಗೊಂಡು ಭಾಂಡೀರಸ್ಕಂಧಮಂ ಗೊತ್ತುಮಾಡಿ ತಂತಮ್ಮೊಳಾಡಿ ಸೋಲ್ತವರ ಪೆಗಲೇಱಿ ಬರ್ಪ ಸಮಯದೊಳ್,

ಯುಗಸಂವರ್ತನಕಾಲಕಾಲಜಲದಂ ಬಾಲೇಂದುವಂ ಪೊತ್ತಿದೇಂ
ನೆಗೆದತ್ತೆಂಬಿನಮದ್ಭುತಾಕೃತಿಯನಾಂತಾರಾಮನಂ ಪೊತ್ತುಕೊಂ ।
ಡಗಲುತ್ತುಂ ದಿಗಿಭಂಬರಂ ಬಳೆಯುತುಂ ನಾಕಂಬರಂ ಪಾಱುತುಂ
ಗಗನಾಗ್ರಂಬರಮಿಂತು ದಾನವಖಳಂ ಪೋತಂದನಾಟೋಪದಿಂ ॥ ೫೩

ಕುಡುದಾಡೆ ಮಿಂಚು ಕಿಸುಗಣ್
ಸಿಡಿಲೆನೆ ನೀಲಾಭ್ರಘಟೆಯೆ ಶರಪದ ಘೋಷ ।
ಕ್ಕೆಡೆಗುಡದೆ ಮಗುಟೆ ಗಗನಮ
ನೆಡೆಗೊಂಡವೊಲಾಯ್ತು ದನುಜನಾಕೃತಿ ನಭದೊಳ್ ॥ ೫೪

ವ ॥ ಆಗಳಾಮಹಾಕಾಯದೈತ್ಯಸ್ಕಂಧದೊಳಿರ್ದ ಸಂಕರ್ಷಣಂ ಕಿಂಕರ್ತವ್ಯತಾಮೂಢನಾಗಿ ಪೋಗುತ್ತು ಮಿರೆ ಕಮಳಲೋಚನಂ ನೋಡಿ,

ಎಲೆಲೆ ಮಹಾತ್ಮ ನೀನಿತರಬಾಲಕರಂತೆವೊಲಿಂತು ಪೋಗಿ ವಿ
ಹ್ವಲತೆಯನೇಕೆ ಮಾಡಿದಪೆ ನೀಂ ನೆನೆ ನಿನ್ನ ಮಹತ್ತ್ವಮಂ ಜಗಂ ।
ವಿಲಯಮನೆಯ್ದೆ ವಾಪದದೊಳಂ ಲಯಮೆಯ್ದದ ಶೇಷಮೂರ್ತಿ ನೀಂ
ಹಲಧರ ಶೇಷನಾಮಮದಱಿಂ ನೆಗಳ್ದ ಪ್ರಭು ನೀನೆ ನಿಶ್ಚಯಂ ॥ ೫೫

ಪದಿನಾಲ್ಕುಂ ಜಗಮಿರ್ಪುದಾರುದರದೊಳ್ ಶಕ್ರಾದಿದೇವರ್ ಮಹಾ
ಪದವೀಸಂಸ್ಥಿತರಾದರಾರ ದಯೆಯಿಂ ವಾರಾಶಿ ಮರ್ಯಾದೆವ ।
ಪ್ಪದದಾರಾಜ್ಞೆಯಿನಿಂದ್ವಿನರ್ ಬೆಳಪರಾರಾದೇಶದಿಂ ತದ್ರಮಾ
ಸ್ಪದನೆನ್ನಂ ತಳೆದಿರ್ಪನಂತನಯನಂ ತಜ್ಜಜ್ಞತ್ವ * ಮೇನಕ್ಕುಮೋ ॥ ೫೬

* ಮೊ —ಅ—ನಿನಗಿಂತಜ್ಞತ್ವ.

ವ॥ ಎಂಬುದುಂ ಸ್ವಕೀಯಸಾಮರ್ಥ್ಯಮಂ ತಿಳಿದು ಸಪ್ತಾರ್ಣವವೇಲಾವೃತವಸುಂಧರಾವಹಶಕ್ತಿಯುಕ್ತನಾಗಿ ನಕ್ತಂಚರನ ಮಸ್ತಕಮಂ ಮುಷ್ಟಿಯಿಂ ತಿವಿದು,

ಕುಲಿಶವಿಘಾತಮೆಂಬ ದೃಢಮುಷ್ಟಿವಿಘಾತದಿನುಣ್ಕಿ ಪಾಯ್ವಿನಂ
ತಲೆಯು ಮಿದುಳ್ಗಳುಂ ತಲೆಯುಮೆಟ್ಟೆಯೊಳಾರ್ವಿನಮೆಟ್ಟೆಯುಂ ಧರಾ ।
ತಲದೊಳುರುಳ್ವಿನಂ ತಲಮುಮೊಳಗನಟ್ಟಿಯು ಬೀಳ್ವಿನಿಂ ರಸಾ
ತಲಕಿಟಿವನ್ನಮಂತು ಮುಸಲಾಯುಧನಿಕ್ಕಿದನಾಪ್ರಳಂಬನಂ ॥ ೫೭

ವ॥ ಆಗಳ್,

ಅನಿಮೇಷಾಹಿತನಾಸ್ಯಗಹ್ವರಪನಿರ್ಯಲ್ಲೋಹಿತಂ ಕಾಕಗೃ
ಧ್ರನಿಕಾಯಚ್ಛದನಾವಗೂಹಿತಮೆನಲ್ ಬೀಜ್ದರ್ದನಂ ಗೆಲ್ದನಿಂ ।
ದನನೊಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ ತೇಜೋಭಿರಾ
ಮನನುಗ್ರಾರಿವಿರಾಮನಂ ವಿಜಯಭೃಂಗಾರಾಮನಂ ರಾಮನಂ ॥ ೫೮

ವ॥ ಅಂತು ವಿಜಯಮಂಗಳಂ ನೆಗಟೆ ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದಮೆ ಸಿತ್ಯೋತ್ಸವಮಾಗೆ ಸುಖದಿಂದಿರ್ಪನ್ನೆಗಂ,

ತುಱುಗಿರ್ದ ನೀಲಮೇಘದ
ತುಱುಗಲ್ ನೆಱೆ ಪಿಂಗಿ ಪೋಗೆ ತೆಱಪಾದುದಱಿಂ ।
ದೆಱಗಿದಳಿಪಟಲಿ ಪೋಗಲ್
ತೆಱಪಾದುತ್ಪಲವನಂಬೊಲಿರ್ದುದು ಗಗನಂ॥ ೫೯

ಲವಣಾರ್ಣವಮಂ ದುಗ್ಧಾ
ರ್ಣವದೊಳ್ದರೆಮಾಲೆ ಮುಸುಕಿದಂತಿರೆ ನೀಳ ।
ಚ್ಛವಿಯೆನಿಪ ಘನಾಧ್ವಮನಡ
ರ್ದುವು ಶರದದ ಮುಗಿಲ್ಗಳಸೆದುವತಿಧವಳಂಗಳ್ ॥ ೬೦

ರವಿಹಯಲಾಲಾಪಿಂಡಂ
ದಿವಿಜನದೀಫೇನಮಾಲೆ ರಾಹುವನಿರ್ಮೋಕ ।

ಕವಿದೆಂಬಿನಮಲ್ಲಲ್ಲಿಗೆ
ಧವಳಾಂಬುದಪಟಲಮೆಸೆದುದಂಬರತಳದೊಳ್ ॥ ೬೧

ದರಿಯಂ ಬಿಟ್ಟಿರ್ದ ನೀರೊತ್ತಿ ಚಿತರೆ ತೊಱೆಗೆಲ್ಲಂ ಪ್ರಸನ್ನತ್ವಮುಯ್ದೋ
ಱಿರೆ ಸೈವಾಳಂ ಮಳಲ್ದಿಂಟೆಗಳಸೆಯೆ ಶರತ್ಕಾಲಸಂಪತ್ತಿಯಿಂದಂ ।
ತೆರೆಗಳ್ ನೀಪ್ಪೊರ್ಕ್ಕುವೊಲ್ ತೀರದ ತರುಪಟಲಚ್ಛಾಯೆ ನೀರೊಳ್ಬೆಡಂಗಾ
ಗಿರೆ ತತ್ತ್ವಾವಾಸಚಿತ್ತಕ್ಕೆಣೆಯೆನೆ ತಿಳಿದತ್ತಂದು ಸಿಂಧುಪ್ರತಾನಂ ॥ ೬೨

ಬಾಲೆಯುರುರದೊಳ್ ಕಿಱುವೊಲೆ
ಮೇಲುದು ನಸುದೊಲಗೆ ತೋರ್ಪ ತೆಱದಿಂ ಸರಸೀ ।
ಮಾಲೆಯೊಳೆಸೆದುವು ನವಪ
ತ್ರಾಲಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ ॥ ೬೩

ಮಾನಸದಿಂ ಸಿತಾಂಬುಜಶತಂ ತಳರ್ವಂತೆವೊಲೆಯ್ದೆ ನೀರವ
ಸ್ಥಾನದೊಳಿರ್ದ ಬೆಳ್ಮುಗಿಲ ಮಕ್ಕಳವೋಲ್ ನಿಜಪಾಂಡುದೇಹಸಂ ।
ತಾನಕವಭ್ರದೊಳ್ ಮಿಱುಗೆ ಬಂದೆಱಗಿತ್ತು ಕೊಳಂಗಳೊಳ್ ತಟೀ
ಫೇನವಿತಾನವಾತ್ಮರುಚಿಯೊಳ್ ತಡವಾಗೆ ಮರಾಳಮಂಡಳಂ ॥ ೬೪

ಇವು ಕಂದರ್ಪಂಗೆ ದೋರ್ದರ್ಪವನಳಿಗೞಿಪಂ ಗಂಧವಾಹಂಗೆ ಸೌಗಂ
ಧವನಬ್ಜಂಗೂರ್ಜಿತಾಟೋಪವನಡರಿಸುಗುಂ ತಮ್ಮ ಪುಷ್ಪೇಷುವಿಂ ತ ।
ಮ್ಮ ವಿಕಾಸೋಲ್ಲಾಸದಿಂ ತಮ್ಮತಿಪರಿಮಳದಿಂ ತಮ್ಮ ಚೆಲ್ವಿಂದೆನಲ್ಜಾ
ತಿ ವನೇಜಾತಪ್ರಸೂನಾವಳಿಯನಿಱಿಸಿ ಸಂಪತ್ತುವೆತ್ತಿರ್ದುದೆತ್ತಂ ॥ ೬೫

ಪಿಂಗಳವಾದ ನೆಲ್ಲ ತೆನೆಯುಂ ನಸು * ಗರ್ಚಿದ ರಕ್ತಚಂಚು ಪ
ಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ ರೋ ।
ದೋಂಗಣವೆಂಬ ಪಟ್ಟಣದೊಳೊಪ್ಪುವ ಬೆಳ್ಮುಗಿಲೆಂಬ ಬಳ್ಳಿಮಾ
ಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ ॥ ೬೬

ಐರಾವಣಕುಲಸಂಭವ
ವಾರಣಘಟೆ ನೆರೆದು ಪತ್ತಿ ಶೀಕರಜಲಮಂ ।

* ಖ. ಗ—ನೆಲಿ.

ಧಾರಿಣಿಗೆ ಸೂಸಿದಪುವೆನೆ
ಶಾರದಘನಘಟೆಯಿನೆಱಗಿದುವು ಬೆಳ್ಸರಿಗಳ್ ॥ ೧೭

ವಾರಿಧಿಯೊಳುಳ್ಳ ನೀರಂ
ಕಾರ ಮುಗಿಲ್ ಕಱೆದು ಪೋಗಲುೞಿದಾಮುತ್ತಂ ।
ಶಾರದಮೇಘಾವಳಿ ತಂ
ದೋರಂತಿರೆ ಕಱೆದುವೆನಿಸಿದುವು ಬೆಳ್ಸರಿಗಳ್ ॥ ೧೮

ನೀರಧಿಯ ನೀರ್ಗೆ ಪೋಪಾ
ಕಾರಮುಗಿಲ್ ಮರಳವೆಂದು ಶರದಭ್ರಂಗಳ್ ।
ಪಾರಿರ್ದ ಗಗನಗಂಗೆಯ
ನೀರನೆ ಕಱೆವಂತಿರೆಱಗಿದುವು ಬಳ್ಸರಿಗಳ್ ॥ ೧೯

ಶರದಭ್ರಕುಸುಮ ತರುಗಳ್
ಮರುದಾಹತಿಯಿಂ ಪರಾಗಪಾಂಸುಪ್ರಸರಂ ।
ಬೆರಸರಲಂ ಸುರಿದಪುವೆನೆ
ಸುರಿವ ಬಿಸಿಲ್ಕಿಡಿಗಳೆಸೆದುವಭ್ರಾಂಗಣದೊಳ್ * ॥ ೨೦

ಮದಚಳೆಯಾಗಿ ನೀರ್ವೊಗೆವ ಖೇಚರಕಾಂತೆಯ ಹಸ್ತದಿಂ ಬಱಿ
ಲ್ಚಿದ † ನವರೌಪ್ಯಕುಂಭಮೆ ತರಂಗಿತನಾಕತರಂಗಿಣೀಪ್ರವಾ ।
ಹದೊಳಿದೆ ಕಾಣಲಾವಪುದೆನಲ್ ನಿಱಿಗೊಂಡ ಶರದ್ಘನಾಳಿಯಿಂ
ಪುದಿದನಿಳಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ ॥ ೨೧

ಶರದಭ್ರಮೆಂಬ ಬೆಳ್ದಾ
ವರೆಗಳ ಮಕರಂದರೇಣು ಪವನಾಹತಿಯಿಂ ।
ಪರೆದು ಪಸರಿಸಿದುದೆನೆ ಪಿಂ
ಜರರುಚಿ ರಂಜಿಸಿದುದಂದು ಕಂಜಪ್ರಿಯನಾ ॥ ೨೨

---

* ಕ ಖ. ಗ—ಅಭ್ರಾಗಮದೊಳ್

† ಕ—ಬಿರ್ದುಂಕಿದ. ಖ.—ಕಱಲ್ಚಿದ. ಗ,—ಬರ್ದುಂಕಿದ.

ಕಡಲಂ ಸುರಾಸುರರ್ ಕಡೆ
ವೆಡೆಯೊಳ್ ತೆರೆತೆರೆಗಳೊಳಗೆ ಪುಟ್ಟಿದ ಚೆಲ್ವಿಂ ।
ಗೆಡೆಗೊಂಡು ನಿಱಿವುಗಿಲ್ಗಳ
ನಡುವೆ ಕರಂ ಮಿಱುಗಿದತ್ತು ಹಿಮಕರಬಿಂಬಂ ॥ ೩೩

ಮೃಡಹಾಸದ್ಯುತಿಯಂತೆ ಕಂತುಶರದಂತಿರ್ದಚ್ಛ ವೆಳ್ದಿಂಗಳಂ
ಕಡುದಣ್ಪಿಂ ಗೆಡೆಗೊಂಡಿದೊಂದು ಬಿಸಿಲೆಂದಾಶ್ಚರ್ಯದಿಂದಂ ಜನಂ ।
ನಡೆ ನೋಡುತ್ತೆ ಮಹೋತ್ಪಳೋತ್ಪಳನಿಮೇಷೋನ್ಮೇಷಚಿಹ್ನಂಗಳಂ
ಗಡ ಬೆಳ್ದಿಂಗಳದೆಂಬುದೇವೊಗಳ್ವೆನೂರ್ಜಚ್ಛ್ರೀಯ ಬೆಳ್ದಿಂಗಳಾ* ॥

ರಾಜಿಸುತಿರ್ದುವೆಂದರುಣಪಂಕಜಪಾಂಡುಪಯೋಜಸೀಳನೀ
ರೇಜಕದಂಬಕಂಗಳ ಪೊದಱ್ದರವಂ ಪರೆಪುತ್ತೆ † ಷಟ್ಪದೀ ।
ರಾಜಿಯು ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀ
ರಾಜನಲೀಲೆಗೆಂದು ರತಿ ತೀವಿದ ಬಣ್ಣವುರಂಗಳಂದದಿಂ ॥ ೩೪

ವ॥ ಅಂತು ವಿಮಳಾಬ್ಜವಿಭವಂ ನಭದೊಳಂ ನಳಿನಿಯೊಳಂ, ಗೋಸಮೃದ್ಧಿ ಗೋಕುಲದೊಳಂ ಮಾರ್ತಂಡಮಂಡಳದೊಳಂ, ಕುಸುಮಶಿಳೀಮುಖಪ್ರಚಾರಂ ವಿರಹಿತತಿಯೊಳಂ ಮಾಳತಿಯೊಳಂ, ಮದೋದಯಂ ಮದನನೊಳಂ ಮತ್ತಗಜದೊಳಂ, ಅನುಕೂಲವೃತ್ತಿ ನದಿಯೊಳಂ ನಲ್ಲರೊಳಂ, ಪ್ರಸನ್ನಭಾವಂ ಜಲದೊಳಂ ಜನದೊಳವಾದ ಶರತ್ಸಮಯದೊಳ್,

ನಂದಾದಿಗೋಪರಿಂದು ಪು
ರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್ ।
ಮಂದರಧರನೀಕ್ಷಿಸಿ ಸಂ
ಕ್ರಂದನಮಹಮೇನಿಮಿತ್ತಮೆಮಗಿದು ಚಿತ್ರಂ ॥ ೩೫

* ಮೊ-ಅ-ಊರ್ಜಶ್ರೀಯಬೆಳ್ದಿಂಗಳಂ.

† ಕ ಖ. ಗ. —ಪೊದಟ್ದಿರೆವಂಬರವತ್ತು. ಮೊ—ಅ. ಪೊದೞ್ದಲಿವಂಚೆಯುವತ್ತು.

ವ॥ ಎಂದು ಬೆಸಗೊಳ್ವುದುಂ,

ತೀವಿದ ಗಟ್ಟಿಪಾಲೊದವು ಗೋಧನದೊಳ್ ನೆಗೞ್ಗುಂ ತೃಣಾದಿಸ
ಸ್ಯಾವಳಿ ಪೆರ್ಚುಗುಂ ನದನದೀಕುಳದೊಳ್ ಪರಿವರ್ಧಿಕುಂ ಜಗ।
ಜ್ಜೀವನಜೀವನಂ ಮೞೆಗಳಿಂ ಮೞೆಯುಂ ಕಱೆವಂ ಹಿತಾರ್ಥಮಿಾ
ಭೂವಳಯಕ್ಕೆ ಶಕ್ರನದುಕಾರಣಮರ್ಚಿಪುದಿಂದ್ರನಂ ಜನಂ॥ ೩೭

ವ॥ ಎಂದು ನುಡಿದ ನಂದಗೋಪನ ಮಾತಂ ಕೇಳ್ದು ಪುರುಹೂತಂಗೆ ಕೋಪಮಂ ಪುಟ್ಟಿಸಲ್ವೇಡಿ ಕೃಷ್ಣಸಿಂತೆಂದಂ:—ನಮಗೀದಿವಿಜರಾಜನಿಂ ಪ್ರಯೋಜನಮಿಲ್ಲ, ಗೋಪಾಲರಾಗಿ ವನದೊಳ್ ಚರಿಯಿಸುವೆನಮಗೆ ವನಾನ್ವಿತಂಗಳಪ್ಪ ಗಿರಿಗಳುಂ ಗೋಧನಂಗಳುಂ ಪರಮಗತಿಯುಮಿಷ್ಟದೈವತಮುಮಲ್ಲದಿಲ್ಲ. ಈಗಿರಿಗಳ್ ಕಾಮರೂಪಿಗಳ್ ತಂತಮ್ಮತರುತೃಣಚ್ಛೇದದಿಂದಪರಾಧಂಮಾಡಿದ ನಮ್ಮ ಮಂದಿಗಳಂ ಸಿಂಹಶರಭಭೇರುಂಡಶುಂಡಾಲಶಾರ್ದೂಲ ಸರ್ಪಾದಿಕ್ರೂರರೂಪಂಗಳಿಂ ಬಾಧಿಸದಂತು ಶಾಂತಿಯುಂ ಮಾಡಲ್ವೇೞ್ಪುದಿನ್ನೆಮಗೆ ಗಿರಿಯಜ್ಞಮುಂ ಗೋಯಜ್ಞಮುಂ ಪ್ರಧಾನಮಂಗಳಂ. ಅದುಕಾರಣದಿಂ,

ಘನರಸಭಕ್ಷ್ಯಾನ್ನಗಳಿಂ
ಘನರಸಗಂಧಾಕ್ಷತೌಘದಿಂದಂ ನೆಗೞಿಂ।
ಅನುಮತಿಯೊಳ್ ಗಿರಿಯಜ್ಞಮಿ
ದನುಮತಿಯೆನಗೆಂದು ಚಕ್ರಿ ಮತ್ತಿಂತೆಂದಂ॥ ೩೮

ಅನ್ನಿಮಗೆ ಪುತ್ರನಪ್ಪೊಡ
ಮೆನ್ನೊಳ್ ನಿಮಗಱ್ಕೆಯುಳ್ಳೊಡಂ ನಿಮಗೆನ್ನಿಂ।
ದನ್ನಂ ಪುಟ್ಟುವೊಡಂ ನೀ
ಮೆನ್ನೆಂದುದುಗೆಯ್ವುದೆನಗೆ ಮಾೞ್ಪುದು ಮುದಮಂ॥ ೩೯

ವ॥ ಎಂಬುದುಂ, ನಂದಗೋಪಪ್ರಭೃತಿಗೋಪವೃದ್ಧರಿಂತೆಂದರ್:—ಎಲೆಕೃಷ್ಣ, ನಿನ್ನ ರೂಪಮುಂ, ಸೌಷ್ಠವಪ್ರತಿಷ್ಠೆಯುಂ, ಪ್ರಭಾವಪ್ರಕರ್ಷಮುಂ, ಶೃಂಗಾರಗೌರವಮುಂ, ವಿಲಾಸವಿನ್ಯಾಸಮುಂ, ವೇಷವಿ

* ಕ—ಭಕ್ಷ್ಯಾರ್ಣವದಿಂ.

ಶೇಷಮಂ, ಸತ್ಪ್ರವರ್ತನೆಯುಂ, ವಿಕ್ರಮಾಧಿಕ್ಯಮುಂ, ವಿವೇಕಾತಿರೇಕಮುಂ, ನೋಡಲ್ ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ, ನಿನ್ನಭಿಮತಾರ್ಥಮನೆ ಮಾಡಿ ಕೃತಾರ್ಥರಪ್ಪೆಮಗೆ ನೀಂ ದರಸ್ಮಿತಪ್ರಸನ್ನವದನನಪ್ಪ ಕಾರ್ಯಮೇ ಕರಣೀಯಮೆಂದು ಮಹೇಂದ್ರಮಹಮಂ ಮಾಣ್ದು ಗಿರೀಂದ್ರಮಹಮನೊಡಂಬಟ್ಟು ತನ್ನ ಮಹಾಮಹೋಚಿತಪರಿಕರಂಗಳಂ ಗೋವರ್ಧನನಗಕ್ಕೆ ನಡೆಯಿಸಿ ಗೋಪಾಲಬಾಲಕರೆಲ್ಲರುಂ ಕೈಗೈದು ಗೋಧನಂಗಳಂ ಶೃಂಗಾರಂಗೆಯ್ದು ನೆರೆದು ಬರ್ಪುದೆಂದು ಗೋಕುಲದೊಳಯ್ದೆ ಸಾಱಿಸುವುದುಂ

ತನತನಗೊಲವಿಂ ಕೈಗೆ
ಯ್ದು ನಗಾರ್ಚನಪರಿಕರಂಗಳಂ ನೆರಪುವ ಗೋ ।
ಧನಮನಲಂಕರಿಸುವ ಘೋ
ಷನಿವಾಸಿಗಳಿಂದಮಾಯ್ತು ಕಳಕಳನಿನದಂ ॥ ೪೦

ವ॥ ಆಗಳಾಸಂಭ್ರಮಮಾನ್ತ ಜನದ ಕಳಕಳದಿಂ ದಳಂಬಡೆದು ಘೋರ್ಗರೆದುಲಿವ ಕೊರಲ ಗಂಟೆಯುಮುರದಗೆಜ್ಜೆಯುಂ * ಮೆಂದಂಬಡೆಯೆ; ಪೊಳೆವ ಪಂಚವರ್ಣ್ಣಿಗೆಯ ಪಟ್ಟೆಯ ತೋರದೊಂಗಲುಂ, ಬೇವಿನ ದಂಡೆಯುಂ, ನವಿಲ ಕಂಠದ ಬಾಸಿಗಮುಮೆಲುಗೆ; ಪಾರಮುಂ, ಉಱುಚೆಲ್ಲಿಯುಂ, † ನೇವಣಮುಂ ಲೀಲೆವಡೆಯೆ ; ಮೆಯ್ದೊಡೆದ ಹರಿದ್ರಾದ್ರವಮುಂ, ಕುಂಕುಮ ಪಂಕಮುಂ, ಬಿಂಕಂಬಡೆಯೆ ; ಶೃಂಗಾರದಿಂ ಭಂಗಿವಡೆದು, ವೃಷಬಲೀವರ್ದ್ಧಧ್ವಾನಮುಂ, ಗೋವತ್ಸಕದಂಬಹಂಭಾರವಮುಂ, ವಿಜೃಂಭಿಸೆ ಗೋಲೋಕಮವನಿಗವತರಿಸಿದಂತೆ, ಗೋಮಂಡಲಮೆ ಗೋಮಂಡಲಾದ್ವೈತಮಾದಂತಸಂಖ್ಯಾತಮೆನಿಸಿ ಮುಂದುವರಿವ ತುಱುಗಳುಮನವಱ ಪಿಂದೆ ಶಂಖರಸದರಿದಾಳದ ಪಸುರ ತಿಗುರೊಳಂ, ಮೃಗಮದಘುಸೃಣಚಂದನಚರ್ಚೆಯೊಳಂ, ನಿಂಬಮಾಲೆಯ ಕಿಱುವೀಲಿಯ ಪೆಂಚೆಯದ ಕೇಶಬಂಧದೊಳಂ, ಶಾರದೈಕವನ್ಯಕುಸುಮದ ಚಿತ್ರಹಾರ ‡ ಕೇ

* ಮೊ—ಅ. ಉಲಿವಘಂಟೆಯುಮುರಗೆಜ್ಜೆಯುಂ. † ಕ. ಖ ಗ.—ಅಲಗೆ ವಾರಮುಂ ಚೆಲ್ಲಿಯುಂ. ‡ ಕ. ಗ.—ಚಿತ್ರಪೂರ.

ಯುಂರ್ಕರ್ಣಪೂರದ ಭೂಷಣಂಗಳೊಳಂ, ಪಟ್ಟಪಟ್ಟಾವಳಿಯ ಗಂಡು ಡಿಗೆಯೊಳವೆಸೆದು ಪಸದನಂಗೆಯ್ದು ಸಂವೂರ್ಜಿತೋಜ್ಜ್ವಲದಶನನಿಚ ಯತಾಂಬೂಲಚರ್ವಣಭರಿತಕಪೋಲರುಂ, ಗೋನಿಯೋಗದಂಡಧರರು ಮಾಗಿ, ಕೆಲಬರ್ ಕೋಡ ಕಾಳೆಗಳ ನೂದುತ್ತುಂ, ಕೆಲಬರ್ ಪಿಂಡೊಡೆವ್ವ ಪರಿವ ಬಲವದ್ದರ್ಪಯುಕ್ತ ವತ್ಸಂಗಳ ಬಟಿವಿಡಿದು ಪರಿಯುತ್ತುಂ, ಕೆಲಬರ್ ವೊರ್ತಳಂಬೊಯ್ದಾರ್ದು ವೃಷಭಂಗಳಂ ಕೆಂಗೋಲ್ಕಸಗಿಸು ತ್ತುಂ ಬರೆ, ಗೋಪಾಲರಂ ಕಂಡತಿಮುದಿತಹೃದಯನಾಗಿ ಮುಕುಂದಂ ನಗಯುಜ್ಞೋಪಯೋಗ್ಯದ್ರವ್ಯಂಗಳಂ ತಂದು ಮುಂದೆ ನಿಂದಿರ್ದ ನಂದ ಗೋಪಪುರೋಗಮರನನುರಾಗದಿಂ ನೋಡಿ,

ದಿವ್ಯಸ್ರಗ್ದಿವ್ಯಾಂಬರ
ದಿವ್ಯಾಲಂಕಾರದಿವ್ಯಲೇಪನಭಾಸ್ವ ।
ದ್ದಿವ್ಯಾಕೃತಿಯುಂ ಧರಿಯಿಸಿ
ದಿವ್ಯಗಭೀರೋಕ್ತಿಯಿಂದಮಾಗಳ್ ಪೇಳ್ದಂ ॥ ೮೧

ಪೂಜಿಸಿಮೆನ್ನನಿಲ್ಲಿಗಧಿದೇವತೆಯಾನೆನುತದ್ರಿಯಲ್ಲಿ ನಿಂ
ದಾಜಲಜಾಕ್ಷನಂ ನೆರೆದು ಘೋಷಜನಂ ವಿವಿಧೋಪಚಾರದಿಂ ।
ಪೂಜಿಸಿದತ್ತುಬಿತ್ತರಿಸೆ ಗೋಪಕದಂಬಕವೊಳ್ಗೊಳಲ್ಗಳಂ
ಬಾಜಿಪ ಕೋಡ ಕಾಳೆಗಳನೂದುವ ಬೊಬ್ಬಿಱಿದಾರ್ವ ಸಂಭ್ರಮಂ॥೮೨

ವ॥ ಅಂತು ವಿಕೀರ್ಯಮಾಣಪ್ರಸವಧವಳಾಕ್ಷತಾಸಾರಪ್ರಕಾಶ ವಿಶದಮುಂ, ಕಾಳಾಗುರುಧೂಪೋದ್ದಾಮಧೂಮಸ್ತೋಮಜಲಜೀಮೂ ತಸಮುದಯಶ್ಯಾಮಳಮುಂ, ನೀರಾಜನದೀಪಕಳಿಕಾಶ್ರೇಣೀಶೋಣಾಂ ಶುಬಾಲಾತಪಪ್ರಸರಪಿಶಂಗಮುಂ, ಯಕ್ಷಕರ್ದಮಕರ್ದಮೀಭೂತ ಧಾತುಸ್ಥಲಸ್ಥಗಿತಮುಂ, ವಿಚಿತ್ರವಾದಿತ್ರನಿನದಘನಗರ್ಜಿತೋರ್ಜಿ ತಮುಂ, ವಿವಿಧೋಪದಂಶಭಕ್ಷ್ಯೌದನರಾಶಿಪ್ರತಾನಪ್ರತ್ಯಂತಪರ್ವತ ಪರೀತಮುಂ, ಲೇಹ್ಯಚೋಷ್ಯಪಾಯಸದ್ರೋಣೀಕಟಾಹದೀರ್ಘಿಕಾಸಂ

ಕುಲವಿಶಂಕಟಮುಂ, ಆಜ್ಯ ನಿರ್ಝರ ಪರಂಪರಾಪರೀತಮುಂ, ದುಗ್ಧ ಕುಂಭಸಹಸ್ರಸಂಗತಮುಂ ದಧಿಹ್ರದಶತಾವರ್ತಮುಮೆನಿಸಿ, ಗೋವರ್ಧನನಗಂ ಸೊಗಯಿಸೆ,ನಗೇಂದ್ರಯಜ್ಞಮಂ ನೆಗೞ್ಗೆ ಗೋಪಸಮಾಜಂ ವಿರಾಜಿಸೆ ತದನಂತರಂ,

ಅಪ್ರಮಿತಪಾಯಸಾಜ್ಯರ
ಸಪ್ರಿಯಸತ್ಪ್ವನ್ನ ಚಯಮನುಂಡೆಂ ತಣಿಗೆಂ ।
ಸುಪ್ರೀತನಾದೆನಾಂ ಶೈ
ಳಪ್ರಭು ನಿಮಗೆಂದಗಾಗ್ರದೊಳ್ ಹರಿ ನುಡಿದಂ ॥ ೮-೩

ವ॥ ಎಂದು ನುಡಿದಾಗಳಾದಿವ್ಯಮೂರ್ತಿಯಂ ತೊಲಗಿಸಿ ತನ್ನ ಮುನ್ನಿನ ಗೋಪಸ್ವರೂಪದಿಂ ಗೋಪಗೋಪೀಜನಂಗಳೊಡನೆ ತನ್ನ ಹಾಮಹಮಂಗಳಪ್ರಶಂಸೋಕ್ತಿಗಳಂ ನೆಗೞುತ್ತುಂ ಬಂದು ನಂದನಂದನನಾನಂದದಿಂ ಗೋಕುಲದೊಳಿರ್ಪನ್ನೆಗಮಿತ್ತಲ್,

ಮಾಣ್ದೆನ್ನ ಮಹಮನಗಮಂ
ಪೂಣ್ದರ್ಚಿಸಿದಂ ಮುಕುಂದನೆಂದು ಮಹೇಂದ್ರಂ ।
ಕಣ್ದೆಱಗಲ್ ಕೆಂಪಡರ್ದಿರೆ
ನುಣ್ದಳಿರಿಂ ತಳ್ತಶೋಕಕುಜದಂತಾದಂ ॥ ೮-೪

ವ॥ ಅಂತು ಭೂಧರವಿರೋಧಿ ಭೂಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕಬಲಾಹಕನಿಕಾಯಮಂ ಕರೆದು,

ಇಂದೆ ಲಯಕಾಲಮಕ್ಕುಮ
ಸಂದೆಯಮೇಂ ಗೋಕುಲಕ್ಕೆ ನೀಂ ಪೋಗಿ ಶಿಲಾ ।
ವೃಂದಾನ್ವಿತವೃಷ್ಟಿಯನೇ
ೞುಂ ದಿನಮುಂ ಕಱೆಯಿಮೊಂದು ಬೆಸವೇೞ್ದೊಡಂ ॥ ೮-೫

ಮರನಂ ಮರದಿಂ ಪೋದುವ
ಗಿರಿಯಂ ಗಿರಿಯಿಂದೆ ಪೊಡೆವ ಕಡಲಂ ಕಡಲೊಳ್ ।

* ಕ. ಗ.—ದಿನಪರ್ಯಂತಮೊಂದು.

ಬೆರಸುವ ವಿಳಯಾನಿಳನೆನೆ
ಭರದಿಂ ಕಡುಗಾಳಿ ಬೀಸಿದುದು ಗೋಕುಲದೊಳ್ ॥ ೮೬

ಗಾಳಿಯ ಪೊಯ್ಲಿಂದಂ ದ್ಯುತಿ
ಮಾಳೆ ತೆರಳ್ದೊಡನೆ ನೆಗೞ್ದ ತಮದೊಡ್ಡನಲಾ ।
ಭೀಳತೆವೆತ್ತುದು ನೀಳಘ
ನಾಳಿ ನಿರಕ್ಷೀಕೃತಾಂಬರಂ * ಘನಪಥದೊಳ್ ॥ ೮೭

ಸಿಡಿಲುಂ ಮಿಂಚುಂ ಮೊೞಗುಂ
ಗಡಣಿಸೆ ಶುಂಡಾಲಹಸ್ತನಿಭಧಾರೆಯೊಳಂ ।
ದೊಡಗೂಡಿ ಶಿಲಾವಳಿಗಳ್
ಕೆಡೆಯೆ ಘನಾಘನಘಟಾಳಿ ಕಱೆದುವು ಮೞೆಯಂ ॥ ೮೮

ವ॥ ಆಸಮಯದೊಳ್,

ಸಮುದಗ್ರಗ್ರಾವವರ್ಷಂ ಕಱೆಯೆ ತುಱುವುಮಾವುಂ ಪಡಲ್ವಟ್ಟು ಬಿೞ್ದ
ಪ್ಪ † ಮೆನುತ್ತುಂ ಗೋಪಗೋಪೀತತಿ ಮಱುಗೆ ಗೋವರ್ಧನಾದ್ರೀಂದ್ರಮಂ ಕಿ ।
ೞ್ತು ಮಹಾಂಭೋನಿರ್ಝರಂ ಝಲ್ಲರಿವೊಲಿರೆ ಮಹಾವೃಷ್ಟಿಯಿಂ ವಾಮದೋರ್ದಂ
ಡಮೆ ಕಾವಾಗಿರ್ಪಿನಂ ಗೋಕುಲಕೆ ಕೊಡೆವೊಲಂವೆತ್ತಿ ನಿಂದಂ ಮುಕುಂದಂ ॥ ೮೯

ವ॥ ಅಂತು ದಿವ್ಯರೂಪದಿಂ ನಗಮಂ ನೆಗಪಿ ಗೋಪಗೋಪೀಜನಂಗಳ ಮೊಗಮಂ ನೋಡಿ,

ನೀವರ್ಱಿಸೆ ತಣಿದೀನಗ
ದೇವತೆ ಹಿಮವೃಷ್ಟಿಚಯಮನಪಹರಿಸಲ್ ಬಂ ।
ದಾವಿರ್ಭವಿಸಿದೊಡೆನಗೆ ಮ
ಹಾವೆಪ್ಪುವಾಯ್ತೆಂದು ನಗುತುಮಗಧರನೆಂದಂ ॥ ೯೦

---

* ಖ.—ನಿರೀಕ್ಷಿಸೆ ವೃತಾಂಬರಂ

† ಮೊ—ಅ—ಕಱುವುಮಾವುಂಪಡಲ್ವಟ್ಟುಬೀೞ್ತೆಂಕುರ್ಜ.

ಹರಿ ತನ್ನಂಶಾಂಶದಿನೊಸೆ
ದಿರೆ * ತೋಱುವೆ ತನ್ಮಹತ್ವದಂಶಾಂಶಮೆ ಗೋ ।
ಧರಣಬಲವೆಂತು † ಮಾತ್ಮೋ
ದರಸ್ಥಲೋಕಂಗೆ ಪಿರಿದೆ ಶೈಲೋದ್ಧರಣಂ ॥ ೯೧

ನಾನಾವನಸಂಕೀರ್ಣಂ
ನಾನಾಶೃಂಗೋಪಕುಧರನಿರ್ಝರಯುಕ್ತಂ ॥
ನಾನಾಮೃಗಗಣಸ್ಫಾರಂ
ನಾನಾಯೋಜನವಿಶಾಲಮಾಶೈಲೇಂದ್ರಂ ॥ ೯೨

ಮೆಱವಾಯ್ತು ಪೊಣರ್ವ ವಿಸಟಂ
ಬರಿವ ಕರೇಣುಗಳ ನೆರೆವ ಹರಿವಿರುತಿಗೆ ಕೊ ।
ಕ್ಕರಿಸುವ ನೀರ್ಸರಿ‡ ಗೆಯ್ವಿಭ
ಪರಿಕರಮೆಸೆಗುಂ ಮುರಾರಿ ನೆಗಪಿದ ನಗದೊಳ್ ॥ ೯೩

ಮಂಡಳಿಸಿರಲಲಸಿ ಮಹೀ
ಮಂಡಳಮಂ ಪೊತ್ತು ನೆಗೆದ ಶೇಷನೆನಲ್ ಶ್ರೀ ।
ಖಂಡರಸಭೂಷಿತಂ ಭುಜ
ದಂಡಂ ಬಗೆಗೊಂಡುದಗಮನಾಂತಚ್ಯುತನಾ ॥ ೯೪

ಅಂಭೋಜನಾಭನಿಂದು
ತ್ತಂಭಿತಮಾದೊಂದುದಗ್ರಗೋವರ್ಧನಮು ।
ಜೃಂಭಿಸುತಿರ್ದುದು ರುದ್ರಂ
ಸ್ತಂಭಿಸಿದಾತ್ರಿಪುರದಂತೆ ಗಗನಾಂಗಣದೊಳ್ ॥ ೯೫

ತಳರದತಂದ್ರಿತಮಿಳಿಯಂ
ತಳದಿರ್ದಚ್ಚಿಗಮಡಂಗೆ ಹರಿಕರಶಯ್ಯಾ ।

* ಮೊ— ಅ—ನೊಗೆದಿರೆ.

† ಮೊ—ಅ—ವರಣಬಲವೆಂತು. ‡ ಕ—ಗ. ನಿಪ್ಪರಿ.

ತಳದೊಳೊಱಗಿದವೊಲಿರ್ದುದು
ಜಳದನಿಮೀಳಿತಗುಹಾವಿಳೋಚನಮಚಳಂ ॥ ೯೬

ಇರುಳುಂ ಪಗಲುಂ ಮಾಣದೆ
ಸುರಿವ ಮಹಾವೃಷ್ಟಿಯುಂ ನಿವಾರಿಸಲಗಮುಂ ।
ಹರಿ ಧರಿಯಿಸೆ ಸಪ್ತದಿನಂ
ಬರಮಲ್ಲಿಂ ಬಳಿಕ ಪರೆದು ಪೋಯ್ತು ಘನೌಘಂ ॥ ೯೭

ವ॥ ಅಂತು ವಿಫಲೋದ್ಯೋಗಮಾಗಿ * ಮಹಾದ್ಭುತವೃಷ್ಟಿಪೋಪುದುಂ ಕಂಡು ಗೋಪಗೋಪೀಜನಂ ನಿಜಸ್ವೈರದಿಂ ಸಂಚರಿಸೆ ಪೂರ್ವ-ಪ್ರದೇಶದೊಳ್ ಪರ್ವತಮನಿರಿಸಿ ತದೀಯಶಿಖರಶಿಳಾತಳದ ಮೇಲೆ ವನಮಾಲಿ ಲೀಲೆಯಿಂ ಕುಳ್ಳಿರ್ಪನ್ನೆಗಮತ್ತಲಮರೋತ್ತಮಂ ವಿಸ್ಮಿತಸ್ವಾಂತನಾಗಿ ನಿಜಾಂತರಂಗದೊಳಿಂತೆಂದಂ,

ಕ್ಷಮಾಧರನಿವಾಸದೊಳ್ ಬಳಿಯನಿಕ್ಕಿದಾಶೌರ್ಯಕಂ
ಕ್ಷಮಾಧರತೆಯುಂ ಕಿರಿಚ್ಛಲದೆ ತೋಱಿದಾಧೈರ್ಯಕಂ ।
ಕ್ಷಮಾಧರಮನೀಗಳೆತ್ತಿ ಪೊಱೆದಾ ಮಹಾವೀರ್ಯಕಂ
ಕ್ಷಮಾಧರನನಾತನಂ ಕ್ಷಮೆಗೊಳಲ್ಕೆವೇೞ್ಕುಂ ದಿಟಂ ॥ † ೯೮

ವ॥ ಎಂದು ನಿಶ್ಚೈಸಿ

ಮಿಳಿರ್ವನ್ನಂ ಚಮರೀರುಹಂ ಮಿಱುಗುವನ್ನಂ ಪಾಂಡರಚ್ಛತ್ರಮುಂ
ಡಳಮೈರಾವತಮಸ್ತಕಸ್ಥಿತನಮರ್ತ್ಯವ್ಯೂಹಸೇವ್ಯಂ ವಿಯ ।
ತ್ತಳದಿಂ ಭೋಂಕನೆ ಬಂದನೀಕ್ಷಿಸುವಲಂಪಿಂ ವಜ್ರಿ ಗೋವರ್ಧನಾ
ಚಳಭಾರೈಕಸಹಿಷ್ಣುವಂ ಜಳಧರಭ್ರಾಜಿಷ್ಣುವಂ ವಿಷ್ಣುವಂ ॥ ೯೯

---

* ಕ ಗ.– ವಿಪುಲೋದ್ಯೋಗಮಾಗಿ.

† ಕ.ಗ.– ಕ್ಷಮಾಧರನಿವಾಸದೊಳ್ ಬಲಿಯನಿಕ್ಕಿದಾಶೌರ್ಯಮಂ
ಕ್ಷಮಾಧರತೆಯುಂ ಕಿಱಿಲ್ ಚಲದೆ ತೋಱಿದಾಧೈರ್ಯಮಂ ।
ಕ್ಷಮಾಧರಮನೀಗಳೆತ್ತಿ ಪೊಱೆದಂ ಮುಕುಂದಂ ನತ
ಕ್ಷಮಾಧರನನಾತನಂ ಕ್ಷಮೆಗೊಳಲ್ಕೆವೇೞ್ಕುಂ ದಿಟಂ ॥

ವ॥ ಅಂತು ಬಂದು,

ನೆಗಪ್ದ ಗೋವರ್ಧನಾಗ್ರೋಪಲದಿನೆಸೆದುಕುಳ್ಳಿರ್ದ ಮೇಘಾಧ್ವದೊಳ್ಸಂ
ದು ಗರುತ್ಮಂಮೊಟ್ಪು ಪಕ್ಷಾವಳಿಯನೆಱಲೊಳೊಪ್ಪಿರ್ದ ಗೋಪಾಲವೇಷಂ
ಬಗೆಗೊಳ್ವಬ್ಜಾಕ್ಷನಂ ಶ್ಯಾಮಳತನುರುಚಿಯಂ ಬಾಳನಂ ದೀರ್ಘಬಾಹಾ
ಯುಗನಂಶ್ರೀವತ್ಸವಕ್ಷಸ್ಸ್ಥಳನನತುಲತೇಜಸ್ವಿಯಂ ವಜ್ರಿ ಕಂಡಂ॥೧೦೦

ತ್ರೈಲೋಕ್ಯಪಾಲಕಂ ಗೋ
ಪಾಲಕನಾಗಿರ್ದ ಲೀಲೆಯಂ ಕಂಡು ಮರು ।
ತ್ಪಾಲಕನೆನಗಕ್ಷಿಸಹ
ಸ್ರಾಲಂಬನದಿಂದು ಸಫಲಮೆಂದೀಕ್ಷಿಸಿದಂ ೧೦೧

ವ॥ ಅಂತು ಸಹಸ್ರಲೋಚನಂ ಪರ್ಯಾಪ್ತಸಹಸ್ರಲೋಚನ
ನಾಗಿ ಸಹಸ್ರಪತ್ರಾಯತನೇತ್ರನಂ ನೋಡಿ,

ಎಲೆ ಸರ್ವಾತ್ಮ ಪಿಪೀಲಿಕಾದಿಗಜಪರ್ಯಂತಂ ಜಗತ್ಪ್ರಾಣಿಸಂ
ಕುಲಮೆಲ್ಲಂ ಭವದಂಶಜಾಲಮದಱಿಂ ನೀನೀಗಳಂಶಾಂಶದಿಂ ।
ದಿಲೆಯೊಳ್ಪುಟ್ಟಿದ ನಿನ್ನದೊಂದೆಸಕಮೇಂ ಸಾಮಾನ್ಯಮೋ ಮೇಣ್ಜಗ
ದ್ವಲಯತ್ರಾಣಸಮರ್ಥಮೋ *ತಿಳಿವೆನೆಂದೀವೃಷ್ಟಿಯಂ ಮಾಡಿದೆಂ॥೧೦೨

ಇನ್ನಮರಕಾರ್ಯಸಿದ್ಧಿಯು
ಮಿನ್ನಖಿಳವಿರೋಧಿವಧಮುಮಕ್ಕುಂ ನಿನ್ನಿಂ ।
ನಿನ್ನ ಭುಜಬಲಮನಱಿದೆಂ
ನೀನ್ನಗಮಂ ನೆಗಪಿ ಸಪ್ತದಿನಮಿರ್ದುದಱಿಂ ॥ ೧೦೩

ಏಕಂ ಕೂಟಸ್ಥಂ ನಿ
ನ್ನಾಕಾರತ್ರಿತಯಮಾದ ವಿಭುತೆ ಸಮಗ್ರಂ ।
ಶ್ರೀಕಾಂತ ಮದ್ವಿಧರ್ ಸ್ವ
ಭ್ರೂಕೋಟಿಯ ಪರ್ಬಿನಿಂದ † ವೆಪ್ಪರ್ ಕಿಡುವರ್ ॥ ೧೦೪

* ಖ.—ಸಮಗ್ರಮೋ. † ಖ—ಜರ್ಬಿನಿಂದ.

ವ॥ ಆಸವಮೆಗ್ರಪ್ರಭಾವಮುಂ ನಿನ್ನೀಗಳವತಾರದೊಳ್ ಕಾಣಲಾ
ದಪುದೆಂತೆನೆ,

ನೀಂ ತುಱುಗಾವ್ರೊಡವೇಂ ನಿ
ನ್ನಂತಿಕದೊಳ್ ನೋಡೆ ಮದ್ವಿಳಾಸಂ ಮಸುಳ್ಗು ।
ತ್ತಂತುಟೆ ವಲಂ ಸ್ವಯಂಪ್ರಭು
ವೆಂತಿರ್ದೊಡಮಿರ್ದ ತೆಱನೆ ಚೆಲ್ವಾಗಿರ್ಕುಂ ॥ ೧೦೫

ಪುರಮಥನರೂಪದಿಂ ನೀಂ
ಮೆರುಳ್ಗಳೊಡನಾಡಿದೈ ನರಾಕೃತಿಮಿಷದಿಂ ।
ಹರಿ ಗೋವುಗಳೊಡನಾಡಿದೆ
ಪರಮೈಕಂಗುಚಿತ ಮಕ್ಕುಮೀಸ್ವಾತಂತ್ರ್ಯಂ ॥ ೧೦೬

ಜಗದುದಯಸ್ಥಿತಿಪ್ರಳಯಕಾರಣ ಭಕ್ತಸನಾತನ ತ್ರಿಮೂ
ರ್ತಿಗಳಮಹಾಧಿಪತ್ಯಮದು ನಿನ್ನ ವಿಡಂಬಮೆನಲ್ ಜುಗುಪ್ಸಿತಂ ।
ಬಗೆವ್ರೊಡಿದಾಧಿಪತ್ಯಸವನಂ ನಿನಗಾಗಿದನೆಂಬೆನೞ್ತಿಯಿಂ
ನಗಧರ ಗೋಪನಾಗಿ ನಲಿವಲ್ಲಿಗೆ ತಾಳ್ದು ಗವಾಧಿಪತ್ಯಮಂ ॥ ೧೦೭

ಶ್ರೀವರ ನಿನಗಾಂ ಮಾಳ್ವೆಂ
ಗೋವಿಂದಪದಾಭಿಷೇಕಮಂ ಧರಿಯಿಸು ನೀಂ ।
ಗೋವಿಂದನಾಮಮಂ ನಿನ
ಗಾವೆಭಿಧಾನಕ್ಕಮೂಪೆಸರ್ ಪ್ರಿಯಮಕ್ಕುಂ ॥ ೧೦೮

ವ॥ ಎಂದು ದೇವೇಂದ್ರಂ ಪಯೋನಿಧಿಯ ಪಾಲಂ ತೀವಿ ತರಿಸಿ
ಐರಾವತದ ಕೆಲವಣಿಯ ಚಂದ್ರಕಾಂತದ ಘಟಂಬಿಡಿದು ನೀಲಗಿರಿಯ
ಚೂಳಿಕೆಯೊಳಿಂದುಮಂಡಲವಮೃತಧಾರೆಯಂ ಕಱೆದಪುದೆನೆ ಕೃಷ್ಣಂಗ
ಭಿಷೇಕಂಮಾಡಿ ಪಾರಿಜಾತದ ಪುಷ್ಪದಿಂ ಸಮೆದ ಬಾಸಿಗಮಂ ಕಟ್ಟಿ ದೇವ
ಮಂದುಭಿಗಂಧರ್ವಗೇಯಜಯಜಯಧ್ವಾನಮಂತರ್ಧಾನದೊಳ್ ಭೋರ್ಗ

* ಕ—ಪರಮೇಶಂಗುಚಿತ.

ರೆಯೆ ಪುಷ್ಪವೃಷ್ಟಿಲಾಜವರ್ಷಸಿತಾಕ್ಷತಾಸಾರಮಂತರಿಕ್ಷದೊಳ್ ಸುರಿಯೆ ಗೋವಿಂದಾಭಿಧಾನಮನನುಕರಿಸಿ ವಿಭೂತಿಯಂ ಮೆಱೆಯೆ ವರಸ್ಮಿತಪ್ರಸನ್ನವದನಾರವಿಂದನಾಗಿ ಗೋವಿಂದನಾಮೋತ್ಸವವಿಭೂತಿಯಂ ಮೆಱೆದ ಪುರುಹೂತನಂ, ನಿನಗೆ ಸಂತುಷ್ಟನಾದೆಂ, ವರಂಗಳಂ ಬೇಡಿಕೊಳ್ಳೆನೆ, ಶತಕ್ರತು ಮುಕುಳಿತಾಂಜಲಿಪುಟನಾಗಿ ಬಿನ್ನಪಂ ಜಗನ್ನಾಥ, ಪಾಂಡವ ಮಧ್ಯಮನರ್ಜುನನೆಂಬನೆನಗತಿಪ್ರಿಯತನಯಂ, ದುರ್ಯೋಧನಂಗೆ ಭಾಗಿನೇಯಂ, ನಿನಗೆ ಮೈದುನನುಮಪ್ಪಂ ಆವಿಜಯನೊಳಿಂದು ನಿನ್ನದೊಂದು ವಿಜಯಶಕ್ತಿಯ ಕಳೆಯಂ ನಿಯೋಜಿಸುವುದು. ಆಪಾರ್ಥನೊಳಪ್ರತ್ಯೂಹಮೈತ್ರಿಯಿಂ ವರ್ತಿಸುವುದು ಮುಂದೆ ನೆಗಱ್ವಭಾರತಯುದ್ಧದೊಳ್ ಕಪಿಧ್ವಜಂಗೆ ನೀನೆ ಸಾರಥಿಯಪ್ಪುದು. ಈವರತ್ರಯಮಂ ನೀನೆನಗೆ ದಯೆಗೆಯ್ವುದೆನೆ ಭಕ್ತವತ್ಸಲಂ ಶ್ರೀವತ್ಸಾಂಕನುತ್ಸಾಹದಿಂ ದೇವವರಂಗೆ ವರಂಗಳಂಕೊಟ್ಟಂದಿನಿರುಳ ಬೆಳ್ದಿಂಗಳೊಳ್ ರಾಸಕ್ರೀಡೆಯನಾಡಿದಪೆಂ, ನೀನಾವಿನೋದಮನೆನ್ನ ಸಮೀಪದೊಳಿರ್ದು ಗೋಪಜನಕ್ಕದೃಶ್ಯರೂಪನಾಗಿ ನೋಡಿ ಪೋಪುದೆಂದು ನಿಲಿಸುವುದುಂ. ಇಂದ್ರನಂ ಕಟಿಪಿದವೆಗೆತ್ತು ಗೋಪಾಲಕರ್ ಬಂದು ಪರಿವೇಷ್ಟಿಸಿ ಗೋಷ್ಠಿಯಿಂ ಕುಳ್ಳಿರ್ದು ಪೂತನಾಹರಣದಿಂ ಗೋವರ್ಧನೋದ್ಧರಣಪರ್ಯಂತಮಾದ ಸಾಹಸಂಗಳನೆಣಿಸಿ ವಿಸ್ಮಯವಿಘೂರ್ಣಿತೋತ್ತಮಾಂಗರಾಗಿ ಕೈಗಳಂ ಮುಗಿದು,

ಪಸುಗೂಸುತನದೊಳಂ ಸಾ
ಹಸಮತಿಮಾನುಷಮತೀಂದ್ರಿಯಂ ನಿನಗದಱಿಂ ।
ಬೆಸಗೊಂಡಪೆವೊಂದಂ ಬಂ
ಚಿಸದುಳ್ಳುದನೆಮಗೆ ಕೃಷ್ಣ ಪೇೞಲೆ ವೇೞ್ಕುಂ ॥ ೧೯

ಸುರನೋ ಸಿದ್ಧನೊ ಯಕ್ಷನೋ ಗರುಡನೋ ನೀನಾರ್ಗೆಪೇೞೆಂದು ಗೋ
ಪರೆನಲ್ ಸಪ್ರಣಯಪ್ರಕೋಪಿ ಹರಿ ಕೇಳ್ದಾ ನಾರುಮಲ್ಲೆಂ ಮದಾ ।
ಚರಣಂ ದೂಷ್ಯಮೆ ಮಾಣ್ಬುದೆನ್ನ ಕಳೆಯಂ ಮೇೞ್ಕಾಱ್ಚರಿತ್ರಂ ಮನೋ
ಹರಮೋ ಭಾವಿಪುದೆನ್ನನಾತ್ಮಸಮನೆಂದೇಕನ್ಯಥಾಕಲ್ಪನಂ ॥ ೧೦೦

ವ॥ ಎಂಬುದುಮವಾದಿವ್ಯವಚನವಕ್ರಮುಕ್ರಮೆಮಿ ತಮಗನುಗ್ರಹ ಪಕ್ಷವಾಗೆ ಕೃಷ್ಣನಂ ಪರಮಾತ್ಮಸ್ವರೂಪನೆಂದಱಿದು ಗೋಪರ್ ಕೃತಕೃತ್ಯರಾಗಿರ್ಪಿನಮನಂತರಂ,

ಅರುಣಾಂಶುಗಳಿಂ ಪಶ್ಚಿಮ
ಗಿರಿಕೂಟಮನರ್ಕಪೂರ್ವಪಲ್ಲವಚಯದಿಂ ।
ನೆರಪಿ ಪಡುನೇಸಱಿಸಿದುದು
ಶರನಿಧಿ ನಾಥಂಗೆ ಪಿಡಿದ ಮಾಣಿಕಗೊಡೆವೋಲ್ ॥ ೧೧೧

ವ॥ ಅಂತು ನೇಸರ್ಪಡಲೊಡಂ,

ಅವಿತತಮೆಳುರ್ವ ಮಹಾಬಾ
ಡವವಹ್ನಿಯ ಭೀತಿಯಿಂದವೊಯ್ಯನೆ ಪೂರ್ವಾ ।
ರ್ಣವದಿಂದಂ ಪೊಱಮಟ್ಟುದು
ಪವಳದ ಕೆಂಪಡರ್ವ ಕೂರ್ಮನೆನೆ ವಿಧುವೆಸೆದಂ ॥ ೧೧೨

ವ॥ ಅಂತು ನಿಶೀಥಿನೀನಾಥಮಂಡಲಮುದಯಶಿಖರಿಶಿಖರ* ಮಂಡ ನಮಪ್ಪುದುಂ,

ಇಂಗಡಲಿಂದಮಿಂದು ಗಡ ಪುಟ್ಟಿದನಂತದು ಕೆಮ್ಮನಿಂದುಮಿಂ
ದಿಂಗಡಲಲ್ತೆ ಪುಟ್ಟಿತೆನೆ ರಂಜಿಸಿ ಗೋಪವಧೂಕದಂಬಕಾ ।
ಪಾಂಗರುಚಿಚ್ಛಟಾಪಟಲದಿಂ ದಳವೇಱಿ ಪಳಚ್ಚನಚ್ಚವೆ
ಳ್ದಿಂಗಳಶೇಷಮಂ ಬೆಳಗಿದತ್ತು ನಿಶಾಲತೆ ಪೂತ ಮಾಳ್ಕೆಯಿಂ ॥ ೧೧೩

ವ॥ ಅಂತು ವಿಕಸಿತಕುಮುದಕುವಲಯಮಾಲತೀಕುಸುಮಾಮೋ ದಿತದಿಗಂತರಾಳವಾದಮಲಕೌಮುದೀವಿಲಾಸಮಂ ಮನದೆಗೊಂಡು,

ಚಳಮೌಲೋರಸ್ಸ್ಥಳಂ ಕಾಂಚನರುಚಿಸಿಚಯಂಸಂಚಲತ್ಕರ್ಣಪೂರಂ
ವಿಳಸದ್ಬರ್ಹಾವತಂಸಂ ಸ್ಫುರದಧರಸುಧಾಪೂರದಿಂ ವೇಣುರಂಧ್ರಾ ।

* ಕ—ಶೇಖರ.

ವೆಳಿಯುಂ ತೀವ್ರತ್ತ್ವಮುದ್ಯನ್ನಟಘಟಪಪ್ರವಿಂ ಬಂದು ವೃಂದಾವನಾಂತ
ಸ್ಸ್ಥಳವುಂ ಪ್ರೋಕ್ತ್ಯಂ ಪದಾಬ್ಜನ್ಯಸನಮೆಸೆಯೆ ರಾಸಕ್ರಿಯಾರಂಭಚಿತ್ತಂ॥

ಮುರಹರನ ಕೊಱಲ ಸನ್ನೆಯು
ವೆರರವಕನುಸರವಿದೆಂಬಿನಂ ಬಗೆಗೊಳಲಾ ।
ಸರದ ಬಱುವಿಡಿದು ತನ್ಮುರ
ಹರನಲ್ಲಿಗೆ ನೆರೆದು ಗೋಪಿಯರ್ ನಡೆವೆಡೆಯೊಳ್ ॥ ೧೧೫

ಕೊಂಕಿದ ಪುರ್ಬುಗಂ ತೆಳ್ವಸಿ
ಱುಂ ಕೋಮಲತನುವುಮೆಸೆಯೆ ನಡೆತಂದುದು ಚೆ ।
ಲ್ವಿಂ ಕದಳೀಪತ್ರದ ದೂ
ರ್ವಾಂಕುರದೆಳವಿದಿರ ಬಣ್ಣದಬಲಾನೀಕಂ ॥ ೧೧೬

ವದನೇಂದುವ ಕಾಂತಿ ಕಟಾ
ಕ್ಷದ ರುಚಿ ದರಹಾಸದಂಶು ತಳ್ತಿರೆ ನಡೆತಂ ।
ದುದು ಹಂಸಯಾನದಿಭಯಾ
ನದ ಮಂಥರಯಾನದಂಗನಾನಿಕುರುಂಬಂ ॥ ೧೧೭

ಕಣ್ದಾವರೆಗಳ ಪೊಳೆಪುಗ
ಳಣ್ದೆಸೆಯುಂ ಪುದಿಯೆ ಬಂಪುದತಿಮೃದುಗತಿಯಿಂ ।
ಪೂಣ್ದೆಸೆವ ತೋರದೊಡೆಗಳ
ನುಣ್ದೊಡೆಗಳ ಬಟ್ಟದೊಡೆಗಳಬಲಾನೀಕಂ ॥ ೧೧೮

ನಡು ನಳಿಯೆ * ಪೊಳೆಯೆ ಕಣ್ಗಳ್
ಪೊಡರೆ ಕುಚಂ ಮಿಳಿರೆ ಮೇಲುದೆಸೆಯೆ ವಿಳಾಸಂ ।
ನಡೆದರ್ ಕೇಸಡಿಗಳ † ತೆಳ
ರಡಿಗಳ ಮೆಲ್ಲಡಿಗಳತನುಶರಸನ್ನಿಭೆಯರ್॥ ೧೧೯

---

* ಕ. ಖ. ಗ—ಸಳೆಯೆ.  † ಕ.ಗ —ನಡೆತಂದರ್ ಕೇಸಡಿ.

ಉಡೆನೂಲ್ ಸಡಿಲಲ್ ಮೆಲ್ಲುಲಿ
ಪೊಡರೆ ನಿಜಾವಳಿಯು ಶೋಭೆ ರಂಜಿಸೆ ಬಂದರ್ ।
ಗಡಣದೆ ತೆಳ್ನಡುವಿನ ಸೆಳೆ
ನಡುವಿನ ಬಡನಡುವಿನಸಿಯುನಡುವಿನ ಸತಿಯರ್ ॥ ೧೬೦

ಲಳಿತನಿಜರೂಪವಿಭ್ರಮ
ವಿಳಾಸಮೆಡರ್ದೆಸೆಯೆ ಬಂದರಾಮಳಕಕುಚಂ ।
ಗಳ ನಾರಂಗಕುಚಂಗಳ
ನಳಿನೀ ಕುಟ್ಮಳಕುಚಂಗಳೆಳಜವ್ವನೆಯರ್ ॥ ೧೬೧

ಅವಯುವದ ಚೆಲ್ವು ತಾನಂ
ತವಯುವದಿಂ ಗೆಲೆ ವಿಳಾಸವಮರಿಯರ ವಿಳಾ ।
ಸವನಿಟೆಸಲ್ ಬಂದರ್ ಪನ
ಳವಾಯು ತಳಿರ್ವಾಯು ತೊಂಡೆವಾಯೊಳ್ವೆಂಡಿರ್ ॥ ೧೬೨

ಜಗುಟೆ ಕಳಕಾಂಚಿ ಹಾರಮು
ನುಗುಟೆ ಕುಚಂ ನೆಗಟೆ ನೂಪುರಧ್ವನಿ ರೂಪಂ ।
ಪೊಗಟೆ ಜನವೆಂದು ಬಂದರ್
ನಗೆಮೊಗದುಡುಮೊಗದ ಮುದ್ದುಮೊಗದಂಗನೆಯರ್ ॥ ೧೬೩

ಲಳಿತಾಕಾರಂ ವಿಭವಂ
ಬೆಳಗುವ ಲಾವಣ್ಯಮೆಸೆಯೆ ಬಂದರ್ ನಗೆಗ ।
ಣ್ಗಳ ಚೆಲ್ಗೆಗಣ್ಗಳಲರ್
ಣ್ಗಳ ನಿಡುಗಣ್ಗಳ ಬೆಡಂಗಿಯರ್ ಕೋಮಲೆಯರ್ ॥ ೧೬೪

ದೊರೆಯಾರೋ * ಚೆಲ್ವಿಂಗ
ಪ್ಸರಸಿಯರೀಕೆಯರೊಳೆನಿಸಿ ಮಜಿಮೆರ್ ಸುಕರ್ಗಂ ।
ಗುರುಳ ಸುಟಿಗುರುಳ ನಿಡುಗುರು
ಳುರುಳಿಗುರುಳ ತುಂಬಿಗುರುಳ ಗೋಪಸ್ತ್ರೀಯರ್ ॥ ೧೬೫

---

* ಖ. ಗ.—ಬರೆಯಾರೋ.

ತುಡುಗೆಯು ಬಂ  ಬಲ್ವೆಳಗಿಂ
ಪಡೆಯುತ್ತಿರ್ದ್ದೆಸೆಯೊಳಿಂದ್ರಚಾಪಶ್ರೀಯುಂ ।
ನಡೆತಂದರ್ ಚೆಲ್ವಿಂದೊ
ಳ್ನುಡಿಯು ತೆಡಂನುಡಿಯು ತೊದಳ ನುಡಿಯೊಳ್ವೆಂಡಿರ್ ॥ ೧೨೬

ಬಂದೆಳಸಿ ಬಳಸೆ † ಗೋಪೀ
ವೃಂದಂ ತುಹಿನಾಂಶು ‡ ಬೆಳಗೆ ಕುಮುದಾಮೋದ ।
ಸ್ಯಂದಿ ಮೃದುಪವನನೆಸಗೆ ಮು
ಕುಂದಂ ತತ್ಕೇಳಿರಂಗದೊಳ್ ರಂಜಿಸಿದಂ ॥ ೧೨೭

ಮುಡಿಗಟ್ಟಿಂಬಾಗೆ ನುಣ್ಬೀಲಿಯಿನಮರೆ ಭುಜಂ ರತ್ನಕೇಯೂರದಿಂದು
ಳ್ಪುಡೆ ಚೆಲ್ವಂಬೀಜೆ ಪೀತಾಂಬರದಿನಗಲುದ್ದರಂ ಕೌಸ್ತುಭಶ್ರೀಯಿನೊಳ್ಪಂ।
ಕುಡೆ ಗಂಡಂ ಕುಂಡಲಾಂದೋಳನದಿನೆಸೆಯೆ ನಿಂದಂ ತ್ರಿಭಂಗಾಂ
ಗದಿಂ ¶ ನೋ
ಟ್ಪೊಡೆ ಶೃಂಗಾರಾವತಾರಂ ಮುರರಿಪು ಕೊಳಲಂ ಬಾಜಿಸುತ್ತಿರ್ದನಾಗಳ್॥

ಇದು ಸಮಸ್ತಕವಿಕುಲಭವನಾಲಾಪಪೇಪೀತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತಶ್ರೀ
ಪಾದಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗನ್ನಾಥ
ವಿಜಯಮಹಾಪ್ರಬಂಧದೊಳ್ಪಯೋಧರಾಗಮನರ್ಥೇನು
ಕನಿಧೂನನಪ್ರಳಂಬನಿಶುಂಭನಶರತ್ಕಾಲಗಿರಿಯ
ಜ್ಞಗೋವರ್ಧನೋದ್ಧರಣಶಕ್ರಾಗಮನ
ಗೋವಿಂದಾಭಿಷೇಕೋತ್ಸವರಾಸ
ಕ್ರೀಡಾಪ್ರಾರಂಭವರ್ಣನಂ
ಚತುರ್ಥಾಶ್ವಾಸಂ

---

* ಖ.—ನಿಡುಗಂಗಳ.

† ಕ. ಗ.—ಬಯಸಿ.  ‡ ಕ. ಗ.—ಕುಮುದಾಂಶು

¶ ಕ. ಖ. ಗ.—ತ್ರಿಭಂಗಾಗ್ರದಿಂ.

## ಪಂಚಮಾಶ್ವಾಸಂ

ಶ್ರೀಕಮಳಲೋಚನಂ ತ್ರ್ಯ
ಶ್ರೀಕೃತಪದನುನ್ನತೈಕಜಘನಂ ಲಲಿತ ।
ಭ್ರೂಕಂ ತಿರ್ಯಗ್ವಳಿತ
ವ್ಯಾಕುಂಚಿತಕಂಠನೂದುತಿರ್ದಂ ಕೊೞಲಂ ॥ ೧

ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಿಂಪನಿ
ರ್ಕುಱಿಗೊಂಡೊಟ್ಟಜೆಯುಂ ನಿಮಿರ್ಚಿನಯಮಂ ತಳ್ಪೊಯ್ದಲಂಕಾರಮಂ
ಕೆಳಗೊಂಡಾಣತಿಯುಂ ತೆರಳ್ಚಿ ಜತಿಯುಂ ಸೈತೋಜೆಯುಂ * ತಾಳ್ದಿ ಗೋ
ವಳರಾಯುಂ ಕೊೞಲೂದಿದಂ ನಗೞ್ವನಂ ಮಾಧುರ್ಯತೂರ್ಯಸ್ವನಂ ॥

ಭಣಿತಿ ಬೆಡಂಗು ಕಾಕು ಖಚರಂ ಗಮಕಂ ತಿರುಪಿಂಪು ನುಣ್ಪು ನೇ
ವಣೆ ಕಣೆ ಬಣ್ಣದೊಡ್ಡವಣೆ ಕಾಳಸಿ ಬೈಸಿಕೆ ಪಟ್ಟು ಕಾಂತಿ ಕೊಂ ।
ಕಣು ಕನುಜಾಯಿ ಗೀತಿ † ಜತಿ ಜೋಕ ನಯುಂ ಬಹುಲಾಯಿ ದೇಸೆ ಪೆ
ಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ ॥ ೩

ರಸಭಾವಂ ಪೆಱತೋಜೆ ಬೇಱೆ ಜತಿ ಮತ್ತೊಂದಿಂಪಪೂರ್ವಂ ನಯಂ
ಪೊಸತೆಂಬಂತಿರೆ ನಾಳಿಕೇರರಸಧಾರಾವೃಷ್ಟಿ ಜೇನೆಯ್ಯ ಸೋ ।
ನೆ ಸುಧಾಸಾರವಿದೆತ್ತಣಿಂ ಪಸರಿಸಿತ್ತೆಂಬಂತು ದೈತ್ಯಾರಿ ಬಾ
ಜಿಸಿದಂ ಬಣ್ಣಿಸೆ ವಾಸವಂ ಮಧುರನಾದಾವಾಸವಂ ವಾಸವಂ ॥ ೪

ಕಮಳದಳಾಕ್ಷನಾಕೃತಿಯನೀಕ್ಷಿಸಿ ಸಾಸಿರ ಕಣ್ಗಳಂಗದೊಳ್
ಸಮನಿಸಿದೀಕ್ರಮಂ ಸಫಲಮಾಯ್ತೆನಗೀತನದೊಂದು ವೇಣುನಾ ।
ದಮನೊಸೆದಾಲಿಸಲ್ ಕಿವಿಗಳೇಕೆಯೊ ಸಾಸಿರಮಾದುವಿಲ್ಲೆನು
ತ್ತಮರವರಂ ಮನಂಗೊಳೆ ನೆಗೞ್ದುದು ಕೃಷ್ಣನ ವೇಣುನಿಸ್ವನಂ ॥ ೫

---

* ಕ, ಖ, ಗ—ತೈತೋಜೆಯುಂ.    † ಖ—ರೀತಿ.

ವ॥ ಅನಂತರಂ,

ಸುರುಚಿರಚಿತ್ರಾಭರಣಾಂ
ಬರಗೋಪೀರಚಿತರಾಸಮಂಡಲಬದ್ಧಾಂ।
ತರವೃತ್ತಿ ಗೋಪಚಂದ್ರಂ
ಪರಿವೇಷಂಗೊಂಡ ಚಂದ್ರನಂತೆಸೆದಿರ್ದಂ ॥ ೬

ಅಸಕೃದ್ಭ್ರೂಪಲ್ಲವೋಲ್ಲಾಸಿತವಸೆಯೆ ಚಳಲ್ಲೋಚನಾರೇಚನಂ ರಂ
ಜಿಸೆ ಮುಕ್ತಾಚಕ್ರೋಟಿಕಾಡಂಬರಮೆಳವಡೆ ಬಾಹಾಲತಾಂದೋಳ
ಮುನ್ನೀ।
ಲಿಸೆ ಕೃಷ್ಣಂ ನೃತ್ಯಮಂ ಸೂತ್ರಿಸುವುದುವೊಲವಿಂ ಪಾಡುತುಂ ಗೋಪಿ
ಯರ್ನ
ರ್ತಿಸಿದರ್ ಚೈತ್ರಾನಿಳಂ ಸೂತ್ರಿಸೆ ವನಲತೆಗಳ್ ನರ್ತಿಪೊಂದಂದದಿಂದಂ॥ ೭

ಇನಿಸಂ ಕೀರ್ತ್ಮಾಡಿ ಭೃಂಗೀರುತಿಯುಸಿಱಿಸಿ ಪುಷ್ಪಾಯುಧಜ್ಯಾಲತಾನಿ
ಸ್ವನಮಂ ವಾಣೀವಿಪಂಚೀರವಮನಳಿದು ಗೇಯಸ್ವನಂ ಪೊರ್ಮೆ ಗೋವಿಂ।
ದನೆ ನಾನಾರೀತಿಯಿಂ ಕರ್ತ್ತರಿಯ ಸೆಳೆಯನಳ್ಳಾಡಿದೊಂದಂದದಿಂ ವಾ
ಸನೆಯಾದತ್ತೆಂಬಿನಂಪಾಡುದೆಸೆಯೆ † ನಟದೊಳ್ಪಕಾಂತಾಕ
ದಂಬಂ ॥ ೮

ತನತನಗೆ ಗೋಪಿಯರ್ ಕೃ
ಷ್ಣನಂಕವಾಲೆಯನೆ ಪಾಡಿದರ್ ‡ ಕೃಷ್ಣಂ ಚಂ।
ದ್ರನ ಬೆಳ್ದಿಂಗಳ ತಣ್ಣೆಲ
ಲ ನೆಯ್ದಿಲೊಪ್ಪಮನೆ ಪಾಡಿದಂ ¶ ಕಳರವದಿಂ ॥ ೯

---

* ಕ ಖ.ಗ— ವರ್ತಿ.

† ಮೊ—ಅ.ಪಾಡಿದನೆಸೆಯೆ. ‡ ಕ ಖ ಗ—ಪಾಡುತುಂ

¶ ಕ.ಖ ಗ —ನೆಯ್ದಿಲೊಪ್ಪಮನೆ ಪಾಡಿದರ್.ಮೊ— ಅ — ನೆಯ್ದಿಲೊ.
ಪ್ಪಮನೆ ಪಾಡಿದರ್.

ವಲಯಾಳೀರವಮಂಘ್ರಿಭೂಷಣರವಂ ಕಾಂಚೀರವಂ ಪೊಣ್ಮೆ ಸು
ಯ್ಯಲರ್ಗಂಪಣ್ಪಿನಕಂಪು ಪೂಮುಡಿಯ ಕಂಪೊಂದೊಂದನೊಟ್ಟೈಸೆ
ದೋ ।
ರ್ವಲನಂ ಭ್ರೂವಲನಂ ಕಟಾಕ್ಷವಲನಂ ಚೆಲ್ವಾಗೆ ಗೋಪಾಂಗನಾ
ವಲಿಯೊಳ್ ರಂಜಿಸಿದತ್ತು ಕಂಜನಯನಸ್ವಾಂತಕ್ಕಣಂ ಪೆಕ್ಕಣಂ ॥ ೧೦

ಗೀತರಸಪ್ರವಾಹನದಿ ಚಂಚಳನೇತ್ರಮರೀಚಿವೀಚಿ ಸಂ
ಘಾತಿತಹೃದ್ಯವಾದ್ಯಘನಸೂಕ್ಷಣದೇಱ್ದಿ ನಿಸರ್ಗವಾದ ಸಂ ।
ಗೀತರಸಾಬ್ಧಿ ಪೆರ್ಚೆ ಹರಿಲೋಚನಚಂದ್ರಿಕೆಯಿಂ ವಿಧೂದಯ
ಸ್ಮಿತಸುಧಾಬ್ಧಿಯಂತೆ ಪರಿಘೂರ್ಣಿಸುತಿರ್ದುದು ರಾಸಕೇಳಿಯೊಳ್ ॥ ೧೧

ನವಯೌವನೆಯರ್ ಲಾವ
ಣ್ಯವತಿಯರಱಿದದ್ರಿಧರನ ಮನಮಂ ಕೋಲಾ ।
ಟವನಾಡಲ್ ಕೆಲರಾಟಂ
ದು ವಿನೋದದೆ ಕನಕದಂಡಮಂ ಪಿಡಿದೆಸೆದರ್ ॥ ೧೨

ಯುಗಪತ್ಕ್ರಮವಿಧಾನದಿಂ ಯುಗಪದುತ್ತಾನಾಂಗಸಂಸ್ಥಾನದಿಂ
ಯುಗಪದ್ವಿಭ್ರಮವೇಗದಿಂ ಯುಗಪದಭ್ಯಾಯಾತಚಾತುರ್ಯದಿಂ ।
ಯುಗಪದ್ದಂಡಝಣಿಲ್ ಝಣಿಲ್‌ಕ್ವಣಿತದಿಂ ಕೋಲಾಟದೊಳ್ ಕೃಷ್ಣನಂ
ಬಗೆಗೊಂಡರ್ ನವ-ಸತ್ತ್ವವಿಭ್ರಮಣಿಯರ್ ಶ್ರೀರೂಪೆಯರ್ಗೋಪಿಯರ್॥

ಈನಟಿಯಂತರಂಗಮೆ ಮುಕುಂದನ ಚಿತ್ತಮ ಬಲ್ಲುದೀಕೆಗಿಂ
ತೀನಯದಿಂದೆ ನರ್ತಿಪುದನೆಂಬಿನೆಗಂ ರಸಭಾವರಮ್ಯಸಂ ।
ಸ್ಥಾನಕನೃತ್ಯಮಾ ಪರಮತತ್ತ್ವಸುಖಕ್ಕೆಣೆಯಾಗಿ ತೋಱೆ ಗೋ
ಪೀನಟ ತೋಱಿದಳ್ ಮಿಸುಗುವೋಲೆಯ ತೂಕಮೆ ತೋಱೆ ನೃತ್ಯಮಂ॥

ನಗೆಮೊಗದಿಂ ಮುಗುಳ್ನಗೆ ತುಳುಂಕೆ ಬಳಲ್ಕುಡಿಯಿಂದರಲ್ಗಳ
ಲ್ಲುಗೆ ನಿಡುಗಣ್ಗಳಿಂ ಪೊಳಪು ಸಾಲಿಡೆ ನೀಳ್ಚಳಾಳಕಾಳಿಯಿಂ ।
ಮೃಗಮದರೇಣು ಸೂಸೆ ಲತೆ ತೆಂಬೆಲರ್ಗಾಯ್ವನೆ ನರ್ತಿಪಂದದಿಂ
ಸೊಗಯಿಸೆ ಗೋಪಿ ಡಕ್ಕೆಯ ಲಯಕ್ಕೆ ಪೆಱಳ್ ಜತಿಮೆಟ್ಟುತಾಡಿದಳ್॥ ೧೫

ಮಸೃಣಕಟಾಕ್ಷದಿಂ ಕುಮುದದೊಳ್ಳ್ಸಲಂ ಕರೆವಂತಿರಂಘ್ರಿವಿ
ನ್ಯಸನದಿನಬ್ಜಮುಂ ಕೆದಱುವಂತಿರೆ ಕೈಸಿರಿಯೊಂದು ದೇಸೆಯಿಂ |
ಕಿಸಲಯಜಾಲಮುಂ ಪರಪುವಂತಿರೆ ಭೂಷಣಕಾಂತಿಯಿಂ ತಟಿ
ತ್ಪ್ರಸರಮನತ್ತಲುಂ ಪಸರಿಪಂತಿರೆ ಬೊಂಬುಳಿಗೊರ್ವಳಾಡಿದಳ್ ‖ ೧೬

ವ॥ ಮತ್ತೊರ್ವಳ್,

ತ್ರಿಗುಣಿಸೆ ನಯನವಿಭೂಷಾಂ
ಶುಗಳಲಗಿನರುಚಿಯನಲಗ    ನೆರಡುಂ ಕೈಯೊಳ್ |
ತ್ರಿಗುಣಿಸಿ ಚಿತ್ರಂಬಡೆದಳ್
ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೊಣೆಯಂ ‖ ೧೭

ವ॥ ಮತ್ತೊರ್ವಳ್,

ಸರಳತರಾಂಗುಳೀಮೃದುನಿವರ್ತನದಿಂ ಕಱಿಗಣ್ಮುರ್ತಿಪ ಬಂ
ಧುರರಸಗೇಯಮೆಂಬಮೃತಪೂರಮನೊಯ್ಯನಲಾಬುವಿಂದಮು |
ತ್ತರಿಸುತುಮಿರ್ದಳೀಕೆಯೆನೆ ಬಾಜಿಸಿದಳ್ ಪೆಱಳುನ್ನತಸ್ತನಾಂ
ತರದೊಳಗೌಂಕಿ ವೀಣೆಯನದೇಪ್ರೊಗಟ್ವಂ ಸುರತಪ್ರವೀಣೆಯಂ ‖ ೧೮

ವ॥ ಮತ್ತೊರ್ವಳ್,

ಅಲಕಚಯಂಗಳಾಡೆ ನೊಸಲೊಳ್ ಕಬರೀಭರವಾಡೆ ಬೆನ್ನೊಳು
ಜ್ಜ್ವಲತರಹಾರವಾಡೆ ಕುಚದೊಳ್ ಮಿಸುಪ್ರೋಲೆಗಳಾಡೆ ಗಂಡಮಂ |
ಡಲದೊಳದೊಂದು ಕಂತುಕದ ಬೆಂಬೞಿಯೊಳ್ ಪ್ರೊಳೆದಾಡೆ ಕಣ್ಬೊಣರ್
ಸುಲಲಿತೆ ಸೆಂಡನಾಡಿ ಮುಳುಗಾಡಿಸಿದಳ್ ಹರಿಯಂ ಸುಖಾಬ್ಧಿಯೊಳ್ ‖ ೧೯

ವ॥ ಅಂತುಮನೋಹರಮಾದ ವಿವಿಧವಿನೋದಮಂ ನೋಡಿ ಸಫಲೀಕೃತಸಹಸ್ರಲೋಚನನರವಿಂದಲೋಚನಂಗಭಿಮುಖನಾಗಿ ದೇವ, ನಿನ್ನ ಸಮೀಪದೊಳಾನಿರೆ † ನೀನುಪೇಂದ್ರನಾಗಿ ರಾಸಗೋಷ್ಠಿಯನನುಕರಿಸಿದ

* ಖ. ಗ—ಗಳಿಂ ತನುರುಚಿಯ ಬೆಳಗ. † ಕ ಗ—ಸುಖಪದದೊಳಾನಿರೆ.

ಕಾರಣದಿಂದುಪೇಂದ್ರಾಭಿಧಾನಮಂ ಧರಿಯಿಸುವುದೆಂದತಿಪ್ರೀತಿಯಿಂ ನುಡಿದಿಂದ್ರಂ ಬೀೞ್ಕೊಂಡು ಪೋದಂ. ಇತ್ತ ಗೋಪಿಯರೊಡನೆ ಸುಖಸಂಕಥಾವಿನೋದದಿನಿರ್ದೊರ್ವಳ್ ಕೃಷ್ಣನನ್ಯಪ್ರದೇಶಕ್ಕೆ ಪೋಗೆ ಕೃಷ್ಣಚೇಷ್ಟಿತಪ್ರಯುಕ್ತರೂಪೆಯರ್ ಗೋಪಿಯರ್ ವೃಂದಾವನದೊಳಿರ್ದಲ್ಲಿ,

ಆಂ ಕೃಷ್ಣನೆನಿಸಿಯಿರ್ದೆನೆ *
ಪಂಕಜಮುಖಿಯರಿರ ನೋಡಿಮೆನುತುಂ ಶ್ರೀವ ।
ತ್ಸಾಂಕನ ಸುಲಲಿತಯಾನದ
ಬಿಂಕಮನನುಕರಿಸಿ ತೋಱುತಿರ್ದಳದೊರ್ವಳ್ ॥ ೨೦

ದಾಮೋದರನಾಂ ಮತ್ತಿಯ
ನೀಮುಱಿದಪೆನೆಂದದೊಂದು ಕುಜಮಂ ಕಾಂಚೀ ।
ದಾಮದೆ ತೊಡರ್ಚಿ ಶಿಶುಲೀ
ಲಾಮುಗ್ಧಸ್ಮಿತಮನೊರ್ವಳಾಗಳ್ ಮೆಱೆದಳ್ ॥ ೨೧

ಕಾಳಿಯನ ಮಡುವನಾಂ ವನ
ಮಾಳಿಯೆನಿದೆ ಕದಡಿದಪ್ಪೆನೆನುತುಂ ನೀರೊಳ್ † ।
ತೋಳೆರಡುಮನಾಸ್ಫೋಟಿಸಿ
ನೀಳಾಬ್ಜದ ಕಾವುವಿಡಿದು ಕುಣಿದಳದೊರ್ವಳ್ ॥ ೨೨

ತಾಳಫಳಂದಿಂಗೆಮ ಗೋ
ಪಾಳರ್ ಖಳನಿಂದೆ ತಾಱಿನಿಟ್ಟಪೆನೆನುತುಂ ।
ಲೋಳಾಕ್ಷಿ ‡ ಪೊರೆಯ ಕೌಂಗಂ
ನೀಳಾಬ್ಜದಿನಿಟ್ಟು ಹರಿಯ ಪರಿಯಂ ಮೆಱೆದಳ್ ॥ ೨೩

ಪಿಂಗುಗೆ ವೃಷ್ಟಿಭಯಂ ನಿಮ
ಗಾಂ ಗೋವರ್ಧನಮನೆತ್ತಿದೆಂ ಕೃಷ್ಣನೆನಂ ।

* ಕ.ಖ.ಗ — ಇರ್ದೆನೆ. † ಕ ಖ.ಗ. — ವನುತುಮದೊರ್ವಳ್
‡ ಕ.ಗ — ಲೀಲಾಕ್ಷಿ.

ದಂಗತ್ರಿಭಂಗಿ ಸೊಗಯಿಸ
ಲಂಗನೆ ಕಂತುಕಮನೆತ್ತಿ ನಿಂದಳದೊರ್ವಳ್ ॥ ೨೪

ಮೃಗನಯನೆ ನೋಡಿ ವನವೀ
ಧಿಗಳಂ ಧ್ವಜ ವಜ್ರ ಪಂಕಜಾಂಕುಶರೇಖಾ ।
ಳಿಗಳಿಂದೆಸೆದಪುದಿದು ಲಲಿ
ತಗಾವಿನಗಧರನ ಪಜ್ಜೆಯೆಂಗೊಸೆದುಲಿದಳ್ ॥ ೨೫

ನಳಿನಾಕ್ಷನ ಪದಪದ್ಧತಿ
ಗಳ ಬಟಿಯೊಳಲಕ್ತಕಾಂಕ ಪದಪದ್ಧತಿಗಳ್ ।
ಪೊಳೆವುವಿವೆ ನೋಡಿವಾವಳೊ
ಬಳಿರಿಪ್ಪವೊಡನಲಿವ ಧನ್ಯೆಯೆಂದಳದೊರ್ವಳ್ ॥ ೨೬

ಅನ್ಯಾಸಕ್ತಂ ಕೃಷ್ಣಂ
ಮಾನ್ಯೆಯದೊರ್ವಳನವಜ್ಞೆಗೆಯ್ದನಿದಂತಾ * ।
ಮನ್ಯುನಿರಾಯುಸವಿಮುಖಿಪ
ದನ್ಯಾಸದ ಪಜ್ಜೆಯೆಂದು ನುಡಿದಳದೊರ್ವಳ್ ॥ ೨೭

ಒಡನಲಿವ ನಲ್ಲಳಚ್ಯುತ
ನಡಿವಜ್ಜೆಗಳಲ್ಲಿ ಕೇಳಿಗೆಳಸಿದಳವನೀ ।
ಯಡಿಯೊಳ್ ಪೋರ್ಕುಳಿ † ಯಾಯ್ತಂ
ದಡಿಗಡಿಗಾಯೆಡೆಯನೊರ್ವಳೀಕ್ಷಿಸುತಿರ್ದಳ್ ॥ ೨೮

ಅನುಗತಿವೆತ್ತ ನಲ್ಲಳಡಿವಜ್ಜೆಗಳಲ್ಲಿಯೆ ಸಿಂದುವಜ್ಜಲೋ
ಚನನಡಿವಜ್ಜೆ ನೀಡುಮಿದಿರಿಂ ಬಱಿಯಂ ಪುದಿದಿರ್ದುವಂತವಳ್ ।
ಮುನಿದು ನಿಲಲ್ಕೆ ತಾಂ ತಿಳಿಪಲೆಂದೆಡೆಯಾಡಿದ ಪಾಂಗಿದೊಂದು ತ
ದ್ವನಿತೆಯೊಳಾದ ಕೃಷ್ಣನೊಲವೆಂದು ಪೆಱಳ್ ಮನದೊಳ್ ಕಲಂಕಿದಳ್ ॥

* ಕ ಖ.ಗ —ನದಂತಾಂ † ಕ.ಖ.ಗ.—ದನವನೀಯೆಡೆಯೊಳ್ ಪೊರ್ಕುಳಿ.

ಸ್ತನವತಿಗನುಯಾತೆಗೆ ಕೃ
ಷ್ಣನೊಲ್ದು ಕೈಗೊಟ್ಟು ನಡೆದನೀಯೆಡೆಯೊಳಿದಾ ।
ವನಿತೆಯ ಲಘುಪದಪದ್ಧತಿ
ಯೆನುತುಮದಂ ಸಖಿಗೆ ತೋಱಿದಳ್ ಮತ್ತೊರ್ವಳ್ ॥ ೩೦

ವ॥ ಇಂತನೇಕಪ್ರಕಾರದಿಂ ಪ್ರಣಯಯುವತಿಯರ್ ತೊಳಲ್ದು ನೋಡಿ,

ಹರಿ ಪೋತಂದಡಿವಜ್ಜೆಗಳ್ ಬಯಲೊಳಿಲ್ಲಿಂದಿತ್ತ ಮಿನ್ನಿಲ್ಲ ಚಂ
ದ್ರರುಚಿಶ್ರೇಣಿಗಭೇದ್ಯಮಪ್ಪ ಬನದೊಳ್ ಪೊಕ್ಕಿರ್ದನಾಧೂರ್ತನೆಂ ।
ದಿರೆ ಗೋಪೀಜನಮಾಗಳೊರ್ಮೊದಲೆ ವೃಕ್ಷಚ್ಛಾಯೆಯಂ ಕೈಕೊಳು
ತ್ತಿರೆ ಶೃಂಗಾರರಸಾಬ್ಧಿ ಮೇಲೆ ಕವಿದಂತೆಯ್ತಂದನಬ್ಜೇಕ್ಷಣಂ ॥ ೩೧

ವ॥ ಅಂತು ಬಂದು ವಿಕಸಿತಮುಖಾರವಿಂದನಾಗಿ ಮುಂದಿರ್ದ ಶೃಂಗಾರನಿಧಿಯಂ ಕಂಡತಿಪ್ರಣಯ * ಕುಪಿತೆಯರಾದ ಗೋಪಿಯರೊಳ್,

ಪ್ರಿಯೆಯೊರ್ಬಳ್ವಿನಿಗೂಢಸಂಭ್ರಮೆಯುಮೊರ್ಬಳ್ಪಾಟಲೀಲೋಲನೇ
ತ್ರೆಯುಮೊರ್ಬಳ್ ವಿತತಸ್ಮಿತಾನ್ವಿತೆಯುಮೊರ್ಬಳ್ ದಂತದಷ್ಟಾರುಣೋ
ಷ್ಠೆಯುಮೊರ್ಬಳ್ ವಿಮುಖೀಕೃತಾಕೃತಿಯುಮೊರ್ಬಳ್ ಕುಂಚಿತ ಭ್ರೂಶಲಾ
ಕೆಯುಮಾಗಿರ್ದ ಬೆಡಂಗದೇಂ ಪಡೆದುದೋ ಕೃಷ್ಣಂಗತಿಪ್ರೀತಿಯಂ ॥ ೩೨

ವ॥ ಆಗಳ್,

ಸರಸಾಲೋಕನದಿಂ ವಚ
ನರಚನೆಯಿಂ ಹಸ್ತಕಮಳಸಂಸ್ಪರ್ಶದಿನಂ ।
ಬುರುಹೇಕ್ಷಣಂ ಪ್ರಸನ್ನಾ
ಚರಿತೆಯರಪ್ಪಂತುಮಾಡಿದಂ ಗೋಪಿಯರಂ ॥ ೩೩

ಮಾರ್ದವದೆ ಸಖಿಯರೊಡನೆ ಜ
ನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ।

* ಖ ಗ — ಕಂಡತಿಪ್ರಣೋಯ.

ಮಾರ್ದನಿವಿಡಲದ್ಭುತವೃಷ
ನರ್ದನವುಣ್ಕಿದುದದೊಂದು ವಜ್ರಾಶನಿವೊಲ್ ‖ ೩೪

ವ‖ ಅನಂತರಂ,

ಬಳಭಿನ್ನಾಗೇಂದ್ರನೊಳ್ ಮಾಮಸಲೆದ ಹರವೃಷಾಧೀಶನೊಳ್ ಪ್ರೋರ್ದಕೀನಾ
ಶಲುಲಾಯಶ್ರೇಷ್ಠನೊಳ್ ತಾಗಿದ ರಣಗಣನಾರೇಖೆಯೆಂಬಂತುರೇಖಾ।
ವಲಿ ಪೀನಸ್ಕಂಧದೊಳ್ ತಳ್ತಿರೆಯಿರೆ ಪ್ರೊಜಿವಟ್ಟಿತ್ತು ಕಾಂತಾರದಿಂ ಪಾ
ಟಲನೇತ್ರಂ ತುಂಗಗಾತ್ರಂ ಘನತರಕಕುದಂ ಶಾತಶೃಂಗಂ ಗವೇಂದ್ರಂ ‖

ಕುಲಿಕಾಟೋಪಮನಂತಕಾರಭಟೆಯಂ ಕಂಠೀರವಕ್ಷೋಭಮಂ
ಕುಲಿಶಾಡಂಬರಮಂ ಲಯಾನಲಶಿಖಾಸಂರಂಭಮಂ ಸ್ಫೋಷದಿಂ ।
ಗೆಲೆವೆಂದೊರ್ವಯೆ ಮುಟ್ಟೆವೆಂದುದು ಜೆಳಂಟುತ್ತುಂ ಮಹೀರಂಗಮಂ
ಕೆಲೆದುಬೇರ್ಚಿಸುತಂಗವಂ ಮೊನೆಯಿಡುತ್ತುಂ ಶೃಂಗಮಂ ಪುಂಗವಂ ‖

ವ‖ ಅಂತು ಮುಟ್ಟೆ ಬರ್ಪರಿಷ್ಟಾಸುರನಂ ಕಂಡು,

ಭಯಚಕಿತನೇತ್ರೆಯರ್ ಗೋ
ಪಿಯರೀಕ್ಷಿಸೆ ಕೃಷ್ಣನಾರ್ದು ತಳಶಬ್ದದಿಂ।
ತ್ಯಯನೆಸುರವೃಷಂಗಭಿಮುಖ
ತೆಯಿನೆಯ್ದಿದನೆಸೆಯೆ ಗಂಡಗರ್ವಮಖರ್ವಂ ‖ ೩೩

ವ‖ ಅಂತೆಯ್ದಿ ಪ್ರೋಣರ್ದು,

ಗಿರಿ ಪವಿ ಮುಟ್ಟಿದನ್ನೆಗವರಣ್ಯಕುಜಂ ದವಮುಟ್ಟಿದನ್ನೆಗಂ
ಕರಿ ನಖರಾಯುಧಂ ಮುಳಿಯುದನ್ನೆಗಮುಗ್ರನಿಶಾಟರಚ್ಯುತಂ ।
ಪರಿಯಿಡುವನ್ನೆಗಂ ಬಟಿಯುವೋನೆನೆ ಶೃಂಗಮನೊತ್ತಿ ಗಂಟಲಂ
ಮುರಿದರುಣಾಂಬುಮಂ ಪಿಟಿದು ಮರ್ದಿಸಿದಂ ವೃಷನಂ ಜನಾರ್ದನಂ ‖

ವ‖ ಆಸಮಯದೊಳ್,

ಅಪರಿಮಿತಂ ಪ್ರೋಣ್ಮಿದುದವು
ರಪಟಹರವಮಾರವಪ್ರಹಾರದೆಚಂದ್ರ |
ತಪವೆ ಕಟಿಲ್ದಿಳೆಗುಗುವಂ
ತೆ ಪೊದಟ್ದುದು ಘೋರೆನಲಲರ ಬೆಳ್ಸರಿ ನಭದೊಳ್ ॥ ೩೯

ವ॥ ಅಂತು ವಿಜಯೋತ್ಸವಂ ನೆಗಟೆ ಗೋಪವರಾಂಗನಾಜನಂ ಬೆರಸು ಬಂದುಪೇಂದ್ರಂ ಗೋಕುಲದೊಳ್ ಸುಖದಿನಿರೆ ಮಱುದೆವಸ ಮುದಯ ಸಮಯದೊಳ್,

ತ್ರಿದಶಾರಿ ಕೇಶಿ ಮಡಿದಪ
ನಿದು ಶುಭದಿನಮೆಂದು ಶಕ್ರಮಂಗಳಸವನ* |
ಕ್ಕುದಯಾಚಲವೇದಿಯೊಳಿಟ
ಪಿದ ಪೊಂಗಳಸಂಬೊಲಾಯ್ತು ದಿನಕರಬಿಂಬಂ ॥ ೪೦

ಬಾಳಾತಪದ ವಿಳಾಸಮ
ನೇಳಿಸೆ ಪೀತಾಂಬರಾಂಶು ವೃಂದಾವನದೊಳ್ |
ಲೀಳಾಲಂಕೃತಗಮನಂ
ನೀಳೋತ್ಪಳವರ್ಣನಚ್ಯುತಂ ಕ್ರೀಡಿಸಿದಂ ॥ ೪೧

ಸುರಭಿ ಘಟೋಧ್ನಿ ದುಗ್ಧನಿಧಿ ನಂದಿನಿ ವತ್ಸಲೆ ಕಾಮಧೇನು ಪೀ
ವರಕುಚೆ ಗೋಪಿ ಸಲ್ಲಕಿಯೆನಿಪ್ಪಭಿಧಾನದ ಗೋಕದಂಬಮಂ |
ಕರೆದು ಮುರಾರಿ ಮೆಯ್ದಡೆದು ಮೇಯಿಸಿಯುಂ ತಿಳಿನೀರನೂಡಿಯುಂ
ಮರದ ನೆೞಲ್ಗಳೊಳ್ ಸಿಲಿಸಿಯುಂ ಮೆಱೆದಂ ನಿಜಗೋಪಲೀಲೆಯಂ ॥

ಮುತ್ತಿನ ನೀಲದೆಕ್ಕಸರದೋಲೆ† ಕದಂಪಿನೊಳಾಡೆ ನೆತ್ತಿಯೊಳ್
ಕತ್ತುರಿವೀಲಿಯುಂ ಮಿಱುಗೆ ಪೀತಪಟಂ ಕಟಿಯೊಳ್ ಬೆಡಂಗುಮೆ|

---

* ಖ —ಮಂಗಳ್ವಸನ. ಗ.—ಮಂಗಳಸಮಯ † ಖ ಗ.—ನೀಲದೆಕ್ಕ ತರದೋಲೆ.

ಯ್ವೆತ್ತಿರೆ ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ ವೇಣುವಿಂ
ತುತ್ತುರುನಿಸ್ವನಂ ನೆಗಪೆ ಗೋವಳರಾಯನ ಲೀಲೆ ರಂಜಿಕುಂ ॥ ೪೩

ವ॥ ಆಸಮಯದೊಳ್,

ತುರಗಾಕಾರದೆ ಕಾಳರಕ್ಕಸನೆ ಮೂಱುಂ ಲೋಕವಂ ನುಂಗಲೆ
ಚ್ಚರುತಿರ್ಪಂತಿಳೆಯುಂ ಖುರಾಗ್ರಹತಿಯಿಂ ನುಗ್ಗೊತ್ತುವಾಕಾಗಜೋ ।
ತ್ಕರಮುಂ ಪೋಗೊದೆವಬ್ಧಿಯುಂ ಸರಳಪಕ್ಷಾಶ್ವಂಗಳಂ ನಿಕ್ಕರೊ
ಪ್ಪರದಿಂ ಪಾಯ್ವುಳವಿಂದೆ ಕೇಶಿ ಪರಿತಂದಂ ಕಂಸನಾದೇಶದಿಂ ॥ ೪೪

ವ॥ ಅಂತುನಿಜಗತಿವಿಜೃಂಭಣಂ ಭುವನಕ್ಷೋಭವಾಗೆ,

ಪೆಸರ್ವೆತ್ತರ್ ದಶಕಂಧರಾದಿದನುಜರ್ ಮುನ್ನಾದೊಡಂ ಕೇಶಿಯುಂ
ಪೆಸರ್ಗೊಂಡನ್ಯನಿಶಾಟರಂ ಪೆಸರ್ಗೊಳಲ್ವೇಡಿಂತತಿಕ್ರೂರರಿಂ ।
ತುಸಮುಚ್ಛೃಂಖಳರಿಂತು ಸಾಹಸಿಕರಿಂತುದ್ವೃತ್ತರಾರೆಂಬಿನಂ
ಗ್ರಸನಾಟೋಪದಿನೆಯ್ದಿದಂ ಹರಿಯನುತ್ಕರ್ಣಂ ವಿದೀರ್ಣಾನನಂ * ॥

ವ॥ ಆಗಳಾಕೇಶಿಯುಂ ಮುಂಜಕೇಶಿ ಮಾರ್ಕೊಂಡು,

ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ವರ್ಧನೋದ್ರೇಕದಿಂ
ಸೆರೆಗಳ್ ಬೀಗಿ ನೆಳಲ್ನೆಳಲ್ಗರೆಯೆ ನೆತ್ತರ್ ಮೂಗಿನೊಳ್ ತೀವಿ ಪಾ ।
ಯ್ತಿರೆ ನಿಟ್ಟೆಲ್ವು ಛಟಛಟೆಂದೊಡೆಯೆ ತದ್ದೈತ್ಯಾಧಮಂ ನೀಳದಿಂ
ಬಿರಿದಂ ಭೂತಗಣಕ್ಕಮಂಡಜಗಣಕ್ಕಂ ಪರ್ಚುಗೊಟ್ಟಂದದಿಂ † ॥೪೬

ವ॥ ಆವಧಕ್ರಮಮಂ ಕಣ್ಣಾರೆ ನೋಡಿ,

॥ ಪೃಥ್ವಿ ॥

ಅದೊಂದು ಪರಿ ತಾಟಿನಿಟ್ಟು ಖರದೈತ್ಯನಂ ಕೊಂದ ಪಾಂ
ಗದೊಂದು ಪರಿ ಗಂಟಲಂ ಮುರಿದರಿಷ್ಟನಂ ಕೊಂದಗು ।

---

* ಖ. ಗ.—ವಿಶೀರ್ಣಾನನಂ. † ಕ ಗ.—ಪಚ್ಚುಗೊಟ್ಟಂದದಿಂ

ರ್ವದೊಂದು ಪರಿ ಕೇಶಿಯುಂ ಸವೆುದೆ ಸೀಳ್ದು ಕೊಂದಂದವೆಂ
ದದೇಂ ಕಹಕಹೋರು * ನಿಸ್ವನದೆ ನಕ್ಕನಾನಾರದಂ ‖ ೪೭

ಅಭಿನವಭಂಗಿಯೊಳರಿಯುಂ
ವಿಭು ಮಡಿಪಿದೆ ಭೂಪುಭೂಪೆನುತ್ತುತ್ಸವದಿಂ ।
ನಭದೊಳ್ ಮುನಿಪತಿ ನಾರದ
ನಭಿನುತಮತಿ ಮುಖರನಾಗಿ † ಹರಿಗಿಂತೆಂದಂ ‖ ೪೮

ಜಗಮಂ ನುಂಗುವ ಶೂಲಿ ನೀನೆ ಜಗಮಂ ಮಾಳ್ಪಬ್ಜಜಂ ನೀನೆ ತ
ಜ್ಜಗಮಂ ರಕ್ಷಿಪ ವಿಷ್ಣು ನೀನೆ ಜಗಮುಂ ಪೋ ನೀನೆ ಸರ್ವೇಶ ಸ ।
ರ್ವಗ ಸರ್ವಾತ್ಮಕ ಸರ್ವಭೂತಮಯು ನಿನ್ನಿಂ ಭಿನ್ನವಾಗಿರ್ಪ ವ
ಸ್ತುಗಳಿಲ್ಲೀರಿಪು ಭಿನ್ನನಾದನಿದು ಚಿತ್ರಂ ಪದ್ಮಪತ್ರಾಂಬಕಾ ‖ ೪೯

ಗತಿಗೆಟ್ಟ ಕೇಶಿ ಸಮರ
ಕ್ಷಿತಿಯೊಳ್ ಕೆಡೆದಿರ್ದುವೀಗಮುನ್ನಿಲ್ಲದುದೊಂ ।
ದತಿಶಯಸುಗತಿಯನೊಳಕೊಂ
ಡು ತರಣಿಮಂಡಲಮನೆಯ್ದಿದಂ ಕಪುಟಕೋದ್ವ್ಯಂ ‖ ೫೦

ದಾನವರೊಳತಿಕ್ರೂರಂ
ತಾನಿವನೆನಿಸಿರ್ದ ಕೇಶಿಯುಂ ಕೊಂದುವಜುಂ ।
ನೀನಿಂ ಕೇಶವನೆಂಬಭಿ
ಧಾನದೆ ವರ್ತಿಸು ಮುರಾರಿ ಧರೆ ಕೀರ್ತಿಪಿನಂ ‖ ೫೧

ವ‖ ಎಂದು ಅರವಿಂದನಂದನಸೂನುವಂತರ್ಧಾನಗತನಾಗಿ ಪೋಗಿ ಮಧುರಾಪುರನಿವಾಸಿಗುಗ್ರಸೇನಸೂನುಗದೊಂದು ಕಾರ್ಯಮನಱಿಪಲೆಂದಂದು ಬಗೆದಂದು,

ಬಿಂಬದಧಿದೈವಮರ್ಕನ
ಬಿಂಬದೆ ತಳರ್ದಿಟಿದುದಿಂತಿದದ್ಭುತಮಸುರಂ ।

* ಕ. ಖ ಗ.—ಕಹಕಹಾರ. † ಶ.—ಮುಕುರನಾಗಿ

ಗೆಂಬಿನವಿನಬಿಂಬದ ದೆಸೆ
ಯಿಂ ಬಂದಿಳಗಿಳಿದನಮಲಕಾಂತಿಮುನೀಂದ್ರಂ ॥ ೫೦

ವ॥ ಅಂತು ಬಂದು ದೈತ್ಯರಾಜನಿಂದಾತಿಥ್ಯಪೂಜೆಯಂ ಕೈಕೊಂಡು ವಿಶಿಷ್ಟವಿಷ್ಟರಾಸೀನನಾಗಿ,

* ಪಿಸುಣಂ ಪೇಟ್ದೊಡದೇವುದೊ
ಕಿಸುಜಡೆಯುಂ ಬೂದಿ ಕಚ್ಚುಟಂ ಬೊಕ್ಕಣಮುಂ ।
ಪಿಸುಣಾಜಿ ಮತ್ತಿನೆ ಮೊಣ್ಬನೆ
ಪಿಸುಣರ ದೇವಂಗೆ ನಾರದಂಗಿದು ಸಹಜಂ ॥ ೫೩

ಅಸುರನ ಮುಖಾಬ್ಜಮಂ ಕೊರ
ಗಿಸುವಲ್ಲಿಗಿದೊಂದು ಸಾಂದ್ರಚಂದ್ರಿಕೆಯೆನಿಸ ದಂ ।
ತಸಮುಜ್ಜ್ವಲರುಚಿ ಪಸರಿಸ
ಲಸಪ್ಯಮಂ ದಿತಿಜಪತಿಗೆ ಯತಿಪತಿ ನುಡಿದಂ ॥ ೫೪

ದೇವಕಿಯ ಸುತನಿನೆಟ್ಟಯ ಮ
ಹಾವೀರರ್ ಖರವೃಷೇಂದ್ರ ಕೇಶಿಪ್ರಮುಖರ್ ।
ದೇವಾರಿ ತೀಕ್ಷ್ಣ ನಖದಂ
ಷ್ಟ್ರಾವಳಿಯುಳ್ಳದೊಂದು ಸಿಂಗಮಂ ನೀಂ ಪೋಲ್ತೈ ॥ ೫೫

ನಿನಗಂತಕನುಂ ದೇವಕ
ತನಯಾಷ್ಟಮಗರ್ಭಜಾತನಾಬಾಲನೆ ತ ।

ಪಿಸುಣಂ ಪೇಳಿದೊಡೇವುದೊ
ಬಿಸು * ಜಡೆಯುಂ ಬೂದಿ ಕಚ್ಚುಟಂ ಬೊಕ್ಕಣಮುಂ ।
ಪಿಸುಣಿರೆ ಮತ್ತೆಯುಮವೊಲ್ಪುದೆ †
ಪಿಸುಣರ ದೇವಂಗೆ ನಾರದಂಗಿದು ಸಹಜಂ ॥

ಈ ರೀತಿಯಾದ ಪಾಠವು ತಾಳಪತ್ರ ಪುಸ್ತಕಗಳಲ್ಲಿವೆ.

* ಕ.—ಬಿಸು † ಕ.—ಪಿಸುಣಿರೆ ಮತ್ತೆನೆ ಮೊಣ್ಬನೆ.

ದ್ದನುಜರನಿಕ್ಕಿದನಿಂ ಪ್ರೌ
ಢನಾಗದನ್ನೆಗಮೊಡರ್ಚುಪಾಯಾಂತರಮಂ ॥ ೫೬

ವ॥ ಎಂದು ನಾರದಂ ನೀರದಪಥಕ್ಕೆ ಪೋದಂ. ಆಗಳಾ ಭೋಜರಾಜಂ,

ದೇವಮುನಿ ನುಡಿದ ನುಡಿಯಿಂ
ಭಾವಿಸಿ ವಸುದೇವಕೃತಕಮಂ ಭಯನಿಪ್ಪಂ ।
ದಾವಯವಂ ಪಯರ್ಾಕುಲ
ಜೀವಂ ಪಾವಡರ್ದ ಪಂದಿಯಂತೆವೊಲಿರ್ದಂ ॥ ೫೭

ವ॥ ಅಂತು ಕಿಱಿದಾನುಂ ಬೇಗಮಿರ್ದು ತನ್ನಂ ತಾನೆ ಸಂತೈಸಿ ಕೊಂಡು ನಿಜಾಂತಿಕದೊಳಿರ್ದ ಮಂತ್ರಿಗಳ ಮೊಗಮಂ ನೋಡಿ,

ದೇವಕಿಯ ಪುತ್ರನಸ್ಮ
ಜ್ಜೀವಾಂತಕನಲ್ಲದುಟಿದ ಪಗೆಯೆನಗರಿದೇ ।
ಗೋವಳಿಗರ ಶಿಶುವೆಂದಿರ
ಲಾವ್ವೈರಿಯೆ ದೇವಕೀಸುತಂಗಡದೆಂತೋ ॥ ೫೮

ಎನ್ನಂ ವಂಚಿಸಿ ಗೋಕುಲಕ್ಕೆ ವಸುದೇವಂ ದೇವಕೀಪುತ್ರನಂ
ಛನ್ನಾಕಾರದಿನುಯ್ದು ಪಲ್ಲಟಿಸೆ ಮಾಯಾಬಾಲೆಯೊಳ್ ನಂದನುಂ ।
ತನ್ನಂಗೋದ್ಭವನೆಂದೆ ರಕ್ಷಿಸಿದನಕ್ಕುಂ ಕೃಷ್ಣನಂ ಪೊಲ್ಲಕೆ
ಯ್ದನ್ನೋಡಿಂ ವಸುದೇವನಿಂತೆನಗೆ ಕೌಟಿಲ್ಯಾಜ್ಞರೇಗೆಯ್ಯರೋ ॥ ೫೯

ಇಡುವರಿಯೊಳಿರ್ಪವೊಲ್ ಮು
ಳ್ಪಡಿಸಿದನೆಂತೆನ್ನನೆನಗೆ ವಸುದೇವನೆನಲ್ ।
ಪೆಡದಲೆಯು ಪಾವು ಸೋಂಕಿಲ
ಕಿಡಿ ನಣ್ಪಿನ ಮೃತ್ಯುವಿಂಪುದೋಱುವ ಗರಳಂ ॥ ೬೦

ವ॥ ಎಂದು ನೊಂದು ನುಡಿದು ಪ್ರಧಾನಪುರುಷರೊಳಕ್ರೂರನಂ ಕರೆದು,

ವದನಚತುಷ್ಕವಿಲ್ಲದ ರಜೋಗುಣವಿಲ್ಲದ ಪದ್ಮಪೀಠವಿ
ಲ್ಲದ ಕಳಹಂಸವಿಲ್ಲದ ಕಮಂಡಲುವಿಲ್ಲದ ಪಾಶರಜ್ಜುವಿ ।

ಲ್ಲದ ವಿಮಳಾಕ್ಷವೊಲಿಕೆಯುಮಿಲ್ಲದಪೂರ್ವವಿರಿಂಚ ಧರ್ಮಕೋ
ವಿದ ನಯಯುಕ್ತ ದಾನಪತಿ ಪೇೞ್ದಪೆನಾಂ ನಿನಗೊಂದು ಕಾರ್ಯಮಂ ||

ವ|| ಅದೆಂತೆಂದೊಡೆ, ಬಳಸೂದನಸೂದನನಪ್ಪೆನಗೆ ನಂದನಂದನನೊಳ್ ಸಂಧಾನಂ ನೀತಿನಿಂದಿತಮುಂ, ಪ್ರಭಂಜನಸಮಪ್ರಭಾವಪ್ರಭಂಜನನಪ್ಪೆನಗೆ ಕುಳಹೀನವನಿತಾಸ್ತನ್ಯೋಪಪುಷ್ಟನೊಳನುಬಂಧಿಕೆಯತಿಕಷ್ಟಮುಂ, ಕಾಲಪ್ರಳಯಕಾಲನಪ್ಪೆನಗೆ ಸಹಾಯಶೂನ್ಯನೊಳ್ ಯಾನಮತಿಹೀನಮುಂ, ಕ್ರವ್ಯಾದಸಂಹನನಕ್ರವ್ಯಾದನಪ್ಪೆನಗೆ ಅನಭ್ಯಸ್ತಶಸ್ತ್ರನೊಳ್ ಯುದ್ಧಮತಿನಿಷಿದ್ಧಮುಂ, ಕೀಲಾಲಪಮಕ್ಷಸ್ಸ್ಥಲಕೀಲಾಲಪನಪ್ಪೆನಗೆ ಕಾಕಪಕ್ಷಧಾರಿಯೊಳ್ ಸಾಮಮಪ್ಪುದಕಾರ್ಯಮುಂ, ಪ್ರಕಂಪನಜೀವಪ್ರಕಂಪನನಪ್ಪೆನಗೆ ಗೋಪಾಲಯುಕ್ತನೊಳ್ ಭೇದಮಯುಕ್ತಮುಂ, ಪುರಮಥನಮಿತ್ರಪುರಮಥನನಪ್ಪೆನಗೆ ನವನೀತಚೋರನೊಳ್ ಪ್ರದಾನಮಪ್ರಯೋಜನಮುಂ, ಉಗ್ರಸಂಗ್ರಾಮೋಗ್ರನಪ್ಪೆನಗೆ ಗೋನಿಯೋಗದಂಡಧರನೊಳ್ ದಂಡಮಪಹಾಸ್ಯಮುಮಪ್ಪುದು. ಅದುಕಾರಣದಿಂ ಕೃಷ್ಣನೊಳ್ ಕುಟಿಲೋಪಾಯಮೆ ಕರಣೀಯಂ. ಆಮಾಯಾವಿಯುಂ ಧನುರ್ಮಹೋತ್ಸವಾಮಂತ್ರಣವ್ಯಪದೇಶದಿಂ ವಿನಾಶಮನೆಯ್ದಿಸುವೆಂ. ಅಲ್ಲಿಂ ಬೞಿಯುಂ,

ಆಂ ದೇವಕಜೆಯನಾನಕ
ದುಂದುಭಿಯುಂ ನಂದನಂ ಯಶೋದಾವಧುವಂ |
ಕೊಂದವರ ರಕ್ತಜಲದಿಂ
ನಂದಿಸುವೆಂ ಮತ್ಪ್ರಕೋಪತೀವ್ರಾನಳನಂ || ೬೦

ಯಾದವರನಿಕ್ಕಿ ನಿರ್ದಾ
ಯಾದವರಪ್ರಾಜ್ಯರಾಜ್ಯ ಲಕ್ಷ್ಮೀವಧುಗಾಂ |
ಕಾದಲನಪ್ಪೆಂ ಬೞಿಯುಂ
ಕಾದಲಣಂ ಗೋತ್ರವೈರಿಯುಂ ನೆಱೆದಪನೇ || ೬೩

ಧಿಷಣನೆನಿಪ್ಪ ಮಂತ್ರಿಗುಚಿತಂ ಪತಿಕಾರ್ಯಮದರ್ಕೆ ನೀನಕ
ಲ್ಮಷಮತಿ ಪೋಗಿ ಗೋಕುಲಕೆ ಗೋಪಕದಂಬಕಮಿಂದು ಗವ್ಯಹೈ |
ಹಿಷರಸಸಂಕುಳಂ ಬೆರಸು ಕಾರ್ಮುಕಪೂಜೆಗೆ ಬರ್ಪುದೆಂದು ತ
ನ್ಮಿಷದೊಳ್ ಚೆಚ್ಚರಂ ರಥಮನೇಱಿಸಿ ತರ್ಪುದು ರಾಮಕೃಷ್ಣರಂ ‖ ೬೪

ವ॥ ಎನಲಂದು,

ಕರ್ಕಶಮೆನಂ ಸುರಾರಿ ಕು
ತರ್ಕೋಕ್ತಿಯನೆಂತು ಪೂಣ್ದು ಬೆಸವೇೞ್ದನದಂ ॥
ಮಾರ್ಕಂಡುಪಾಂಶುವೆನ್ನದು
ದರ್ಕಪರಿಜ್ಞಾನದಾನಪತಿ ಕೈಕೊಂಡಂ ॥ ೬೫

ಶುಭಲಕ್ಷಣಾಶ್ವಯುಕ್ತಮ
ನಭಿನುತಸಾರಥಿಸನಾಥಮಂ ಮಣಿಘಂಟಾ ।
ಸುಭಗಮನುದಿತಧ್ವಜಮಂ
ಪ್ರಭಾವಿರಾಜಿತಮನೇಱಿದಂ ಪೊಂದೇಱಂ ‖ ೬೬

ವ॥ ಅಂತು ನಿಜರಥಮನೇಱಿ ಪೊೞಲಿಂ ತಳರ್ದು,

ಮಖಪುರುಷನಿರ್ದ ದೆಸೆಗಭಿ
ಮುಖನಾದೊಡೆ ಪೋಯ್ತಘಂ ಪರಾಙ್ಮುಖಮಂತ ।
ಮುಖ್ಯವಾದುದು ಮಾನಸಮು
ನ್ಮುಖವಾದುದು ಭೋಂಕನಲರ್ದುದಾಸ್ಯಾಂಭೋಜಂ ॥ ೬೭

ಸನಕಾದ್ಯರನಂತಯುಗಂ
ಮನದೊಳ್ ಚಿಂತಿಸಿಯುಮೆಯ್ದಲಱಿಯದ ಲಕ್ಷ್ಮೀ ।
ಶನನಾನೆಯ್ದಿದಪೆಂ ಪೋ
ಗಿ ನಿಮಿಷದಿಂದೆನ್ನಿನೆಯ್ದೆ ಧನಮೆಯ್ದಿದರಾರ್* ॥ ೬೮

* ಕ. ಖ. —ದೆನ್ನನೆಯ್ದೆ ಜನಮೆಯ್ದದರಾರ್. ಗ—ದೆನ್ನನೆಯ್ದೆ ಜನಮೆಯ್ದಿ ದರಾರ್.

ಯುಮಿವರೆರರುಂ ಲಕ್ಷಿಸಲ
ಕ್ಷಮೆರೆನಲಾ * ಕಾರಶೂನ್ಯಮಾದಪರಬ್ರ ।
ಹ್ಮಮ ಸಾಕಾರತೆವೆತ್ತಂ
ದಮನೀಕ್ಷಿಸುವೊಂದು ಸೈಪು ಸಮನಿಸಿತೆನ್ನೊಳ್ ॥ ೬೯

ತ್ರಿದಶಮುನಿಶ್ರೇಷ್ಠರ ಚಾ
ರುದೃಷ್ಟಿಗಂ ಕಾಣಿಸಿರದೆನಿಪ್ಪಮಿತಾಕಾ ।
ರದ ನಾರಾಯಣನಂ ಚ
ರ್ಮದೃಷ್ಟಿಯೊಳ್ ಕಂಡಪೆಂ ಗಡಾನೆ ಕೃತಾರ್ಥಂ ॥ ೭೦

ಪೊಡವಿಯೊಳಾಂ ಮೆಯ್ಯಿಕ್ಕಿರೆ
ನಡೆ ನೋಡಿ ದಯಾನ್ವಿತಂ ಸುದರ್ಶನಚಕ್ರಂ ।
ಬಿಡಿವ ನಿಜದಿವ್ಯಕರದಿಂ
ಪಿಡಿದೇಂ ನೆಗಪುಗುಮ ಕಮಳಲೋಚನನೆನ್ನಂ ॥ ೭೧

ಧರೆಯಿಂದೇಳ್ವುದುಮೊನುಂ †
ಬರೆ ತೆಗೆದು ಪುನಃಪುನಂ ಜನಾರ್ದನನಾವುಂ ।
ದರವುಂ ತಟ್ಟೈಸಿದ ಭುಜ
ಪರಿಘಂಗಳಿನೆನ್ನನೊಲ್ದು ತಟ್ಟೈಸುಗುಮೇ ॥ ೭೨

ಅವನತಿಯಿಂ ಪೊರೆದ ಮೆದೀ
ಯುವದನಭೂರಜಮನೊಲ್ದು ತೊಡೆಗುಮ ಲಕ್ಷ್ಮೀ ।
ಯುವತಿಯುಮುಖಘರ್ಮಪಯೋ
ಲವಮಂ ತೊಡೆವರುಣಹಸ್ತತಳದಿಂ ಕೃಷ್ಣಂ ॥ ೭೩

ಸನ್ನುತಿಗೆಯ್ದಾರಾಧಿಸೆ
ತನ್ನಂ ಬ್ರಹ್ಮಾದಿದೇವರೊಳಗೆತ್ತಾನುಂ ।

* ಕ. ಖ. ಗ.—ಕ್ಷಮುವೆನಲಾ. † ಕ. ಖ. ಗ.—ಮೆನ್ನಂ.

ಮುನ್ನುಡಿದ ದಿವ್ಯವಚನಮ
ನೆನ್ನೊಳ್ ನುಡಿಗುಮೆ ನೃಕೀಟನೊಳ್ ನರಸಿಂಹಂ ॥ ೩೪

ಅಸುರನ ಚರನೆಂದಪಮೊ
ನಿಸುಗುಮೊ ಮೇಣ್ ಭಕ್ತನೆಂದು ಮನ್ನಿಸುಗುಮೊ ಭಾ ।
ವಿಸಿ ತಿಳಿದೆನಿಂತಿದಂ ಕ
ರ್ಮಸಾಕ್ಷಿ ಚೈತನ್ಯರೂಪನಱಿಯನೆ ಕೃಷ್ಣಂ ॥ ೩೫

ವ॥ ಎಂದು ಪರಮಭಾಗವತಂ ಶುಭಧ್ಯಾನ ಪರಾಯಣನಾಗಿ,

ನಿಜದಕ್ಷಿಣಾಕ್ಷಿದಕ್ಷಿಣ
ಭುಜಪರಿಘಸ್ಪಂದಮೊಗೆಯೆ ವನಮೃಗಶಕುನಿ ।
ವ್ರಜಶಕುನಂ ಶುಭಮೆನೆ ಪವ
ನಜವಾನ್ವಿತರಥದಿನೆಯ್ದಿದಂ ಗೋಕುಲಮಂ ॥ ೩೬

ಗೋಪಸ್ತ್ರೀದಧಿಮಂಥನಶ್ರಮಹರಂ ಗೋದೋಹನಕ್ಷೀರಧಾ
ರಾಪಾತೋತ್ಥಲವಾಪಹಾರಪಟು ಸದ್ಯಸ್ತಪ್ತಸರ್ಪಿಸ್ಸುಗಂ ।
ಧೋಪೇತಂ ಸುೞಿಯಲ್ ವಿಭಾತಪವಮಾನಂ ಪೊಕ್ಕನಕ್ರೂರನಂ
ದಾಪ್ರೋಚ್ಚುತ್ತತ್ಸವದಿಂದೆ ವತ್ಸಕುಲ ಹಂಭಾ ಘೋಷಮಂ ಘೋಷಮಂ॥ ೩೭

ವ॥ ಅಂತು ಪೊಕ್ಕು ನಂದಗೋಪನ ಮನೆಗೆ ಬಂದು ವರೂಥದಿಂ ಪ್ರಾಂಗಣತಳಕ್ಕವತರಿಸಿ,

ಭುಜಯುಗಮಾದೊಡಂ ಭುಜಚತುಷ್ಟಯಮೆಂಬಿನಮೊಪ್ಪುತಿರ್ಪುದಾ
ಭುಜದೊಳ್ ಶಂಖಚಕ್ರನಳಿನೀಗದೆಗಳ್ ತೊಡರ್ದಂತೆ ಸೌಷ್ಠವಂ ।
ಭಜಿಯಿಸಿದತ್ತು ಕೌಸ್ತುಭಮನಾಂತವೊಲಿರ್ದುದು ವಕ್ಷಮಂತೆ ನೀ
ರಜದಳಲೋಚನಂಗಳೆಸೆದಿರ್ದಪುವೀತನ ಕೃಷ್ಣನಾಗನೇ ॥ ೩೮

ವ॥ ಎಂದು ಮನದೊಳ್ ಭಾವಿಸಿ,

ಗೋದೋಹನಲೀಲೆಯೊಳ
ಬ್ಜೋದರನಿರೆ ಕಂಡು ದಾನಪತಿ ಸಂತಸದಿಂ ।

ದಾದಿಸ್ವರೂಪದಿಂ ಚೆ
ಲ್ವಾದುದು ಲೀಲಾಸ್ವರೂಪವೆಂದೀಕ್ಷಿಸಿದಂ ॥ ೭೯

ವ॥ ಅಂತು ಸಂತೋಷದಿಂದಕ್ರೂರಂ ನಿರೀಕ್ಷಿಸುವುದುಂ ಭಕ್ತಜನಮನೋನಿವಾಸಂ ವಾಸುದೇವಂ ಗೋದೋಹನವಿನೋದವಂ ಮಾಣ್ದು ಗೋಪಾಲವಿಭೂಷಣವಿಲಾಸವೆಸೆವಿನಮಿದಿರೆೞ್ದು ವೆಂದು,

ಹೃಷ್ಟತೆಯಿಂದಕ್ರೂರಂ
ಸಾಷ್ಟಾಂಗಪ್ರಣತನಾಗೆ ಕಾರುಣ್ಯಸುಧಾ ।
ವೃಷ್ಟಿ ಪಸರಿಸಿದುದೆನೆ ನಿಜ
ದೃಷ್ಟಿಪ್ರಭೆ ನಿಮಿರೆ ನೋಡಿದಂ ಕಮಳಾಕ್ಷಂ ॥ ೮೦

ಆರಿಂತುಧನ್ಯರೆನಲ
ಕ್ರೂರಂ ತಾಂ ಪಡೆದನೆಂತು ಬಯಸಿದನಂತಾ ।
ಶೌರಿಯ ಕರಸಂಸ್ಪರ್ಶನ
ಕಾರುಣ್ಯನಿರೀಕ್ಷಣಪ್ರಸಾದೋಕ್ತಿಗಳಂ ॥ ೮೧

ವ॥ ಅನ್ನೆಗಂ,

ರಾಗದೆ ಬಂದಿದಿರೆೞ್ದ
ಭ್ಯಾಗತಪೂಜೆಯನೊಡರ್ಚಿ ನಂದಂ ನುಡಿದಂ ।
ಸ್ವಾಗತಮೆ ಸುಖಮೆ ಭವದೀ
ಯಾಗಮದಿಂ ಸುದಿನಮಾದುದಿಂದಿನ ದಿವಸಂ ॥ ೮೨

ವ॥ ಎಂದು ಸಂಭಾಷಣಂಗೆಯ್ದು ನಂದಗೋಪನ ಮುಖಾರವಿಂದಮಂ ನೋಡಿ ದಾನವವಲ್ಲಭನಿಂತೆಂದಂ:—

ಏತೆಱದ ತಪೋದಾನ
ವ್ರಾತದೊಳೇಂ ಪೊಗ್ಗೆ ನಂದ ನೀನೀತ್ರಿಜಗ ।
ತ್ತಾತಂಗೆ ಜಳಧಿಶಾಯಿಗೆ
ತಾತನೆ ಆದೊಂದು ಪೆಂಪಜಂಗಮಲಭ್ಯಂ ॥ ೮೩

ರೂಡಿಯುನಪ್ಪುಕೆಯ್ದುಮೆರವೊತ್ತುಗವಿಲ್ಲದ ಪುಣ್ಯಶಕ್ತಿ ಕೈ
ಗೂಡಿದುದೀಕೆಗಬ್ಧಿಶಯನಂ ಗಡ ನಂದನನೀಮನೋಹರ ।
ಕ್ರೀಡನನೆತ್ತಿಕೊಂಡು ಮೊಲೆಯೂಡಿದ ತಳ್ತುಮೆರ್ದಪ್ಪಿದೊಲ್ದು ಮು
ದ್ದಾಡಿಸಿದೀಭವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೆ॥ ೮೪

ವ॥ ಎಂದು ನುಡಿದನಂತರಂ,

ಭುವನೋತ್ಸಾಹಕರಂ ಧನುರ್ಮಹಮದರ್ಕಂ ಪಾಲ್ಮೊಸರ್ ತುಪ್ಪಮಂ
ಬಿಸನುಯ್ದೀವುದು ಪೋಗಿ ನೀನಖಿಲಗೋಪಾಲಾನ್ವಿತಂ ನಂದ ಮುಂ ।
ದಿವೆರಂ ರಾಮಮುಕುಂದರಂ ರಥದ ಮೇಲಿಟ್ಟುಯ್ದಪೆಂ ನೋಪ್ಕೆ ಪ
ರ್ವವನೀಬಾಲಕರೆಂಬಿದರ್ಕೆ ಬೞಿವಂದೆಂ ಭೋಜರಾಜಾಜ್ಞೆಯಿಂ ॥ ೮೫

ಎನೆ ಮಿಕ್ಕು ಮನದೆ ಕೊಂಡಸು
ರನ ಪೊರೆಗಾತ್ಮಜರನಟ್ಟುವೆಡೆಗುತ್ತರಮೊಂ ।
ದಿನಿಸು ಪೊಱಮಡದೆ ಬಿಡೆ ಕ
ಣ್ಬನಿ ಪೊಱಮಟ್ಟುವು ಯಶೋದೆಗಂ ನಂದಂಗಂ ॥ ೮೬

ವ॥ ಅಂತಿರ್ದರನಕ್ರೂರಂ ದರಸ್ಮಿತವದನಾರವಿಂದನಾಗಿ ನೋಡಿ,

ಈತರುಣರನೆಂತಟ್ಟುವೆ
ವಾತೀಕ್ಷ್ಣಂ ಕಂಸನಲ್ಲಿಗೆಂಬೊಂದು ಭಯಾ ।
ಕೂತಂ ಬೇಡಟ್ಟದೊಡೇ
ನೀತಂಗಳನಾದಿಮಧ್ಯನಿಧನರವೋಘಂ ॥ ೮೭

ಭುವನಂ ಸಹಸ್ರಶತವಾ
ದವೞಿಯೆ ನಿಲ್ವಾಹಿರಣ್ಯಗರ್ಭನುಮಂ ನುಂ ।
ಗುವದೊಂದು ಮಹಾಪ್ರಳಯಮ
ನವಯುವದಿಂ ನುಂಗಿ ನೊಣೆವ ಹರಿಗರಿದುಂಟೇ ॥ ೮೮

ಆಕಥೆಗಳನಱಿಯದೊಡೇ
ನೀಕೃಷ್ಣನ ಜಯಮನೀಗಳಱಿಯಿರೆ ಕಡುಕೆ ।

ಯ್ದಾ ಕೇಶಿಧೇನುಕರ್ಕಳ
ನೇಕಾಂಗದೆ ಗೆಲ್ದುದಲ್ಲವೇ ದೃಷ್ಟಾಂತಂ ॥ ೮೯

ವ॥ ಎಂದು ನುಡಿದು ನಂದಗೋಪನುಮಂ ಯಶೋದೆಯುಮಂ ನೆಂತಾನುಮೊಡಂಬಡಿಸಿ ರಾಮಕೃಷ್ಣರನೊಡಗೊಂಡುಯ್ಯಲುದ್ಯೋಗಿಸಿರ್ಪುದಂ ಕಂಡು,

ವನಜಾತಾಕ್ಷನನುಯ್ದಗಲ್ಚುವುದಱಿಂದಕ್ರೂರನಾಗಿರ್ದ ಮಾ
ಣ್ದನೆ ಹಿಂದೋಳರವಕ್ಕೆ ಮಲ್ಲಿಗೆಗೆ ಬೆಳ್ದಿಂಗಳ್ಗೆ ತಣ್ಣಾಳಿಗಿ ।
ನ್ನೆನಸುಂ ಕ್ರೂರತೆಯಂ ನೆಗೞ್ಚಿದಪನೋಕ್ರೂರನೆಂತಾದನೀ
ತನತಿಕ್ರೂರನಮೋಘಮೆಂದರೞಲಿಂದಕ್ರೂರನಂ ಗೋಪಿಯರ್ ॥ ೯೦

ದಿತಿಸುತನ ರಾಜಧಾನಿಯ
ಚತುರೆಯರಂ ಕಂಡೊಡೆಮ್ಮನೀಗ್ರಾಮ್ಯೆಯರಂ ।
ದಿತಿಜಾರಿ ನೆನೆಗುಮೇ ಮಾ
ಳತಿಗೆಱಗಿದ ತುಂಬಿ ನೆನಗುಮೇ ಮಿಕ್ಕಲರಂ ॥ ೯೧

ಆನಗರಮನಿಂ ಪೊಕ್ಕೊಡೆ
ದಾನವರಿಪು ಗೋಪಪಳ್ಳಿಯುಮಂ ನೆನೆದಪನೇ ।
ಮಾನಸದೊಳಿರ್ಪ ಹಂಸಂ
ತಾನಿತರಸರೋಜಷಂಡಮಂ ನೆನೆದಪುದೇ ॥ ೯೨

ಇಂತಪ್ಪ ಸುಭಗರೂಪನ
ನಂತನನಿಂ ಕಂಡರಪ್ಪೊಡಾಕಂಸಪುರೀ ।
ಕಾಂತೆಯರೇಂ ಬರಲೀಗುಮೆ
ತಂತಮ್ಮ ವಿಳಾಸನಿಗಡದಿಂ ಸೆಱೆಗೆಯ್ವರ್ ॥ ೯೩

ಸೋಗೆ ಕಚಕಂ ಸುರಧನು ಭೂ
ಷಾಗಣಮಚಿರಾಂಶುವಕ್ಷಿ ಬೆಮರ್ವನಿ ಮೞೆ ತಾ ।

ನಾಗಿರೆ ಪೆಱತೊರ್ಬಳ್ ಮೇ
ಘಾಗಮಲಕ್ಷ್ಮಿವೊಲುಪೇಂದ್ರನಂ ಬಗೆಗೊಂಡಳ್ ॥ ೯೪

ಕರಯುಗಳಂ ತೆರೆ ಶೃಂಗಾ
ರರಸಂ ನೀರ್ ನಿಮ್ನನಾಭಿ ಸುೞಿಯಾಗೆ ತನೂ ।
ದರಿಪೆಱತೊರ್ವಳ್ ನದಿಯಂ
ತಿರೆ ಜಳಶಯನನ ಮನಕ್ಕೆ ಸುಖಮಂ ಪಡೆದಳ್ ॥ ೯೫

ಘನಜಘನಕೃತಕಗಿರಿಯಿಂ
ಸ್ತನಫಲದಿಂ ಬಾಹುಲತಿಕೆಯಿಂ ಪಿಕರವದಿಂ ।
ವನಮಾಲೆಯಂದದಿಂದಂ
ವನಮಾಲಾಧರನೊಳೊರ್ವಳೊಲವಂ ಪಡೆದಳ್ ॥ ೯೬

ಕುಂತಳಭೃಂಗಂ ನೇತ್ರಲ
ತಾಂತಂ ನಿಜಸೌರಭಂ ವಿಲಾಸಸ್ಮಿತಿ ಚೆ ।
ಲ್ವಂ ತಳೆಯೆ ಮಾಧವೀಲತೆ
ಯಂತಿರೆ ಮಾಧವನನೊರ್ಬವಧು ರಂಜಿಸಿದಳ್ ॥ ೯೭

ವ॥ ಅಂತು ಗೋಪಿಯರ್ ತಮತಮಗೆ ನೆರೆದು ನೋಡುತ್ತುಮಿರೆ,

ಒಡನೇಱಿ ರಥಮನಗ್ರಜ
ನೊಡವೆರಲಕ್ರೂರನೊಡನೆ ಹರಿ ಪೋಱಮಡಲಾ ।
ಗಡೆ ಪೋಱಮೆಟ್ಟುದದೊರ್ವಳ
ನಿಡುಸುಯ್ಲ ಸಮೀರನೊಡನೆ ಜೀವಸಮೀರಂ ॥ ೯೮

ವ॥ ಮತ್ತಮಂತಂತೆ ಕಿಱಿದಂತರಮಂ ದೇವಕೀನಂದನಸ್ಯಂ
ದನಂ ನಡೆಯೆ,

ಒಡನೆಯ್ದುವಲರ್ಗಣ್ಗಳ್
ಬಿಡದೆ*ಮನಂ ಪೋಯ್ತು ಮನದ ಪಿಂತಣೆ ಧೈರ್ಯಂ ।

* ಕ. ಖ. ಗ.—ಒಡನೆಯ್ದುವಲರ್ಗಣ್ಗಳ್ ಬಿಡಿದು.

ನಡೆಗೊಂಡುದು ಧೈರ್ಯದ ಬೆಂ
ಬಿಡಿದೊರ್ವಳ್ ಜೀವವಿರದೆ ಪೋದತ್ತಾಗಳ್ ॥ ೯೯

ವ॥ ಅದಲ್ಲದೆಯುಂ ಮತ್ತೊರ್ವಳ್ ವಿಯೋಗಂ ತನಗೆ ದುಸ್ಸಹ ಮಾಗೆ,

ಪೊಡೆಯಲರಾತನಕ್ಷಿಗಮಗೋಚರವಾಗಿರೆ ನಿಟ್ಟಿಸಿ ನೋಡಿ ಧೀಂ
ಕಿಡುವ ರಥಧ್ವಜಾಗ್ರಮನದುಂ ಮಸುಳುತ್ತಿರೆ ತೇರ ಧೂಳಿಯುಂ ।
ಬಿಡೆ ನಡೆ ನೋಡಿ ಧೂಳಿಯುಮಡಂಗಿರೆ ಕೃಷ್ಣನ ತೇರ ಧೂಳಿಯು
ಪ್ಪೊಡಮಿರಬಾಯ್ತೆನುತ್ತಬಳ್ ಧೂಳಿವಿಡುತ್ತಿರೆ ಬಾಯ್ವಲುಂಬಿದಳ್॥

ನಯನಕ್ಕೆ ಗವ್ಯನಲ್ಲಂ
ಪ್ರಿಯಂ ಮನೋಗವ್ಯನೀಕ್ಷಿಪೆಂ ಮನದೊಳ್ ತಾ ।
ರಿಯನೆಂದು ನಿಮೀಲಿತನಯ
ನೆಯುಮೊರ್ಬಳ್ ಗೋಪಿ ಯೋಗರೂಢೆವೊಲಿರ್ದಳ್ ॥ ೧೦೧

ವ॥ ಅನ್ನೆಗಮಿತ್ತಲಕ್ರೂರಂ

ತರುಪಟಲೀಪಿನದ್ಧವನರಾಜಿಯನಲ್ಲಿ ವನೇಚರೀವನೇ
ಚರಜನಲೀಲೆಯಂ ಶರಭಸಿಂಧುರಸಿಂಹತರಕ್ಷುಮುಖ್ಯಭೀ ।
ಕರವನಸತ್ತ್ವಸಂಭ್ರಮಮನೀಕ್ಷಿಸಿ ತೋಱುತುಮಚ್ಯುತಂಗೆ ಚಿ
ಚ್ಚರಮಿರದೆಯ್ದಿದಂ ಜಗುನೆಯಂ ಮಧುರೋಪವನಾಂತರಸ್ಥಮಂ ॥೧೦೨

ವ॥ ಅಂತೆಯ್ದಿ ವನಪವನ ಲೋಲತ್ಕಲ್ಲೋಲದೊಳಂ, ವಿಸ್ಫುರತ್ಫೇನದೊಳಂ, ಚಳಚ್ಛಿಳಿಚಿಮೆದೊಳಂ, ವಿಲುಠತ್ಕಮಠದೊಳಂ, ಜೃಂಭತ್ಕುಂಭೀರದೊಳಂ, ಪ್ರೇಂಖಚ್ಛಂಖದೊಳಂ, ಪಿರುವತ್ಕುರವದೊಳಂ, ಗುಂಜತ್ಕುಂಜದೊಳಂ. ಭ್ರಮದ್ಭ್ರಮರದೊಳಂ, ಸಂಸನತ್ಕಳಹಂಸದೊಳಂ, ಚಂಚತ್ಕ್ರೌಂಚದೊಳಂ, ರಾರಟತ್ಕಾರಂಡದೊಳಂ, ರಂಗದ್ರಥಾಂಗದೊಳಂ, ಅತಿ ಮನೋಹರವಾದ ಯಮುನಾಹ್ರದದ ಪರಿಸರ

ಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ, ನೀವೀ ರಥದಮೇಲೆ ಕುಳ್ಳಿರಿಂ, ಆಂ ಮಾಧ್ಯಾಹ್ನಿಕಾನುಷ್ಠಾನಮಂ ಮಾಡಿ ಬಂದಪೆನೆಂದು ವಸುದೇವನಂದನರ್ಗೆ ಪೇೞ್ದು, ಆಪ್ರದಿನಿಯೊಳ್ ಯದುಕುಲಾವನಘ * ಮರ್ಷಣಂಗೆಯ್ದಿರ್ಪುದುಮಲ್ಲಿ,

ಅನಿಮೇಷರ್ ಸುತ್ತುಗೊಂಡಿರ್ಪನಮಖಿಲಮರುದ್ವಂದಿಗಳ್ ಕೀರ್ತಿಸುತ್ತಿ
ರ್ಪನಮೆತ್ತಂ ದೇವಯೋಗಿಪ್ರತತಿ ಜಯಜಯಧ್ವಾನಗರ್ಭಾಸ್ಯಮಾಗಿ ।
ರ್ಪನಮಿರ್ದಂ ಶ್ರೀಸನಾಥಂ ಫಣಿಪತಿಶಯನಂ ಶಂಖಚಕ್ರಾಂಕಹಸ್ತಂ
ವನಮಾಲಾಕೌಸ್ತುಭಾದ್ಯಾಭರಣಯುತ ನನಂತಾರ್ಕಕೋಟಿಪ್ರಕಾಶಂ॥

ಆಲಕ್ಷ್ಮೀಕಾಂತನೊಳೂಸೆ
ದಾಲೋಚಿಸುತುಂ † ಯದೃಚ್ಛೆಯಿಂದಂ ತದ್ಗ ।
ರ್ಭಾಲಯಮಂ ನಾಭ್ಯಂಬುಜ
ನಾಲದ ಮಾರ್ಗದೊಳ್ ಪೊಕ್ಕು ವಿಸ್ಮಿತಚಿತ್ತಂ ॥ ೧೦೪

ವನಜೋದರನುದರದ ಲೋ
ಕನಿಕಾಯದೊಳಾತನಾಜ್ಞೆಯಿಂ ದಿವ್ಯವಿಲೋ ।
ಚನನುಂ ಕಾಮಾಕೃತಿಯಿಂ ‡
ಮನೋಜವಾನ್ವಿತನುಮಾಗಿ ನಡೆದಕ್ರೂರಂ ॥ ೧೦೫

ಗೋಲೋಕಸತ್ಯಲೋಕತ
ಪೋಲೋಕಬ್ರಹ್ಮಲೋಕಜನಲೋಕದಿವಾ ।
ಕೋಲೋಕಧ್ರುವಲೋಕಮ
ನೇೞುಮನೇೞುಧರಲೋಕಮಂ ನೆಱೆ ಕಂಡಂ ॥ ೧೦೬

ದಿಗಿಭಮನೆಂಟುಮನೆಣ್ಬರ್
ದಿಗಧಿಪರಂ ದ್ವೀಪಮೇೞನೇೞುಂ ಕಡಲಂ ।

* ಕ—ಯದುಕುಲಾವರನಘ. † ಮೊ—ಅ—ಕಾಂತನನೊಸೆದಾಲೋಕಿಸುತುಂ. ‡ ಮೊ—ಅ—ಕಾಮಾಕೃತಿಯುಂ.

ನಗಕುಲಮಂ ಹಿಮವದ್ವಿಂ
ಧ್ಯಗಂಧಮಾದನಹರಾದ್ರಿಯುತಮಂ ಕಂಡಂ ॥ ೧೦೭

ಭೂತಳಮಧ್ಯಸ್ಥಿತಮಂ
ಜ್ಯೋತಿರ್ಮಂಡಲಪರೀತಮಂ ಗಗನವಿನಿ ।
ರ್ಘಾತಶಿಖಂಡಮನಮರ
ವ್ರಾತಾಶ್ರಯಮಂ ಸುಮೇರುಗಿರಿಯಂ ಕಂಡಂ ॥ ೧೦೮

ಉಶನನನಮರ್ತ್ಯಗುರುವಂ
ಪಿಶಾಚಗಂಧರ್ವಯಕ್ಷರಾಕ್ಷಸರಂ ದ್ವಾ ।
ದಶಮಾರ್ತಂಡರನೇಕಾ
ದಶರುದ್ರರ ನಷ್ಟವಸುಗಳಂ ನಱೆ ಕಂಡಂ ॥ ೧೦೯

ವಿವಿಧನದೀನಿವಹಮುಮಂ
ವಿವಿಧಮಹಾರಣ್ಯತತಿಯುಮಂ ವಿವಿಧಮುನಿ ।
ಪ್ರವರರುಮಂ ವಿವಿಧಕ್ಷೇ
ತ್ರವರ್ಗಮುಮನಲ್ಲಿಗಲ್ಲಿಗಳಯೊಳ್ ಕಂಡಂ ॥ ೧೧೦

ನಿಖಿಳಜನಪದಮುಮಂ ನಗ
ರಖೇಡಖರ್ವಡಮಡಂಬನಿಗಮದ್ರೋಣಾ ।
ಮುಖಪತ್ತನಾಗ್ರಹಾರಾ
ದ್ಯಖಿಳಮಹಾಗ್ರಾಮಕೋಟಿಗಳುಮಂ ಕಂಡಂ ॥ ೧೧೧

ಗಣನಾತೀತಮಹಾಕ್ಷೌ
ಹಿಣೀಬಲಂ ಬೆರಸು ತಮ್ಮೊಳೋರೊರ್ವರ ಮೇ ।
ಲಣಿಯುರಮುತ್ತುವ ಮುತ್ತುವ
ಪೊಣರ್ವ ಕಱುತ್ತಿಱಿವನೇಕನೃಪರಂ ಕಂಡಂ ॥ ೧೧೨

ವ॥ ಅಂತನಂತ * ಭುವನಾಂತರಮಂ ತೊಟಲ್ದು ನೋಡಿ ವಿಸ್ಮಯಾಕ್ರಾಂತನಾಗಿ ದಾನವಲ್ಲಭನಿದೆಂತಹಿಶಯನಂ ಕಾಳಿಂದಿಯೊಳಿರ್ದನೆಂ ಶಾತ

* ಖ —ಅನಂತರಂ

ನುದರದೊಳಾಂಪೊಕ್ಕಂಅಲ್ಲಿಚತುರ್ದಶಭುವನಮಿರ್ದುದೆಂತೆಂತೀಸಮಸ್ತ ಭುವನಾಂತರಾಳಮನೊಂದೆ ಮುಹೂರ್ತದೊಳ್ ತೊಟಿಲ್ವನೆಂತೆನಗಿನಿತುಂ ಸಾಮರ್ಥ್ಯಮಾದುದಿನ್ನಾವುದು ಕೃತ್ಯಮೆಂದು ನಿಜಾಂತರಂಗದೊಳ್ ಚಿಂತಿಸುತಿರ್ಪಿನಂ, ಜವೋದಲೆ ಪೊಱಮಟ್ಟು ಮುನ್ನಿನಂತೆ ಯಮುನಾಹ್ರದದೊಳಘಮರ್ಷಣಮಿರ್ದ ತೆಱನಾದುದುಮನಾಸಲಿಲ ಮಧ್ಯದಲ್ಲಿ ಶೇಷಾಹಿಶಯನನಾಗಿ ದೇವರೂಪಮನುಡುಗಿ ಕೃಷ್ಣನಿರ್ದುದುಮಂ ಕಂಡು ರಥದ ಮೇಲಿರ್ದ ಕೃಷ್ಣನೆತ್ತಬಂದನೆಂದು ನಿಳ್ಕಿ ಪೊಱಗಂ ನೋಡಿ ಪೂರ್ವಸ್ಥಿತಿಯಿಂ ರಥದ ಮೇಲಿತ್ತಲ್ ಕೃಷ್ಣ ನಿರ್ದುದಂ ಕಂಡು ಸಂತುಷ್ಟಮಾನಸನನುಷ್ಠಾನಮಂ ತೀರ್ಚಿ ಬಂದು ವಿಕಸಿತ ಮುಖಾರವಿಂದನಾಗಿ ಪೊಂದೇರ ಮೇಲಿರ್ದ ವಸುದೇವನಂದನರ್ಗೆ ಮುಕುಳಿತಾಂಜಲಿಯಾಗಿ,

## ಲಲಿತರಗಳೆ.

ದೇವ ಸಾಕ್ಷಾತ್ಪರಬ್ರಹ್ಮಸ್ವರೂಪ ಜಯ ।
ದೇವ ನಿಜಮಹಿಮಚಕಿತಾಗಮಕಳಾಪ ಜಯ ।
ದೇವ ಯೋಗೀಶ್ವರಮನೋಗಮ್ಯಮಾನ ಜಯ ।
ದೇವ ಪುರುಷತ್ರಯಾಕಾರಪ್ರಧಾನ ಜಯ ।
ದೇವ ಜನನಸ್ಥಿತಿಪ್ರಳಯಮೌಘಹೇತು ಜಯ ।
ದೇವ ಭಕ್ತಾಘವನದವಧೂಮಕೇತು ಜಯ ।
ದೇವ ಚಂದ್ರಾರ್ಕಗಗನಾದ್ಯಷ್ಟಮೂರ್ತಿ ಜಯ ।
ದೇವ ಮಧುಕೈಟಭಪ್ರಳಯಸಮವರ್ತಿ ಜಯ ।
ದೇವ ನಿಜಕುಕ್ಷಿನಿಕ್ಷಿಪ್ತತ್ರಿಲೋಕ ಜಯ ।
ದೇವ ವಿನತಾಪ್ರಿಯತನೂಭವಪತಾಕ ಜಯ ।
ದೇವ ಶೇಷೋರಗವರಾನಲ್ಪತಲ್ಪ ಜಯ ।
ದೇವ ವಕ್ಷೋರುಚಿರಕೌಸ್ತುಭಾಕಲ್ಪ ಜಯ ।

ದೇವ ಚಂಪಕರುಚಿರಪೀತಪಟಲೀಲ ಜಯ ।
ದೇವ ಮಂಡಿತಮಕರಕುಂಡಲಕಪೋಲ ಜಯ ।
ದೇವ ವನಮಾಲಾಸ್ಫುರದ್ಬ್ರಹ್ಮಸೂತ್ರ ಜಯ ।
ದೇವ ನೀಲೋತ್ಪಲದಳಶ್ಯಾಮಗಾತ್ರ ಜಯ ।
ದೇವ ನಂದಕಗದಾಶಂಖಚಕ್ರಾಂಕ ಜಯ ।
ದೇವ ಲಕ್ಷ್ಮೀಲೋಚನೋತ್ಪಲಶಶಾಂಕ ಜಯ ।
ದೇವ ವಿಕಸಿತಪುಂಡರೀಕದಲನಯನ ಜಯ ।
ದೇವ ಪೀಯೂಷಪಾರಾವಾರಶಯನ ಜಯ ।
ದೇವ ಸತತಾನತಸಮಸ್ತಸುರಯೂಥ ಜಯ ।
ದೇವ ಸಂಸ್ತವಮುಖರಮುನಿಗಣಸನಾಥ ಜಯ ।
ದೇವ ಶುದ್ಧಸ್ಫಟಿಕಸಂಕಾಶವಿಮಳ ಜಯ ।
ದೇವ ವಾಕ್ಪತಿಭೃಂಗಯುತನಾಭಿಕಮಳ ಜಯ ॥
ದೇವ ದಿವಿಜಾರ್ಥಕೃತವಿವಿಧಾವತಾರ ಜಯ ।
ದೇವ ಸಂಸಾರನಾಟಕಸೂತ್ರಧಾರ ಜಯ ।
ದೇವ ದುರ್ಧರತಮೋದೈತ್ಯಮದಹರಣ ಜಯ ।
ದೇವ ಸಮುದಗ್ರಮಂಥಾಚಲೋದ್ಧರಣ ಜಯ ।
ದೇವ ಸಂಹಾರಿತಹಿರಣ್ಯಾಕ್ಷವೀರ ಜಯ ।
ದೇವ ಸಂದಾರಿತಹಿರಣ್ಯಕಶರೀರ ಜಯ ।
ದೇವ ಬಲಿಬಂಧನೋಚ್ಛ್ರಿತಖಿಲಾಕಾರ ಜಯ ।
ದೇವ ದಶಕಂಠಕಂಠದ್ರುಮಕುಠಾರ ಜಯ ।
ದೇವ ಹೈಹಯಬಾಹುಗಹನದವದಹನ ಜಯ ।
ದೇವ ದನುಜಾಹತಸುದರ್ಶನೋದ್ಯಮನ ಜಯ ।
ದೇವ ನುತದೇವಕೀಗರ್ಭಪ್ರಸೂತ ಜಯ ।
ದೇವ ಮಹಿಮಾಸ್ಪದಹಲಾಯುಧಸಮೇತ ಜಯ ।
ದೇವ ವಸುದೇವಹರ್ಷಾಂಬುನಿಧಿಚಂದ್ರ ಜಯ ।
ದೇವ ಯದುಕುಲಮಹೋತ್ಪಲವಾಸರೇಂದ್ರ* ಜಯ ।

* ಮಾ—ಅ—ಪದ್ಮಸೇವ ಸರೇಂದ್ರ.

ದೇವ ನಂದಿತನಂದಗೋಪಪ್ರಮೋದ ಜಯ ।
ದೇವ ಶೈಶವಕೇಳಿತೋಷಿತಯಶೋದ ಜಯ ।
ದೇವ ಪರಿಪೀತಖಲಪೂತನಾಜೀವ ಜಯ ।
ದೇವ ವಿಘಟಿತಶಕಟಕುಟಿಲಪ್ರಭಾವ ಜಯ
†
ದೇವ ನಿರ್ಮೂಲಯಮಳಾರ್ಜುನೋರ್ವೀಜ ಜಯ ‡ ।
ದೇವ ಚಾಳಿತಕಾಳಿಯವ್ಯಾಳರಾಜ ಜಯ ।
ದೇವ ಧೇನುಕಮಾಂಸಹೃಷ್ಟರಣಭೂತ ಜಯ ।
ದೇವ ಕೇಶಿಪ್ರಾಣತುಷ್ಟರವಿಜಾತ ಜಯ ।
ದೇವ ವೃಷಭಾಕಾರದನುಜರವಿರಾಹು ಜಯ ।
ದೇವ ಗೋವರ್ಧನೋದ್ಧಾರಪಟುಬಾಹು ಜಯ ।
ದೇವ ಚೇತೋಗುಪ್ತಕಂಸವಧರೋಷ ಜಯ ।
ದೇವ ಹೇಳಾರಚಿತಗೋಪಾಲವೇಷ ಜಯ ।
ದೇವ ಸುಸ್ನಿಗ್ಧತರಬರ್ಹಾವತಂಸ ಜಯ ।
ದೇವ ಸಂತತವೇಣುವಾದ್ಯಪ್ರಶಂಸ ಜಯ ।
ದೇವ ಗೋಪಾಂಗನಾಮಾನಸಮರಾಳ ¶ ಜಯ ।
ದೇವ ಗೋಪಾಂಗನಾನಯನಝಷಜಾಳ ಜಯ ।
ದೇವ ಗೋಪಾಂಗನಾಸ್ತನತರಲಹಾರ ಜಯ ।
ದೇವ ಗೋಪಾಂಗನಾಮಣಿಕರ್ಣಪೂರ ಜಯ ।
ದೇವ ಗೋಪಾಂಗನಾಕನಕಕಟಿಸೂತ್ರ ಜಯ ।
ದೇವ ಗೋಪಾಂಗನಾಭುಜಮಕರಪತ್ರ ಜಯ ।
ದೇವ ಗೋಪಾಂಗನಾಮೃಗಮದಲಲಾಮ ಜಯ ।

---

† ಖ. ಪುಸ್ತಕದಲ್ಲಿ—ದೇವದುರ್ವೃತ್ತವಾತಾಸುರವಿಘಾತಿ ಜಯ । ದೇವ ನಗದನುಜಸಂಹರಣವಿಕ್ರಮಣ ಜಯ । ದೇವ ಗೋಪಾಂಗನಾನಿತ್ಯೋತ್ಸವಾತ್ಮ ಜಯ । ದೇವಕಾರುಣ್ಯಾಬ್ಧಿ ಭಕ್ತಸಂಸಾರಿಜಯ । ಎಂದು ಅಧಿಕಪಾಠವಿದೆ

‡ ಖ. ದೇವಯಮಳಾರ್ಜುನವಿಶಾಪಕ ವಿನೋದಿಜಯ.

¶ ಕ ಖ. ಗ.—ಹೃದ್ಯನ್ಮರಾಳ.

ದೇವ ಗೋಪಾಂಗನಾಕಚಕುಸುಮದಾಮ ಜಯ ।
ದೇವ ನಿತ್ಯೋತ್ಸವದ ನಮಸ್ತೇ ನಮಸ್ತೇ ॥ ೧೧೩

ವ॥ ಎಂದಭಿಷ್ಟುತಿಗೆಯ್ದು ಕೃತಕೃತ್ಯನಾಗಿ,

ನಿಜಲೀಲಾಗತಿಯಿಂದೆ ಬರ್ಪುದು ಪೊೞಲ್ಗಾಂ ಪೋದಪೆಂ ಭೋಜಭೂಭುಜನೆನ್ನಂ ಬರವಾರ್ಗುಮೆಂದು ಸರಥಂ ಬೀಳ್ಕೊಂಡು ಪೋದಂ ಚಲದ್ಧ್ವಜನಕ್ರೂರನನಂತರಂ ಕಿಱಿದುಬೇಗಂ ಕ್ರೀಡಿಸುತ್ತಿರ್ದನಗ್ರಜಯುಕ್ತಂ ಮಧುರಾಪುರೋಪವನದೊಳ್ ಶ್ರೀದೇವಕೀನಂದನಂ॥೧೧೪

ಇದು ಸಮಸ್ತ ಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾ
ಸ್ವತಂತ್ರಸಿಜಸ್ವರೂಪನಿರೂಪಣಾಚಕಿತಸಕಲಾಮ್ನಾಯತಂತ್ರ
ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತಸುಕವೀಂದ್ರರುದ್ರ
ಪ್ರಣೀತ ಶ್ರೀಜಗನ್ನಾಥವಿಜಯ ಮಹಾಪ್ರಬಂಧ
ದೊಳ್ ರಾಸಕೇಳಿ ಪುಂಗವಾಸುರಸಂಹ
ರಣ ಕೇಶಿಮಥನಾಕ್ರೂರದರ್ಶನ
ಯಮುನಾಹ್ರದವರ್ಣನಂ
ಪಂಚಮಾಶ್ವಾಸಂ

---

## ಷಷ್ಠಾಶ್ವಾಸಂ.

ಶ್ರೀಕೃಷ್ಣಂ ಕಂಸಪುರಾ
ಲೋಕನಕೌತುಕರಸೋದಯಂ ವೀರರಸೋ ।
ದ್ರೇಕಕ್ಕೆಡೆಗುಡೆ ಬಲಖ
ರ್ವೀಕೃತನಾದೈತ್ಯಖಳನ ಪೊೞಲ್ಗೆಯ್ತಂದಂ ॥ ೧

ವ॥ ಅಂತು ಬಂದು ನಗರದ್ವಾರಮಂ ಪುಗುವೆಲ್ಲಿ,

ವಿಪುಲೋದ್ವೃತ್ತಸ್ವರ್ಣಕೋಟೀಕಟಿಘನಪರಿಖಾಕಾಂಚಿ ತುಂಗಧ್ವಜಾಲೋ
ಲಪಟೀಸಂವ್ಯಾನೆ ದೇವಾಲಯಕಳಶಕುಚಾಭೋಗೆ ಸೌಧಾಂಶುಚಂದ್ರಾ ।
ತಪಹಾಸದ್ಯೋತೆ ನಾನಾಮಣಿಮಯವಿಲಸತ್ತೋರಣಸ್ಫಾರಹಾರಾ
ಢ್ಯೆ ಪುರಶ್ರೀ ದೇವಕೀಪುತ್ರನ ಬಗೆಗೊಲವೆಂಬೀಱುತಿರ್ಪನ್ನವಾಗಳ್ ॥ ೨

ಸುರಧನುಪುಂಜವಿದಾಯ್ತ
ಚ್ಚರಿದಲ್ ಕಾರ್ಮುಗಿಲ ಮೇಲೆನಲ್ಕೆ ವಿಚಿತ್ರಾಂ ।
ಬರಭಾರಂ ಬೆರಸಿದಿರೊಳ್
ಬರುತಿರ್ಪಂ ರಂಗಕಾರನಸಿತಾಕಾರಂ ॥ ೩

ವ॥ ಅವಂ ಕಂಡು,

ಎಲವೆಲವೋ ರಜಕಾ ಸಿ
ಲ್ಲಲೊ ಪೋದೊಡೆ ಕಂಸನಾಣೆ ಕಾರ್ಮುಕಮಹಮಂ ।
ಗಲದರ್ಶನಕ್ಕೆ ಕೈಗೆ
ಯ್ಯಲಮೋಘಂ ಕುಡುವುದೆಮಗೆ ದಿವ್ಯಾಂಬರಮಂ ॥ ೪

ವ॥ ಎಂಬುದುಂ ರಂಗಕಾರಂ ನಿಜಾಂತರಂಗದೊಳ್ ಈ ಗೋಪಾಲ ಬಾಲಕರ್ ವಿವೇಕಶೂನ್ಯರೆಂದು ಮುಗುಳ್ನಗೆಯುಂ ನಕ್ಕು,

ಪಟ್ಟಣದೊಳಿರ್ದಿರಲ್ಲಿರ್
ನೆಟ್ಟನೆ ನೀವಡವಿಯೊಳ್ ಮೃಗಂಗಳ ತೆಱದಿಂ ।
ಪುಟ್ಟಿದಿರಲ್ಲದೊಡೇಂ ಮತಿ
ಗೆಟ್ಟಿಱಿವಿರೆ ಕಂಸದೇವನುಮಂಬರಮುಂ ॥ ೫

ಸಂಸಾರಸುಖಮನನುಪಮ
ಮಂ ಸುರಪಂ ಕಪ್ಪವಿತ್ತು ಮಡಿವರ್ಗಮನಾ ।
ವಂ ಸುಭಟನುಮಾವನವನೇಂ
ಕಂಸಂ ಪುಟ್ಟಿದ ಮುಹೂರ್ತದೊಳ್ ಪುಟ್ಟಿಗನೇ ॥ ೬

ವ॥ ಎನೆ ವನರುಹಾಕ್ಷಂ ಕನಲ್ದು,

ದನುಜೇಂದ್ರನ ಮಡಿವರ್ಗಮ
ನೆನಗೀಯದೊಡೂರ ಸಿರಿಗೆಸಗಂ ಬಡಿಪೆ ।
ತ್ತನೆನಿಪ್ಪ ಜನದ ನಾಣ್ನುಡಿ
ನಿನಗಾಗಲ್ಕಸಗ ಪೊಯ್ಲ ಸವಿಯುಂ ತೋರ್ಪಿಂ॥ ೭

ವ॥ ಎಂದು ಜಡಿದು ನುಡಿದು,

ಇರದೆಯ್ದಿ ರಂಗಕಾರನೊ
ಳುರವಣೆಯಿಂ ಕೊಂಡಮೌಲ್ಯಮನಿಸಿದ ನೀಲಾಂ ।
ಬರಮಂ ರಾಮಂಗಿತ್ತೆಸೆ
ದಿರೆ ಕೃಷ್ಣನನರ್ಘ್ಯಪೀತವಸನಮನುಟ್ಟಂ ॥ ೮

ಎಳವಿಸಿಲೆಳಸಿದ ನೀಳಾ
ಚಳಶಿಖರದೊಳಸಿತಮೇಘಮೆಳಸಿದ ತುಹಿನಾ ।
ಚಳಶಿಖರದೊಳೆಣೆಯೆನೆ ಹರಿ
ಬಳರೆಸೆದರ್ ಪೀತನೀಲಪಟಪರಿಧಾನರ್ ॥ ೯

ವ॥ ಅಂತು ಭುಜಬಲಾಡಂಬರದಿನಂಬರಂಗಳಂ ಕಳೆದುಕೊಳ್ವುದುಮಂ ಅಂಬರಂಬರಂ ಸಿಡಿಲ್ದೆೞ್ದು ದುರ್ಧರತರಕೋಪಾಟೋಪದಿಂ

ಭಯಂಕರಾಕಾರನಾಗಿ ರಂಗಕಾರಂ ಸ್ವಕೀಯನಿಷ್ಠುರಭುಜಾಸ್ಫಾಲನ
ದಿನೀಗೋಪಾಲ ಬಾಲಕರಂ ಮೆಟ್ಟಿಸುವೆನೆಂದು * ತಕ್ಕು ಮಿಕ್ಕು ಬರೆ,
ತಲವಜ್ರಾಘಾತದಿಂ ಮರ್ದಿಸಿ ರಜಕನನಾತ್ಮಪ್ರವೇಶಕ್ಕಿದೇ ಮಂ
ಗಲಮೆಂಬಂತಾಪುರದ್ವಾರದೊಳವನೆಡಗಿಂ † ಬುತ್ತಿಯಿಟ್ಟೆಲ್ವಿನಿಂ ಪೂ ।
ವಲಿಗೆಯ್ದಸ್ರಾಂಬುವಿಂ ಚಿಟ್ಟೈಸಿದು ಕರುಳಿನಿಂ ತೋರಣಂಗಟ್ಟಿ ಕೋಲಾ
ಹಲನಾದಂ ಪೆರ್ಚೆ ಪೊಕ್ಕಂ ದನುಜನ ಪೊಳಲಂ ಸಾಗ್ರಜನ್ಮಂ ಮುಕುಂದಂ॥

ವ॥ ಆಸಮಯದೊಳ್,

ಅಂಬುಜದಳನೇತ್ರನ ಪೀ
ತಾಂಬರದೊಳ್ ಸೆಣಸಿ ಭೀತಿಯಿಂದೋಡಿದುದೀ ।
ಕೆಂಬಿಸಿಲೆನೆ ಪಡುನೇಸಱ
ಕೆಂಬಿಸಿಲೆಸದತ್ತು ಗಿರಿಕುಜಾಗ್ರಸ್ಥಳದೊಳ್ ॥ ೧೧

ವ॥ ಆಗಳಾ ಪೂವಿನ ಪೊತ್ತಿನೊಳ್ ದೇವಕೀನಂದನಂ ಮಾಲೆಗಾಱ
ಗೇರಿಯೊಳ್ ವಿಹಾರಿಸುತ್ತುಂ ಬರ್ಪಲ್ಲಿ,

ಉಟ್ಟ ನವಾಂಬರಕ್ಕಮರೆ ಪೂದೊಡವಂ ತುಡುವೊಂದು ಕೌತುಕಂ
ಪುಟ್ಟೆ ಮುರಾರಿಗೀಯಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ ।
ಕೊಟ್ಟೊಡಗೊಂಡು ಬರ್ಪುದೆನುತುಂ ದನುಜೇಂದ್ರನ ಮಾಲೆಗಾಱನೊ
ಲ್ದಟ್ಟಿದ ದೂತನಂತಿದಿರೆವಂದುದು ಪುಷ್ಪಸುಗಂಧಮಾರುತಂ ॥ ೧೨

ವ॥ ಅಂತು ಬಂದ ಮಂದಮಾರುತನ ಕಂಪುಮಂ ಮನದೆಕೊಂ
ಡಾಮಾರುತನ ಸೌರಭ್ಯದ ಬಟ್ಟೆವಿಡಿದು ಮಾಲಾಕಾರಪರಿವೃಢನ ಮಂದಿ
ರಮಂ ಸಸಹೋದರಂ ದಾಮೋದರಂ ಪುಗುವುದುಮತಿಪ್ರಮೋದದಿಂದಿದಿ
ರ್ವಂದು ನಿಜಮಂದಿರೋಚಿತವಿಷ್ಟರಂಗಳಂ ಕೊಟ್ಟು ಕುಳ್ಳಿರಿಸಿ,

ಆಪುಷ್ಪಲಾವಕಪ್ರಭು
ಗೋಪಾಲಕನಪ್ಪ ನಂದಸುತನಂ ಕಂಡು ।

* ಕ,ಗ.—ಮೆಟ್ಟಿಸುವೆನೆಂಬ. † ಕ.ಖ.ಗ.—ದ್ವಾರಮನವನಡಗಿಂ.

ಶ್ರೀಪುರುಷೋತ್ತಮನೆಂದು ಮ
ಹಾಪರಮಪ್ರೀತಿಯಿಂ ನಿರೀಕ್ಷಿಸುತಿರ್ದಂ ॥ ೧೩

ಹರಿಯಂ ಕಾಣ್ಬುದುಮೊದುದು
ಪರಮಜ್ಞಾತಿ ಪುಷ್ಪಲಾವಕಂಗಮಿದೊಂದ ।
ಚ್ಚರಿ ಕೃಷ್ಣನನುಗ್ರಹದಿಂ
ದೊರೆಕೊಳ್ಗುಂ ಝಡಿತಿಯಿಂದೆ ಪರಮಜ್ಞಾನಂ ॥ ೧೪

ಹರಿಯುಮನಂತೆ ರಾಮನುಮನೀಕ್ಷಿಸ ಮುಂ ಮೃದುವಸ್ತ್ರದಿಂದಿವರ
ಪರಿವೃತರಾದರಿನ್ನೆ ಸೆವ ಪೂದೊಪವಂ ತುಡುಗೆಂದು ಚೆಚ್ಚರಂ ।
ವಿರಚಿಸಿದಂ ವಿಚಿತ್ರತರಮಪ್ಪಲರ್ವಚ್ಚಮನುನ್ನ ದಾಳಿಯುಂ
ಹರಿಬಲಭದ್ರರೀಕ್ಷಣಮದಾಳಿಗಳೊಲ್ದೆಬಗುತ್ತುಮಿರ್ಪಿನಂ ॥ ೧೫

ವ॥ ತದನಂತರಂ

ಮದನನ ಸುಗಂಧಬಂಧು
ರದ ಪುಟಕೆಗಳೆಸಿಸಿ ಕಂಪು ಮಗಮಗಿಪಲರ್ವ ।
ಚ್ಚದ ಪಡಲಿಗೆಗಳನೊಟ್ಟೈ
ಸಿದನವನಚ್ಯುತನ ಮುಂದೆ ಮಾಲಾಕಾರಂ ॥ ೧೬

ವ॥ ಅಂತು ಪೂವಿನ ಪಡಲಿಗೆಗಳಂ ಪಸರಿಸೆ, ಕೊಸಗಿನೆಸಳ ಕೇಸರಮುಂ ತೊಡರ್ಚಿದ ತೋರಮಲ್ಲಿಗೆಯ ಮುಗುಳ್ಗಳ ಹಾರಂಗಳುಮಂ, ಸುರಹೊನ್ನೆಯ ಚೆನ್ನನಪ್ಪರಲನೊತ್ತರದೆ ಸುತ್ತಿ ತೆತ್ತಿಸಿದ ಕೈರವದ ಕರ್ಣಪೂರಂಗಳುಮಂ, ಎಡ್ಡವಾದ ಪಡ್ಡಳಿಯ ಕಿಱುನನೆಯ ಕೊನೆ ತರಂಬಿಡಿದು ತೋಱಿ ಮೊಱೆಂ ಧಾರೆಗಳಿನಳವಡಿಸಿದ ಕಿಂಕಿರಾತದೆಸಳ ಕಂಕಣಂಗಳುಮಂ, ಅಶೋಕೆಯ ಪಲ್ಲವಮಂ ನಡುವೆ ಕೀಲಿಸೆ ಲೀಲೆ ವಡೆದ ನಸುವಿರಿದ ಸೇವಂತಿಗೆಯ ಕೇವಣದುಂಗುರಂಗಳುಮಂ, ಎಡೆ ಯೆಡೆಗೆ ಸಜ್ಜುಕವೆನಿಸಿದ ಗೊಜ್ಜಗಯರಲ ಮಿಶ್ರದಿನುಪಾಶ್ರಯಂ ಬಡೆದ ಹೇಮಕಾಮರಸದ ಮೊಗ್ಗೆಯ ತೋಳ್ಬಟ್ಟಗಳುಮಂ, ಬಿಂ

ದೊಂದೆಡೆಯೊಳ್ ಬಂದುಗೆಯುಲರಿನಂದಂಬೆತ್ತದಿವರ್ಮುತ್ತೆಯ ನೆತ್ತಿವೆಂದಂ ಗಳುವಮಂ, ಅಲ್ಲಲ್ಲಿಗೆ ಬೆರಸಿದ ಮರುಗದ ಕೋದ ಪೊದರಿಯ ಬಳಸಿದ ತುಳಸಿಯ ಸಂಪಾದಿಸಿದ ಸಂಪಗೆಯ ಕುಟ್ಮಳದಿನಿಟ್ಟಳಂಗಟ್ಟಿ ದಿಟ್ಟಗೆ ಸೆಯೆ ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮಂ, ಬೇಱೆ ವೇಱೆ ನೋಡಿ ಪೊನ್ನ ರನ್ನದ ತೊಡವುಗಳ್ಗ ಕಂಪುಂ ಮೆಲ್ಪುಮಾದಂತ ಚೆಲ್ವಾದ ತೊಡವುಗಳೊಳಂ ನಿಜನಿಜಾಂಗರುಚಿಗೊಡಂಬಡುವ ಪೂದೊಡವಂ ತಾನುಮಗ್ರಜನುಮೆಸೆಯೆ ಪಸದನಂಗೆಯ್ದು ಮಾಲಾಕಾರನಂ ಕಾರುಣ್ಯದಿಂದೀಕ್ಷಿಸಿ,

ಶ್ರೀ ನೆಲಸಿರ್ಕಖಂಡಿತಮೆನಲ್ ಪ್ರಿಯ ನಿನ್ನೊಳಮಂತೆ ನಿನ್ನ ಸಂ
ತಾನದೊಳಂ ಮನಂ ತಣಿಯೆ ನೀಂ ಸಿರಿಯೊಳ್ ನಲಿದಂತ್ಯದೊಳ್ ಸುಧಾಂ ।
ಭೋನಿಧಿತಳ್ಪನೊಳ್ ನೆರೆವನಾಗೆನುತುಂ * ಬರವಿತ್ತು ಮಾಲಿಕಂ
ಗಾನಳಿನೇಕ್ಷಣಂ ತಳರ್ದನುತ್ಸವದಿಂ ಬಱಿಯಂ ಬಳಾನ್ವಿತಂ ॥ ೧೭

ಹರಿಬಲರಲ್ಲಿಂ ತಳರ್ದಾ
ದರದಿಂ ದೂಸಿಗರ ಕಂಚುಗಾಱರ ಬಳೆಗಾ ।
ಱರ ತಂಬುಲಿಗರ ಮಣಿಗಾ
ಱರ ಗಂದಿಗರಾವಣಂಗಳೊಳ್ ನಡೆತಂದರ್ ॥ ೧೮

ವ॥ ಅಂತು ನಡೆತಂದು ಗಟ್ಟಿವಳ್ತಿಯರ ಕೇರಿಯೊಳಗಣೆ ಬರ್ಪಲ್ಲಿ ಕಟ್ಟಿದಿರೊಳ್ ಕಳಧೌತದ ಕೊಳವಿಗೆಗಳೊಳಂ, ರೂಪ್ಯದ ಕುಪ್ಪಿಗಳೊಳಂ, ಪಳಿಕಿನ ಪುಟಿಕೆಗಳೊಳಂ, † ಹರಿನೀಲದ ನಾಳಿಗಳೊಳಂ, ಮೌಕ್ತಿಕದ ಶುಕ್ತಿಕೆಗಳೊಳಂ, ಕೆಂಬರಲ ಸಂಬಳಿಗೆಗಳೊಳಂ, ಗರುಡೋದ್ಗಾರದ ಪಚ್ಚೆಯ ಕರಡಿಗೆಗಳೊಳಂ, ತೀವಿದೆಸಿತಾನುಂ ತೆಱದ ಬಂಧುರಸುಗಂಧವಸ್ತುಸಂದೋಹಮಂ ಪಿಡಿದೊಡನ ಬರ್ಪ ಪರಿಚಾರಿಕಾನಿಕಾಯಂಬೆರಸು ಸಾಯಂಕಾಲಶೃಂಗಾರಸಮಯಮೆಂದು ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸೈರಂಧ್ರಿ ನಡೆತರೆ,

* ಕ.ಖ ಗ.—ನೆರೆವೆಯಕ್ಕೆನುತುಂ. † ಖ —ಲಳಿಗೆಗಳೊಳಂ.

ಅವಯವೆದ ವಿಕಟಚೇಷ್ಟೆಯು
ನವವಯದಿಂ ಮುಖವಿಲಾಸದಿಂ ಮಱೆಯಿಸುತಿ ।
ರ್ಪವಳಂ ವಕ್ರಾಂಗಿಯುನಿಂ
ದುವಕ್ರೆಯುಂ ಗಟ್ಟಿವಳ್ತಯುಂ ಹರಿ ಕಂಡಂ ॥ ೧೯

ವ॥ ಅಂತುಕಂಡು

ವರಮುಖಿ ನಿನ್ನ ಕೈಗುಣದಿನಾದ ಸುಗಂಧವಿಲೇಪನಂಗಳೀ
ದೊರೆಯುವಿರ್ವಾರ್ಗೆ ಯೋಗ್ಯವೆನೆ ಯೋಗ್ಯನೆ ನೀನೆದಲಂತರಾತ್ಮನಂ †।
ಬರೆ ತೆಗೆದಂಗ ಸೌಖ್ಯ ನಿನಗೆನ್ನಯ ಬಾಹ್ಯಸುಗಂಧವಸ್ತುವೇ
ನರಿದೆ ನಿಜೇಚ್ಛೆಯಿಂ ಕಳೆದುಕೊಳ್ ಮನವೊಲ್ದ ‡ ಸುಗಂಧವಸ್ತುವಂ ॥

ವ॥ ಎಂದು ಮುಂದಿರಿಸೆ,

ಬಳನ ರುಚಿ ಕೃಷ್ಣನೊಳ್ ಮೂ
ರ್ಪೊಳೆದುದೆನಲ್ ಕೃಷ್ಣನಂಗರುಚಿ ಬಳನೊಳ್ ಮೂ ।
ರ್ಪೊಳೆದುದೆನಲ್ ಕೃಷ್ಣ ಬಳರ್
ಮಳಯಜ ಮೃಗಮದ ಸುಗಂಧದಣ್ಪಂ ತಳೆದರ್ ॥ ೨೧

ತರುಣತಮೋರುಚಿ ಕುಮುದಾ
ಕರದೊಳ್ ¶ ನವಚಂದ್ರಕಿರಣಮುತ್ಪಲವನದೊಳ್ ।
ಪರಿಕಲಿಸಿದಂತೆ ಕತ್ತುರಿ
ಸಿರಿಗಂಧಗಳಣ್ಪು § ರಾಮಕೃಷ್ಣರೊಳೆಸೆಗುಂ ॥ ೨೨

ವ॥ ಆಗಳ್,

ಉಪಮಾತೀತಾಂಗ ರ್ಪೋಪಂ ನಡೆ ತಡೆಯದೆ ಕೇಳೀನಿವಾಸಕ್ಕೆನುತ್ತಾ
ಟಿಪಳಂ ಕಂಡಿಂತುಟೊಂದಾಕೃತಿ ತನಗಿದು ಚೇತೋವಿಕಾರಂ ನಿಸರ್ಗಂ ।

---

ಕ.ಖ ಗ.—ನವಯುವದಿಂ. †ಕ.ಗ —ನೀನೆನಲಂತರಾತ್ಮನಂ.
‡ ಕ ಗ.—ಮನವೊಲ್ದು
¶ ಕ.ಗ —ಕಮಲಾಕರದೊಳ್. § ಕ ಗ.—ಸಿರಿಗಂಪುಗಳಣ್ಪು.

ಚಪಳತ್ವಂ ಸ್ತ್ರೀಗೆನುತ್ತುಂ ಮನದೊಳ್ ದಯೆಯಿಂ ಕೃಷ್ಣನಂಗುಷ್ಠಮಂ ಮೆ
ಟ್ಟೆ ಪತಾಕಾಹಸ್ತದಿಂದಂ ನೆಗಪೆ ಮುಖಮನಾಕುಬ್ಜೆ ಸೌಮ್ಯಾಂಗಿಯಾದಳ್॥೧೩॥

ವ॥ ಅಲ್ಲಿಂ ಬಳಿಯಂ,

ಬೆಳಗಿದುದಲ್ಲಿಯು ಗಣಿಕಾ
ವಳಿಗಳ ಕಣ್ಬೆಳ್ಪ ಚಂದ್ರಿಕಾಚ್ಛಲದಿನೆನಲ್ ।
ಬೆಳಗಿದುದು ವಿಮಲಚಂದ್ರಿಕೆ
ಬಳಕ್ಕೃಷ್ಣರ್ ಸೂಳೆಗೇರಿವುಗುವವಸರದೊಳ್ ॥ ೧೪

ಬಿನದದಿನಂತಲ್ಲಿಯು ವರ
ವನಿತೆಯರಂ ಕೂಡೆ ನೋಡಿಯುಂ ನುಡಿಯಿಸಿಯುಂ ।
ನನೆಗಣೆಗೆಡೆಮಾಡಿಯುಮಿಂ
ತು ನಾಡೆಯುಂ ಪೊೞ್ತುಗಳೆದು ತವನಂತರದೊಳ್ ॥ ೧೫

ಮುರರಿಪುರಾಮರ್ ಸುೞಿದರ್
ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮ ।
ಲ್ಲರ ಮಾವಂತರ ಮಂದುರಿ
ಗರ ನೆಗೞ್ದಾವಾಸವಾರಿಗಳ ಕೇರಿಗಳೊಳ್ ॥ ೧೬

ಕರಿಕಳಭಯುಗಮರಣ್ಯಾಂ
ತರದೊಳತಿಸ್ವೈರವೃತ್ತಿಯಿಂ ಚರಿಯಿಸುವಂ ।
ತಿರೆ ಮಧುರಾಪುರದೊಳ್ ಕೃ
ಷ್ಣರಾಮರುಚ್ಛೃಂಖಲಸ್ವಭಾವದೆ ಸುೞಿದರ್ ॥ ೧೭

ವ॥ ಅಂತು ಪೊೞಲಂ ಕೂಡೆ ತೊೞಲ್ದು ಯಾಮಿನೀಯಾಮತ್ರಯ ವಿರಾಮಸಮಯದೊಳ್ ಭೋಜರಾಜನ ರಾಜಮಂದಿರೋಪಕಂಠಪ್ರದೇಶಮನೆಯ್ದೆ ವಂದು,

ಸಾಹಸಿಕಂ ಮುರಾರಿ ಪುಗುತಂದನನಂತಯುತಂ ಧನುರ್ಮಹೋ
ತ್ಸಾಹನಿರೀಕ್ಷಣೋತ್ಸುಕತೆಯಿಂ ಪರಿಘೂರ್ಣಿತಗೀತವಾದ್ಯಸಂ।
ದೋಹಮನುನ್ನತಧ್ವಜಸಮೂಹಮನಪ್ರಮಿತಾಂಗರಕ್ಷಕ
ವ್ಯೂಹಮನುಗ್ರಯಾನಗಜವಾಹಮನಗ್ಗದಶಸ್ತ್ರಗೇಹಮಂ ॥ ೨೮

ವ॥ ಅಂತು ಬಂದು, ದೌವಾರಿಕಂ ನಿವಾರಿಪುದಂ ಕಂಡೊರ್ವ ಮಹಾ ಪ್ರತೀಹಾರನೀಗೋಪಾಲಬಾಲಕರಿನಪ್ಪುದೇಂ, ಇವರ ಪೋಗಿ ಅಸ್ತ್ರಯಿಂ ನೋಡುಗೆಂದೊಡೆ ಗೊಂಡುಯ್ದು ಶಸ್ತ್ರಶಾಲೆಯಂ ಪುಗಿಸಿ ಪೂಜಿಸಿ ದರ್ಪವಿವಿಧಾಸ್ತ್ರಂಗಳೊಳಮ್ಮರಸಂ ಕಂಸದೇವನೀಶಕ್ತಿಯಿಂ ಶಕ್ರನ ನೀತೋಮರದಿಂ ಧೂಮಕೇತುವನೀಕೋದಂಡದಿಂ ದಂಡಧರನನೀಕೃಪಾ ಣದಿಂ ಕೌಣಪನನೀಪಾಶದಿಂ ಜಲೇಶನನೀಬಾಣದಿಂದೇಣವಾಹನನನೀ ಪರುಶುವಿಂ ಗಿರಿಶಬಂಧುವನೀಶೂಲದಿಂ ನೀಲಲೋಹಿತನಂ ಗೆಲ್ದನೆಂದು ಬೇಱವೇಱ ಪೆಸರ್ವೆಸರೊಳ್ ತೋಱ ಮತ್ತಂ,

ಅಮರೇಂದ್ರೋತ್ತುಂಗಮಾತಂಗದ ಬಿದುವಿನ ಮುಕ್ತಾಳಿಯಿಂದಾವ ಮಂಜೂ
ಷಮಿದೀಮಂಜೂಷದೊಳ್ ಪೂಜಿಸಿ ದಿವಿಜಕುಜೋತ್ಫುಲ್ಲಪುಲ್ಲೌಘದಿಂ ಶೇ
ಷಮಹಾನಿರ್ಮೋಕದಿಂದಂ ಗವಸಣಿಸಿ ಸಮಂತಿರ್ಪುದೊಂದುಗ್ರಕೋದಂ
ಡಮದಾರ್ಗಂ ತೋಱಲುಂ ನೋಡಲುಮರಿದತುಳಂ ದುರ್ಧರಂ ದುಷ್ಪ್ರ
ಮೇಯಂ ॥ ೨೯

ಸೆಡೆವಂ ನಾಗೇಂದ್ರನತ್ತಲ್ ಕೆಱಗಡೆ ಪೊಡೆವಳ್ ಧಾತ್ರಿ ಮೇಲಿತ್ತಲತ್ತಲ್
ನಡುವಿಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ।
ನಡುಕಂಗೊಳ್ವಂ ಸುರುಳ್ವಂ ಸುಗಿವನಗಿವನುಳ್ಕಳ್ಕುವಂ ಬಳ್ಕುವೆಂಪಾ
ವಡರ್ದಂತಿರ್ಪಂಬೆಮರ್ವಂ ಜಯೆಪೊಡೆದ ರವಕ್ಕದ್ಭುತಂ ಕಂಸಚಾಪಂ॥

---

* ಕ ಗ —ನಾಪ್ರಹಿತಾಂಗರಕ್ಷಣ. ಮೂ—ಅ—ನಾಪ್ರಹಿತಾಂಗರಕ್ಷಕ.

ಖ —ನಪ್ರಹಿತಾಂಗರಕ್ಷಣ

ಇದಱೊಳ್ ಗೆಲ್ವನೆಮ್ಮರಸನಿಂದ್ರನನೆಂದೆನೆ ಕೇಳ್ದು* ಪೇಂದ್ರನು
ರ್ಬಿದ ಮುಳಿಸಿಂದೆ ಮಂದಸಿನ ಮುಚ್ಚುಳನುಂಗುಟದಿಂದೆ ಮೀಂಟಿ ಪೋ।
ಗೊದೆದೆಡಗೈಯೊಳೆತ್ತಿ ಧನುವಂ ಪೆದೆಯೇಱಿಸಿ ನೀೞ್ದಿ ಕೋಟಿಯು
ಗ್ಮದೊಳೆಱೆಯಲ್ಕೆ † ತದ್ಬಲಕೆ ಸೋಲದೆ ತದ್ಧನು ಭಗ್ನಮಪ್ಪುದುಂ॥ ೩೧

ದನುಜಾನೀಕಕ್ಕೆ ಕಾಂಡಪ್ರಳಯಘನರವಂ ಕ್ರುದ್ಧಕಾಲಾಂತಕಕ್ಷ್ವೇ
ಡನಿನಾದಂ ಮೃತ್ಯುದೇವೀಕಹಕಹಹಸನಧ್ವಾನಮೆಂಬನ್ನೆಗಂ ಕೃ।
ಷ್ಣನಿನಾಕೋದಂಡಭಂಗಧ್ವನಿ ನಗೞ್ದುದು ಶಯ್ಯಾತಳಾಗ್ರೋಚ್ಚಲತ್ಕಂ
ಸನಿಶಾಟಂ ನಿರ್ಭರಾಸ್ಫಾಲಿತಕುಲಗಿರಿಕೂಟಂ ಸ್ಫುಟದ್ದಿಕ್ಕವಾಟಂ ॥ ೩೨

ಕಿಸುರಂ ಮಾಱ್ಪೊಡೆ ಬರ್ಕೆ ಕಾಪಿನವರೆಂದಬ್ಜಾಕ್ಷನಂತಂತೆ ನಾ
ಲ್ದೆಸೆಯುಂ ನೋೞ್ಪುದುಮಂತೆ ಮುನ್ನಮೆ ತದುಗ್ರಧ್ವಾನದಿಂದಂಗರ।
ಕ್ಷಸಮೂಹಂ ದೆಸೆಗೆಟ್ಟು ಯಾನಗಜವಾಜಿಶ್ರೇಣಿ ಬೆಂಗೊಟ್ಟು ಪೋ
ಯ್ತುಸುಹೃದ್ವೀರರೊಳಿಲ್ಲಿಮಾರ್ಪೊಡೆವರಾಪ್ರಸ್ತಾವದೊಳ್ ಕೃಷ್ಣನಂ ॥

ವ॥ ಅನ್ನೆಗಮತ್ತಲ್,

ಸಮಮಲ್ತಗ್ಗದ ಶಾರ್ಙ್ಗಮಗ್ಗದ ಪಿನಾಕಂ ಬಲ್ಪಿನಿಂದೆಂಬ ಚಾ
ಪಮನೀಬಾಲಕನೆಂತು ಮೆಯ್ಸೆಡೆಯದೆಂತಲ್ಲಾಡದೆಂತಳ್ಕದ।
ಕ್ರಮದಿಂ ಖಂಡಿಸಿದಂ ಮಹಾದ್ಭುತಮಿದೆಂತಪ್ಪೊಣ್ಮಿದೆಂತಪ್ಪದ
ರ್ಪಮಿದೆಂತಪ್ಪಳವೆಂದು ಕಂಸನತಿಚಿಂತಾಕ್ರಾಂತನಾಗಿರ್ದುದುಂ ॥ ೩೪

ಪೊಡೆಮಟ್ಟು ಮಹಾಮಾತ್ಯಂ
ನುಡಿದಂ ಕೇಳಾಳ್ದ ನಿನ್ನ ಪಗೆಯುಂ ಬಗೆಯುಂ।
ತಡೆಯದೆ ತೀರ್ಚುಗುಮಿಭದೊಳ್
ಕಡುಗಲಿ ತಾನೆನಿಪ ಕುವಲಯಾಪೀಡೇಭಂ ॥ ೩೫

* ಕ ಖ ಗ ನೆಂಬುದ ಕೇಳ್ದು ವೊ—ಅ—ನೆಂಬುದುಗೇಳ್ದು

† ಕ. ಖ. ಗ —ನಿಮಿರ್ದೇಱಿಸಿ ನೀೞ್ದಿ ಬಾಹುಯುಗ್ಮದ ತೆಗಯಲ್ಕೆ

ವ॥ ಅದೆಂತೆಂದೊಡೆ —ವಿಂಧ್ಯಭೂಭೃದಾಯಾಮದೊಳಂ ಮಹಾವರಾಹಪರಿಣಾಹದೊಳಂ ಮೇರುಭೂಧರೋತ್ಸೇಧದೊಳಂ ಐರಾವತಪ್ರಭಾವದೊಳಂ ಕ್ಷಯಕಾಲಶುಶುಕ್ಷಣಿಕ್ಷೇಪದೊಳಂ ಪ್ರಳಯಜಲಧರಧ್ವಾನದೊಳಂ ಸಂಹಾರಭೈರವಾರ್ಭಟಿಯೊಳಂ ತಾರ್ಕ್ಷ್ಯವಿಕ್ಷೇಪದೊಳಂ ಸಿಂಹಲಂಘನದೊಳಂ ಪವನವೇಗದೊಳಮಗುರ್ವುಮದ್ಭುತಮುಮೆನಿಸಿ,

ಅಮು ಪರಿಯಿತ್ತೆ ಮುಟ್ಟಿದುದು ಮುಟ್ಟಿತೆ ಪೊಯ್ದುದು ಪೊಯ್ದುದೇಪೊರ
ಳ್ದುದು ಪೊರಳ್ದತೇ ನಖರದಿಂದಿಱಿಯಿತ್ತಿಱಿಯಿತ್ತೆ ಪೋ ಕಟಿ ।
ಲ್ದುದು ಕಟಿಲ್ದತೇ ಪದದಿನಿಟ್ಟೊರಸಿತ್ತೊರಸಿತ್ತೆ ಕೊಂದುದೆಂ
ಬುದನಱಿ ವೈರಿಯುಂ ದನುಜ ಕೇವಳಮಲ್ತು ಮದೀಯಸಿಂಧುರಂ ॥೩೬

ಬವರಮನಪ್ಪುಕೆಯ್ದು ಪಗೆ ಕಣ್ಬೊಲದೊಳ್ ನಿಲೆ ಕಂಡು ಕಾಯ್ದು ಮೋ
ದುವ ಮುಳಿಸಟ್ಟೆ ಮುಟ್ಟುವ ಜವಂ ಕಿಡೆ ಪೊಯ್ವ ಬಲಂ ಪೊರಳ್ದ ಕ।
ಟ್ಟುವ ಕಡುಪೊತ್ತುವುರ್ಬು ಮೊಗಮಿಕ್ಕುವರೌದ್ರತೆ ಕೊಂದುಕೋಡೊಳೆ
ತ್ತುವ ಚಲಮೊಪ್ಪೆ ಭಾಪಣಿಕಾಮೆನ್ನ ಮದದ್ವಿರದಂಸುರದ್ವಿಷಾ॥ ೩೭

ವ॥ ಎಂದು ಬಿನ್ನಪಂಗೆಯ್ದು ಮನದ ವಿಷಾದಮುಮಂ ಕಳೆದ ನಿಶಾಟಂಗತ್ಯಂತ ಸಂತುಷ್ಟಿಯಿಂದಂಗಚಿತ್ತಮನಿತ್ತು ಎಲೆ ಮಹಾಮಾತ್ಯ ಶತಪತ್ರಮಿತ್ರೋದಯಸಮಯದೊಳ್ ಕುವಲಯಾಪೀಡಗಜಾರೂಢನಾಗಿಮಲ್ಲರಂಗದ್ವಾರದೊಳ್ ನಿಂದು ನೀನಾಕುಹಕಬಾಲಕರಂ ಕಾಲಮುಖದ್ವಾರಮಂ ಪುಗಿಸು ಪೋಗಾಮಹಾಸಾಮಜೇಂದ್ರದೊಳಂ ಮಾಱಾಂತು ಮೀಱಿ ಬಂದರಪ್ಪೊಡಮಂದಿರಂ ಮಲ್ಲಯುದ್ಧದಿಂ ಮುಱಿದು ಕೊಲಿಸುವೆನೆಂದನಂತರಂ ಗೃಹಮಹತ್ತರನಂ ಕರೆದು ಮಲ್ಲರಂಗಪ್ರದೇಶಮಂ ಮಂಗಳದ್ರವ್ಯಪರಿಕರಂಗಳಿಂದಲಂಕರಿಸುವುದೆಂದು ಬೆಸಸುವುದುಂ,

ತ್ರಿದಶವಿರೋಧಿಗೂರ್ಧ್ವಗತಿದೋಱುವವೋಲ್ ಮಣಿರಮ್ಯಹರ್ಮ್ಯಕೂ
ಟದೊಳಸೆದತ್ತು ಚೀನವಸನಧ್ವಜಸಂತತಿ ತದ್ಧ್ವಜಪ್ರಹಾ ।

ರದೆ ನೊರೆವಿಂಡದೊಂದು ಗಗನಾಪಗೆಯಿಂ ಪಿಡಿಲ್ದತ್ತದಸ್ತಶೈ
ಲದ ಶಿಖರಕ್ಕೆನಲ್ಕೆ ವಿಧುವಸ್ತನಗೇಂದ್ರಮನಾಗಳೆಯ್ದಿದಂ ॥ ೩೯
ಇದವೋಘಂ ಪೊಣ್ಮುಗಿರ್ಪ ಚಂದ್ರಿಕೆ ವಿತಾನವ್ಯಾಜದಿಂ ಪೊಕ್ಕುದೀ
ಸದನಾಭ್ಯಂತರಮಂ ಮಹಾದ್ಭುತಮಿದೆಂಬೊಂದಂದದಿಂದತ್ತ ಪೋ ।
ದುದು ಚಂದ್ರಾತಪಮಿತ್ತ ಪಾಂಡುರವಿತಾನಶ್ರೇಣಿಯುಂ ಮಲ್ಲರಂ
ಗದ ಸುತ್ತುಂ ನೆಲಸಿತ್ತು ತೋರ್ಪ ಪರಿಗಳ್ ಚೆಲ್ವಾದುವಾಬೇಗದೊಳ್॥

ಸುರವೈರಿಯ ವಧದಿನದೊಳ್
ಧರೆಗುದಿರ್ದುವು ತಾರಕಂಗಳೆನೆ ಪೂವಲಿ ಭಾ ।
ಸುರಮಾಯ್ತು ಮಲ್ಲರಂಗದೊ
ಳಿರದುಡುಗಿದುವಭ್ರರಂಗದೊಳ್ ತಾರಗೆಗಳ್ ॥ ೪೦

ದನುಸುತವಿನಾಶಸೂಚಕನ
ವೆನಲಿರುಳೊಗೆದಿಂದ್ರಧನುವೆ ಪೋಗದೆ ನಿಂದ ।
ತ್ತೆನೆ ಪಂಚರತ್ನಮಯಮಂ
ದನಮಾಲಿಕೆ ಮಲ್ಲಗಳದ ಬಾಗಿಲೊಳೆಸೆಗುಂ ॥ ೪೧

ವ॥ ಆಸಮಯದೊಳ್,

ಕರಶೀಕರಪರಿಕರಮಂ
ಕರಿರಾಜಂ ತಾಳ್ದವಂತೆ ಧರಿಯಿಸಿ ಮುಕ್ತಾ ।
ಭರಣಪರಂಪರೆಯಂ ಭೋ
ಜರಾಜನಾಮಲ್ಲರಂಗದೆಡೆಯೊಳ್ ನಿಂದಂ ॥ ೪೨

ವ॥ ಅಂತು ನಿಂದು,

ಪರಿದೆಯ್ದಲುಮಡರ್ದೇಱಲು
ಮರಿದೆನೆ ನೀೞ್ದೊಂದು ಕಂಬವಗ್ರದೊಳಿರ್ಪಾ ।
ಕರುಮಾಡಮನೇಱಿ ನಿಶಾ
ಚರನಿರ್ದಂ ಧವಳಲೋಲಚಾಮರಯುಗಳಂ ॥ ೪೩

ಮಣಿಕಾಂಚೀಮಣಿಪಾರಿಹಾರ್ಯಮಣಿಮಂಜೀರಸ್ವನಂ ಪ್ರೋಣ್ಣತಲೀ
ಕ್ಷಣಕಾಂತಿ ಸ್ಮಿತಕಾಂತಿ ಮಂಗಳವಿಭೂಷಾಕಾಂತಿ ತಳ್ತೊಪ್ಪೆಯ್ಯೆ ತತ್ ।
ಕ್ಷಣಮಂತಾಕ್ಷಣದಾವನೀಕ್ಷಣಸುಖಂ ಕೈಗಣ್ಮೆ ನಿಶ್ರೇಣಿಯಿಂ
ಗಣಿಕಾಶ್ರೇಣಿಯುಮೇಱಿ ನಿಂದುದ- ತಮಂಗಶ್ರೇಣಿಯಂ ಲೀಲೆಯಿಂ॥ ೪೪

ಮೃಗಭೂಕುಂಕುಮಚಂದನದ್ರವವಿಲೇಪಂ ನೂತನಾನರ್ಘ್ಯರ
ತ್ನಗಣಾಲಂಕರಣಂ ವಿಚಿತ್ರವಸನಂ ಚೆಲ್ವಾಗೆ ದೇವೇಂದ್ರಲೀ ।
ಲೆಗಳಿಂ ಕ್ಷತ್ರಿಯಪುತ್ರಮಂಡಳಿಕದಂಡಾಧೀಶಸಾಮಂತಕೋ
ಟಿಗಳಂದೇಱಿ ತಮಂಗಕೋಟಿಗಳ ಕೂಟವ್ರಾತದೊಳ್ ರಂಜಿಕುಂ ॥೪೫

ವ॥ ಅನಂತರಂ,

ಇಳೆಯಂಪಾತಾಳಮೂಲಕ್ಕೆಚಿಪುವ ಕಡಲಂಪೀರ್ವಗೋತ್ರಾದ್ರಿಯಂ*ಕೀ
ೞ್ವಳವಿಂದಂಷ್ಟ್ರಾಕರಾಳಭ್ರುಕುಟಿಕುಟಿಲರುಜ್ಜೃಂಭಿತಾತಾಮ್ರನೇತ್ರರ್
ಜಳವಾಹಶ್ಯಾಮದೇಹರ್ ಸಮುಚಿತಯುತಿತೂರ್ಯಸ್ವನರ್ ಬಂದು ರಂಗ
ಸ್ಥಳದೊಳ್ಸಿಂದರ್ಭುಜಾಸ್ಫಾಲನರುಚಿಮಿಗೆಚಾಣೂರಮುಖ್ಯಾದಿಮಲ್ಲರ್॥

ವ॥ ಆಗಳ್,

ಮಣಿಮನ್ನಕ್ಷತ್ರಮಾಲಾರುಚಿನಿಚಯಮರುಚ್ಚಾಪದಿಂ ಪ್ರಸ್ಫುರದ್ಬೃಂ
ಹಣವಜ್ರಧ್ವಾನದಿಂದಂಕುಶಕಿರಣತಟಿಜ್ಜಾಲದಿಂ ದಾನಧಾರಾ ।
ರುಣಧಾರಾವರ್ಷದಿಂ ಕಾರ್ಮುಗಿಲೆ ಗಜದ ರೂಪಾದುದೆಂಬಂತಿಭೇಂದ್ರಂ
ರಣರಂಗದ್ವಾರದೊಳ್ನಿಂದುದುಪದಭರದೊಳ್ಬಳ್ಕೆ ತತ್ಕ್ಷೋಣಿಚಕ್ರಂ ॥

ವ॥ ಅನ್ನೆಗಮಿತ್ತಲ್,

ಅಮರವಿರೋಧಿಯಂ ಮಡಿಪಲಾಂ ಬರವೇೞ್ಪುದೊ ಕೃಷ್ಣ ಪೇೞ್ ತ್ವದ
ಪ್ರಮಿತತಳಪ್ರಹಾರವದೆ ಸಾಲ್ಗುಮೊ ನೀಂ ಬೆಸಸೆಂದು ಯಕ್ಷಕ ।
ರ್ದಮರಸಚರ್ಚೆಯಿಂ ಕಪಿಶಮಾದ ಸುದರ್ಶನಮೆಂಬ ಚಕ್ರರ
ತ್ನಮೆ ತಲೆದೋಱಪಂತುದಯದೊಳ್ಬಗೆಗೊಂಡುದುಭಾನುಮಂಡಲಂ॥

* ಖ—ಗೋತ್ರಾಳಿಯಂ.

ವ॥ ಆಗಳೇಕಕುಂಡಲನತ್ರಲಾಭುಾನುಮಂಡಲಮುಮನಿತ್ತಲೀಕು ವಲಯಾಪೀಡವೇತಂಡಮುಮನೊಡನೊಡನೆ ಕಂಡು,

ಈಭಾನುಬಿಂಬಮಂ ಲೀ
ಲಾಭಸ್ತ್ರಿಕೆಯೆಂದು ಪೊಯ್ಯುವೊಲ್ ನಿಳ್ಕುವ ಹ।
ಸ್ತಾಭೋಗದಿನೆಸೆದತ್ತಚ
ಲಾಭಂ ತಾನೆನಿಪ ಕುವಲಯಾಪೀಡೇಭಂ ॥ ೪೯

ಶತಪತ್ರಾಂಬಕ ನೋಡು ರೌದ್ರರಸಕುಂಭಂ ಕುಂಭಮುಂಚೆಲ್ವೆ ಶೈಲಾ
ಪ್ರತಿಮಾನಂ ಪ್ರತಿಮಾನಮುಗ್ರಕರವಾಲಂ ವಾಲಮುದ್ವೃತ್ತದಾ।
ಗತಿವೇಗಂ ಗತಿವೇಗಮೆಂದೆನಿಸಿ ನಾಗಾರಿಚ್ಛಿದಾಕಾರದಿಂ
ಶ್ರುತಿಗಳ್ ವಿಶ್ರುತಿಮಾಜಿ ಬೀಜಿದಪುದೀಸ್ತಂಬೇರಮಂ ಬೇರಮಂ ॥ ೫೦

ವ॥ ಎಂದು ನಿಜಾನುಜಂಗೆ ತೋಱಿ ಸಗರ್ವಾವಲೋಕನನಾಕು ವಲಯಾಪೀಡಗಜಮಂ ಕಂಡು ಗಜಾಸುರನಂ ಕಂಡ ಖಂಡಪರಶುವಿನಂತುದ್ಭಟಾರಭಟಿಯಿಂದಾರ್ದು ಭೈಭೈಕಾರದಿಂದ ದ್ವಿರದದಿದಿರಂ ನಡೆಯೆ,

ದಿತಿಜಾರಿಯ ಭೈಕೃತದೊಡ
ನೆ ತಗುಳ್ದು ಣ್ಕಿದುದು ಕೆರಳ್ದಿಭೇಂದ್ರದ * ಗಳಬೃಂ।
ಹಿತಮುಂ ಮದಧಾರಾಭ್ಯು
ಕ್ಷೃತಮುಂ ಮದಗಂಧವಿಚಲದಳಿಝುಂಕೃತಮುಂ ॥ ೫೧

ವ॥ ಆಪ್ರಸ್ತಾವದೊಳ್,

ಅಱೆಯಟ್ಟಿತ್ತಟ್ಟಿ ಮುಟ್ಟಿತ್ತಡಸಿ ಪಿಡಿದುದಿಕ್ಕಿತ್ತು ಮೆಟ್ಟಿತ್ತದೌಂಕಿ
ತ್ತಱಗಿತ್ತಿತ್ತಿಭಂ ಕೃಷ್ಣನನೆನುತಮರರ್ ಬೆರ್ಚೆ ಗೋಪಾಲಕರ್ ಬೆ।
ಳ್ಕುಱೆ ದೈತ್ಯರ್ ಪೊಂಗೆಕೃಷ್ಣಂರಿಪುಕರಿಗಿನಿಸಂ ಗೆಲ್ಲಮೀವಂತೆ ಪೊರ್ದಂ
ಕಿಱಿದಾನಂ ಬೇಗದಿಂದಚ್ಯುತನ ತೆಱದಿನಾವಂ ವಿನೋದೈಕಶೀಲಂ॥೫೨

* ಕ ಗ.—ಕಳರ್ದಿಭೇಂದ್ರದ.

ಸ್ತಂಬೇರಮದೊಳ್ ಪೋಣರ್ದಂ
ಕೊಂಬಿನ ವಾಲಧಿಯ ಕರದ ಪದದೆಣ್ಬತ್ತಂ ।
ಟೆಂಬ ವಧಕ್ಕೆಡೆಗುಡುತುಮ
ವಂ ಬಂಚಿಸುತುಂ ಸಮಾನಬಲನೆನೆ ಕೃಷ್ಣಂ ॥ ೫೩

ವ॥ ಅಂತು ಪೋಣರ್ದು,

ಹರಿ ಸೋಲ್ತಂ ಕರಿಗೆಂಬಿನಂ ಬವರದಿಂ ಗೆಲ್ವಂತೆಪೋರ್ದಾನೆಗಂ
ಹರಿಗಂ ನೋಡೆ ಸಮಾನಮೆಂಬಿನೆಗಮಂತೊಂದೊಪ್ಪದಿಂ ಪೋರ್ದನಂ ।
ತರಮೋಹೋ ಹರಿ ಗೆಲ್ದನೀಗಜಮನೆಂದಿಂದ್ರಾದಿಗಳ್ ಕೀರ್ತಿಸು
ತ್ತಿರೆ ಮೇಲ್ವೊತ್ತಿನೊಳಂದು ತೋಱಿ ಮೆಱೆದಂ ಕೃಷ್ಣಂ ಬಲಾಟೋಪ
ಮಂ ॥೫೪

ವ॥ ಅಲ್ಲಿಂಬೞಿಯಂ,

ರದನಾಗ್ರದ್ವಂದ್ವಮಂ ಕೈದುಡುಕಿ ಪಿಡಿದುರೋಭಾಗಮಂ ಪಾದದಿಂ ಪೋ
ಗೊದೆಯುತ್ತುಂ ಕೋಲ್ಕಿಳಂ ಚಿಕ್ಕನೆ ಕಿಡೆ ರದನದ್ವಂದ್ವಮೆಂಬೀಗ
ದಾದಂ ।
ಡದಿನುರ್ಚಿರ್ದಾಡಿದಂ ಪೋ ಗಪಸಣಿಗೆಯನೀಕೃಷ್ಣನಂಬಂತುರುಳ್ದಿ
ರ್ದುದನುಗ್ರೇಭೇಂದ್ರಮಂ ತದ್ರದನಯುಗಳದಿಂ ಮೋದಿ ಕೊಂದಂ ಮು
ಕುಂದಂ ॥೫೫

ವ॥ ಆಗಳಾಗಜದ ಪೋರ್ಕುಱಿಯಿನವಯವದೊಳಲ್ಲಲ್ಲಿಗಳವಟ್ಟ
ರದನವಿಘಟ್ಟನರೇಖಾನಿಕಾಯಮುಂ, ಮೇಳಂಗೊಂಡ ಕುಂಭಸ್ಥಳದ
ಸಾಂದ್ರಸಿಂದೂರರೇಣುಪ್ರಸರಮುಂ, ಪಗಿಲ್ತಿರ್ದ ಕಲಿಲಮದಸಲಿಲಮುಂ,
ಸಿಂಪಿಸಿರ್ದ ದಂತೋತ್ಪಾಟನೋಚ್ಛಲದರುಣಬಿಂದುಸಂದೋಹಮುಂ,
ವಿರಳ ಬಾದ ಸಿರಿಗಂಪದಣ್ಪುಂ, ನಸುಮಱಿಯಾದ ಪೂದುಡುಗೆಯುಂ,
ಬೇಱೊಂದು ಚೆಲ್ವನವಟ್ಟಿಸಿ ವೀರರಸಕ್ಕಾಗರಮಾಗೆ ತಾನುಮಗ್ರಜನುಂ
ರದನದಂಡಮಂ ಭುಜಾದಂಡದೊಳಮರೆ ಪಿಡಿದು ನಡೆಗೊಂಡು,

ಪ್ರತಿಮಲ್ಲರ್ ಗಿರಿಕಲ್ಪನೆಂದಿತರರೆಲ್ಲರ್ ಬಾಲನೆಂದಂಗನಾ
ತತಿ ಪುಷ್ಪಾಯುಧನೆಂದು ಗೋಪನಿವಹಂ ಸಾಮಾನ್ಯನೆಂದಾಕುಲಾ ।
ಕೃತಿ ಕಂಸಂ ಲಯಕಾಲನೆಂದು ದಿವಿಜರ್ ವಿಶ್ವಾತ್ಮನೆಂದೀಕ್ಷಿಸಲ್
ದಿತಿಜಾರಾತಿ ವಿಚಿತ್ರಮೂರ್ತಿ ಪುಗುತಂದಂ ಮಲ್ಲರಂಗಾಗ್ರಮಂ ॥ ೫೬

ವ॥ ಅಂತು ಪೊಕ್ಕು ಸಕಲಜ್ಞಂ ಗಜೋನ್ಮೀಲನದಿಂ ನಿರೀಕ್ಷಿಸಿ,

ನೆರೆದುಚ್ಚಸ್ಥಳದೊಳ್ ಜನಂಗಳಿರೆ ನೀಚಸ್ಥಾನದೊಳ್ ಭೀತಿಯಿಂ
ಕೊರಗಿರ್ದಾವಸುದೇವದೇವಕಿಗಳಂ ಕಂಡಬ್ಜನೇತ್ರಂ ನಿಜಾಂ ।
ತರದೊಳ್ ಪೂರ್ಣನದೊಂದನೀರಿಪುವನುಚ್ಚಸ್ಥಾನದಿಂದಿಕ್ಕುವೆಂ
ಧರೆಗೆಂದೀಗಳೆ ಮಾಳ್ಪೆನುನ್ನತಿಯನೀತಾತಂಗಮೀಮಾತೆಗಂ ॥ ೫೭

ವ॥ ಆಗಳಾವಿಜಯತೇಜೋವಿಭವಸುಭಗರಪ್ಪ ನಿಜತನೂಭವ ರೊಳ್ ದೇವಕೀದೇವಿಗಪೂರ್ವದರ್ಶನಮಾಗೆ,

ಪರಿದಾಲಿಂಗಿಸುವೆತ್ತಿಕೊಳ್ವ ಬಗೆ ಪುಟ್ಟಲ್ ಪುಟ್ಟದಾತ್ಸುಕ್ಯದಿಂ
ತೊರೆವನ್ನಂ ಕುಚಯುಗ್ಮಮಂದೆ ಸುತರಂ ಪೆತ್ತಂದದಿಂ ಪೆತ್ತಳಾ ।
ದರಮಂ ಕಾಣ್ಬುದುಮಂದಪತ್ಯರನಶೇಷಸ್ತುತ್ಯರಂ ಸೇವ್ಯಸ
ತ್ಯರನಸ್ತಾಖಿಲದೈತ್ಯರಂ ಯದುಕುಲಾಬ್ಜಾದಿತ್ಯರಂ ನಿತ್ಯರಂ ॥ ೫೮

ವ॥ ಅನ್ನೆಗಂ ಮಲ್ಲರಂಗಕ್ಕವತರಿಸಿ ನಿಂದು ವಸುದೇವನಂದನರ್ ಕರುಮಾಡದ ಮೇಲಿರ್ದಾಭೋಜರಾಜನನುತಾನ್ತನಿತಾನನಾಂಭೋಜರ್ ಉಪಾಲಂಭಸಂಭಾಷಣಸ್ಮಿತಚತುರರುಮಾಗಿ ನೋಡಿ,

ಗರುಡಂಗಮೆಯ್ದ್ದಲರಿದೆನೆ
ಕರುಮಾಡವಿದುದ್ದಮಾದುದೇಕಸ್ತಂಭೋ ।
ಪರಿನಿರ್ಮಿತಮಿದನೆಮ್ಮ
ನ್ನರ * ದಿಟ್ಟಗಳೆಯ್ದಮೆಂತು ಬಣ್ಣಿಪೆವರಸಾ ॥ ೫೯

* ಖ.—ನೆಮ್ಮಿನರ.

ಪೂತನೆ ನಂಜನೂಡೆ ಶಕಟಂ ಪರಿದೊತ್ತೆ ಖರಂ ಖುರಾಗ್ರದಿಂ
ಘಾತಿಸೆ ಪುಂಗವಂ ಮಲೆದು ಮಾಕೊರ್ಳೆ ಕೇಶಿ ಕಡಂಗಿ ಸುಂಗೆ ಪು ।
ನ್ನಾತಿಶಯದಿಂದೆ ಪಿಂಗಿದುವು ನಿನ್ನ ಪ್ರಸಾದದೆ ಕಂಸ ನಿನ್ನ ಜಾ
ಮಾತೃಗಳಂದೊಡಾವದುರಿತಂಗಳುಮೆಮ್ಮೊಳೆ ಪೊರ್ದಲಂಜುಗುಂ *॥೬೦

ಆರೊಡನಕ್ಕೆ ಪೋರ್ದರ್ ಭವದೀಯಗಜಂ ಹತಮಾದುದಿಂದು † ಚಿಂ
ತಾರಯುವೇಕದರ್ಕದಱ ತೋಲೊಳಮೆಲ್ವಿನೊಳಪ್ಪುದಿಲ್ಲ ತ ।
ತ್ಸಾರಧನಂಗಳೀಯೆರಡೆ ದಂತಮಿವಂ ಪಿಡಿ ಕಂಸ ನಿನ್ನ ಭಂ
ಡಾರದೊಳಿಕ್ಕೆಸೆಂದು ಬಿಸುಟರ್ ನಿಜಹಸ್ತದ ದಂತಯುಗ್ಮಮಂ ॥ ೬೧

ವ॥ ಅದಂ ಕಂಡು ಕಟ್ಟೇವಮುಂ ಕಡುಮುಳಿಸುವೊಡವಳಯೆ ಕಂಗನ ಕನಲ್ದು ಕಂಸನಿಂಗಿತಮನಱಿದು ಪೂರ್ವಸೂಚನಾಕ್ರಮದಿನೆಱ್ದು ಚಾಣೂರಮುಷ್ಟಿಕರ್ ಕೃಷ್ಣರಾಮರೊಳ್ ಪೊಣರಲೆಂದು ಭುಜಾಸ್ಫಾಲನಂಗೆಯ್ವುದುಮಾನಿನಾದದೊಡನೆ,

ಉರಗರ್ ಜೀರೇಱೆ ಪಾತಾಳದೊಳಖಿಳದಿಶಾಚಕ್ರಮುಂ ಗೆಲ್ಲವಾಱು
ತ್ತಿರೆ ಪೊಯ್ದತ್ತಬ್ಧಿಯಂಭೋರವ ‡ ಮೊಗೆಯೆ ಪಳಂಚಿತ್ತು ನಕ್ಷತ್ರಮಾರ್ಗಾಂ ।
ತರಮಂ ಬೆಂಡೇಱ್ವಿನಂ ಪೋಗೊದೆದುದು ದಿವಮಂ ಸ್ಫಾರಫೂತ್ಕಾರಶಂಕಾ
ಭರಲೋಕಂ ರಾಮಕೃಷ್ಣಪ್ರಬಳತರಭುಜಾಸ್ಫಾಲನಾಭೀಳನಾದಂ ॥೬೨

ವ॥ ಅಂತು ಭುಜಾಸ್ಫಾಲನಂಗೆಯ್ದು ಲಲಿತವಲ್ಗನಾವಷ್ಟಂಭದಿಂ ಮುಷ್ಟಿಕನೊಳ್ ಮುಸಲಪಾಣಿಯುಂ, ಚಾಣೂರನೊಳ್ ಚಕ್ರಪಾಣಿಯುಂ, ಪೊಣರೆ,

ಬಳವಳವೆಣ್ಮೆ ಕಾಯ್ದೊಪಜೆ ಬಿನ್ನಣಮೊಂಬಿವು ಪೊಱ್ದಡಲ್ಲಿ ಕೈ
ಕೊಳೆ ವನವಹ್ನಿಯಿಂ ಬಿದಿರ ಗಂಟೊಡೆವಂತೆ ಛಟಚ್ಛಟಸ್ವನಂ ।

* ಕ.ಖ.ಗ.—ಪೊರ್ದವಂಜುಗುಂ. † ಕ.ಗ.—ಹತಮಾದುದೀಗ.
‡ ಕ.ಖ.ಗ.—ಪೊಯ್ದತ್ತಬ್ಧಿಭಂಭುರವ.

ಬಳೆದುದು ಯುದ್ಧದೊಳ್ ಘುಮುಘುಮುಧ್ವನಿ ಪ್ರೋಣ್ಮಿದುದುಣ್ಮಿತಾಸಭಾ
ಕಳಕಳನಾದಮೊದುದುಲಿವಾಪ್ರತಿಹಾರರುಘೋಯುಘೋರವಂ ॥ ೬೩

ಧರೆಯಂ ಪೊತ್ತಿರ್ದ ಶೇಷಂ ಸುಗಿಯೆ ಭಯದಿನೋರೊರ್ವರಂ ತಾಗುವೋರೊ
ರ್ವರನಾಟಂದೊತ್ತುವೋರೊರ್ವರನುರವಣೆಯಿಂದಿಕ್ಕುವೋರೊರ್ವರಂ ಡೊ।
ಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳಾವೇಗವಾಕೋಪವಾವು
ಚ್ಚರವಾಬಲ್ಪಾಪೊಡರ್ಪುರ್ವಿಗೆಯಣಕಮೆಗುರ್ವೆದ್ಭುತಂ ದುರ್ನಿವಾರಂ॥

ವ॥ ಅಲ್ಲಿ,

ಪೊಣರ್ದಿಕ್ಕೆಕ್ಕೆಯಿನಿಕ್ಕುವಿಕ್ಕಿ ಜವದಿಂದಾರ್ದೇೞುತುಂ ಘರ್ಮವಾಃ
ಕಣವಂ ರಂಗದ ಧೂಳಿಯಿಂ ತೊಡೆದು ಮತ್ತಂ ಪೋರ್ವ ಪೋರ್ದಾರ್ದುಬಿ।
ನ್ನಣಮಂ ಕೊಳ್ವ ಕೊಳಲ್ಕೆ ತಪ್ಪಿದುದು ಮಾಣೆಂಬೇಳ್ಗೆಯಿಂ ತಂದುದೀ
ಕ್ಷಣಕೌತೂಹಲಮಂ ಸಭಾವಳಿಗೆ ಯುದ್ಧಂ ಕೃಷ್ಣಚಾಣೂರರಾ ॥ ೬೫

ಬಂದೊಂದಾಶ್ಚರ್ಯಮಂ ಮಾನುಷಬಲದೊಳ್ ತೋರ್ಪೞುತ್ತಿಯಿಂ ಕಣ್ಗೆ ಕೆಂಪಂ
ತಂದಂಗಕ್ಕೆಯ್ದೆ ಘರ್ಮಾಂಬುವನೊಡರಿಸಿ ಕೊಂಡಾಡಿ ಚಾಣೂರನೊಳ್ ಪೋ।
ರ್ದಂ ದೈತ್ಯಧ್ವಂಸಿಯೆಂತುಂ ತ್ರಿಜಗದುದಯನಾಶಂಗಳಾತ್ಮೀಯಶಕ್ತಿ
ಸ್ಪಂದಾಸ್ಪಂದಗಳೆಂಬಚ್ಯುತನ ಭುಜಬಲಕ್ಕಂತದೊಂದಾವ ಲೆಕ್ಕಂ ॥೬೬

ಉಪಮಾತೀತಮೆನಲ್ ಜವಕ್ಕೆ ಜವಮೆಣ್ಮಿಂಗಣ್ಮು ಬಲ್ಪಿಂಗೆ ಬ
ಲ್ಪು ಪೊಡರ್ಪಿಂಗೆ ಪೊಡರ್ಪು ರೌದ್ರತೆಗೆ ರೌದ್ರತ್ವಂ ಮಿಗಿಲ್ ಕಾಣಲಾ।
ದಪುದೀಕೃಷ್ಣನೊಳಿಂ ಗೆಲಲ್ಕಱಿಯನೀಚಾಣೂರನೆಂದಿತ್ತು ಬಾ
ಜಿಪುದಂ ಮಾಣ್ದಿರೆ ಶಂಖತೂರ್ಯಮೆಸೆದತ್ತತ್ತಿಂದ್ರತೂರ್ಯಸ್ವನಂ॥೬೭

ವ॥ ಅನ್ನೆಗಂ,

ತವೆದ ನಿಜಕೋಪದಿಂ ಚಳ
ಕವಿನ್ನಣಂಗೊಂಡು ತಕ್ಕಿನೊಳ್ ಬಲನಂದಾ ।
ರ್ದವನ ನವರಂಧ್ರದಿಂ ರ
ಕ್ತವೊಗೆಯೆ ಡೊಕ್ಕರಿಸಿ ಕೊಂದನಾಮುಷ್ಟಿಕನಂ ॥ ೬೮

ವ॥ ಅನಂತರಂ,

ಕಡುಪಂ ಪಟ್ಟಸವೆಂಬ ಬಿನ್ನಣದೆ ಕೃಷ್ಣಂಗೆಲ್ದು ಪಿಂಗಾಲ್ಗಳಂ
ಪಿಡಿದಾರ್ದೆತ್ತಿ ನಿಶಾಟನಂ ತಿರಿಪೆ ತದ್ಭ್ರಾಮ್ಯನ್ನಿಶಾಟಾಸ್ಯದಿಂ ।
ಪೊಡರ್ದಸ್ರಾಂಬುವಲಾತಚಕ್ರಮೆನೆ ವೃತ್ತಾಕಾರದಿಂದುಣ್ಮುತುಂ
ಪಡೆದತ್ತಾಗಸವೆಣ್ಗೆ ಪೊನ್ನ ಕಟಿಸೂತ್ರಶ್ರೀಯನಾಬೇಗದೊಳ್ ॥ ೬೯

ವ॥ ಅಂತು ಚಾಣೂರನಂ ನೆಗಪಿ ನೂಱುಸೂಳ್ವರಂ ತಿಱ್ರನೆ ತಿರಿಪಿ ಸೊಪ್ಪುಸೊವಡಾಗೆ ಕಳದೊಳಪ್ಪಳಿಸಿ ಕೊಂದಿಕ್ಕಿ ತನಗೆ ಮಾರ್ಮಲೆವ ಮಲ್ಲರಿಲ್ಲದಿರೆ,

ಸುಲಲಿತವಲ್ಗನದಿಂ ಕಮ
ಳಲೋಚನಂ ಸುೞಿದು ರಂಗದೊಳ್ ಗೋಪರುಮಂ * ।
ನಲಿವತ್ತಲೆ ಚಾಳಿಪ ವಿಜ
ಯಲಕ್ಷ್ಮಿ ಕಂಸಂಗಸಹ್ಯಮಾದತ್ತಾಗಳ್ ॥ ೭೦

ತಿಳಿದು ನಿಜಪತಿಯ ಮನಮಂ
ಬಳಾಧಿಕರ್ ಪಲಬರೆೞ್ದು ತೋಸಲಕಾದ್ಯರ್ ।
ಕಳಭಕ್ಕೆ ಯೂಥಪತಿಗಳ
ಬಳಗಂ ಕವಿವಂತೆ ಮುಸುಱಿದರ್ ಮುರಹರನಂ ॥ ೭೧

ವ॥ ಆಗಳಾಕಂಸಕೃತವಿಕೃತಿಯಿಂ ಪ್ರಕೃತಿಕ್ಷೋಭಮಾಗೆ,

---

*ಕ.ಖ.ಗ.—ಗೋಕುಲಮಂ.

ಒರ್ವನೊಳಧಿಕಬಲರ್ ಸಾ
ಸಿರ್ವರ್ ಪೊಣರ್ದಪರಿದಕ್ರಮೆಂ ಹಾಹಾ ಎಂ ।
ದುರ್ವಿಜನಮಿತ್ತಲತ್ತ ಸು
ಪರ್ವರ್ ಪುಯ್ಯಲ್ಚಿ ನಗೆದುದಾಕುಳನಿನದಂ ॥ ೭೦

ವ॥ ಅನ್ನೆಗಂ,

ಜವನೊಡವುಟ್ಟು ಮಾರಿಯೊಡನಾಡಿ ಲಯಾಗ್ನಿಯನಂಟು ಕಾಲಮೃ
ತ್ಯುವ ಗುರು ಕಾಳಕೂಟದೆಣೆ ಸಿಂಗದ ಸಂಗತಿಯುಂ ಯುಗಾಂತಭೈ ।
ರವನ ಪರಿಗ್ರಹಂ ಸಿಡಿಲ ಸಂಗಡಮಿಾಶನ ಬೆಂಕೆಗಣ್ಣ ಬಾಂ
ಧವನೆನೆ ಶೌರಿ ಮರ್ದಿಸಿದನಪ್ರತಿಮಲ್ಲರೆನಿಪ್ಪ ಮಲ್ಲರಂ ॥ ೭೩

ಗರುಡಂ ವ್ಯಾಳಸ್ಫುಟಾಸ್ಫಾಲನಸಮಯದೊಳೆಂತೆಂತು * ಸಿಂಹಂ ಮಹಾಸಿಂ
ಧುರಶುಂಭತ್ಕುಂಭನಿರ್ಭೇದನಸಮಯದೊಳೆಂತೆಂತು ವಜ್ರಂ ಕುಳೋರ್ವೀ ।
ಧರಪಕ್ಷಾನೀಕವಿಚ್ಛೇದನಸಮಯದೊಳೆಂತೆಂತು ಕಂಸಾರಿ ಕಂಸಾ
ಸುರದೇಹಾಸ್ಫಾಳನಾಡಂಬರಸಮಯದೊಳಂತಂತಗುರ್ವಾಗಿ ನಿಂದಂ॥೭೪

ವ॥ ಆಪ್ರಸ್ತಾವದೊಳ್,

ತೆಗೆದೀಂಟಲ್ ವಾರ್ಧಿ ನುಂಗಲ್ ದಿಗಿಭಸಮಿತಿ ತುತ್ತಲ್ ವಿರಿಂಚಾಂಡಭಾಂಡಂ
ಮಿಗಿಲಲ್ತೀತಂಗೆನಲ್ ದಾನವರಿಪು ಮಸಕಂಗೊಂಡನಿಂ ಪೋರ್ವನೆಂಬೀ ।
ಬಗೆಯಿಂ ಪಣ್ಣಾನೆಯಂ ಪಲ್ಲಣಿಸು ಕುದುರೆಯಂ ಪೂಡು ತೇರಂಭಟರ್ಕೈ
ದುಗಳಂ ಕೈಕೊಳ್ಳಿಮೆಂಬೀಭಟರ ಕಳಕಳಂ ಕೇಳಲಾದತ್ತದೆತ್ತಂ ॥೭೫

ವ॥ ಅನ್ನೆಗಂ,

ಪ್ರಕಟಂ ಸಿಂಹಸ್ಫುರಲ್ಲಂಘನಮೆಸೆಯೆ ತಮೆಂಗಕ್ಕೆ ಧೀಂಕಿಟ್ಟು ಕೃಷ್ಣಂ
ಮಕುಟಾಗ್ರಾಸ್ಫಾಲನಂಗೆಯ್ದೆಲೆಲೆ ರವಿಯನಾರಾಹುವೀಂಟಿತ್ತೆನಲ್ ಕಾ ।

* ಕ ಗ.—ವ್ಯಾಲಾಹಿನಾಶಕ್ಕೆ ಋಗುವತೆಱನೆಂತಂತು

ತುಕವೊಯ್ತೆಂದಬ್ಬ್ರದೊಳ್ಬೊಬ್ಬಿಱಿಯೆದಿವಿಜರಾವೊಡದಿಂ ಕಂಸನಂಮ
ಲ್ಲಕಳಕ್ಕೈತ್ತಿಕ್ಕಿ ತಾಂ ಮೇಲೆಱಗಿದನೆಱಗಲ್ ಸ್ವರ್ಗದಿಂ ಪುಷ್ಪವರ್ಷಂ॥ ೭೬

ಜಗದಾಧಾರಕನದಟಿಂ
ಧಿಗಿಲೆನೆ ಮೇಲೇಱಿ ತುೞಿದು ರಾಕ್ಷಸನಸುವಂ ।
ತೆಗೆದು ತೆಗೆದೆಷೆದುಬೞಿಯಂ
ತೆಗೆದಂ ಶ್ರೀಕೃಷ್ಣನವನ ಮೇಗಣ ಮುಳಿಸಂ ॥ ೭೭

ಖಳನಂ ತುೞಿವೆಡೆಯೊಳ್ ಗೋ
ವಳರಾಯನ ತೊಡರ ಹಾಹೆ ತೊಡರ್ವೆರಸಂಫ್ರ ।
ಸ್ಥಳದಿನುರುಳ್ವಂತಿರೆ ನಿ
ಗಳಿತಾಸ್ರನುರುಳ್ದು* ಕಂಸನೆಸೆದಂ ಕಳದೊಳ್ ॥ ೭೮

ವ॥ ಆಪ್ರಸ್ತಾವದೊಳ್,

ಪವನವ್ಯೋಮವಸುಂಧರಾಸಲಿಲತೇಜೋಲೀಲೆ ವ್ಯೈವೆರ್ಚಲು
ತ್ಸವಮಾದತ್ತು ಸಮಸ್ತಭೂತಳದೊಳಾಗಳ್ ಭೂತಸರ್ವಸ್ವಮಂ ।
ಕವರ್ದಂಗೀಕರಿಸಿರ್ದ ಕಂಸದನುಜಂ ಪಂಚತ್ವಮಂ ಪೊರ್ದಲಿಂ
ತವು ತಂತಮ್ಮ ವಿಭಾಗಮಂ ಮಗುಳ್ ಕೈಕೊಂಡಿರ್ದುವೆಂಬನ್ನೆಗಂ ॥

ವ॥ ಆಮಹೋತ್ಸವದೊಳ್,

ಶರವಿದ್ಯಾಬಲದಿಂದೆ ಕೊಂಡುಕೊನೆವಾಯುದ್ಧಂಗಳಂ ಮೆಚ್ಚಿ ನಾಂ
ಪಿರಿದುಂ ಮೆಚ್ಚುವೆನಿಂತುಟೊಂದು ನಿಮಿಷಂ ಧೀಂಕಿಟ್ಟು ಹರ್ಮ್ಯಾಗ್ರದಿಂ।
ಧರೆಗಾದಿಕ್ಕಿ ವಿರೋಧಿಯಂ ಮಡಿಪಿದೊಂದಂ ಚೆಲ್ವನೆಂದಾಡಿದಂ
ಪರಮಾನಂದವಿನೋದದಿಂ ಸ್ಮಿತಹಟನ್ನಾನಾರದಂ ನಾರದಂ ॥ ೮೦

ವ॥ ಅನ್ನೆಗಂ ಶತಮಖಪ್ರಮುಖನಿಖಿಲದೇವತಾಸಂತಾನವಂತ
ರ್ಧಾನದೊಳ್ ನಿಂದು ದಾನವಾಂತಕನ ಮೊಗಮಂ ನೋಡಿ,

* ಖ.ಗ.—ಗಳಿತಾಸುವುರುಳ್ದು.

ಮುಂ ದೈತ್ಯಕೋಪಹುತವಹ
ನಿಂದಂ ಕಾಯ್ದುರಿವ ಭುವನಮಂ ವಿಜಯಯಶ ।
ಶ್ಚಂದನರಸದಿಂದಂ ತೊಳ್
ದಿಂದು ಮುರಧ್ವಂಸಿ ನೀಂ ಕುಳಿರ್ಕೋಡಿಸಿದೈ ॥ ೮೧

ಗಡಿಗೆಟ್ಟಜಾಂಡಕೋಟಿಯು
ನೆಡೆಯುಡುಗದೆ ನುಂಗಿಯುಗುಳ್ವ ನಿನಗೀಪಸೆಗೆಯುಂ ।
ಮಡಿಪುವುದು ಪಿರಿದೆ ಕೇಶವ
ಕಡಲಂ ಪೀರ್ವಂಗಮರಿದೆ ಕುಡಿತೆಯ ಸಲಿಲಂ ॥ ೮೨

ಕಮಲೋದ್ಭವವಾಗ್ವಿಲಸ
ತ್ಕ್ರಮಮಂ ಮೀಱಿದುದು ವೇದವೇದಾಂಗರಹ ।
ಸ್ಯಮನದಟಲೆದುದೆನಲ್ ಕಂ
ಸಮಥನ ಬಣ್ಣಿಸುವರಳವೆ ನಿನ್ನ ಮಹತ್ತ್ವಂ ॥ ೮೩

ವ॥ ಎಂದಮರಸಮುದಯಂ ಪುಷ್ಪದೊಳಂ ವಾಕ್ಪುಷ್ಪದೊಳಮ ರ್ಚಿಸಿ ಪೋಗೆ,

ಆನತರಪ್ಪರಂಬುಜಭವಾದಿಗಳುಂ ತನಗಕ್ಕಱಿಂದೆ ತಾ
ನಾನತನಾರ್ಗಮಲ್ಲವಧಿಕರ್ ತನಗಿಲ್ಲದ ಪೆಂಪಿನಿಂದಮುಂ ।
ಬಾನಳನಾಕ್ಷನಂದು ವಸುದೇವನ ದೇವಕಿಯುಂಪ್ರಿಗಳ್ಗೆ ಬಂ
ದಾನತನಾದನಂತದುಚಿತಂ ಗುರುಸನ್ನುತಿ ಮರ್ತ್ಯವೇಷದೊಳ್ ॥ ೮೪

ವ ॥ ಆಗಳಾವಸುದೇವನುಂ ದೇವಕಿಯುಮತ್ಯಂತಸಂತೋಷ ಮನಪ್ಪುಕೆಯ್ದು,

ಮನದೊಳ್ ತೆಕ್ಕನೆ ತೀವಿದೊಂದು ಪರಮಸ್ನೇಹಾಮೃತಂ ಕಣ್ಗಳಿಂ
ದೆನಸುಂ ಪೊಣ್ಮಿದುದೆಂಬಿನಂ ಸುರಿವಿನಂ ಹರ್ಷಾಶ್ರು ಪಾದಾನತಾ ।
ಸ್ಯನನಿಂಬಿಂ ತೆಗೆದಪ್ಪಿಕೊಂಡೊಗೆದ ರೋಮಾಂಚಂಗಳೊತ್ತೊತ್ತಿನಿಂ
ತನುಗಳ್ ಪಿಂಗಿದುವೆಂಬಿನಂ ಕೆಲಕೆ ಸಾರ್ದಿಂತೆಂದರಾನಂದದಿಂ ॥ ೮೫

ಉದಯಿಸಿ ದಿವ್ಯಾಕೃತಿಯಿಂ
ಮೊದಲೊಳ್ ನೀನೆಮಗೆ ನುಡಿದ ತೆಱದಿಂದಡಗಿ ।
ಕ್ಕದೆ ಕಂಸನನೆಮ್ಮಂ ನೆಗ
ಪಿದೆ ಚಿಂತಾವಾರ್ಧಿಯೊಳಗೆ ಮುಳುಗಿರ್ದವರಂ ॥ ೮೬

ಪುಟ್ಟುವುದು ಜಗಂ ನಿನ್ನಿಂ
ಪುಟ್ಟುವೆ ನೀನಾವನಿಂ ಸ್ವಯಂಪ್ರಭು ಪಿರಿದುಂ ।
ಪುಟ್ಟುವೊಡಂ ಶಾಂಶದೆ ನೀಂ
ಪುಟ್ಟೆ ಜಗದ್ರಕ್ಷಣಕ್ಷಯಕ್ಷಮನಪ್ಪೈ ॥ ೮೭

ನಿಜಗರ್ಭದೇಕದೇಶದೊ
ಳಜಾಂಡಶತವಿರ್ಪ ವಿಷ್ಣು ನೀನಸ್ಮದ್ಗ ।
ರ್ಭಜನೆಂತಾದೆಯಿದಂ ಭ್ರಾಂ
ತಿಜಾಲಮಂ ಬೀಸಿದೈ ಧರಿತ್ರಿಗಮೆಮಗಂ ॥ ೮೮

॥ ಮಲ್ಲಿಕಾಮಾಲೆ ॥

ಈತ್ರಿಲೋಕದ ಸೃಷ್ಟಿವರ್ತನಸಂಕ್ಷಯಂ ನಿಜಕಲ್ಪನಾ
ಮಾತ್ರಸೂತ್ರಮಿದೆಂದು ಬಲ್ಲೆವನಾದಿಮಧ್ಯವಿರಾಮನೈ ।
ಸ್ತೋತ್ರಪಾತ್ರರೆ ನಾಂ ನೃಕೀಟರದಾವುದೇದೊರೆಯಾದೊಡಂ
ಪುತ್ರನೆಂದಪುದೆಮ್ಮ ನಾಲಗೆ ನಿನ್ನನೆಂತದಹರ್ನಿಶಂ ॥ ೮೯

ತರತಮಮಾಗಿ ಯೋಗಿತತಿ ಯೋಗವಿಭೇದದೆ ನಿಟ್ಟಿಪಾಶಿವಂ
ಪರಮಶಿವಂ ಸದಾಶಿವನೆನಿಪ್ಪಗುಣಂ ಗುಣಿಯಾಗಿ ನೀನಜಂ ।
ಹರಿ ಹರನೆಂಬ ಮೂರ್ತಿಗಳನಾಂತ ಮಹಾತ್ಮನೆ ಮರ್ತ್ಯಮೂರ್ತಿಯಂ
ಧರಿಯಿಸಿ ದೇವಕೀಸುತನೆನಿಪ್ಪುದು ನಿನ್ನ ವಿನೋದಮಾಗದೇ ॥ ೯೦

ಪ್ರಾಕೃತಮನುಷ್ಯಶಿಶುಗೆ
ತ್ತೀಕಂಸನ ಭಯದೆ ನಿನ್ನನೊಳ್ದಿರಿಸಿದೆವಾ ।

ಗೋಕುಲದೊಳ್ ಮಾಯಾಪೋ
ಹಾಕುಳದಿಂದಱಿದೆವಿಲ್ಲ ನಿನ್ನಯ ತೆಱನಂ ॥ ೯೧

ಕ್ಷಿತಿಯುಂ ರಕ್ಷಿಸಲಂಶಾ
ಕೃತಿಯಿಂದುದಯಿಸಿದ ನಿನ್ನೊಳಮಗಿಂ ಲಕ್ಷ್ಮೀ ।
ಪತಿ ಭಕ್ತಿ ಪುಟ್ಟಿದಪ್ಪುದು
ಸುತನೆಂಬ ಮಮತ್ವಮಾದುದಿಲ್ಲಪಮೋಘಂ ॥ ೯೨

ವ॥ ಎಂದನೂನಜ್ಞಾನಸಂಪನ್ನರಾಗಿ ನುಡಿದ ಮಾತಾಪಿತೃಗಳಂ ಮಗುೞೆ ಕೃಷ್ಣಂ ವೈಷ್ಣವಮಾಯೆಯಿಂ ಮೋಹಿಸಿ ರೌಹಿಣೇಯ ಸಮನ್ವಿತಂ ಕರಕಮಲಂಗಳಂ ಮುಗಿದು,

ಕೇಳ್ಗಲೆ ತಾತ ಕೇಳ್ ಜನನಿ ಕಂಸನ ಕಾರಣದಿಂದಗಲ್ದು ಗೋ
ಪಾಲಯವಾಸರಾದೆಮಗೆ ನಿಮ್ಮ ಪದಾರ್ಚನೆಗೆಯ್ವುದಿನ್ನೆಗಂ ।
ಕಾಲಮಿದಿಂತು ಪೋಯ್ತು ಪಿತೃಮಾತೃಗುರುದ್ವಿಜದೇವಪೂಜೆಯಿಂ
ಕಾಲಮಿದೆಯ್ದೆ ಸಲ್ಲದನ ಬಾೞ್ಕೆ ನಿರರ್ಥಕಮಲ್ತೆ ಲೋಕದೊಳ್ ॥ ೯೩

ವ॥ ಎಂದು ಸಂತಸಂಬಡಿಸಿ ಯದುಕುಲಪ್ರವೃದ್ಧ ಜನಂಗಳಂ ಯಥಾಯೋಗ್ಯಮಾಗಿ ಸಂಭಾವಿಸುತಿರ್ದ ಪ್ರಸ್ತಾವದೊಳ್, *

ಮೞಿದಿರ್ದೆಮ್ಮಣ್ಣನಂ ಮರ್ದಿಸಿದ ಕುಟಿಲನೆತ್ತೆತ್ತಲೆಂದೆಯ್ದೆ ವಂದ
ಳ್ಕುಱೆ ಕಚ್ಚಾವಾಲಮಂ ಕೈದುಡುಕಿ ಪಿಡಿದನಂ ನೋಡದಂತಿರ್ದಪಾಂಗಿಂ।
ಪೊಱಕೈಯೊಳ್ ಮೋದಿ ಕಂಸಾನುಜನನಧಿಕನಂ ಕೊಂದು ಮಾರ್ಕೊಂಡರೆಂಬಂ
ತುಱದತ್ತಲ್‌ಗೋಷ್ಠಿಗೆಯ್ವಚ್ಯುತನ ಬಿನದಮಂತೊಂದಗುರ್ವೇನನೆಂಬೆಂ॥

ವ॥ ಅನ್ನೆಗಂ,

ಸುರಲಟಹಪಟಹರವಮಂ
ಬರದೊಳ್ ನರ್ತಿಸಲೆ ನಾರದಂ ದೆಸೆಗಳೊಳು ।

* ಕ. ಖ.—ಸಂಭಾಷಿಸುತ್ತಿರ್ದನಾಪ್ರಸ್ತಾವದೊಳ್.

ಣ್ಮಿರಲುಣ್ಮಿದುದಿತ್ತಲ್ ಮ
ಲ್ಲರಂಗದೊಳ್ ಕಂಸನಂಗನಾಕ್ರಂದರವಂ ॥ ೯೫

ತರುಣಿಯರಂದು ಕಂಸನ ವಿಯೋಗದ ಶೋಕದೆ ಬಿೞ್ದು ಧಾತ್ರಿಯೊಳ್
ಪೊರಳ್ ಪೊದೞ್ದ ಮೆಯ್ಯ ರಜವಶ್ರುಜಲೌಘದೆ ನಾಂದು ಕರ್ದಮಂ ।
ಬೊರೆದವೊಲಾಗಲೆಂದುಮೆಸೆದಿರ್ದರೆಲರ್ * ಪೊಡೆದಭ್ರಕಾಲದೊಳ್
ಧರೆಯೊಳುರುಳ್ದು ಕರ್ದಮದೊಳೞ್ದು ಲತಾನಿಕುರುಂಬಮೆಂಬಿನಂ ॥ ೯೬

ವ॥ ಆಪೆಂಡವಾಸದೆಳವೆಂಡಿರೊಳಗ್ರಮಹಿಷಿಯರೆನಿಸಿದ ಅಸ್ತಿಪ್ರಾಪ್ತಿಯರೆಂಬ ಜರಾಸಂಧಸುತೆಯರ್ ಕಂಸನ ಕಳೇವರಮಂ ತೞ್ಕೈಸಿಕೊಂಡು ಮುಂಡಾಡಿ,

ಪರಿಭವರಜದೊಳ್ ಪಗೆಯಂ
ಪೊರಳಿಸಲುಂ ಪುಷ್ಪಧೂಳಿಯೊಳ್ ವಿರಹಿಣಿಯಂ ।
ಪೊರಳಿಸಲುಂ ತಕ್ಕುದು ನೀಂ
ಪೊರಳಲ್ತಕ್ಕುದೆ ಮದೀಶ ಭೂಪಾಂಸುವಿನೊಳ್ ॥ ೯೭

ಮೃದುಶೃಂಗಾರಮನಪ್ಪುಕೆಯ್ದು ಮೃದುಭಾವಂ ನಿನ್ನೊಳೆಂಬಾಗೆ ನೀಂ
ಮೃದುಶಯ್ಯಾತಳದಲ್ಲಿರಲ್ಲಿ † ಮಿಸುಪೆಮ್ಮಾತೋಳ್ಗಳೊಳ್ವಿಮ್ಮಾನಿತಂ ।
ಬದೊಳ್ವಿಮ್ಮಾಕುಚಮಧ್ಯದೊಳ್ ಪೊರಳುತಿರ್ಪೀ ನಿನ್ನ ದಿವ್ಯಾಂಗಮೊ
ರ್ವೊದಲೊಳ್ ಕರ್ಕಶಭೂಮಿಯೊಳ್ ಪೊರಳ್ ಕಂಡಾಮೆಂತು ಸೈರಿಪ್ಪೆವೋ॥

ಎತ್ತಿ ನಡೆವಮರರಂ ಬೆಂ
ಬತ್ತುವ ಸಮಯದೊಳಮಿಲ್ಲದೀವಿಧಿ ಹಾ ! ದೈ ।
ತ್ಯೋತ್ತಮ ಬಗೆಯದ ಬರಸಿಡಿ
ಲೆತ್ತಣಿನೈದಿದುದೊ ನಿನಗಿದಘಟಿತಘಟಿತಂ ॥ ೯೯

ಪೊಱಮಟ್ಟರಿಬಲದೊಳ್ ‡ ತ
ಳ್ತಿಱಿಯದೆ ಕರುಮಾಡದಲ್ಲಿ ಲೀಲೆಯಿನಿರ್ದೆ ।

* ಕ ಖ ಗ,—ಅಂತುಮೆಸೆದಿರ್ದರವರ್.

† ಕ ಗ.—ತಳದಲ್ಲಿನಲ್ಲ.  ‡ ಖ.—ಪೊಱಮಟ್ಟುದಿವಿಜರೊಳ್.

ಮ್ಮೆಱೆಯುನನದೇಕೆ ಸೊಡಗೆರ್ಗ್ೞಂ
ಡಱಿಸುತ್ತುಂ ಬಂದು ಕೊಂದೆಯಕಟ ವಿಧಾತಾ ॥ ೧೦೦

ವೈರಿವಧೋಪಾಯಾಬ್ಧಿಯ
ಪಾರವಮನಕಟೆಯುದ್ಧಿೀಯುದೆಡೆಯೊಳ್ ಕೊಂದೈ ।
ಹಾ ರಾಕ್ಷಸನಂ ನೀಂ ನಡು
ನೀರೊಳ್ ಪೞುಗೋಲನಿಂತು ಕೊಯ್ವುದೆ ವಿಧಿಯೇ ॥ ೧೦೧

ನಾನಾವಿಧದಿಂ ಪಿಡಿದಾ
ವೇ * ನೆಂದೊಡಮಱಿದೆಯಿಲ್ಲ ಮಱೆದೊಱಗಿದೆಯೋ ।
ನೀನೆಮಗೆ ಮುಳಿದು ನುಡಿಯೆಯೊ
ಜಾನಿಸುತಿರ್ದಪೆಯೊ ಮದ್ಗುಣಂಗಳನರಸಾ ॥ ೧೦೨

ಮನದೊಳವೀಷ್ಯೆರ್ೞಯುಂ ಪಡೆಯುಲೊಂದಿ † ರುಳೊಂದಿನಿಸೊಂದೆ ಮಂಚ ದೊಳ್
ಮುನಿದನಿತೊಂದು ‡ ನಿನ್ನ ಮುನಿಸಾಕ್ಷಣದಿಂ ತನುಸೋಂಕುವೆಮ್ಮ ಸೋಂ ।
ಕಿನೆ ಸಲೆ ಪೋಪುದಿನ್ನೆಮಗೆ ಮವ್ಯನಲಕ್ಷ್ಯನದೃಶ್ಯನಾಗಿನೀ
ನೆನೆಸುಮಗಲ್ದು ಬಲ್ಮೆಳಸು ನಲ್ಲನ ಕಾಲ್ವಿಡಿಯಲ್ಕೆ ಮಾಣ್ಗು ಮೇ ॥೧೦೩

ಭಾವವಭಿನ್ನವಿಚ್ಛಿ ಪೆಱತಲ್ತು ಸುಖಂ ಸಮಮೆಂಬ ನಲ್ಮೆಯಿಂ
ಜೀವವದೊಂದೆ ನಲ್ಲರೊಳ್ೞಡಲ್ಗಳ್ ಬೇಱೆನುತಿರ್ಪೆವಾದೊಡಿಂ ।
ದಾವೆಡೆ ನಿನ್ನ ಜೀವಮೆನೆ ಜೀವಿಸುತಿರ್ದಪೆವಿನ್ನು ನೀಂ ಪೃಥ
ಗ್ಜೀವರೆ ನಲ್ಲರೆಂದಱಿದೊಡಕ್ಕಟ ಧಾತ್ರನ ಮಾಟವಿಂತುಟೇ ॥ ೧೦೪

ವ॥ ಎಂದನೇಕಪ್ರಕಾರದಿಂ ಬಾಯುಱಿದು ಪಳವಿಸುವ ಕಂಸಕಾಂ
ತೆಯರ ಪ್ರಳಾಪಮಂ ಕೇಳ್ದು ಕಾರುಣ್ಯದಿಂದಕ್ರೂರಾದ್ಯರಂ ಕರೆದು

---

* ಕ. ಗ.—ಪಳವಿಸಲೇ. † ಕ. ಗ.—ಮನದೊಲವಿಂದೆಪೆಂಡಿರೊಳಗೊಂದಿ

‡ ಕ. ಗ.—ಮುನಿದಿನಿಸೊಂದು.

ನಿಶಾಟಕಾಂತೆಯರಂ ಸಂತೈಸಿ ಕಂಸಕಂಸಾನುಜಾದಿಮದ್ಬಾಹುನಿಹತರ್ಗೆ ಯಥೋಚಿತಾಚಾರಮಂ ನೆಗಳ್ವುದೆಂದು ಬೆಸಸಿ,

ನಿಗಡನಿರುದ್ಧನಂ ತನಯಶೋಕವಿಲಾಪಿಯನುಗ್ರಸೇನನಂ
ನಗಧರನೊಲ್ದು ಸಂತವಿಸೆ ಯಾದವರಾಜ್ಯಮನೀತನೀಪ್ಕೊಳಲ್ ।
ಬಗೆದು ಮದೀಯಸೂನುಗಳನಿಕ್ಕಿದನೆಂಬವಿವೇಕಿಯಾಮುರಾ
ರಿಗೆ ಕೊಡಲೆಂದು ರಾಜ್ಯಪದಮಂ ನುಡಿದಂ ಭಯದಿಂದಮಾಹುಕಂ ॥

ಕೊನೆವುರ್ವಿರ್ಗಂ ನಸುಜವಿರ್ಗೆ ಪದ್ಮಭವಚಂದ್ರೇಂದ್ರಾರ್ಕಮುಖ್ಯಾಮೃತಾ
ಶನಗರ್ಗಂತಪ್ಪ ಪದಂಗಳಂ ಕುಡುವತಕ್ಕೈಶ್ವರ್ಯನಾರಾಜ್ಯಮಂ ।
ಮನದೊಳ್ ಭಾವಿಸಮುಗ್ರಸೇನನನೆ ಬಂಧೋನ್ಮುಕ್ತನಂ ಮಾಡಿ ತ
ತ್ತನಯಶ್ರೀಸ್ಥಿತನಾಗೆ ಮಾಡಲೊಸೆದಂ * ಶ್ರೀದೇವಕೀನಂದನಂ ॥ ೧೦೬

ಇದುಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಾಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗ
ನ್ನಾಥವಿಜಯಮಹಾಪ್ರಬಂಧದೊಳ್ರಜಕಾಸುರಪ್ರ
ಹರಣಧನುರ್ಭಂಗಕುವಲಯಾಪೀಡನಿಷ್ಪೀಡನ
ಚಾಣೂರಮುಷ್ಟಿಕತೋಸಲಕಾದಿಮಲ್ಲ
ಮಥನಕಂಸಧ್ವಂಸವರ್ಣನಂ
ಷಷ್ಠಾಶ್ವಾಸಂ

---

* ಕ. ಖ ಗ,—ಮಾಡಲೆಸೆದಂ.

## ಸಪ್ತಮಾಶ್ವಾಸಂ.

ಶ್ರೀಮತ್ಸಿಂಹಾಸನಸಿತ
ಚಾಮರಧವಳಾತಪತ್ರಭೇರೀಚಿಹ್ನೋ ।
ದ್ದಾಮಯದುರಾಜ್ಯಸವನಮ
ನಾಮುರಹರನುಗ್ರಸೇನನೃಪತಿಗೆ ನೆಗೞ್ದಂ ॥ ೧

ವನಿತಾಸಂಕುಳಮಿಂಬುಕೆಯ್ಯೆ ನಿಜತೇಜಂ ದಿಗ್ಜಯಂಗೆಯ್ಯೆ ಭೃ
ತ್ಯನಿಕಾಯಂ ಬೆಸಕೆಯ್ಯೆ ಸಜ್ಜನಚಯಂ ಸಂಕೀರ್ತನಂಗೆಯ್ಯೆ ವೈ ।
ರಿನೃಪರ್ ಪೇೞ್ದುದುಗೆಯ್ಯೆ ವಿಶ್ವಜನವಾಜ್ಞಾರಕ್ಷಣಂಗೆಯ್ಯೆ ಕೃ
ಷ್ಣನ ಕಾರುಣ್ಯಮನಪ್ಪುಕೆಯ್ದರಸುಗೆಯ್ದಂ ಲೀಲೆಯಿಂದಾಹುಕಂ ॥ ೨

ವ॥ ಅಂತು ಸಿಂಹಾಸನಾಸೀನನಾಗಿರ್ದ ಯದುಸಿಂಹನಂ ಪುರುಷಸಿಂಹನಾಜ್ಞಾಪನಂಗೆಯ್ದು,

ಭೂಪರ್ಗಣಿದವೆ * ನೀನಾ
ಜ್ಞಾಪಿಸು ಮದ್ಬಾಹುಬಲದಿನಮರರನೆಂದಾ ।
ಟೋಪದಿನಾಮಂತ್ರಿಸೆ ನಿಜ
ರೂಪದೆ ಬೆಸನೇನೆನುತ್ತೆ † ಪವನಂ ಬಂದಂ ॥ ೩

ವ॥ ಅಂತು ಬಂದಭಿಮುಖದೊಳಿರ್ದೇಣವಾಹನನಂ ಮನಂಗೊಂಡು—ಎಲೆ ವಾಯುದೇವ ದೇವೇಂದ್ರನಲ್ಲಿಗೆ ಪೋಗಿ ನೀನಿಂತೆಂದು ಪೇೞ್ವುದು—ಎಂತೆನೆ,

ಬಿಡುವುದು ಗರ್ವಮಂ ಪಿಡಿವುದಾರ್ಜವಮಂ ಸಭೆಯಂ ಸುಧರ್ಮೆಯಂ
ಕುಡುವುದು ಜಿಷ್ಣು ವಿಷ್ಣುಭುಜಪಾಲಿತಯಾದವರ್ಗಿಂ ಮದಾಜ್ಞೆಯಿಂ ।

---

* ಗ.—ಭೂಪರ್ಗಧಿಕನೆ    † ಗ.—ನೀಂಬೆಸಸೆನುತ್ತೆ.

ನಡೆವುದು ದೇವಕೀಸುತನನುಜ್ಞೆಯೊಳಾಹುಕನೆನ್ನನಟ್ಟಿದಂ
ನುಡಿದಿದನಿಂತು ನೀನಱಿಪು ವಜ್ರಧರಂಗೆ ಕುರಂಗವಾಹನಾ ॥ ೪

ವ॥ ಎಂಬುದುಮಂತೆಗೆಯ್ವೆನೆಂದು ಪೋಗಿ ಪುರುಹೂತಂಗೆ ಮಾತರಿಶ್ವನಾಮಾತಂ ಸವಿಸ್ತರಂ ಪೇೞೆ ಪಾಲೋಮೀವರಂ ಗೋವರ್ಧನ ಗಿರೀಂದ್ರಧರನ ಸಾಮರ್ಥ್ಯಮಂ ನೆನೆದು ಮನದೊಳಳ್ಕಿ,

ಉದಯಿಸೆಭಾನು ಭಾನುಮಣಿಯೊಳ್ ಕಡುಗಾಯ್ಪೊಗೆವಂದದಿಂದಮಾ
ಸ್ಪದವತಿತಿಣ್ಣಮಾಗೆದೊರೆಕೊಂಡುದು ಗಂಡಗುಣಂ ಯದುಪ್ರತಾ ।
ನದೊಳದಱಿಂ ಪೊಡರ್ಪು ನಿಜವಲ್ಲದ ಯಾದವರ್ಗಂಜೆನಂಜೆನಂ
ಜೆದಪೆನಧೋಕ್ಷಜಂಗೆ ವೆಳಗಂಜದೊಡಂ ಪುಲಿಗಂಜುವಂತೆವೋಲ್ ॥ ೫

ಕಂಸವಧಂಗೆಯ್ದು ಮುರ
ಧ್ವಂಸಿಗೆ ಪೂಜಾರ್ಥಮೆಂದು ಮಾರುತ ಕೊಟ್ಟೆಂ ।
ನೀಂ ಸಭೆಯಂ ಕೊಂಡುಯ್ವುದಿ
ದಂ ಸಲಿಸಿದೆನೆಂದು ವಜ್ರಿ ನುಡಿವುದುಮಾಗಳ್ ॥ ೬

ವನಜಾಕ್ಷಾಜ್ಞೆಯೊಳಿಂದ್ರರಾಜಪದವೆತ್ತಿಂದಪ್ಪುದಿಂದುಗ್ರಸೇ
ನನೃಪಂಗೆಂಬಿನೆಗಂ ಜಗನ್ನಯನನುಂ ಕಣ್ಣುಳ್ಕುವಂತಾತ್ತರ ।
ತ್ನನಿಕಾಯದ್ಯುತಿ ಪೊಣ್ಮೆ ಕಾಮವಿಪುಳಂ ಕಾಮಪ್ರದಂ ಕಾಮಗಾ
ಮಿ ನಭೋಮಾರ್ಗದೆ ಬಂದುದಿಂದ್ರನ ಸಭಾಹರ್ಮ್ಯಂ ಸುಧರ್ಮಾ
ಹ್ವಯಂ ॥ ೭

ವ॥ ಅಂತು ಬಂದ ದಿವ್ಯಸಭೆಯಂ ಯದುಪುಂಗವಂ ದೇವಕೀತನೂಭವರ ಭುಜಾಶ್ರಯದ ಬಲದಿನುಪಭೋಗಿಸುತ್ತುಂ ಸುಖದಿನಿರೆ,

ಅನಿತುಂ ವಿದ್ಯಾಪ್ರಪಂಚಂ ತನಗೆ ವಿದಿತಮಾಗಿರ್ದೊಡಂ ಶ್ರೀಮುಕುಂದಂ
ಮನುಜರ್ಗಾಚಾರ್ಯಶಿಷ್ಯಕ್ರಮಮನಱಿಪುವೊಂದಿಚ್ಛೆಯಿಂ ರೋಹಿಣೀನಂ।

ದನೆಯುಕ್ಕಂ ಪೋಗಿ ಕಾಶೀಕ್ಷಿತಿಯೊಳಸಿಪವಂತೀಪುರಾವಾಸಿ ಸಾಂದೀ
ಪನಿಯೊಳ್ * ಶಿಷ್ಯತ್ವಮಂ ಪೊರ್ದಿದ ನೆವದೆ ಕಲಾಪ್ರೌಢಿಯಂ ತಾಳ್ದಿ
ನಿಂದಂ ॥ ೮

ಸಾಂದೀಪನಿಯುಸುವಿದ್ಯೆ † ಮು
ಕುಂದನ ಸಂಗತಿಯೊಳತಿವಿಕಾಸಮನೊಳ್ಕೊಂ ।
ಡಂದೆಸೆದುದು ಪೂಗೊಳದರ
ವಿಂದಿನಿ ದಿನಕರನ ಸಂಗದಿಂ ವಿಕಸಿಪವೋಲ್ ॥ ೯

ಗುರುವಿನ ವಿದ್ಯೆ ನಿತಾಂತಂ
ಪುರುಷೋತ್ತಮನಂತರಂಗದೊಳ್ ಕೋಟಿವಿಧಂ ।
ಸ್ಫುರಯಿಸಿದುದಭ್ರಶಶಿಕಳ್
ತರಂಗಿತಾರ್ಣವದೊಳಸೆವವೋಲ್ ಬಹುವಿಧದಿಂ ॥ ೧೦

ಜಳಜನಿ ದಿನಕರನಿಂದು
ತ್ಪಳಿನಿ ಸುಧಾಕರನಿನಾಮ್ರವಲ್ಲರಿ ಮಧುವಿಂ ।
ಬೆಳಪಂತೆ ಕೃಷ್ಣನಿಂದಂ
ಬೆಳಗಿದುವೆನಿತೊಳವು ರಾಜವಿದ್ಯೆಗಳನಿತುಂ ॥ ೧೧

ಕೌಮುದಿಯಿಂ ವಿಧು ವಿಧುವಿಂ
ಕೌಮುದಿಯೆಸೆವಂತೆ ಸಕಲವಿದ್ಯೆಗಳಿಂದಂ ।
ತಾಮರಸೇಕ್ಷಣನೆಸೆದಂ
ತಾಮರಸೇಕ್ಷಣನಿನೆಸದುವಾವಿದ್ಯೆಗಳುಂ ॥ ೧೨

ಅಂತಱುವತ್ತುನಾಲ್ಕು ದಿನದೊಳ್ ವಿದಿತಾಖಿಲವಿದ್ಯರಾದ ಕಂ
ಸಾಂತಕರೌಹಿಣೇಯರತಿಮಾನುಷಕರ್ಮಮನಂತರಂಗದೊಳ್ ।
ಚಿಂತಿಸಿ ಚಂದ್ರಸೂರ್ಯರೆ ಮನುಷ್ಯಕುಮಾರಕರಾಗಿ ಬಂದರೇ
ನುಂ ತೊದಳಲ್ತೆನುತ್ತವರನಾಗುರು ವಿಸ್ಮಿತನಾಗಿ ನೋಡಿದಂ ॥ ೧೩

* ಖ. ಗ —ಸಾಂದೀಪನೊಳಂ. † ಖ. ಗ.— ಸಾಂದೀಪನೆಸೆವ ವಿದ್ಯೆ.

ಧರೆಗಾಚಾರಮನಱಿಪಲ್
ಗುರುವಿಂ ಕೃತವಿದ್ಯನಾದ ಕೃಷ್ಣಂ ಗುರುವಂ ।
ಗುರುದಕ್ಷಿಣೆಯುಂ ಬೇಡೆನೆ
ಗುರುವುಂ ಬೇಡಲ್ಕೆ ಬಗೆದನೊಂದಘಟಿತಮಂ ॥ ೧೪

ವ॥ ಎಲೆ ! ಕೇಳಮಾನುಷಪ್ರಭಾವ ಮಂ ಪ್ರಭಾಸಲವಣಾರ್ಣವ ದೊಳ್,

ವಿಗತಾಸುತ್ವಮನೆಯ್ದಿದಂ ಸುರರುಮಂ ಸೌಭಾಗ್ಯದಿಂ ಭಾಗ್ಯದಿಂ
ಮಿಗುವಸ್ಮತ್ಸುತನಿಂದೆ ತಂದು ಕುಡು ಭೂಯೋವತ್ಸನಂ ವತ್ಸನಂ ।
ನೆಗಱ್ದಾ ಸೌಮ್ಯನನೆಂದಜಾಂಡಘಟಮಾಲಾಚಕ್ರಿಯೊಳ್ ಚಕ್ರಿಯೊಳ್
ಮಗನಂ ಬೇಡಿದನೊಲ್ದನಿಲ್ಲ ಗುರು ವಿದ್ಯಾವಿತ್ತಮಂ ವಿತ್ತಮಂ ॥ ೧೫

ವ॥ ಎಂಬುದುಂ ಗುರುಪುತ್ರಾಹರಣಪ್ರತಿಜ್ಞಾರೂಢನಾಗಿ ಮಕರಾಕರಮನೆಯ್ದಿ,

ಡಿಂಡೀರಾವಳಿ ಶಂಖವಲ್ಲರಿಯಿನೂರ್ಮಿಸ್ತೋಮಮುದ್ಯತ್ಪಯ
ಶ್ಯಂಡಾಲೌಘದಿನುಗ್ರನಕ್ರಕುಲವನಾವರ್ತಂಗಳಿಂ ವಿದ್ರುಮಂ ।
ಚಂಡೌರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪಾಮಹಾಂಭೋಧಿಯುಂ
ಕಂಡುತ್ಕ್ಷೇಪದಿನೊಂದು ಬೆಂಚೆಯನೆ ಕಂಡಂತಾದನಬ್ಜೋದರಂ ॥ ೧೬

ತುಳುಂಕುವೊಡೆಯುದ್ದೆ ರ್ಕುಡಿತೆಗಂ ತೆಗೆದೀಂಟುವೊಡಾಗದೊಂದು ಮು
ಕ್ಕುಳಿಗೆನೆ ಸಾಲ್ದುದಿಲ್ಲ ಪುಗಲುಂ ಕರದಿಂದೆ ಕಲಂಕಿ ನೋಡಲುಂ ।
ಜಳನಿಧಿಯೆಂಬ ಕೋಪದೆ ನಿರೀಕ್ಷಿಸಿ ಲೋಚನರಾಗದಿಂದಮು
ಗ್ಗಳಿಸಿದನಬ್ಧಿತೀರವನವಿದ್ರುಮರಾಗಮನಬ್ಜಲೋಚನಂ ॥ ೧೭

ವ॥ ಅಂತಾಕ್ಷೇಪದಿಂ ನಿರೀಕ್ಷಿಸಿ,

ದೊರೆಗೆಟ್ಟಂದೊಳಕೊಂಡೆಯಿನ್ನು ಗುಬುಗುಬ'ನೀಂವಾಹಿನೀನಾಥ ಮ
ದ್ಗುರುಸಾಂದೀಪನಿ * ಪುತ್ರನಂ ತಡೆಯುದೆಂದಾಟೋಪದಿಂ ಪೊಕ್ಕು ಸಾ।

* ಖ ಗ —ಸಾಂದೀಪನ.

ಗರವಂ ಕೂಡೆ ತೆರಳ್ದಂ ತೊಳಸಿದಂ ತುಳ್ಕಾಡಿದಂ ತೂಱಿದಂ
ತೆರೆಯೇೞಲ್ ಕದಡಲ್ ಕೆಸರ್ವೆರಸಗಲಂತಾದೇವಕೀನಂದನಂ ॥ ೧೮

ವ॥ ಆಗಳಾಸರಿನ್ನಾಥಂ ಸಾರ್ಘ್ಯಹಸ್ತನಾಗಿ ಜಗನ್ನಾಥನಂ ಶರಣ್ಬೊಕ್ಕು ಸಾಂದೀಪನಿತನಯನ* ನೆನ್ನೊಳಿರ್ಪ ಪಂಚಜನನೆಂಬ ನಕ್ತಂಚರಂ ನುಂಗಿದನೆಂದು ಬಿನ್ನವಿಸೆ ಕೃಷ್ಣಂ ಸಿಂಹನಾದಂಗೆಯ್ದು ಪೊಱಮಡೆಂದು ಗಜಱಿ ಗರ್ಜಿಸೆ,

ಏಕಾರ್ಣವಮಾಗೆ ಜಗಂ
ವೈಕುಂಠನ ಕಿವಿಯ ಕೊಗ್ಗಿಯಿಂದಂದೊಗೆತಂ ।
ದಾಕೈಟಭನಿವನೆನೆ ನೀ
ರಾಕರದೊಳ್ ನೆಗೞ್ದನತಿಬಳಂ ಪಂಚಜನಂ ॥ ೧೯

ಏನುದಧಿಗುಂಟೆಪೆಱತೌ
ರ್ವಾನಳನೀಕ್ರೂರದಾನವೇಂದ್ರನ ಕೋಪೋ ।
ಗ್ರಾನಳನ ಜಳಧಿಗಾಯ್ತೌ
ರ್ವಾನಳನೆನಿಸಿದುದು ಪಂಚಜನನುತ್ಕೋಪಂ ॥ ೨೦

ಇಳೆಯೊಳ್ ಮುನ್ನಮೆ ಪುಟ್ಟಿದಾದನುಜರಿಂತೀಧೈರ್ಯಮೀಶೌರ್ಯಮೀ
ಬಳಮೀಸಾಹಸಮೀಭುಜಾಸ್ಫುರಣಮೀಸಂರಂಭಮೀಕ್ಷೋಭಮೀ ।
ಚಳಮೀವಿಕ್ರಮಮೀಮಹಾರಭಸಮೀರೌದ್ರತ್ವಮೀವೀರಮಾ
ರಳವಲ್ಲೆಂಬಿನಮಂತು ಪಂಚಜನನುಗ್ರಾಟೋಪಮಂ ತಾಳ್ದಿದಂ ॥ ೨೧

ಕ್ಷಿತಿ ಕಂಪಂಗೊಳೆ ಕೃಷ್ಣ ಪಂಚಜನಯುದ್ಧಂನಾಡೆಯುಂಬೇಗಮು
ದ್ಭ್ರಿತಮಾದತ್ತಿತರೇತರಕ್ಷುಭಿತನೇತ್ರಾಳೋಕಮನ್ಯೋನ್ಯಹ ।
ಸ್ತತಳಾಘಾತಪರಸ್ಪರಪ್ರಮಥನಂ ಕಣ್ಗೆ ಬೆರ್ಚಿಸಲ್ ಪುಂಗವಾ
ಯಿತಸಿಂಹಾಯಿತಕುಂಜರಾಯಿತನಿಯುದ್ಧಂ ತಾನಿದೆಂಬನ್ನೆಗಂ ॥ ೨೨

* ಖ,ಗ.—ಸಾಂದೀಪನತನಯನ.

ತ್ರಿಜಗದ್ವೀರಾಗ್ರಣಿಯಂ
ಭುಜಯುದ್ಧದಿನಿಕ್ಕಿ ಪಂಚಜನನಂ ತತ್ಪಂ ।
ಚಜನಾಸ್ಥಿಜನಿತಮಂ ಪಾಂ
ಚಜನ್ಯಶಂಖಮನುಪೇಂದ್ರನೀಟ್ಕೊಂಡೊಲವಿಂ ॥ ೧೩

ಎಸೆವನ್ನಂ ಕಾರ್ಮುಗಿಲ್ ಚಂದ್ರನನುಗುಳ್ವವೊಲಾತ್ಮಾಸ್ಯದೊಳ್ ಪಾಂಚಜನ್ಯಂ
ಬಿಸಜಾಕ್ಷಂ ಶಂಖಮಂ ಪೂರಿಸೆ ಕುಲಗಿರಿಕುಂಜಂಗಳೊಳ್ ಘೂರ್ಣಿಸುತ್ತೆ।
ಣ್ದೆಸೆಯೊಳ್ ತಳ್ಪುಯ್ದುದಾಕಾಶದೊಳೊದವಿತು ದತ್ತಾಸುರೋನ್ಮಾದಮುದ್ಯ
ಕ್ತಸುರವ್ರಾತಪ್ರಮೋದಂ ಕೃತಜಗಘವಿಚ್ಛೇದಮಾಶಂಖನಾದಂ ॥ ೧೪

ವ॥ ಅಂತು ಶಂಖಮಂ ಪೂರಿಸಿ ಯಮನ ಸಂಯಮನೀಪುರಕ್ಕೆ ಪರಿಯಿಟ್ಟು,

ಕುಡು ಸಾಂದೀಪನಿ ಪುತ್ತ್ರನಂ ಯಮ ಕುಡಲ್ಕೇಂ ತೀರದೇಯುದ್ಧಮಂ
ಕುಡು ಮೇಣೀಗಳದರ್ಕಮಳ್ಕಿ ಭಯದಿಂ ಪಾತಾಳಮಂ ಪೊಕ್ಕೊಡಂ ।
ಕಡಲಂ ಪೊಕ್ಕೊಡಮಂತರಿಕ್ಷತಳಮಂ ಸೇಂ ಪೊಕ್ಕೊಡಂ ನಿನ್ನ ಪೊ
ಕ್ಕೆಡೆಯಂ ಪೊಕ್ಕಿನಬಿಂಬಮಂ ಪುಗಿಪೆನಿಂದಾಂ ನಿನ್ನನಾರ್ಕಾವೊಡಂ ॥

ವ॥ ಎಂದು ಕೈಟಭಾಂತಕನಾಸ್ಫೋಟಿಸೆ ಕಲ್ಪಾಂತಸಮಯಸಂರಂಭಮನಪ್ಪುಕೆಯ್ದುಮೇಕಾಂಗದಿಂ ಯುದ್ಧಕೇಳಿಗೆ ಬಂದ ಕಾಳಿಂದೀಸೋದರನಂ ದಾಮೋದರಂ ನೋಡಿ,

ಬರಿಸಮರೇಂದ್ರನಂ ಬರಿಸು ಪಾವಕನಂ ಬರಿಸಾತ್ಮಸೈನ್ಯಮಂ
ಬರಿಸು ನಿಶಾಟನಂ ಬರಿಸು ವಾರ್ಧಿಪನಂ ಬರಿಸಗ್ನಿಮಿತ್ರನಂ ।

ಬರಿಸು ಕುಬೇರನಂ ಬರಿಸು ರುದ್ರನನಿಂತವರೆಲ್ಲರುಂ ನೆರಂ
ಬರೆ ನಿನಗಾಂತು ನಿಲ್ ನಿನಗೆ ತೋಱುವೆನೆನ್ನ ಭುಜಪ್ರತಾಪಮಂ ‖ ೨೬

ವ‖ ಎನೆ ವನಜಮಿತ್ರಪುತ್ತ್ರಂ ದರಹಸಿತವದನಾರವಿಂದನಾಗಿ,

ನರ ನೀಂ ಲೆಕ್ಕಮೆ ಶಕ್ರಾ
ದ್ಯರುಮಂ ಪರಿದಟ್ಟಿ ಮುಟ್ಟುವಾಕಾಲನೆನಾಂ ।
ನೆರವೆನಗೇವುದೊ ಕಾಲಂ
ನೆರವಂ ಪಾರ್ದೆಡೆಗಳೊಳವೆ ನೀಂ ಕೇಳ್ದಱಿಯಾ ‖ ೨೭

ತ್ರಿಣಯನಶೌರ್ಯಂ ತಾಂ ಪೋ
ಷಣೆವಡೆವುದೆ ಲೋಕಲಯದೊಳೆನ್ನಂ ಪೋಲ್ತಿ ।
ರ್ದನಿತಱೊಳೆನೆ ಸಾಕ್ಷಾತ್ಕಾ
ಲನೆನಾಂ ಮತ್ತೆನಗೆ ಮರ್ತ್ಯ ನೀನಿದಿರಾಂಪೈ ‖ ೨೮

ವ‖ ಎಂದಾಟೋಪದಿಂ ಮುಟ್ಟೆವರ್ಪುದುಂ,

ಅಳವಿಗೆ ಸಾರ್ದನೇ ಬೆರಗುವಾರ್ದನೆ ಮೆಯ್ವೊಱಯಿಂದೆ ಪೋರ್ದನೇ
ತಿಳಿವೊಡದಿಲ್ಲ ಕಂಡಳತೆಗೆಯ್ದದನಯ್ದಿದ ವೇಗದಿಂದಮು ।
ಪ್ಪಳಿಸಿದನೆತ್ತಿಕೊಂಡು ಧರೆಗಿಕ್ಕಿದನಾಸ್ಯದಿನುಣ್ಮೆ ನತ್ತರು
ಚ್ಚಳಿಪಿನಮಾರ್ದು ಡೊಕ್ಕರಿಸಿದಂ ನೆಗೞ್ದಂತಕನಂ ಮುರಾಂತಕಂ ‖ ೨೯

ವ‖ ಅಂತಿಕ್ಕಿ ಡೊಕ್ಕರಂಗೊಂಡುರಸ್ಸ್ಥಳೋಪರಿವಿಷ್ಟರನಾಗಿರ್ದ
ಕೃಷ್ಣನಂ ದಕ್ಷಿಣದಿಕ್ಪಾಲಕಂ ನಿರೀಕ್ಷಿಸಿ,

‖ ಹರಿಣಿ ‖

ಅಱಿದೆನಱಿದೆಂ ನಿನ್ನಂ ಚಾಣೂರಮುಷ್ಟಿಕಮಲ್ಲರಂ
ಮುಱಿದುಪರಿಗಂ ಧೀಂಕಿಟ್ಟಾಕಂಸನಂ ನೆಲಕಿಕ್ಕಿ ಮೇ ।
ಲೆಱಗಿ ತುಳಿದುಂ ಮತ್ತಂ ಭೂಭಾರಾಪಹಾರನಿಮಿತ್ತದಿಂ
ದೞಿಸಿ ಖಳರಂ ಕೊಂದಿಕ್ಕಲ್ಕಿರ್ದ ಕೃಷ್ಣನೆ ನೀಂ ದಿಟಂ ‖ ೩೦

ಕ. ಖ ಗ.—ಮುರಿದ ಪರಿಗಂ.

ಕರುಣಿಪುದೆನಗಿತ್ತಪೆನಾಂ
ಗುರುಪುತ್ತ್ರನನೆಂದು ಯಾತನಾಸಂಸ್ಥಿತನಂ ।
ತ್ವರಿತಂ ಕುಡೆ ಪೂರ್ವಕ್ರಮ
ಶರೀರಿಯುಂ ಸುತನನುಯ್ದು ಹರಿ ಗುರುಗಿತ್ತಂ ॥ ೩೧

ವ॥ ಅಂತವಂತೀಪುರವಾಸಿಯುಪ್ಪ ಗುರುವಿಂಗಭಿಮತಾರ್ಥಮ ನಿತ್ತು,

ಸ್ಫುರಯಿಸುವಸ್ತ್ರಶಾಸ್ತ್ರಕಳೆಯಿಂದುದಿತೋದಿತತೇಜನುತ್ತರೋ
ತ್ತರಬಳನುನ್ನತೋನ್ನತಪರಾಕ್ರಮನಾಗಿ ನಿಜಾಗ್ರಜಾನ್ವಿತಂ ।
ಮುರರಿಪು ಬಂದು ಪೊಕ್ಕು ಮಥುರಾಪುರಮಂ ಪುರಕಾಮಿನೀಪರಂ
ಪರೆಯ ಮನಂಗಳಂ ಪುಗುತೆ ಪೊಕ್ಕನುದಾರನರೇಂದ್ರಗೇಹಮಂ ॥ ೩೨

ಮಸೃಣೋಕ್ತಿಯಿನವನತಿಯಿಂ
ಪ್ರಸನ್ನವೀಕ್ಷಣದಿನಿರ್ವರ್ಗಿದುಚಿತಮೆನಲ್ ಮ ।
ನ್ನಿಸುತುಂ ಯದುಕುಲಮಂ ಮ
ನ್ನಿಸುತಿರ್ದಂ ಮನುಜಭಾವಮಂ * ದನುಜಹರಂ ॥ ೩೩

ವ॥ ಅನ್ನೆಗಮಿತ್ತಲ್,

ವ್ಯಸ್ತಾಲಂಕೃತಿಕರ್ಣಿಯರ್ ಪ್ರವಿಗಳದ್ಬಾಷ್ಪಾಂಬುಲೋಲಾಕ್ಷಿಯರ್
ಸ್ರಸ್ತಾನೀಳಕಚೌಘೆಯರ್ ಪ್ರಚುರಹಾಹಾನಿಸ್ವನಾಕ್ರಾಂತೆಯರ್ ।
ಹಸ್ತೋಗ್ರೋದ್ಘಟಿತೋದಿತೋದರಿ † ಯರತ್ಯಂತಾರ್ತಿಯರ್ ಕಂಡರಂ
ದಸ್ತಿಪ್ರಾಪ್ತಿಯರೆಂಬ ಕಂಸಸತಿಯರ್ ವಿಖ್ಯಾತನಂ ತಾತನಂ ॥ ೩೪

ವ॥ ಆಗಳಾಪ್ರಿಯತನೂಜೆಯರ ನವ್ಯವೈಧವ್ಯಮಂ ಕಂಡು ತದ್ವೃತ್ತಾಂತಮಂ ತಿಳಿದು ಮಗಧೇಶ್ವರಂ ಜರಾಸಂಧನತಿಕ್ರೋಧಮಂ ಕೈಕೊಂಡು,

ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ ವಾರಾಸಿಯಂ ತಾಯ್ಕೞ
ಲ್ದೆ ಱಿವಂತೀಂಟುವೆನೋ ಕಳಲ್ಚುವೆನೊ ಚಂದ್ರಾದಿತ್ಯರಂ ಶಕ್ರನಂ ।

* ಕ. ಗ.—ಮನುಜಭಾವದಿಂ. † ಕ. ಖ.—ಹಸ್ತಾಗ್ರಸ್ಫುಟಿತೋದಿತೋದರಿ. ಗ.—ಹಸ್ತೋಗ್ರಸ್ಫುಟಿತೋದಿತೋದರಿ.

ಸೆಱೆಗೆಯ್ದಾಳ್ವೆನೊ ಕೀಳ್ವೆನೋ ದಿಗಿಭದಂತವ್ರಾತಮಂ ಮೇರುವಂ
ಪೆಱತೇನೆಂದಿಯೆ ಬೆಂಡುಮಾಱಿಸುವೆನೋ ಬ್ರಹ್ಮಾಂಡಮಂ ಪೋೞ್ವೆನೋ॥

ಹರಿಯೊಳ್ ಬೇಡವಿರೋಧಮೆಂಬವರ ಮಾತಂ ಮೀಱುವೆಂ ಮೀಱುವೆಂ
ಧುರದೊಳ್ ರಾವಣನಂಧಕಾಸುರನ ಕೂರ್ಪಂ ತೋಱುವೆಂ ತೋಱುವೆಂ।
ಪರಸೈನ್ಯಾಮಿಷಮಂ ಪಿಶಾಚನಿವಹಕ್ಕಂ ಬೀಱುವೆಂ ಬೀಱುವೆಂ
ಸುರಗರ್ಗಂ ಬೀರಮನೆನ್ನ ಚಾಪರವದಿಂದಂ ಸಾಱುವೆಂ ಸಾಱುವೆಂ ॥೩೬

ಧುರದೊಳ್ ಬಂದಿದಿರೊಡ್ಡಿ ಕಂಸಹರನೊಡ್ಡಂ ತುತ್ತುವೆಂ ತುತ್ತುವೆಂ
ಮುರವಿಧ್ವಂಸಕನಂಜಿ ಮೆಯ್ಸೆಡೆಯೆ ಬೆನ್ನಂ ಪತ್ತುವೆಂ ಪತ್ತುವೆಂ।
ಹರಿ ಮೇಣ್ ಪೊಕ್ಕಿರೆ ಕೋಂಟೆಯುಂ ಮಧುರೆಯುಂ ಪೋ ಮುತ್ತುವೆಂ ಮುತ್ತುವೆಂ
ಪರಭೂಚಕ್ರಮನೆನ್ನ ತೇಜದುರಿಯಿಂದಂ ಸುತ್ತುವೆಂ ಸುತ್ತುವೆಂ ॥ ೩೭

ನರನಾಥರ್ ಬೆಸಕೆಯ್ವ ಪೆಂಡಿರೆಳಸಿರ್ಪೀರೂಢಿಯುಂ ಗಾಡಿಯುಂ
ಧರೆಯೆಲ್ಲಂ ತಳಿವನ್ನಮುಂ ಮನದೆ ಕೊಳ್ವೀಚಾಗಮುಂ ಭೋಗಮುಂ।
ಸುರರಡ್ಡಾಡುವ ಮೇರುವಕ್ಕುಳಿಸುವೆನ್ನೀಶೌರ್ಯಮುಂ ಧೈರ್ಯಮುಂ
ಹರಿಯೊಳ್ ಕಾದಿ ಕೃತಾರ್ಥಮಕ್ಕುಮಿದು ಲೋಕಸ್ತುತ್ಯಮುಂ ಕೃತ್ಯಮುಂ ॥ ೩೮

ವ॥ ಎಂದು ನಿಶ್ಚೈಸಿ ಮಗಧರಾಜಂ ಪ್ರಸ್ಥಾನಭೇರಿಯಂ ಪೊಯ್ಸೆಂದು ಸೇನಾಗ್ರಣಿಗೆ ಬೆಸಸಿದಾಗಳ್,

ಗಗನಕ್ಕಂಭೋಧಿ ತುಳ್ಕಾಡಿದುದವನಿಗೆ ತಾರಾಳಿ ಸೂಸಿತ್ತು ದಿಕ್ಪಾ
ಲಗಣಕ್ಕಾಶಂಕೆ ಪುಟ್ಟಿತ್ತಿದು ಮಗಧನ ಭೇರೀರವಂ ಕೆಟ್ಟೆನಾತಂ।
ಗಗಿದಾಮಾಮಾಳ್ವಸಂಗೆಯ್ದು ಪೆಪೆನೆ ಮಹಿಪರ್ * ಪೊಣ್ಮಿ ತುಚ್ಛಿಂಬಲಂಗೋ
ತ್ರಗಿರಿಚ್ಛಾತ್ರಾನುವಾದಾಧ್ಯಯನಗುರು ಜರಾಸಂಧಭೇರೀನಿನಾದಂ ॥೩೯॥

ವ॥ ಅಂತು ಗಂಭೀರನಾದಂ ನೆಗೞೆ,

---

* ಗ.—ಮಹಿಮರ್.

ಎಣಿಕೆಗಳಂಬವಿಾಬಳವುದೊಂದು ವಿಚಿತ್ರಮದೊಂದಗುರ್ವದೊಂ
ದಣಕವುದೊಂದತರ್ಕ್ಯವೆನೆ ರೌದ್ರರಸಂ ಮಿಗೆ ಪಣ್ಣಿ ದಾನೆ ಪ ।
ಲ್ಲಣಿಸಿದ ವಾಜಿ ಪೂಡಿದ ರಥಂ ವಿವಿಧಾಯುಧವಾಂತ ಪತ್ತಿ ಸಂ
ದಣಿಸಿರೆ ಬಂದುದಂದು ಚತುರಂಗಬಲಂ ಮಗಧಕ್ಷಿತೀಶನಾ ॥ ೪೦

ವ॥ ಅನಂತರಂ,

ಬಳವತ್ಸೈನ್ಯಪದೋತ್ಥಪಾಂಸುಚಯದಿಂ ಸೇನಾಮಹಾಭಾರದಿಂ
ಬಳಕೋಳಾಹಳದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್ ।
ಪೊಲಗೆಟ್ಟೋಡೆಯುಳುರ್ಕೆಗೆಟ್ಟು ಕಿವಿ ಶಬ್ದಂಗೆಟ್ಟು ನಿಲ್ವನ್ನೆಗಂ
ತಳರ್ದಂ ಸಾಹಸಕೀರ್ತನಾಚತುರನಾನಾವಾಗಧಂ ಮಾಗಧಂ ॥ ೪೧

ಘನಬಾಹಾವಿಕ್ರಮಂ ಮುನ್ನಮೆ ತನಗೆ ನಿಜಂ ಮತ್ತೆ ಚೇದೀಶದುರ್ಯೋ
ಧನವಾಪ್ರಾಂಗಾಧಿರಾಜಪ್ರಭೃತಿನೃಪವರರ್ ಕೂಡಿದರ್ ತಮ್ಮೊಳೀವೀ ।
ರನೊಳಿನ್ನಾರಾಂತರಿನ್ನಾರ್ ಚಲದೆ ಮಲೆವರಿನ್ನಾರ್ ಭರಂಗೆಯ್ವರಿನ್ನಾರ್
ಮೊನೆಯೊಳ್ ಮಾರ್ಕೊಳ್ವರೆಂಬೊಂದೆಸಕಮೆಸೆಯೆ ಬಂದಂ ಜರಾಸಂಧ
ಭೂಪಂ ॥ ೪೨

ಘನವೀಥೀಸಿಂಧು ಪೂರ್ಬಿಂಬರತಳದೊಳಪೂರ್ವಾವನೀಚಕ್ರಮಾಗಿ
ರ್ಪಿನೆಗಂ ವಾರಾಸಿಗಳ್ ಪೂರ್ದಿಳೆಯೊಳಭಿನವದ್ವೀಪರೂಪಂಗಳಾಗಿ ।
ರ್ಪಿನೆಗಂ ಬ್ರಹ್ಮಾಂಡಭಾಂಡಂ ನಿಜಬಹುಳತೆಯಿಂ ಮೃತ್ತಿಕಾಭಾಂಡದಂತಿ
ರ್ಪಿನೆಗಂ ಪರ್ಬಿತ್ತದೆತ್ತಂ ಮಗಧನೃಪಬಲೋದ್ಭೂತಧೂಳೀಪ್ರತಾನಂ॥

ವ॥ ಅಂತು ಭುವನಕ್ಷೋಭಮಾಗೆ ನಡೆತಂದು ಮಧುರಾಪುರಮನೆ
ಯ್ದಿವರ್ಪ ಸಮಯದೊಳ್,

ಇದು ಸಪ್ತಾಂಬುಧಿಘೋಷಮೊಂದೆಡೆಗೆವಂದಂತಾಯ್ತೆನಿಪ್ಪನ್ನೆಸೈ
ನ್ಯದ ಘೋಷಂ ಕಿವಿಗೆಯ್ದೆ ಮಾಗಧನ ಸೇನಾಘೋಷಮೆಂದಚ್ಯುತಂ ।
ಕದನೋತ್ಸಾಹದೆ ಸೂಚಿಸೂಚಿಡರೆ ಮುಯ್ವಂ ನೋಡುತುಂ ಬಾಹುಕಾಂ
ಡದ ಕಂಡೂತಿಗಳಂ ತೆರಳ್ಚಲೆಡೆಯಾಯ್ತೆಂದಂದು ಮೆಯ್ವರ್ಚಿದಂ ॥೪೪

ವ॥ ಅಂತು ಕಂಸಾಂತಕಂ ಸಮರಸಂರಂಭದಿನಿರೆ ಯಾದವರ್ ತಮ್ಮೊಳಾಳೋಚನಂಗೆಯ್ದು ಮಾಗಧನತಿಬಲಾಧಿಕಂ ನಮಗೆ ಕೋಂಟೆಯೊಳಿರ್ದು ಕಾದುವುದು ಕಜ್ಜಮೆಂದು ನಿಶ್ಚೈಸಿ ಪುರದ ಗೋಪುರಾಟ್ಟಾಳಕಂಗಳೊಳಲ್ಲಲ್ಲಿಗೆ ಪೆಸರ ನಾಯಕರಂ ಸಮಕಟ್ಟಿ * ನಿಲ್ವುದುಂ ಜರಾಸಂಧಂ ಮುಟ್ಟೆವೆಂದು ಕಾಳಿಂದೀಸಿಂಧುತೀರದೊಳ್ ಸಕಲರಾಜಲೋಕಪರಿವೃತನಾಗಿ ಕುಳ್ಳಿರ್ದು,

ಅವನೀಕಂಪನಮಬ್ಧಿಶೋಷಣ † ಮರಣ್ಯೋನ್ಮೂಲನಂ ಭೂಮಿಭೃ
ನ್ನಿವಹಕ್ಷೇಪಣಮಿಂದ್ರಿನಸ್ಖಲನಮಭ್ರಾಲೋಡನಂ ತಾರಕಾ ।
ಚ್ಯವನಂ ಪದ್ಮಭವಾಂಡನಿರ್ದಳನಮಾಯ್ತುಸ್ಮದ್ಬಲಾಟೋಪದಿಂ
ನವಗಿನ್ನುಂ ಪೊಣಲಳ್ಕದೆಂದು ಮಗಧೇಶಂ ಕ್ರೋಧಮಂ ತಾಳ್ದಿದಂ॥ ೪೫

ವ॥ ಆಗಳತಿಕ್ರೋಧಮಂ ತಳೆದು ಮಗಧರಾಜಂ ಚೇದಿರಾಜನಂ ನಿರೀಕ್ಷಿಸೆ,

ನರನಾಥಾಗ್ರಣಿ ನೀಂ ಮೊಗಕ್ಕೆ ಮುಳಿಸಂ ತರ್ಪನ್ನಮೇನುಂಟೆ ಸಂ
ಗರವೆಮ್ಮಮ್ಮನೆ ದೇವ ನೀಂ ಬೆಸಸಿದಕ್ಕಾವಾವೆ ಹೋ ಸಾಲ್ವೆವೆಂ ।
ದು ರಣಕ್ರೋಧವಿಜೃಂಭಿತಾಂಬಕರಿಳೇಶರ್ ಗರ್ಜಿಸಲ್ ಭೂರಿವೀ
ರರಸಾಂಭೋಧಿಯೆ ಗರ್ಜಿಪಂತೆವೊಲಗುರ್ವಾಯ್ತಾಸಭಾಮಂಡಲಂ ॥೪೬

ವ॥ ಅಂತನೇಕಪ್ರಕಾರವೀರಾಳಾಪಗಂಭೀರಭೂರಿಘೋಷಣಮುಂ, ನಿಟಿಲತಟತರಂಗಿತತ್ರಿಸಥಾಕಾರತರತ್ತರಂಗಸಂಘಾತಮುಂ, ಉತ್ಕಟವಿಕಟಬದ್ಧಭ್ರುಕುಟಿಜನಿತತಮಸ್ತಮಾಳವೇಳಾವನಮುಂ, ಉಜ್ಜ್ವಂಭಿತಾತಾಮ್ರಲೋಚನಾರುಣಕಿರಣತರಳಪ್ರವಾಳಪಟಲಮುಂ, ಅಂತರಂಗ ಜ್ವಳಿತಕೋಪಾನಳೌರ್ವಾನಳಮುಂ, ಅನ್ಯೋನ್ಯಸಂಘಟ್ಟನೋಚ್ಚಳಿತಕಟಕಕೇಯೂರಹಾರಾದ್ಯಾಭರಣಮುಕ್ತಾಫಲಪ್ರಕರಶೀಕರಮುಮೆನಿಸಿ ಘೂರ್ಣಿಸುವ ಅಸಂಖ್ಯಾತನೃಪವೀರರಸಾರ್ಣವಕ್ಕೆ ಭಟಕೋಟಿನಿಗ್ರಹಾನುಗ್ರಹಮೆಂಬ ಚಂಡಪವನನಿನತಿಕ್ಷೋಭಮಂ ಪಡೆದು ‡

* ಕ, ಗ —ನಾಯಕರೆಂದು ಸಮಕಟ್ಟಿ. † ಕ.—ಘೋಷಣ.
‡ ಕ, ಖ, ಗ.—ಪವನನತಿಕ್ಷೋಭಮಂತಳೆದು.

ವಿಚಿತ್ರಯಂತ್ರಬದ್ಧಾಂಗಾರಕುದ್ದಾಲಪರಶುಕ್ಷಾರಪ್ರಕಂಟಕನಿಶ್ರೇಣಿಮುಖ್ಯಾನೇಕದುರ್ಗಸಾಧನಪರಿಕರಂಗಳ್ವೆರಸು ನಡೆದು, ಭೋರ್ಗರೆವ ಲಗ್ಗೆವಜೆಗಳ್ ಮೊಳಗೆ ಸುತ್ತಿ ಮುತ್ತಿ, ಪರಿಖಾಚಕ್ರಮನತಿಕ್ರಮಿಸಿ ಅಟ್ಟಾಳಪ್ರಾಕಾರತಳದೊಳಿರ್ದ ಯದುಸೈನ್ಯಸುಭಟರಿಸುವಿಱಿವ ಬೀಸುವ ಯಂತ್ರಮುಕ್ತಕರಮುಕ್ತಮುಕ್ತಾಮುಕ್ತಂಗಳೆಂಬ ವಿವಿಧೋಪಾಯಶಸ್ತ್ರಂಗಳೊಳಂ ಬಿಡುವ ಘಟಸರ್ಪಕೋಟಿಗಳೊಳಂ ಚಿಮ್ಮುವ ಜಂತ್ರದುರಿಯೆಣ್ಣೆಯೊಳಂ ಚೆಲ್ಲುವ ತಪ್ತವಾಳುಕಜಾಲದೊಳಂ ಸೂಸುವ ಕಾದ ಸಜ್ಜರಸದೊಳಂ ಸಿಂಪಿಸುವ ಕರಗಿದ ಮಯಣದೊಳಂ ಕೆದಱುವ ಕೆಂಡಗಳೊಳಂ ಮಡಿದು ಕೆಡೆವ ವೀರರ ಪೆಣದ ಬಣಂಬೆಯಂ ಮೆಟ್ಟಿ, ನರವಿದ್ಧಕೋಟಾವಳಯುಮೆನಿಸಿ, ಕೋಟೆಯ ತಳದಿನಗ್ರಂಬರಮಡರ್ದು, ಯದುವೀರರೊಳ್ ಕೇಶಾಕೇಶಿಯುದ್ಧದಿಂ ತಳ್ತಿಱಿದೊಳಪುಗುವ ಮಗಧಸೈನ್ಯಮಂ ಕಂಡು ಪುಂಡರೀಕಾಕ್ಷಂ ರೌಹಿಣೇಯಂಬೆರಸು ವಿಜಯವರೂಥಾರೂಢನಾಗಿ ಅಗುಂಚಿಯನುರ್ಚಿ ಪೊಱಮಡುವಾಗಳ್,

ವಾರಿಧಿ ಮೇರೆಯೊಳ್ * ಪ್ರಳಯದೊಳ್ ತಳರ್ವಂತೆವೊಲಾಗಳಾಪುರ
ದ್ವಾರಚತುಷ್ಕದೊಳ್ ಯದುಬಲಂ ತಳರ್ದತ್ತು ಮದೇಭಸೋರಫಂ ।
ಟಾರವಮಶ್ವಹೇಷಿತರವಂ ಭಟಸಿಂಹರವಂ ವರೂಥಚೀ
ತ್ಕಾರರವಂ ಪದಿರ್ಮಡಿಸೆ ಕಾಹಳದುಂದುಭಿಶಂಖನಾದದಿಂ ॥ ೪೭

ಯದುಮಗಧಸೈನ್ಯಯುಗದೊಳ್
ಕದನಂ ಮಸೆದೊಡೆ ಮರುಳ್ಗಳಡದಿಂಬುತ್ಸಾ ।
ಹದೆ ಪಲ್ಲಂ ಮಸೆದುವು ನಾ
ರದನುಗುರಂ ಮಸೆದು ನೋಡುತಿರ್ದಂ ನಭದೊಳ್ ॥ ೪೮

ವ॥ ಅನ್ನೆಗಂ,

ನಿಜನಿಜವಿಭವಂ ಜನಿಯಿಸೆ
ನಿಜನಿಜವಾಹನಮನೇಱಿ ಪುರಹರಪಂಕೇ।

---

* ಕ. ಗ.—ಮೇರೆಯಂ,

ಜಜಪುರುಹೂತಾದ್ಯಮರರ್
ನಿಜನಿಜಕಾಂತಾಸಮೇತರಿರ್ದರ್ ನಭದೊಳ್ ‖ ೪೯

ವ ‖ ಅನ್ನೆಗಂ,

ಗುಣರುತಿ ಹೇಷಿತಂ ಪ್ರಚುರಚೀತ್ಕೃತಿ ಹೂಂಕೃತಿ ಗರ್ಜಬೃಂಹಿತೋ
ಲ್ಬಣರವಮುಣ್ಮೆ ಬಿಲ್ಪಡೆಗೆ ಬಿಲ್ಪಡೆ ವಾಜಿಗೆ ವಾಜಿ ತೇರ್ಗೆ ತೇ ।
ರಣಿಗಣಿ ಕುಂತವಾಹಿನಿಗೆ ಕುಂತದ ವಾಹಿನಿ ವಾರಣಕ್ಕೆ ವಾ
ರಣವಿದಿರೊಡ್ಡನೊಡ್ಡಿದುದು ಯಾದವಮಾಗಧಸೈನ್ಯದಾಜಿಯೊಳ್ ‖ ೫೦

ಶಬ್ದಾದ್ವೈತಂ ಜಗಮೆನ
ಲಬ್ದರವೋದಾರಮಾದ ವಾದಿತ್ರಮಹಾ ।
ಶಬ್ದದೆ ಭೂಮಿವ್ಯೋಮಕ
ಕುಬ್ದಳನಮೊಡರ್ಚೆ ತಾಗಿದತ್ತುಭಯಬಲಂ ‖ ೫೧

ಭರದಿನೆರಲ್ಬಲಂಗಳ ಪದಾತಿ ಪದಾತಿಯೊಳಶ್ವಮಶ್ವದೊಳ್
ಕರಿ ಕರಿಯೊಳ್ ರಥಂ ರಥದೊಳಾರ್ದು ಪಳಂಚೆ ನಭಂ ದಿಶಾತಟಂ ।
ಧರೆ ಕಡುಗೆಂಪದಾಯ್ತೊಗೆವ ಶೋಣಿತದಿಂದೆ ಜಗಂ ಮಹಾರ್ಣವನಾಂ
ತರಮೆ ಪೊದಱ್ದಿ ರೌದ್ರರಸಸೇಚನದಿಂ ತಳಿರ್ವೇಱಿತೆಂಬಿನಂ ‖ ೫೨

ಬಿಗಿದ ಡೊಣೆ ತೆಗೆದ ಪದವಿಲ್
ಪುಗುವೆಡೆ ನಿಟ್ಟೆಸುವ ದಿಟ್ಟೆ ತೊಟ್ಟೆಸರಲ್ ದಿ ।
ಟ್ಟಿಗೆ ವರೆ ಸಾರ್ದಿದಿರಂ ಕಡು
ಪುಗಿಡಿಸಿ ಕೆದಱಿದರೆ ಕಣೆಗಳಂ ಸುಭಟರ್ಕಳ್ ‖ ೫೩

ಕಣೆಯಿಂ ಸಮೆದುದೊ ಧಾರಿಣಿ
ಕಣೆಯಿಂ ಕೇರ್ಗಟ್ಟಿತೋ ದಿಶಾವಳಿ ಕಣೆಯಿಂ ।
ಪೆಣೆದುದೊ ಗಗನಾಂಗಣಮೆನೆ
ಕಣೆಗಳನಿರ್ವಲದ ಬಿಲ್ಲ ವೀರರ್ ಕಱಿದರ್ ‖ ೫೪

ಮುಳಿಸಿಂದಿಸಲೊಡವಾಱುವ
ಶಿಳೀಮುಖಂಗಳ್ ಶಿಳೀಮುಖಂ ಕಂಜಾತಂ ।
ಗಳ್ ಕಂಜಾತವೆನಲ್ ಪೂ
ಗೊಳನಂ ಪೋಲ್ತುದು ನಭಂ ಧನುರ್ಧರಧುರದೊಳ್ * ॥ ೫೫

ಕುಂತದೆ ಕುತ್ತಿಡಾಡಿ ನ
ಭೋಂತಕ್ಕೊಗೆದಿರ್ದ ಸುಭಟತತಿ ಖಚರಬಲ ।
ಭ್ರಾಂತಿಯನಿನಿಸಂ ಜನಿಯಿಸೆ
ಕುಂತಧರರ್ ಕಾದಿ ಮೆಱೆದರದ್ಭುತರಸಮಂ ॥ ೫೬

ಕರುಳೊಕ್ಕೊಕ್ಕುರ್ವಿಯೊಳ್ † ಕುಪ್ಪಳಿಸೆ ನೆಣದಳಿರ್ಸೂಸೆ ಬಂಬಲ್ಮಿದುಳ್ ಪಾ
ಯ್ತರೆ ನೆತ್ತರ್ಸುರ್ರೆನುತ್ತುಂನಿಮಿರೆ ಕೆದಱೆ ಖಂಡಂ ಕೊರಲ್ಸೆಕ್ಕೆವೋಗು।
ತ್ತಿರೆ ತೋಳ್ ಬೀೞೂಗೆ ಕಾಲ್ ಖಂಡಿಸೆ ನಡು ಕಡಿವೋಗಲ್ಕೆ ಜೀರೇಟೆ ಮೂರ್ಧಂ
ಕರವಾಳೊಳ್ಬೊಳ್ಪಳಂಚುತ್ತುರಿಯನುಗುೞೆ ಕಾದಿತ್ತು ಖಡ್ಗಿಪ್ರತಾನಂ॥ ೫೭

ಬಳೆದುದು ಕೆಂದೂಳಿ ಖುರಾ
ವಳಿಯಿನೆನಲ್ ನೆಗೆದ ತಮ್ರ ರಜಮಂಬರದೊಳ್ ।
ಬೆಳಗುವ ಕಿಸುಸಂಜೆಮುಗಿಲ್
ಪೊಳವಾಳ್ಮಿಂಚೆನಿಸೆ ‡ ಕಾದಿದರ್ ಘೋಟಾಯ್ಲರ ॥ ೫೮

ತವೆದ ಪೊಡರ್ಪಿನಿಂದಿಸುವ ಕೂರ್ಗಣೆ ಕುತ್ತುವ ಕೊಂತವೆತ್ತಿ ಮೋ
ದುವ ಗದೆ ಪೊಯ್ವಬಾಳ್ ಬಿಡುವ ಕರ್ಕಡೆ ತೂಗುವ ವಜ್ರಮುಷ್ಟಿಬೀ।

---

* ಗ.—ನಭದೊಳ್.

† ಕ. ಗ. —ಕರುಳೊಕ್ಕುಕ್ಕುರ್ವಿಯೊಳ್. ‡ ಕ. ಗ. —ಪೊಳೆವೆಳ ಮಿಂಚೆನಿಸೆ. ಖ. —ಪೊಳೆವೆಳೆ ಮಿಂಚೆನಿಸೆ.

ಸುವ ಸಬಳಂ ವಿಚಿತ್ರಮೆನೆ ತಳ್ತುಱಿದರ್ ಮಸೆಯಲ್ಲಿ* ಕಲ್ತ ಪಾ
ರ್ಥಿವಕುಲವಿದ್ಯೆಯಂ ಮೊನೆಯೊಳಂ ನೞಿ ತೋರ್ಪುರುಸಾಸವಾಸಿಗಳ್† ॥

ಕರದೊಳ್ ಕೂರಂಕುಸಂಗಳ್ ಪೊಳೆಯೆ ಪರಿಯಿಪಾಧೋರಣರ್ ತಿರ್ತಿ
ಕಾತೋ
ಮರನಾರಾಚಂಗಳಿಂದಾರ್ದಿಸುವತಿ ಬಳಜೋದರ್ ವಿಯಚ್ಚಕ್ರದೊಳ್ ಸಂ
ಚರಿಪುಚ್ಚೈಃಕೇತನಂಗಳ್ ತೊಳಪ ಗುಳಮಿಂಬಾಗೆಕಣ್ಗೊಂಡುದೆತ್ತಂ
ಪರಿಯುತ್ತುಂ ಭೌಮವೈಹಾಯಸವಧವಿಧಮಂ ತೋಱುತುಂ ದಂತಿ
ಸೈನ್ಯಂ ॥ ೬೦

ಮಸ್ತಕದಿಂ ಮುತ್ತುಗಳಂ
ಮಸ್ತಿಷ್ಕಮುಮುದಿರೆ ಕೋಟ್ಕಿಳಿಂ ಕಿಡಿಯುಂ ಶ ।
ಳ್ಕಸ್ತೋಮಮುಮುಚ್ಚಳಿಸೆ ಮ
ದಸ್ತಂಬೇರಮಘಟಾಳಿ ಪೋರ್ದುದು ರಣದೊಳ್ ॥ ೬೧

ಪೊಂಗಾಲಿ ಮಿಱುಗೆ ಪೞಿಯಿಗೆ
ಬಾಂಗೆ ಪೆಡಂಮಗುಳ್ ಸೂತರೆಸಗುತ್ತಿರೆ ವಾ ।
ಹಂಗಳತಿಜವದೆ ಪರಿಯೆ ರ
ಥಂಗಳ್ ಪರಿದುವು ಬಳಾಬ್ಧಿನಕ್ರಾಕೃತಿಯೊಳ್ ॥ ೬೨

ಜೇರ್ಗರೆಯೆ ತೆಗೆದು ಬಿಲ್ಲಂ
ಭೋರ್ಗರೆದು ವರೂಥಿಯೂಥ‡ ಮುಸಲನ್ಯೋನ್ಯಂ ।
ಕೂರ್ಗಣೆ ನಟ್ಟುವು ನೇರ್ದುವು
ನೇಗೋರ್ಲ್ವರಿದುವು¶ ಪಳಂಚಿದುವು ದಿಕ್ತಟಮಂ ॥ ೬೩

ವ॥ ಅಂತತಿಭಯಂಕರಮಾದ ಸಂಕುಲಯುದ್ಧದೊಳುಗ್ರಸೇನ ವಾಹಿನಿ ಸಮುದ್ರದೊಳ್ ಬೆರಸಿದ ವಾಹಿನಿಯಂತೆ ಮಗಧಸೇನಾಸಮುದ್ರ

---

* ಕ ಗ—ಮೊಸೆಯಲ್ಲಿ. † ಕ, ತೋರ್ವ ಉಸಾಸವಾರಿಗಳ್. ಖ. ತೋರ್ವರಸಾಸವಾಸಿಗಳ್. ‡ ಕ ಖ. ಗ.—ವರೂಥಯೂಥ.

¶ ಕ. ಗ.—ನಟ್ಟುವುನೀಗೋರ್ಲ್ವರಿದುವು.

ದೊಳಪ್ಪಾಡುತ್ತುಮಿರಲದಂ ಕಂಡು ಸಂಕರ್ಷಣನಮರ್ಷಣನಾಗಿ ನಿಜಪೂರ್ವ * ದಿವ್ಯಾಯುಧಂಗಳಂ ಮನದೊಳ್ ನೆನೆದಂತರಿಕ್ಷತಳಮಂ ನಿರೀಕ್ಷಿಸೆ,

ನಹುಷನಗಸ್ತ್ಯನ ಶಾಪದೆ
ಮಹೋಗ್ರಫಣಿಯಾಗಿ ಬಿಬ್ಬುದಂ ನೆನೆಯಿಸೆ ಬಂ ।
ದು ಹಲಂ ದಿವದಿಂ ಬಲಭ
ದ್ರಹಸ್ತದೊಳ್ ನಿಂದುದತಿಭಯಂಕರರೂಪಿಂ ॥ ೬೪

ಪಗಲುಳ್ಕಂ ಬಿಬ್ದಪುದೀ
ಮಗಧಂಗೆನೆ ರಕ್ತಮಾಲ್ಯಭೂಷಿತಮುಸಲಂ ।
ಗಗನದಿನೆಬ್ಬಂದರಿಸೇ
ನೆಗಳಬ್ಬುಗೆ ನೆಲಸಿದತ್ತನಂತನ ಕರದೊಳ್ ॥ ೬೫

ವ॥ ಆಗಳ್,

ಪರಿಪರಿದು ನೇಗಿಲಿಂದಂ
ಬರೆ ತೆಗೆತೆಗೆದಲ್ಲಿ † ಮುಟ್ಟೆ ಮುಸಲದೆ ಪೊಯ್ದು ।
ಯುದ್ಧರಿಬಲಮನಿಕ್ಕಿದಂ ಹಲಿ
ಸುರನಿವಹಂ ನೋಡಿ ಭಾಪುಭಾಪೆಂಬಿನೆಗಂ ॥ ೬೬

ಎತ್ತ ದವಾನಳನೆಬ್ಬಿದು
ದತ್ತಲೆ ಪೇರಡವಿ ತವುವ ತೆಱದಿಂ ಹಲನಂ ।
ದೆತ್ತೆತ್ತಮೊಗದೆ ಕಾದಿದ
ನತ್ತತ್ತಲೆ ಮಗಧಸೇನೆ ಮಡಿದುದನಂತಂ ॥ ೬೭

ತುರಗದೆ ತುರಗಮನಿಟ್ಟಂ
ನರರಿಂದಂ ನರರನಿಟ್ಟು ಪೊಡೆದುಂ ಕರಿಯಿಂ ।
ಕರಿಯುಂ ರಥದಿಂ ರಥಮಂ
ಭರದಿಂದಪ್ಪಳಿಸಿ ಮೋದಿದಂ ಬಲಭದ್ರಂ ॥ ೬೮

* ಕ. ಗ.—ನಿಜವಿದ್ಯಾ † ಕ. ಖ.—ತೆಗೆತೆಗೆದಟ್ಟೆ.

ಉಗಿಬಗಿಮಾಡಿ ದಂತಿಘಟೆಯಂ ಹಲಪಾಣಿ ಹಲಪ್ರಹಾರದಿಂ
ನೆಗೆವ ತದೀಯಮಸ್ತಕದ ಮೌಕ್ತಿಕರಾಜಿಯನಿತ್ತನಾಜಿಯೊಳ್ ।
ಗಗನತಳಕ್ಕೆ ತಾರಗೆಗಳಂ ಜಳರಾಶಿಗೆ ರತ್ನರಾಶಿಯಂ
ದಿಗಿಭಗಣಕ್ಕೆ ಶೀಕರಮನುರ್ವಿಗೆ ಪುಷ್ಪಚಯೋಪಹಾರಮಂ ॥ ೬೯

ಭಟರಶ್ವಮನಶ್ವಂ ಗಜ
ಘಟೆಯಂ ಗಜಘಟೆ ತೆರಳ್ದು ರಥಮಂ ರಥಮು ।
ತ್ಕಟಭಯದಿಂದೋಡಿ ದಿಶಾ
ತಟಮಂ ಮೆಱೆಗೊಳೆ ಹಲಾಯುಧಂ ಮರ್ದಿಸಿದಂ * ॥ ೭೦

ವ ॥ ಅಂತು ಬಲಹಲಪ್ರಹಾರದಿಂ ಭಯಚಕಿತಮಾಗಿ † ಬೆಂಗೊಟ್ಟು ಪೋಸ ನಿಜಸೈನ್ಯಮಂ ಕೂಡಿಕೊಂಡು ಸರ್ವಾಂಗಸನ್ನಾಹರುಂ ಪರಿಚೋದಿತಸ್ಯಂದನರುಂ ಪ್ರಣಿಧಿತ್ರಯಪ್ರೇರಿತಭದ್ರಗಜರುಂ ಅತಿಜವಕ್ಷಿಪ್ತಜಾತ್ಯಶ್ವರುಮಾರೋಪಿತಚಾಪರುಮುತ್ತಾನಿತಾಂಕುಶರುಮುದಧೃತ ‡ ಗದಾದಂಡರು ಮುತ್ಖಾತಖಡ್ಗರುಮುಜ್ಜೃಂಭಿತಾತಾಮ್ರನೇತ್ರರುಂ ವಿಚಿತ್ರವಾದಿತ್ರರುಮಾಗಿ ಮಾಗಧಪ್ರಮುಖನಿಖಿಲನರಪಾಲಕರ್ ನೂಂಕೆ ಸಂಕರ್ಷಣಂಗೆ ಸಮರಮತಿಭರಮಾದುದಂ ಕಂಡು ಭುಜಕಂಡುಮಂ ತೆರಳ್ಚುವುದರ್ಕಿದುವೆ ಪದನೆಂದು ಕದನೋದ್ಯುಕ್ತನಾಗಿ ನಕ್ತಂಚರಾಂತಕಂ ತನ್ನ ದಿವ್ಯಾಯುಧಂಗಳಂ ಸ್ಮರಿಸೆ,

ಪ್ರತಿಬಿಂಬಾಭಾಸಮಂ ವ್ಯೋಮದೊಳ್ ನಿಲಿಸಿ ಸಾಕ್ಷಾದ್ದಿನಾಧೀಶಬಿಂಬಂ
ಕ್ಷಿತಿಗೆಯ್ತಂದತ್ತೆನಲ್ ಭಾಸುರಕಿರಣಸಟಾಟೋಪದಿಂ ಭಾನುಬಿಂಬ ।
ದ್ಯುತಿಯಂ ಬೀಱುತ್ತುಮಾಕಾಶದಿನಿೞಿದು ಮುರಾರಾತಿಹಸ್ತಾಗ್ರದೊಳ್ ಸಂ
ಗತಿವೆತ್ತಿರ್ದತ್ತು ಚಕ್ರಂ ಬೆದಱುವುಗೆ ದಿಶಾಚಕ್ರಮಂ ವೈರಿಚಕ್ರಂ ॥ ೭೧

ಚೋದ್ಯಂ ನಿರಭ್ರನಭದಿಂ
ವಿದ್ಯುಲ್ಲತೆ ಪೊೞಲನಿೞಿದುದೆನೆ ಖಡ್ಗಂ ಚಕಂ ।

* ಕ. ಗ.—ತಳ್ತಿಱಿದಂ. † ಕ.ಖ.ಗ.—ಚಕಿತರಾಗಿ. ‡ ಕ. ಖ.—ಉದ್ವೃತ್ತ.

ಚದ್ಯುತಿಯಿಂ ಭುವನಾಂತರ
ಮುದ್ದ್ಯೋತಿಸೆ ಬಂದು ನಿಂದುದಚ್ಯುತಕರದೊಳ್ ॥ ೨೨

ರಿಪುಧೂಮಕೇತು ನೆಗಳ್ದು
ರ್ದಪುದೆನೆ ತಾಂ ಮೊದಲೆ ಬಂದು ನಿಂದುದು ಗದೆ * ತಾ ।
ರ್ಕ್ಷ್ಯಪತಾಕನ ಕರದೊಳ್ ವೈ
ರಿಪತಾಕಿನಿ ಕಂಡು ಮನ † ದೊಳುಳ್ಳಳ್ಕುವಿನಂ ॥ ೨೩

ನೆಗೆದುದಕಾಲದೊಳ್ ರಿಪುಹರಂ ಸುರಕಾರ್ಮುಕಮಿಂತಿದಭ್ರದೊಳ್
ನೆಗೆದಿರದಿತ್ತಲೀಬರುತುಮಿರ್ದುದೆ ಬಂದುದಿದೊಂದು ಕೌತುಕಂ ।
ನಗಧರಹಸ್ತದೊಳ್ ನೆಲಸಿದತ್ತಿನೆ ಚಿತ್ರಮಣಿಪ್ರಭಾವಿಳಂ
ಗಗನದಿನಂದು ಬಂದು ನೆಲಸಿರ್ದುದು ಶಾರ್ಙ್ಗಮುಪೇಂದ್ರಹಸ್ತದೊಳ್॥೨೪

ಬಾಣಾಸನಮಿರೆ ಕರದೊಳ್
ಚಾಣೂರಾಂತಕನ ಬೆನ್ನೊಳಂ ವಕ್ಷದೊಳಂ ।
ಕಾಣಲ್ಬಂದತ್ತಕ್ಷಯ
ಬಾಣಧಿಯುಂ ವಜ್ರಕಚಕವುಂ ತತ್‌ಕ್ಷಣದೊಳ್ ॥ ೨೫

ಪ್ರೋಣದೀರ್ಘಮೊರ್ಪಡೆ ಪಕ್ಷಿಚಂಚುಗೊಳಗಾಯ್ತಿನ್ನ ನ್ಯಸೈನ್ಯಂ ಮರು
ಳ್ಗಣಿಸಾಯ್ತಿರಿಪುಸೇನೆಯುಂತಕನ ವಕ್ತ್ರಕ್ಕೆಯಿದ್ತೀದ್ವಿಡ್ಬಲಂ ।
ರಣರಂಗಕ್ಕುಪಹಾರಮಾಯ್ತೆನೆ ಮಹಾಸಂಗ್ರಾಮಕೇಳೀವಿಜೃಂ
ಭಣದಿಂದೇಱಿಸಿದಂ ಮುರಾರಿಯುಮುದಂಡೋಚ್ಚಂಡಕೋದಂಡಮಂ॥೨೬

ಮುಳಿಸಿಂದೇಱಿಸಿ ನೀವಿ ಜೇವೊಡೆಯೆ ದೈತ್ಯಾರಾತಿ ಬಿಲ್ಲಂ ರಸಾ
ತಳಮಂ ತಾಗಿ ಸಿಡಿಲ್ದು ಮುಟ್ಟೆ ದಿವಮಂ ಬಂದುರ್ವಿಯುಂ ಭೋಂಕನ।
ಪ್ಪಳಿಸಿತ್ತೆಂಬಿನಮುಣ್ಮಿತೆಚ್ಚುಱೆ ಭುಜಂಗರ್ ಬೆರ್ಚೆ ದೇವರ್ ಭಯಂ
ಗೊಳೆ ಮರ್ತ್ಯರ್ ಪ್ರತಿಜಾತನಾಗಗೃಹನಾಕಜ್ಯಾರವಂ ಜ್ಯಾರವಂ ॥ ೨೭

---

* ಕ, ಗ.—ಕೌಮೋದಕಿ. † ಕ, ಗ.—ನಭ.

ವ || ಅಂತು ಜಗತ್ತ್ರಯಂ ಜಾತಶಂಕಾಕುಳಿತಮಾಗೆ ನೀವಿ ಜೇವೊಡೆದು ಬದ್ಧಕರಾಂಗುಲಿತಳ * ತ್ರಾಣನುಮಾಗಿ ಸವ್ಯಾಪಸವ್ಯಮತಿವೇಗದಿಂ ತೀವಿ ತೆಗೆದಿಸಲೊಡಂ,

ನುಗಧನೃಪಾದಿ † ಭೂಭುಜರ್ಗೆ ಸಲ್ಕೊಳಿವಂತಿರೆ ಭೂರಿಟಂಕೃತಂ ‡
ನೆಗಪೆ ಪೊದಳ್ದು ಬೆಳ್ಕಸೆವಿಸಿಲ್ ರಣದೇವತೆಯಟ್ಟಹಾಸದಂ |
ತೊಗೆಯೆ ವಿರೋಧಿಸೇನೆಗಿದು ಸೂಸುವ ಜೀವನಮೊಲ್ಯನಿಷ್ಕರಾ
ಜಿಗಳನೆ ವಿಸ್ಫುಲಿಂಗಮಲಗಿಂ ಕೆದಱುತ್ತಿರೆ ಪಾಯ್ದುವಂಬುಗಳ್ || ೭೮

ಅಂಬಂಬಂ ಬಿಡೆ ಕಾಱುತಿರ್ಪ ತೆಱನಾಯ್ತಂಬಂಬನೀಂಬಂತುಟಾ
ಯ್ತಂಬಂಬಂ ಕರೆವಂದಮಾಯ್ತು ಬಗೆವಂದಂತಲ್ತು ಮೇಣೀತನೆ |
ಚ್ಚಂಬೊಂದೊಂದೆ ಸಹಸ್ರರೂಪಮನೆ ¶ ಕೈಗೊಂಡಿರ್ದುವೋರಂದದಿಂ
ದೆಂಬನ್ನಂ ಲಘುಚಿತ್ರವೇಧಿ + ಕರೆದಂ ಕೃಷ್ಣಂ ಶರಾಸಾರಮಂ ||೭೯

ಪುದಿಯೆ ಘನಾಧ್ವಮಂ ಸರಲ ಪಂಜರದಿಂ ಹರಿ ಗಾಳಿಯೆತ್ತವೋ
ದುದು ದೆಸೆಯೆತ್ತವೋದುದು ದಿವಾಕರಮಂಡಲಮೆತ್ತಡಂಗಿ ಪೋ |
ದುದು ನಭಮೆತ್ತವೋದುದೆನಿಸಲ್ಕಡೆಗೆಟ್ಟುದು § ಗಾಳಿ ರೂಪುಗೆ
ಟ್ಟುದು ದೆಸೆ ತೋರ್ಕೆಗೆಟ್ಟುದಿನಮಂಡಲಮಾಕೃತಿಗೆಟ್ಟುದಾಗಸಂ || ೮೦

ತಕ್ಕೈಸಿ ಸುರಿವ ತೆಱದಿಂ
ದುರ್ಕಂಬುಗಳಱಗಿ ರೋಮರೋಮಕ್ಕೆ ನೆಳಲ್ |
ನೆಕ್ಕು ಚಳಿಲ್ ಚಕ್ಕುದೊಗಲ್
ದೊಕ್ಕನೆ ನಾಂಟಿದುವರಾತಿಭಟರವಯವಮಂ || ೮೧

ನಗಧರನ ನಿಶಿತನಾರಾ
ಚಗಣಂ ನಡೆ ಪಾಯ್ವು ರಿಪುಭಟಾರುಣಜಲಧಾ |

---

* ಕ, ಖ ಗ —ಬದ್ಧ ತಳಾಂಗುಳಿತಳ † ಕ ಗ.—ನೃಪಾಲ.

‡ ಕ ಖ. ಗ —ಭೂರಿಭಂಕೃತಂ ¶ ಖ. ಗ.—ಅಂಬಂಬೊಂದೆಸಹಸ್ರರೂಪಮೆನೆ. + ಕ ಖ ಗ.—ಲಘುಚಿತ್ರವೇದಿ.

§ ಮೊ—ಅ. ಎನಿಸಲ್ಕೆಡೆಗೆಟ್ಟುದು.

ರೆಗಳಂ ಜವನಿಟ್ಟಬವೆ
ಟ್ಟಗೆಯೆನೆ ಪೂತನೆಯರಾಂತು ಕುಡಿದರ್ ಧುರದೊಳ್ ॥ ೮೨

ತೆಗೆನೆಱೆದಬ್ಜನಾಭನಿಸೆ ತೋಮರಮುರ್ಚೆ ಸುರುಳ್ದುರುಳ್ದ * ದಂ
ತಿಗಳ ಶರೀರದೊಳ್ ಸುಱಿದು ಕೆತ್ತುವ ಪುಣ್ಗಳ ಬಾಯ್ಗಱಿಂದೆ ಮೇ ।
ಲ್ವೊಗೆವ † ರುಣಾಂಬುಧಾರೆಗಳಗುರ್ವಿಸುತಿರ್ದುವು ದಿಟ್ಟಿಗೊಟ್ಟದಾ
ವಿಗೆಯ ಘಟಂಗಳಾನನದಿನುಣ್ಮುವ ಕೇಸುರಿಯೊಂದು ಮೊಕ್ಕೆಯಿಂ॥ ೮೩

ಪೆಣದ ಬಣಂಬೆ ಕೋಱ್ಕಿದುಳ ಕೋಱ್ಕಸರೆಲ್ವಿನ ಪರ್ವತಂ ಕರು
ಳ್ಪಣಿಲ ಪೊದಱ್ಕೆ ರುಂಡದಡಕಿಲ್ ನರದುರ್ಬು ಕಪಾಲದೋಳಿ ಬಾ ।
ಳ್ನಣದೆಡೆ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲರ್ಬಿಸಲ್ಕೆ ಮಾ
ರ್ಗಣಗಣಘಾತದಿಂ ತವಿಸಿದಂ ದಿತಿಜಾರಿ ವಿರೋಧಿಸೈನ್ಯಮಂ ॥ ೮೪

ವ ॥ ಅಂತು ಗೋಪಮಾರ್ತಂಡನ ಕಾಂಡಂಗಳ ಹಿಮಕರಕಿರಣದಂತೆ ಅರಾತಿಬಲಮೆಂಬ ತಿಮಿರಪಟಲಮಂ ತೆರಳ ತೂಳ್ದಯುಂ, ದನುಜಬಳಜಲಧಿಬಾಡಬಾನಲನ ಬಾಣಂಗಳೌರ್ವಶಿಖಿಯಂತೆ ತುರಂಗಮದಱತರಂಗಿತಾರ್ಣವಮನಪ್ಕಡಿಸೆಯುಂ, ಇಂದ್ರಾವರಜನ ಶರಂಗಳ್ ವಜ್ರಾಶನಿಗಳಂತೆ ‡ ದಂತಿಘಟೆಗಳೆಂಬ ಪರ್ವತಂಗಳಂ ನುಚ್ಚುನೂಱಾಗೆ ಮಾಡೆಯುಂ, ದೈತ್ಯಕುಲಸಂಹಾರಭೈರವನ ಕೂರಂಬುಗಳ್ ಭೂತಗಣಂಗಳಂತೆ ಪೊಂದೇರ್ಗಳೆಂಬ ಮಾಂಸಕಬಳಂಗಳಂ ನುಂಗಿ ನೊಣೆಯೆಯುಂ ಇಂತು ಕೋದಂಡಚತುರ್ಭುಜನ ಕೋದಂಡಪರಿಘಾತದಿಂ ದಂಡಧರಮುಖಕುಹರಕ್ಕೋಸರಿಸುವ ನಿಜಚಾತುರ್ಬಲಮಂ ಕಂಡು ಜರಾಸಂಧಂ ಕಡುಮುಳಿದು ನಿಜೋಭಯಪಾರ್ಶ್ವದೊಳಿರ್ದ ರಾಜಭಟಕೋಟಿಯೊಳತಿವೀರರೆನಿಸಿದ ಮಾದ್ರರಾಜಾಂಗರಾಜಚೇದಿರಾಜಕುರುರಾಜರ್ಕಳಂ ನೋಡಿ ನಿಮ್ಮ ಭುಜಬಲಾವಷ್ಟಂಭಮಂ ಪೇಱ್ವೊಡೀ

* ಕ. ಗ. —ಸುರುಳ್ದವೈರಿ.  † ಮೊ—ಅ. ಮೇಗೊಗೆವ.
‡ ಕ. ಖ.—ವಜ್ರಾಶನಿಗಳೆಂಬಂತೆ.

ಧರೆಯಂ ಪೊಸೆದು ಮುಕ್ಕಲುಂ, ಕುಳನಗಮನಗೆಯೆತ್ತಿ ಕಳೆಯಲುಂ ಕಡಲನೆಡೆಗಿಡಿಸಲುಂ, ನಾಕಲೋಕಮಂ ನೆಲಕ್ಕಿೞಿಪಲುಂ ಸಿಡಿಲಂ ತುಡುಕಿ ಪಿಡಿಯಲುಂ, ಹಾಲಾಹಲಮಂ ಗುಳಿಗೆಯಿಕ್ಕಲುಂ, ಉರಿಲಿಂಗಮನಾಲಿಂಗಿಸಲುಂ, ಯುಗಾಂತಹುತವಹನಂ ನಂದೆವೊಯ್ಯಲುಂ, ಧೂರ್ಜಟಿಯ ನಿಟಿಲಲೋಚನಮಂ ಕರಪುಟದಿಂ ಮುಚ್ಚಲುಂ ನೆಱೆವ ನಿಮ್ಮಿದಿರೊಳೊರ್ವ ಗೋಪಕುಟಿಲಂ ಗಂಡಗರ್ವಮಂ ಮೆಱೆದಪನೆಂದು ಮೂದಲಿಸಿ ನುಡಿಯೆ,

ಅತಿರಥನೆಂಬ ಗೋಸಣೆಯ ಮದ್ರಮಹೀತಳನಾಥನೆಂಬ ವಿ
ಶ್ರುತಿಯ ಮಹಾಸ್ತ್ರಶಸ್ತ್ರವಿದನೆಂಬ ನೆಗೞ್ತೆಯ ಶಲ್ಯನೆಯ್ದಿದಂ ।
ದಿತಿಜವಿರೋಧಿಯುಂ ನಿಜಶರಾಸನಟಂಕೃತನಾದವೆಯ್ದೆ ದಿ
ಗ್ವಿತತಿಯನಭ್ರಮಂಡಲಮನೆಯ್ದೆ ರಥೋದ್ಧತ ಮಹಾಮಹೀರಜಂ ॥ ೮೫

ಎಕ್ಕತುಳಕ್ಕೆವಂದು ಶರಮಂ ಶರದಿಂ ಕಡಿದಿಕ್ಕುತುಂ ಮಹಾ
ಸ್ತ್ರಕ್ಕೆ ಮಹಾಸ್ತ್ರಮಂ ತುಡುತುಮೊಟ್ಟಜೆಗೊಟ್ಟಜೆದೋಱುತುಂ ವರೂ ।
ಥಕ್ಕೆ ವರೂಥಮಂ ಸೆಣಸಿ ಚೋದಿಸುತುಂ ನೆರೆದಾಂತ ಶಲ್ಯನಂ
ಬೆಕ್ಕಸಮುತ್ತು ನೋಡೆ ಬಗೆದಂದು ನಿಮೇಷದೆ ಗೆಲ್ವುಪಾಯಮಂ ॥ ೮೬

ಜೃಂಭಾಸ್ತ್ರದಿಂ ಮುಕುಂದಂ
ಸ್ತಂಭಿಸಿ ರಥಮಂ ರಥಾಶ್ವಮಂ ಸಾರಥಿಯಂ ।
ಸ್ತಂಭಿಸಿದಂ ಶಲ್ಯನ ದೋ
ಸ್ಸ್ತಂಭಮನಿನಿಸಿಱಿಯಲಱಿಯದಿರ್ಪಿನಮಾಗಳ್ ॥ ೮೭

ಜಲರುಹಮಿತ್ರಪುತ್ರನೆನಿಪುನ್ನತಿಯುಂ ಸಹಜಾತದಿವ್ಯಕುಂ
ಡಲಕವಚಪ್ರಭಾವದಿನಜಯ್ಯನೆನಿಪ್ಪ ನೆಗೞ್ತೆಯುಂ ನೃಪ ।
ಪ್ರಲಯಕೃತಾಂತನಿಂ ಪರಶುರಾಮನಿನಸ್ತ್ರವಿದಗ್ಧನಾದ ದೋ
ರ್ವಲಮುಮವಿಂದು ಸಾರ್ಥಕಮಿವಂಗೆನೆ ಶಾರ್ಙ್ಗಿಗೆ ಕರ್ಣನೆಯ್ದಿದಂ ॥ ೮೮

ಚಿತ್ರಗತಿಯಿಂದೆ ರಥಮಾತಿ
ಮಾತ್ರಜವಂ ಬೆರಸು ಪರಿಯೆ ಶರವರ್ಷದೆ ಲೋ ।
ಕತ್ರಯಮುಮಂ ಪೂಣ್ಚಿವೊಲಿಸ
ಪುತ್ತ್ರಂ ದುರ್ಲಕ್ಷ್ಯವೇಗನಿಸುವವಸರದೊಳ್ ॥ ೮೯

ರಥಹಯಮುಮಂ ನಾಲ್ಕಂಬಿಂ
ರಥಮಂ ಮೂಱಸ್ತ್ರದಿಂದೆರಡ್ಕಣೆಯಿಂ ಸಾ ।
ರಥಿಯುಂ ಕೆಡೆಯಲ್ಕೆಚ್ಚಂ
ರಥಾಂಗಧರನೊಂದೆ ಶರದಿನಿನಜನ ಧನುವಂ ॥ ೯೦

ಪ್ರಿಯಮಿತ್ರಂ ರವಿಸೂನು ಸೋಲ್ತೊಡಳಲುಂ ಕಟ್ಟೇವಮುಂ ಮುಟ್ಟೆತ
ನ್ನಯ ತೇರಿಂದೆ ನೆಲಕ್ಕೆಪಾಯ್ದು ಕುರುಲಕ್ಷ್ಮೀವಲ್ಲಭಂ ವಿಕ್ರಮೋ ।
ದಯಸದ್ಮಂ ಮಧುಪಿಂಗಳಾಕ್ಷನಭಯಂ ಸಾರ್ತಂದನುದ್ಯದ್ಭುಜ
ದ್ವಯದಂಡಾಗ್ರಮತೋಱಣಾಯಿತಗದಂದುರ್ಯೋಧನಂಕೃಷ್ಣನಂ ॥ ೯೧

ಗದೆಗೊಂಡೆಯ್ತರ್ಪದುರ್ಯೋಧನನ ಮಸಕಮಂ ಕಂಡು ಕಂಸಾರಿ ತಾನುಂ
ಗದೆಗೊಂಡಾಯೆಂದು ತಾಗಲ್ ಪದಹತಿಗೆ ನೆಲಂ ಬಳ್ಕೆ ವಾರಾಶಿಗಳ್ ತು ।
ಳ್ಕೆ ದಿಶಾದಂತಿಪ್ರಜಂಘೀಳಿಡೆಪೊಣರ್ದ ಕುರುಶ್ರೇಷ್ಠನೊಳ್ಕಾದುವಾಯು
ದ್ಧದಗುರ್ವುಂ ಪೂವಿನೊಳ್ ಪೊಕ್ಕಳಿ * ನೆಗೆದ್ದುವೊಲಾಯ್ತಾಮುರಧ್ವಂಸಿ
ಗಾಗಳ್ ॥ ೯೨

ಗದೆಯಂತೂಗುತ್ತೆಸಾರ್ವೊಟ್ಟಜೆ ತಿರಿಪಿಗದಾದಂಡದಿಂಪೊಯ್ವ ಕೋಪಂ
ಗದೆಯಿಂದಂಪೊಯ್ದುಳಂಬಂಚಿಪನೆವವೆಸೆಯಲ್ † ಚಂಚಲತ್ಕರ್ಣಪೂರಾಂ
ಗದಹಾರಾಪೀಡರೋರೊರ್ಮೆವನಿತಳದೊಳೋರೊರ್ಮೆ ವಿದ್ಯಾಧರಾಕಾ
ರದಿನಂತರ್ಧಾನದೊಳ್ತಾಗಿದರತುಳಬಳರ್ ಕೃಷ್ಣದುರ್ಯೋಧನರ್ಕಳ್ ॥ ೯೩

---

* ಕ. ಗ — ಪೊರ್ಕಳಿ. † ಕ. ಗ. — ಬಂಚಿಪನೆರವೆಸೆಯಲ್,
ಖ. — ಬಂಜಿಪನೆವವೆಸೆಯಲ್.

ದಶಕಂಠವೈರಿಯೊಳ್ ಪೊಣ
ರ್ದ ಶೀರ್ಣತನುವಾಗಿ ಸೆಡೆದು ಧೃತರಾಷ್ಟ್ರಸುತಂ ।
ಪ್ರಶಮಿತಪರಾಕ್ರಮಂ ಗಂ
ಡಶೈಲದೊಳ್ ಪೊಣರ್ದರಣ್ಯಗಜದಂತಾದಂ ॥ ೯೪

ವ ॥ ತದನಂತರಂ,

ಪುಟ್ಟೆ ಸಮಸ್ತಧಾತ್ರಿಗೆ ಭಯಂ ನಿಟಿಲಾಕ್ಷಚತುರ್ಭುಜಾನ್ವಿತಂ
ಪುಟ್ಟಿದಗುರ್ವು ರಾವಣನ ರೌದ್ರತೆವೆತ್ತವತಾರವೀತನೊಂ ।
ದೊಟ್ಟಜೆ * ಲೋಕಪಾಲಕರನಾಟಲೆದಿರ್ಪ ಪೊಡರ್ಪಿನಿಂದೊಡಂ
ಬಟ್ಟಿದು ನೋಡಿಮೀತನೊಳನಲ್ ಶಿಶುಪಾಲನಿದಿರ್ಚಿ ಸಾರ್ಚಿದಂ ॥ ೯೫

ತೀರಂ ಪರಿಯಿಸಿ ಬಿಲ್ಗೊಂ
ಡೀರಣಮಂ ಕೊಂಡು ಕೊನೆಯಲೊಲ್ಲಂ ಕ್ಷಣದಿಂ ।
ವೈರಿಯನಿಕ್ಕುವೆನೆನುತುಂ
ಕೂರಸಿಗೊಂಡೊದಱಿ ಚೈದ್ಯನೆಯ್ದಿದನಾಗಳ್ ॥ ೯೬

ನಂದಕಮಂ ದಿವಿಜಗಣಾ
ನಂದಕಮಂ ಕೊಂಡು ಚೇದಿಪತಿಯೊಳ್ ಪೊಣರ್ದಂ ॥
ಮಂದರಧರನಾಹವದೊಳ್
ಮಂದರಧರರಾದರಹಿತರೆಂದೆಂಬಿನೆಗಂ ॥ ೯೭

ಅಳವಿಗೆ ಸಾರ್ವೆ ಸಾರ್ವೆ ತೆಱಪಂ ನಡೆನೋಡುವ ನೋಡಿ ಪೊಯ್ವ ಪೊ
ಯ್ವುಳನೆಡೆಯೊಳ್ ನಿವಾರಿಪ ನಿವಾರಿಸಿ ಕುತ್ತುವ ಖಡ್ಗವಿದ್ಯೆ ತ ।
ನ್ಮೊಳೆ ನೆಲಸಿತ್ತೆನಲ್ ಕೊನೆದು † ಕಾಳಗದಿಂ ಶಿಶುಪಾಲದೈತ್ಯನೊಳ್
ಬಲಿರಿಪು ಕಾದಿದಂ ಮುಳಿದು ತಾಗುವಿನಂ ಹರಿಗುಂಟೆ ಕಾಳಗಂ ॥ ೯೮

---

* ಕ.—ಈತನೆಂಬೊಟ್ಟಜೆ   † ಖ. ಗ—ಕೊನರ್ದು

ಮದಗಜದ ರದನಮುಮಂ ಸಿಂ
ಗದ ದಾಡೆಯುಮುಗ್ರಫಣಿಯ ಪಲ್ಲುಂ ಮುಱಿವಂ ।
ದದೆ ಮುಱಿಯೆ ಪೊಯ್ದು ನಿಜಖ
ಡ್ಗದೆ ತತ್ಖಡ್ಗಮನುಪೇಂದ್ರನಾಂತಂ ಜಯಮಂ ॥ ೯೯

ಅಱಿವೆಧಮನನಾಗತಮಂ
ಸ್ಮರಿಯಿಸೆ ಕೈಗಾದು ಕಾದಿದಂ ಶಿಶುಪಾಲಾ ।
ದ್ಯರೊಳಂದಚ್ಯುತನಿಂತುಂ
ಹರಿಗಂ ಮಿಱ್ತುಗಮಿದಿರ್ಚಿ ಜೀವಿಪರೊಳರೇ ॥ ೧೦೦

ವ॥ ಆಗಳ್ ಭಗ್ನಖಡ್ಗನಾಗಿ ಮತ್ತಂ ಕಡುಪುಗೆಯ್ವ ಶಿಶುಪಾಲನಂ ಮಗಧನರಪಾಲಂ ಕಂಡು,

ಉಡಿಯೆ ನಿಜಾಸಿ ನಿಯುದ್ಧ
ಕ್ಕೊಡರಿಸಲುಂ ಮತ್ತೆ ಕೈದುಗೊಳಲುಂ ಬೇಡಿಂ ।
ಪಡುನೇಸಱೂದುದಿಂದಿನ
ಕಡುಪಂ ಕೃಷ್ಣಂಗೆ ನಾಳೆ ತೋರ್ಪುದು ಚೈದ್ಯಾ ॥ ೧೦೧

ಆಂ ಪಿರಿಯಂ ಸಮಸ್ತಬಲದಿಂ ನೃಪಕೋಟಿಗೆ ಚೈದ್ಯರಾಜನೆ
ನ್ನಿಂ ಪಿರಿಯಂ ಮನೋಬಲಭುಜಾಬಲಶಸ್ತ್ರಬಲಂಗಳಿಂದಮಾ ।
ಪೆಂಪಿನ ಚೈದ್ಯನಂ ಕ್ಷಣದೆ ಗೆಲ್ದನಧೋಕ್ಷಜನೀಮುಕುಂದನಾ
ಗರ್ಂ ಪಿರಿಯಂ ಬಲೋದಯದಿನಂದು ಮನಂಸೆಡೆದಿಳ್ಕೆ ಮಾಗಧಂ ॥

ಪಗೆ ಪಳಸೆ * ಕಿಡದು ನಾಳೆಯೆ
ಮಗುಳ್ದುಂ ಮೇಲೆತ್ತಿ ಬಂದು ಮಾಱ್ಪಂ ಕಂಸಾ ।
ರಿಗೆ ತಕ್ಕುದನೆಂದೀಗಳ್
ಪೊಗಸುಂ ಪೋಯ್ತ್ತೆಂದು ನೆವದೆ ರಣದಿಂ ತಳರ್ದಂ ॥ ೧೦೩

* ಕ. ಪಳಸಿ.

ವಿಶಸನಭೀತಿಯಿನೋಡುವ
ವಸುಧೇಶರನಾತ್ಮಭೂರಿಭಾಂಕೃತರವದಿಂ ।
ಏಸೆವೆಳಗಿಂ ನಗುತಿರ್ಪಂ
ತೆಸೆದುವು ಬೆನ್ನಟ್ಟುತಿರ್ದ ಕೃಷ್ಣಶರಂಗಳ್ ॥ ೧೧೪

ಸಂಗರಧರಿತ್ರಿ ನಾಡೆ ಮ
ನಂಗೊಳಿಸಿದುದಂದು ಜವನ ಪೆರ್ಬೆಣಾವೆಳ್ ಭೂ ।
ತಂಗಳ ಕೊಟ್ಟಾರಂ ವಿಹ
ಗಂಗಳ ಬೆಳ್ಗೆಯ್ಯೆನಲ್ಕೆ ಬಿಡ್ದಿರಿಬಲದಿಂ ॥ ೧೧೫

ಮಸಕಂಗೊಂಡಟ್ಟೆಗಳ್ ನರ್ತಿಸೆ ಸಮರಮಹೀರಂಗದೊಳ್ ನಾರದಂ ನ
ರ್ತಿಸೆ ರೋದೋರಂಗದೊಳ್ ಸಂಗರಜಯವಧುವಾತ್ಮೀಯಯದೋಯುರ್ಗ್ಮದೊಳ್ ನ ।
ರ್ತಿಸೆ ಗೆಲ್ಲಂಗೊಂಡು ತಮ್ಮೊಳ್ ಪೊಣರ್ದಗಿದು ತೆರಳ್ದೋಡುವಾಭೂಪರಂ ಸಂ
ತಸದಿಂನೋಡುತ್ತುಮಿರ್ದಂ ಪ್ರಹಸಿತವದನಂ ಗೋಪಮಾರ್ತಂಡದೇವಂ॥

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾ ಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತ ಶ್ರೀಪಾದ
ಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗನ್ನಾಥವಿಜಯ ಮಹಾ
ಪ್ರಬಂಧದೊಳ್ ಉಗ್ರಸೇನಾಭಿಷೇಕ ಪಾಕಶಾಸನಸಭಾಕರ್ಷಣ
ಗುರುಪುತ್ರಾಹರಣ ಮಕರಾಕರಾಲೋಡನ ಪಾಂಚಜನ್ಯ
ಲಾಂಛನ ನಂದಕಸುದರ್ಶನಶಾರ್ಙ್ಗಕೌಮೋದಕೀಸಮಾ
ಗಮನ ಜರಾಸಂಧಯುದ್ಧವರ್ಣನಂ
ಸಪ್ತಮಾಶ್ವಾಸಂ

# ಅಷ್ಟಮಾಶ್ವಾಸಂ

ಶ್ರೀವತ್ಸಲಾಂಛನಂ ಬಲ
ದೇವಸಹಾಯಂ ಜಯಾನಕಧ್ವನಿಮುದಿತ ।
ಕ್ಷ್ಮಾವಳಯಜನಂ ವೀರರ
ಸಾವ್ಯತಮುಖಕಮಲಮೆಸೆಯೆ * ಪೊೞಲಂ ಪೊಕ್ಕಂ ॥ ೧

ಅವಿರಳವಾಸ್ಯದಿಂ ಪರಕೆ ಪೊಣ್ಮೆವಿನಂ ವನಿತಾಕದಂಬಮಿ
ಕ್ಕುವ ಧವಳಾಕ್ಷತಂ ಕುಡುವ ಚಂದನಕರ್ದಮಮೀವ ದೂರ್ವೆ ಸೂ ।
ಸುವ ಸಿತಸರ್ಷಪಂ ತಳಿವ ಲಾಜಕಮೆತ್ತುವ ಪುಷ್ಪಮಾಲೆ ನೀ
ಡುವ ನವಮಾತುಳುಂಗಫಲಮೆಂಬಿವನಚ್ಯುತನೊಲ್ದು ತಾಳ್ದಿದಂ ॥ ೨

ವ॥ ಅಂತು ಮಂಗಲಾಚಾರಪರಂಪರೆ ವಿರಾಜಿಸೆ ರಾಜಮಂದಿರಮಂ ಪೊಕ್ಕು ಸುಖದಿನಿರೆ ಕತಿಪಯದಿನಂಗಳ್ಗೆ,

ಮೊನೆಯೊಳ್‌ಬೆಂಗೊಟ್ಟು ಮುಂ ಪೋದಟಲೊಳ್ † ಮಗುೞ್ದು ತ್ರಿಂಶದಕ್ಷೌಹಿಣೀವಾ
ಹಿನಿಯುಂ ಲೋಕಕ್ಕಕಾಂಡಪ್ರಳಯಮೆನೆ ಮಹಾಕಂಪಮುಪ್ಪನ್ನವಾಮು
ನ್ನಿನ ಧಾತ್ರೀನಾಥರಾಮುನ್ನಿನ ಭುಜಬಲವಾಮುನ್ನಿನಾಟೋಪವಾಮು
ನ್ನಿನಗುರ್ವಾಮುನ್ನಿನಾಡಂಬರಮೆಸೆಯೆ ಜರಾಸಂಧನೆತ್ತಿಂದು ನಿಂದಂ ॥

ವ॥ ಅಂತು ಜರಾಸಂಧನಾಪ್ರಕಾರದಿಂ ಪದಿನೆಂಟುಸೂೞೆತ್ತಿ ಬರೆ ಮುರಾಂತಕನನಿತುಸೂೞೊಳಂ ಪೂರ್ವಸಮರಕ್ರಮದೊಳೇಕಾಂಗದಿಂ ಜಯೋತ್ತರಮಾಗೆ ಕಾದಿ ಮಧುರೆಯಂ ಪೊಕ್ಕು ಬಲವದ್ವಿಪಕ್ಷತ್ರಿಂಶದಕ್ಷೌಹಿಣೀಬಲಪುನಃಪುನರಾಗಮನಸಂಘಟ್ಟದಿಂದಳ್ಳವಿಳ್ಳ ‡ ಯಾದಯಾದವ

---

* ಕ, ಗ.—ಕಮಲನೆಸೆಯೆ. † ಖ.—ಪೋದಂಧಳಲೊಳ್. ‡ ಖ.—ದಳವಿಳ್.

ದೇಶದ ಜನಕ್ಲೇಶಮಂ ಸ್ವಕೀಯಕಾರುಣ್ಯಾವೇಚನದಿನಾಱಿಸುತ್ತಿರ್ಪಿನ ಮದೊಂದುಸಮಯದೊಳ್ಪೂರ್ವ ಗುಪ್ತಚರನತಿಸಂಭ್ರಮತ್ವರಿತಗತಿಯಿಂ ಬಂದಾಸ್ಥಾನಮಂ ಪೊಕ್ಕು ಸಭಾಳಸ್ಥಳೀಕುಟ್ಟಿಮಳಿತಕರಾರವಿಂದನಾಗಿ ನಿಂದಿರ್ದು,

ಸುರದೈತ್ಯಾಹವದೊಂದುಸೈನ್ಯವಿನಿತಿಲ್ಲೀತ್ರಿಂಶದಕ್ಷೌಹಿಣೀ
ಭರದಿಂ ಬಳ್ಕುವ ಭೂಮಿಯಂ ತಳವೊಡಿರ್ದರ್ ಕೂರ್ಮರಿರ್ವರ್ಫಣೀ।
ಶ್ವರರೀರೆಂಟುದಿಶಾಗಜಂಗಳರಡೇೞುಂ ಗೋತ್ರಶೈಲಂಗಳಾ
ಗಿರವೇೞ್ಕುಂ ದಿಟವೆಂಬಿನಂ ತಳರ್ದು ಮತ್ತಂ ಮಾಗಧಂ ಬಂದಪಂ ॥ ೪

ವ॥ ಎಂದು ಬಿನ್ನಪಂ ಗೆಯ್ದ ಚರನ ವಚನಮಂ ಕೇಳ್ದುಗ್ರಸೇನ ವಸುದೇವ ವೃಷ್ಣ್ಯಂಧಕ ಪ್ರಭೃತಿಯದುಕುಲವೃದ್ಧರುಮನುದ್ಧವಾಕ್ರೂರ ಸಾತ್ಯಕಿಪ್ರಮುಖಬುದ್ಧಿವೃದ್ಧರುಮಂಸರೋಜಾಕ್ಷಂ ನಿರೀಕ್ಷಿಸಿ,

ಮಾನವನಾಟಕಪ್ರಕಟನಂ ನುಡಿದಂ ಪಗೆ ಮತ್ತೆ ಬಂದಪಂ
ತಾನಿದಿರೆತ್ತಿ ಮುಂ ಪಲವು ಸೂಱೆ ಬರೆ ಕೆಟ್ಟಱದೀಸ್ವದೇಶಮಿ।
ನ್ನಾನರಪಾಲಸೈನ್ಯಘರಿಪೀಡೆಗೆ ಸೈರಿಸಲಾರದಿಂದಿದ
ಕ್ಕೇನನುಪಾಯಮಂ ನೆಗೞ್ವಮೆಂದೊಡೆ ಪೇೞ್ದಪೆನಾನುಪಾಯಮಂ ॥೫

ಪಗೆಯುಮಸೂಯೆಯುಮಮ್ಮೊಳ್
ಮಗಧಂಗಾಮೀಸ್ವದೇಶದಿಂ ಪರದೇಶೋ।
ರ್ವಿಗೆ ಪೋದೊಡೆಮ್ಮ ಬೞಿಯನೆ
ಮಗಧಂ ಗಡೆ ಮೞಿಯ ಪಾವಿನಂತಿರೆ ಬರ್ಕುಂ ॥ ೬

ರಿಪುವೆಮ್ಮಿರ್ದನ್ಯದೇಶಕ್ಕೆಡಱಿ ನಡೆದೊಡೀನಮ್ಮ ದೇಶಕ್ಕಮೀನ
ಮ್ಮ ಪುರಕ್ಕಂ ಕ್ಷೇಮಮಕ್ಕುಂ ಧುರದೊಳವನನಾವತ್ತಲೀಕಾಂಗದಿಂ ಗೆ।
ಲ್ದಪೆವಾವಾತ್ರಿಂಶದಕ್ಷೌಹಿಣಿಯನುರುಪಿ ಬಾಣಾಗ್ನಿಯಿಂ ಮತ್ತೆ ಮೇಲೆ
ತ್ತಿಪೊಡರ್ಪಿಂ ಬಾರದಂತಾಗಿಪೆವಿದೆವಿಗತಾಪಾಯಮಪ್ಪೊಂದುಪಾಯಂ ॥೭

ವ|| ಎಂದು ನಿಶ್ಚಯಿಸಿ ವಸುದೇವನಂದನರ್ ಗೃಹೀತನಿಜನಿಜಾಯುಧರಾಗಿ ಬಂಧುಜನಪುರಜನಪರಿಜನಂಗಳಾಶೀರ್ವಾದನಾದವೊದವೆ ಪೊೞಲಂ ಪೊಱಮಟ್ಟೇಕಾಂಗದಿಂ ದಕ್ಷಿಣದಿಗ್ವಿಭಾಗಾಭಿಮುಖರಾಗಿ,

ಜನಪದಮುಮನವನೀಶ್ವರ
ಜನಪದಮುಮನಖಿಲನದನದೀತೀರ್ಥಸರೋ |
ಜನಿಷಂಡಮುಮಂ ತತ್ಪಾ
ವನನಗನಿವಹಮುಮನೀಕ್ಷಿಸುತ್ತೆ ಬರುತ್ತುಂ || ೮

ವ|| ಅಂತು ನಡೆಯೆ ಕಟ್ಟೆದಿರೊಳ್,

ವಸುಧಾಂಗನೆ ಮೇಲ್ಕೊಂಡಳೊ
ಪೊಸಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂ |
ಲಸಿಚಯಮುಕವೆನೆನೆ ತನ್ನದಿ
ಯೆಸೆದುದದೊಂದುಭಯತಟವನಾಟ್ಯಾಂಬುಗಳಿಂ || ೯

ವ|| ಆಖಟ್ವಾಂಗಿಯೆಂಬ ತರಂಗಿಣಿಯ ತೀರವನಿನಿತಾನುಮೆಯ್ದಿ ವರ್ಪಲ್ಲಿ,

ಜಳಧರಪಟಲದ ಪೊರೆವೊರೆ
ಯೊಳಗಣ್ಮುವುದಿತಾರ್ಕತೇಜವೆನೆ ವನತರುಸಂ |
ಕುಳದೆಡೆಯೆಡೆಯೊಳ್ ತೇಜೋ
ವಳಯಂ ತೋಱುತ್ತಿರ್ದುದೊಂದು ದೂರಾಂತರದೊಳ್ || ೧೦

ವ|| ಅದಂ ನೋಡುತ್ತುಮೆಯ್ದೆ ವಂದರವಿಂದಲೋಚನಂ ನಿಜಾವತಾರರೂಪನಂ ನಿರುಪಮತಪಸ್ತೇಜೋಭಿಯುಕ್ತಜಟಾಕಲಾಪನಂ ಪುಣ್ಯಪ್ರಭಾವಾಭಿರಾಮನಂ ಜಮದಗ್ನಿರಾಮನಂ ಕಂಡು ಬಲಭದ್ರರಾಮನ ಮೊಗಮಂ ನೋಡಿ, ಈ ಮಹಾಪುರುಷಂ ಕುಭೃತ್ಪಕ್ಷವಿಚ್ಛೇದನನಾಗಿಯುಂ ವಜ್ರಧರನಲ್ತು, ಸಪ್ತಾರ್ಚಿಯಾಗಿಯುಂ ಹುತವಹನಲ್ತು,

ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು, ಪೂರ್ವದೇವನಾಗಿಯುಂ ನೈಋತನಲ್ತು, ವನನಿವಾಸಿಯಾಗಿಯುಂ ವರುಣನಲ್ತು, ಪವಮಾನನಾಗಿಯುಂ ಕುರಂಗವಾಹನನಲ್ತು, ಮನುಷ್ಯಧರ್ಮನಾಗಿಯುಂ ಧನಾಧ್ಯಕ್ಷನಲ್ತು, ಕಾಮಧ್ವಂಸಿಯಾಗಿಯುಂ ತ್ರಿಲೋಚನನಲ್ತು, ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ತು, ತೀವ್ರತೇಜನಾಗಿಯುಂ ಮಾರ್ತಂಡನಲ್ತು, ದ್ವಿಜರಾಜನಾಗಿಯುಂ ನಕ್ಷತ್ರಪತಿಯಲ್ತು, ಕ್ರೌಂಚಾರಾತಿಯಾಗಿಯುಂ ಷಣ್ಮುಖನಲ್ತು, ಪರಶುಧರನಾಗಿಯುಂ ದ್ವಿರದಾಸ್ಯನಲ್ತು, ಎಂದು ವಕ್ರೋಕ್ತಿಯಿಂ* ತೋಱುತ್ತುಮತ್ಯಾಸನ್ನನಾದ ಸಮಯದೊಳ್,

ಏಕತ್ವಮನಱಿಪುವವೋ
ಲಾಕೇಶವಪರಶುರಾಮರಾಲಿಂಗಿಸಿ ಭಿ |
ನ್ನಾಕೃತಿಗಳ್ ಕಾರ್ಯಾರ್ಥಂ
ಲೋಕಕ್ಕನೆ ಬೇಱೆವೇಱೆ ಕಾಣ್ಬಪಾರ್ಗಳ್ || ೧೧

ಮಿಸುಪ ರದನಾಂಶುಜಾಳಂ
ಪಸರಿಸಿ ವಾಕ್ಛ್ರೀಯ ಧವಳಚಾಮರವೆಂಬಂ |
ತೆಸೆದಿರ್ಪಿನೆಗಂ ಜಮದ
ಗ್ನಿಸೂನು ವಸುದೇವಸೂನುಗಂದಿಂತೆಂದಂ || ೧೨

ಅಱಿದೆಂ ತ್ವದೀಯಚರಿತದ
ತೆಱನಂ ಮಾನುಷವಿಡಂಬಮಂ ಮೆಱೆದಪೆ ನೀಂ |
ಪೆಱತಾದುದಕ್ಕುಪಾಯದ
ತೆಱನಿಚ್ಛಾಮಾತ್ರದಿಂದೆ ಮಡಿಪೈ ಪಗೆಯಂ || ೧೩

ಈದೆಸೆಯೊಳ್ ಗೋಮಂತಮ
ಹಾದುರ್ಗನಗೇಂದ್ರಮಿರ್ಪುದದನಾತ್ಮಶ್ರೀ |

*ಖ.—ವಕ್ರೋಕ್ತಿಯಂ,

ಪಾದರಮಣೀಯಮಮಪ್ಪಂ
ತಾದರಿಪುದದರ್ಕೆ ಪೇೞ್ದಪೆಂ ಕಾರಣಮಂ ॥ ೧೪

ಪಸರಿಸುತೆ ತನ್ನ ಕಂಪಂ
ದೆಸೆವೆಣ್ಗಳ ಸುಯ್ಲ ಕಂಪನಂಡಲೆಯುತ್ತುಂ ॥
ಕುಸುಮಿತಕದಂಬಭೂರುಹ
ಮೆಸೆವುದು ಸಾರ್ವರ್ತುಕಂ ತದಗ್ರಸ್ಥಳದೊಳ್ ॥ ೧೫

ಅದಱೊಳಗುನ್ಮದಕಾರಿಣಿ
ಮದಿರಾಹ್ವಯದೇವಿಯಿರ್ಪಳಾದೇವಿ ಮನೋ ।
ಮುದದಿಂದನಂತನೊಳ್ ಕೂ
ಡಿದಪಳ್ ಯೌವನಮದಂ ಪದಿರ್ಮಡಿಸುವಿನಂ ॥ ೧೬

ವ॥ ಅದಲ್ಲದೆಯುಂ,

ತಾಲಧ್ವಜಂಗೆ ದಿವ್ಯ ವಿ
ನೀಲಾಂಬರಮೇಕಕುಂಡಲಂ ಬಂದಪುದಾ ।
ಶೈಲಾಗ್ರದೊಳಂತವೆಱಿಂ
ನೀಲಾಂಬರನೇಕಕುಂಡಲಂ ತಾನಕ್ಕುಂ ॥ ೧೭

ಆಕುಧರದಲ್ಲಿ ನಿನಗಂ
ಶ್ರೀಕೇಶವ ದಿವ್ಯಮಕರಕುಂಡಲಕೋಟೀ ।
ರಾಕಲ್ಪಮಂ ಖಗೇಶ್ವರ
ನಾಕಾಶದೆ ಬಂದು ತುಡಿಸಿ ಪೋಕುಮಮೋಘಂ ॥ ೧೮

ತನ್ನಂಶಾಂಶದ ಶೋಭೆಯಿ
ನೆನ್ನರನಿಂದ್ರಾದಿಸುರರುಮಂ ರಂಜಿಸುವಾ ।
ನಿನ್ನ ಸಿರಿಕಾಂತೆ ನಿಮಿಷದೆ
ನಿನ್ನೊಳ್ ನೆರೆಗುಂ ಯದೃಚ್ಛೆಯಿಂದಾನಗದೊಳ್ ॥ ೧೯

ಪ್ರತ್ಯರ್ಥಿ ಮಗಧನೆಬ್ಬಿ ರ
ಲತ್ಯದ್ಭುತಸಮರಮಕ್ಕುಮಾಗೆ ಚತುರ್ವಿಧಂ ।
ಶತ್ಯಕ್ಷೌಹಿಣಿ ತಡಗೋ
ಪತ್ಯಕದೊಳ್ ಲಯಮನೆಯ್ದುಗುಂ ನಿಮ್ಮಿಂದಂ ॥ ೨೦

ವ॥ ಅಂತು ಸಕಲರಾಜಲೋಕಮನೇಕಾಂಗದಿಂ ಗೆಲ್ದು ಪಶ್ಚಿಮ ಮುಖರಾಗಿ ನಡೆವಲ್ಲಿ,

ಕರವೀರಪುರವರೇಶನ
ನುರುವಿಕ್ರಮನಂ ಸೃಗಾಲನಂ ನೀಂ ಘುರದೊಳ್ ।
ಪರಿಮರ್ದಿಸೆ ನಿನಗಚ್ಯುತ
ದೊರೆಕೊಂಡಪುದವನ ಸೂರ್ಯದತ್ತವರೂಥಂ ॥ ೨೧

ವ॥ ಎಂದು ಪರಶುರಾಮನಾಗಾಮಿಕಾರ್ಯಮಂ ನುಡಿಪಿ ಕಳುಪಲಾ ಪ್ರದೇಶದಿಂ ತಳರ್ದು ನಡೆಗೊಂಡು ಸಕಳಕೇಳೀನಿಳಯಮೆನಿಪ ನೀಳಾ ಚಳ* ಮಹಾದುರ್ಗಮಂ ಕಂಡು,

ಖರಕಿರಣಂಗೆ ಕೇಳಿವನಲೀಲೆಯನಾಗಿಸುವೆಂಘ್ರಿಪ್ರೋತ್ಕರಂ
ಸುರನದಿಗೇಱಿಯಂ ಸಮೆವ ಕೂಟತಟಂ ದಿಗಿಭವ್ರಜಕ್ಕೆ ಸೆ ।
ಜ್ಜರದ ಬೆಡಂಗನೀವ ಕಟಕಂ ತನಗೊಪ್ಪಿರೆ ಮೇರುವಂ ತಿರ
ಸ್ಕರಿಸಿದುದಿಂತಿದಾ ಪರಶುರಾಮನೆ ಪೇೞ್ದ ನಗೇಂದ್ರಮಾಗದೇ ॥ ೨೨

ವ॥ ಎಂದು ಮನದೆಗೊಂಡು,

ಪದಪದ್ಧತಿಯಿಂ ಸ್ಥಳಕಮ
ಳದಚೆಲ್ವಂ ಪಡೆದ ಕೃಷ್ಣ ಒಳರಸಿತಸಿತಾಂ ॥
ಬುದಯುಗಳದಂತಳಂಕರಿ
ಸಿದರಾಗೋಮಂತಶೈಲಶಿಖರಸ್ಥಳಮಂ ॥ ೨೩

* ಖ ಗ.—ಕೀಳನೀಳಾಚಳ.

ವ॥ ಆ ಶೈಲದ ಚೂಳಿಕೆಯೊಳನೇಕವಿಧಾನೋಕಹಂಗಳನಾಳೋಕಿಸುತುಂ ಪೊೞ್ತುಗಳವಲ್ಲಿ,

ಎನಗೆ ನಭಂ ದಿಕ್ತಟವಿ
ನ್ನೆನಿತಂತರವೆಂದು ನಿಕ್ಕಿ ನೋಡುವ ಗಿರಿರಾ ।
ಜನ ತೋಳ್ದುಉಗಲೆನಲ್ ನೀ
ಳ್ದನೇಕಶಾಖೆಗಳಿನೆಸೆದುದೊಂದು ಕದಂಬಂ ॥ ೨೪

ಮದಗಂಧಮನೋಹರೆ ಸಂ
ಮದಕಾರಿಣಿ ಯೌವನಪ್ರವರ್ಧಿನಿ * ಕಾಂತಿ ।
ಪ್ರದೆ ಸುಖದಾಯಿನಿಯೆನಿಸಿದ
ಮದಿರಾವಧುವಿರ್ದಳಾಕದಂಬದ್ರುಮದೊಳ್ ॥ ೨೫

ಪುಳಕಸ್ವೇದಾಂಬುಗಳೂಗೆ
ಯೆ ಲೋಚನಂ ಕೆಂಪುವೀಱೆ ಪಾಂಡಿಮೆಮಧರ ।
ಕ್ಕೞವಡೆ ರಾಮಂ ಮದಿರಾ
ವಿಳಾಸಿನೀಸಂಗದಿಂದೆ ಸುಖಮಂ ಪಡೆದಂ ॥ ೨೬

ವ॥ ಆಕ್ಷಣದೊಳಂತರಿಕ್ಷತಳದೊಳೀಕ್ಷಣಗೋಚರಮಾಗಿ,

ತಮದನೆಲೆಯೆನಿಸುವೀವಿಪಿ
ನಮನೆ ಶರಣ್ಬುಗಲೆ ಬರ್ಪ ತಮಮಿಂತಿದು ತ ।
ತ್ತಮಮಂ ಬೆಂಕೊಳ್ವನಬಿಂ
ಬಮಿದೆನಿಸಿದುದಸಿತವಸನಮುಂ † ಕುಂಡಲಮುಂ ॥ ೨೭

ವ॥ ಅಂತು ಬಂದ ನೀಲವಸನದೊಳಮೇಕಕುಂಡಲದೊಳಂ ಸಂಕರ್ಷಣನಲಂಕೃತನಾಗಿ ತದನಂತರಂ,

---

* ಕ. ಗ.—ಮನೋಹರಿಸಂಮದಕಾರಿಮನಃಪ್ರಮೋದವರ್ಧಿನಿ.

† ಕ. ಗ—ಮೆನಿಸಿದತ್ತಸಿತವಸನಮುಂ.

ಇದು ಹೇಮಾದ್ರಿಯಿನುನ್ನತಂ ಸುವಿಪುಲಂ * ಸುಸ್ಥಾನಮೆಂದೀನಗೇಂ
ದ್ರದೊಳಿರ್ಪೊಂದೊಲವಿಂದೆ ಬಂದಪುದಲೇ ಜ್ಯೋತಿರ್ಗಣಂ ಚಿತ್ರವ
ರ್ಣದ ಮೇಘಂ ಪುದುವಾಳ್ಕೆಯಿಂ ಬರ್ಲೆನಲ್ ಬಂದತ್ತು ನಾಗಾರಿಹ
ಸ್ತದೊಳುದ್ಭಾಸಿತದಿವ್ಯಕುಂಡಲಕಿರೀಟಾಕಲ್ಪ ವಾಕಾಶದಿಂ ॥ ೭೮

ವ॥ ಅಗಳಾ ಮಕರಕುಂಡಲಕಿರೀಟಂಗಳಂ ವಿಹಗರಾಜಂ ರಾಜೀವಲೋಚನಂಗೆ ತುಡಿಸಿ ಪೋಪುದುಂ,

ಜಲಜಾಸನೆ ಜಲರುಹಕರೆ
ಜಲದಾಧ್ವದೆ ಬಂದು ಲಕ್ಷ್ಮಿಕಾಂತಿಚ್ಛಲದಿಂ ।
ಜಲಜಾಕ್ಷನೊಡನೆ ನೆರೆದಳ್
ಜಲದರವೋದಾರಮೆಸೆಯೆ ಸುರಪಟಹರವಂ ॥ ೭೯

ವ॥ ಅಂತು ಪರಶುರಾಮನೆಂದಂತೆ ನಿಜಸಮಗ್ರವೈಷ್ಣವಪ್ರಭಾವಮಂ ತಳೆದು ಕೈಟಭಾಂತಕಂ ಗೋಮಂತಕೂಟಸ್ಥಲದೊಳಿರ್ಪನ್ನೆಗಂ

ಕ್ಷಿತಿ ಚಾತುರ್ಬಳವಿದ್ಧ
ಕ್ಷಿತಿ ಗಗನಂ ಕೇತುವಿದ್ಧಗಗನಂ ದಿಕ್ಸಂ ।
ತತಿ ಧೂಳಿವಿದ್ಧದಿಕ್ಸಂ
ತತಿಯೆನೆ ಬಳಸಂದು ಬಂದು ಮಾಗಧನೃಪೇಂದ್ರಂ ॥ ೮೦

ನಿರಧಿಷ್ಠಾನಂ ದಿವಮೆಂ
ಬರಂತಧಿಷ್ಠಾನಮೆಲ್ಲಮೇನಗವಿದು † ತ ।
ತ್ಸುರಸದನಕ್ಕೆಂದಾಭೂ
ಧರತಟದೊಳ್ ನಿಂದು ನೋಡಿ ನೃಪಕೋಟಿಗಳಂ ॥ ೮೧

ಪ್ರತಿಕಾರೋಪಾಯಮೇನಿಲ್ಲಿಗೆ ನುಡಿಯಿಮೆನಲ್ ಕರ್ಣದುರ್ಯೋಧನಾದಿ
ಕ್ಷಿತಿಪರ್ ತಂತಮ್ಮುಪಾಯಂಗಳನುಸಿರ್ವುದುಮುತ್ತಾನಿತಾಸ್ಯಂ
ಸಮುತ್ಥಂ ।

* ಖ.—ಸುವಿಮಲಂ. † ಕ. ಖ ಗ —ದಿವಮೆಂಬರಂತಧಿಷ್ಠಾನಮಲ್ಲದೆನಗಿಂತಿದು.

ಭಿತಬಾಹಾದಂಡನಾಂದೋಳಿತಕರಯುಗಳಂ ಮೊಣೆವೆಂದೆಂದು ಮೊಕ್ಕೋಂ
ಡತಿಮಾತ್ರೋತ್ಸಾಹಮಂ ತಾನಱಿಪುವ ಬಗೆಯಿಂ ಚೈದ್ಯನಿಂತೆಂದನಾಗಳ್‖

ಇದನೊಂದಂ ಮಾಡೆ ಬೇಡಿಂ ಪೆಱಪೆಱವು ಮತಂ ವಾಹನಾರೂಢರೆಂದ
ನ್ನದೆ ಬಂದಂತೆಯ್ದಿ ಬೇಗಂ ಗಿರಿಯನುರುಮುದಂ ತ್ರಿಂಶದಕ್ಷೌಹಿಣೀಸೈ।
ನ್ಯದ ವೀರರ್ ಕೂಡೆ ಕಾಂತಾರದ ತರುತತಿಯಂ ಕಿೞ್ತು ತಂದೊಟ್ಟುಗೀಶೈ
ಲದ ಸುತ್ತುಂ ಮತ್ತದಂ ನಾಮುರಿಪಲದಱೊಳೞ್ಕಾಡುಗುಂ ರಾಮಕೃಷ್ಣರ್ ‖೩೩

ವ॥ ಎಂದು ಶಿಶುಪಾಲಂ ಪೇೞಲದರ್ಕೊಡಂಬಟ್ಟು,

ಲೋಕಮನರಣ್ಯಮೆನಿಸಲ
ನೋಕಹನಿಕುರುಂಬಮಂ ನಿಜಾನೀಕಭಟಾ ।
ನೀಕದೆ ತರಿಸಿ ನರೇಶ್ವರ
ರಾಕುಧರದ ಸುತ್ತಲೊಟ್ಟಿ ಸುಡುವುದುಮಾಗಳ್ ॥ ೩೪

ಪೊಸತೊಂದಾಯಿತ್ತಿದೇಂ ಕಾರಿರುಳನೆ ಶಿಖೆಗಳ್ ಸಂಜೆಗೆಂಪಂ ಸ್ಫುಲಿಂಗಪ್ರ
ಸರಂ ತಾರಾಳಿಯಂ ಕರ್ಬೊಗೆ ತಮದೊದವಂ ಪೋಲ್ತುಗುವಾರ್ಗ್ಗಲಂದೆ ।
ಣ್ದೆಸೆವೆಣ್ಗಳ್ ತೊಟ್ಟ ಕರ್ಣೋತ್ಪಲವೆಲರ್ದುವು ಸಪ್ತಾಬ್ಧಿವೇಳಾಲತಾಂಗಂ
ಬಿಸುಪೇಱಿತ್ತಭ್ರಗಂಗಾಬ್ಜಿನಿ ಮುಗಿದುದದೇಂ ರೌದ್ರಮೋ ಶೈಲದಾಹಂ ॥

ವ॥ ಆಗಳಾ ಶೈಲರಾಜನ ಶೃಂಗಾರರಸಮೆ ಕುದಿದೞ್ಕಾಡುವಂತೞ್ಕಾಡುವ ನಿರ್ಝರ ಜಲಂಗಳುಮಂ, ಆ ಮಹೀಧರೇಂದ್ರನ ಮಂಡನ ಮಹಾರತ್ನಂಗಳ್ ಸಿಡಿಲ್ವಂತೆ ಸಿಡಿಲ್ದೊಡೆದುಸೂಸುವ ಹೇಮರತ್ನಂಗಳುಮಂ, ಆ ಭೂಭೃತ್ಪ್ರಭುವಿನ ಭಯಾತಿಶಯಯುತೋತ್ತರೀಯಪಟಲಮೆ ಪಾಱುವಂತೆ ಚೂಳಿಕಾವಳಯದಿಂ ಮೊಯ್ದೆಗೆದು ಪೋಪ ಮೇಘಜಾಲಂಗಳುಮಂ, ಆ ಮಹಾಚಲಪತಿಯ ರಮಣೀಯಜಂಗಮಾವ

ತಾರಮೂರ್ತಿಗಳ್ ಮುಂಗೊಳ್ವುದುದಿಂ ಪರಿದು ಕೆಡೆದುವೆಂಬಂತೆ ದೆಸೆದೆಸೆಗೆ ಪರಿದು ಕೋಡಸೂಱಿ ಕೆಡೆವನೇಕದ್ವಿಪಸಂಕುಳಂಗಳುಮಂ, ಆನಗೇಶ್ವರನ ನಿಡುಸುಯ್ಯೆಲರ್ಗಳ್ ಪೊಱಮಟ್ಟುವೆಂಬಂತೆ ಗುಹಾಮುಖದಿಂ ಪೊಱಮಟ್ಟು ಜೀವಮಂ ಬಿಡುವ ಜರದಜಗರಂಗಳುಮಂ, ಆಶಿಲೋಚ್ಚಯಚಕ್ರವರ್ತಿಯ ವಿಕ್ರಮಾವಷ್ಟಂಭಪ್ರಭಾವರೌದ್ರಂಗಳ್ ರೂಪಧರಂಗಳಾಗಿ ನೆಗೆದು ಲಯಮನೆಯ್ದಿದುವೆಂಬಂತೆ ಅಂಬರಕ್ಕುಚ್ಚಳಿಸಿ ಬೀೞ್ವ ಶರಭ ಶಾರ್ದೂಲಭೇರುಂಡಾದಿಗಳುಮಂ, ನೋಡಿ ಕಂಡೇಕಕುಂಡಲಂಗೆ ಗಿರೀಶನೊಳ್ ಕಾರುಣ್ಯಮುಂ ಜರಾಸಂಧಸೈನ್ಯದೊಳ್ ಕೋಪಾನುಬಂಧಮುಮೊಡನೊಡನೆ ಪೆರ್ಚಿದುದನಱಿದು ದನುಜಾಂತಕಂ ವಿಕಸಿತಮುಖಾರವಿಂದನಾಗಿ ಆಂ ಪರ್ವತಕ್ಕಮೇನಾನುಮೊಂದುಪಾಯದಿಂ ಶಾಂತಿಯುಂ ಪಡೆದು ಬಂದು ಕಾದಿದಪ್ಪೆನನ್ನೆಗಂ ನೀವೀ ಶಿಖರದಿಂ ಮಗಧ ಸೇನಾಸಾಗರಕ್ಕೆ ಪಾಯ್ದು ಕಾದುತ್ತುಮಿರಿಮೆಂದು ಪೇೞೆ,

ಪಿರಿದುಮನಲಾಧಿದೇವತೆ
ಪರನರವಧಕೆಂದು ಬೆಸಲೆಯಾದಳೊ ಪೇೞೀ ।
ಪುರುಷನನೆನೆ ತೇಜೋಮಯ
ನುರಿವೆಗದಿಂ ಪಾಯ್ದನನ್ಯಸೇನೆಗನಂತಂ ॥ ೩೬

ಫಣಿಲೋಕದಿಂದೆ ಪೊಱಮಡ
ಲಣಿಯೆರಲದ್ರೀಂದ್ರದಿಂದೆ ಪೊಱಮಟ್ಟಮಿದೊಂ ।
ದಣಕಂ * ಲಯೋಗ್ರಸಂಕ
ರ್ಷಣನೆನೆ ಸಂಕರ್ಷಣಂ ಭಯಂಕರನಾದಂ ॥ ೩೭

ವ॥ ಅಂತುಮಲ್ಲದೆ,

ಪೇೞುವನಂದಮೆಂತೊ ಬಲಭದ್ರನೊ ರುದ್ರನೊ ನೀಲವಸ್ತ್ರನೋ
ನೀಳಘನಾವೃತಾಚಲನೊ ಲಾಂಗಲಪಾಣಿಯೊ ದಂಡಪಾಣಿಯೋ ।
ತಾಳಪತಾಕನೊ ಪ್ರಳಯಧೂಮಪತಾಕನೊ ತಾನೆನಲ್ ಮಹಾ
ಭೀಳತೆವೆತ್ತು ತೋಱಿದನರಾತಿನೃಪಾಳಿಗೆ ಕಾಮಪಾಲಕಂ ॥ ೩೮

* ಮೊ—ಅ ಪೊಱಮಡದಣಿಯುರಮದ್ರೀಂದ್ರದಿಂದೆ ಪೊಱಮಟ್ಟನಿದೊಂದಣಕಂ.

ಧುರದೊಳ್ ರಾಮಂ ವಿಸಟಂ
ಬರಿದು ಜರಾಸಂಧನೃಪಚತುರ್ಬಲಮಕರಾ |
ಕರಮಂ ಕದಡಿದನತಿಭೀ
ಕರಮಕರಂ ಕದಡುವಂತೆ ಮಕರಾಕರಮಂ ॥ ೩೯

ತೇರೈಸಿ ಪಾಯ್ದು ಪಿಡಿದತಿ
ವೀರರ ಹಯದಿಂದೆ ಹಯಮನಾಳಿಂದಾಳಂ |
ವಾರಣದಿಂ ವಾರಣಮಂ
ತೇರಿಂ ತೇರಂ ಹಲಾಯುಧಂ ಮರ್ದಿಸಿದಂ ॥ ೪೦

ಕೆಲವಂ ಚರಣಾಹತಿಯಿಂ
ಕೆಲವಂ * ಮುಷ್ಟಿಪ್ರಹಾರದಿಂ ಗಜಘಟೆಯಂ |
ಕೆಲವಂ ಬಲಭದ್ರಂ ಲಾಂ
ಗಲದಿಂ ಬರೆ ತೆಗೆದು ಮುಸಲದಿಂ ಕೆಡೆವೊಯ್ದಂ ॥ ೪೧

ದೆಸೆಯಾನೆ ಮುನ್ನಮೊಳವಂ
ಬಸದುಕ್ತಿಯುದಿರ್ಕೆ ಪಿಡಿದು ಪೇರಾನೆಗಳಂ |
ದೆಸೆದೆಸೆಗೀಡಾಡೆ ಬಲಂ
ದೆಸೆಯಾನೆಗಳಾದುವವೆಱೊಳೆಂಟುಗಜಂಗಳ್ ॥ ೪೨

ಹಲದಿಂದರಿಕರಿಕುಂಭ
ಸ್ಥಲಮಂ ಬಳನುಗಿಯೆ ನೆಗೆದು ಸೂಸಿದ ಮುಕ್ತಾ |
ಫಲಮನೊಳಕೊಂಡು ಮುಕ್ತಾ
ಫಲಜನ್ಮಸ್ಥಾನವಾದುದಂಭೋನಿಧಿಯುಂ ॥ ೪೩

ಅಸುಹೃತ್ಕರಿಯಂ ಹಲಿ ದಳಿ
ಯಿಸುವೆಂದುಚ್ಚಳಿಸಿ ಪುದಿದ ನೆತ್ತಱ ಕೆಂಪಾ |

* ಕ, ಗ.—ಕೆಲರಂ ಚರಣಾಹತಿಯಿಂ ಕೆಲರಂ.

ಗಸದೊಳ್ ತೋಱುವುದಿನ್ನುಂ
ಕಿಸುಸಂಜೆಯು ನೆವದೆ ದಿವದ ರಾತ್ರಿಯು ಪುಗಿಲೊಳ್ ॥ ೪೪

ತಾಳಧ್ವಜನಿಱಿದೆಡೆಯೊಳ್
ಲೀಳೆಯಿನಂಡಾಯ್ದು ಕೋದು ತೊಟ್ಟಿರ್ದ ಶಿರೋ ।
ಮಾಳೆಯೆ ದಲ್ ಮಾರಿಯ ಮಾ
ಕಾಳಿಯ ಚಂಡಿಕೆಯ ಕೊರಲ ಮಾಲೆಗಳೆಲ್ಲಂ ॥ ೪೫

ಎಣಿಕೆಗೆ ಪನ್ನೆರಡಕ್ಷೌ
ಹಿಣಿಯಂ ತವೆ ತಿಂದು ತೇಗುವಂತೆವೊಲರಿವಾ ।
ರಣಮೌಕ್ತಿಕದಿಂದುದಿತೋ
ಲ್ಬಣಾಸ್ಯವೇನೆಸೆದುದೋ ಹಲಂ ಪಲಧರನಾ ॥ ೪೬

ವ॥ ಅನ್ನೆಗಂ,

ಚರಣಾಂಗುಷ್ಠಾಗ್ರದಿಂದಂ ಕಿೞನಿಲಮಂ * ನಹೀಂದ್ರಾಲಯಕ್ಕೊತ್ತೆ ವಿಶ್ವಂ
ಭರೆ ಬಿಣ್ಪಿಂ ಮಧ್ಯಭಾಗಂ ನೞಿದು ಮುಗಿಯೆ ತಳ್ಪಾಯ್ದು ವಾರಾಸಿಯಿಂತ ।
ದ್ಗಿರಿವಹ್ನಿಜ್ವಾಲೆಯಂ ನಂದಿಸಿ ಬೞಿಕ ಜರಾಸಂಧಸೇನಾಸಮೂಹಾಂ
ತರಮಂ † ಕಾಲಾಗ್ನಿರುದ್ರಂಪುಗುವತೆಱದೆದೈತ್ಯಾಂತಕಂಬಂದು ಪೊಕ್ಕಂ॥

ಪೊಕ್ಕು ಮುರಾರಿ ಮಾರ್ಪಡೆಯೊಳಿರ್ಪುದುಮಾರಿಪುಸೈನ್ಯಜೀವನಂ
ಪೊಕ್ಕುದು ಕಾಲವಕ್ತ್ರಮನರಾತಿಬಲಾರುಣತೋಯಸಿಂಧುಗಳ್ ।
ಪೊಕ್ಕುವು ವಾರ್ಧಿಯಂ ರಿಪುಚಮೂಪಶಿರಂ ಪಿಶಿತಾಶಿಕುಕ್ಷಿಯೊಳ್
ಪೊಕ್ಕುವೆನುತ್ತುಮಂಬರದೊಳೀಕ್ಷಿಸುತಿರ್ದುದು ದೇವಸಂಕುಳಂ ॥೪೭

ವ॥ ಆಗಳ್,

ಆವಂ ಕೋಟಿಯುಗಾನುಷಂಗಖಗವಾಹತ್ವಂಗಳಿಂ ಪೋಲ್ವನೀ
ದೇವಂಗೆನ್ನವೊಲಾವಮಹತ್ವಮೆನಗಂ ದ್ವಿಟ್ಸೇನೆಗಂ ಮೊಱ್ಕುಮಿಸಾ ।

* ಮೊ. ಅ. ಕೆಳನೆಲನ. † ಖ.—ಸೇನಾಸಮುದ್ರಾಂತರಮಂ.

ಜೀವಾಕೃಷ್ಟಿಯನೀತನೆಂದು ಧನು ಲಜ್ಜಾನಮ್ರವಾಯ್ತೆಂಬಿನಂ
ಶ್ರೀವತ್ಸಾಂಕನಜೀಯನೇಱಿಸಿದನುಗ್ರಾಟೋಪಮಂ ಚಾಪಮಂ ॥ ೪೯

ವ॥ ಅಂತೇಱಿಸಿ ಭುಜಬಲಾಟೋಪಾಖರ್ವಗರ್ವದಿಂ ಮೌರ್ವೀಲತಾಸ್ಫಾಲನಂಗೆಯ್ಯೆ,

ಕುಳಭೂಭೃತ್ಸಂಧಿಬಂಧಂ ಕಳಲೆ ಕದಡೆ ವಾರಾಶಿಗಳ್ ದೇವತಾಸಂ
ಕುಳವತ್ಯಾಶಂಕೆಯುಂ ಕೈಕೊಳಲದಿರೆ ಮಹೀಮಂಡಲಂ ವ್ಯೋಮಗಂಗಾ
ಸಳಿಳಂ ತುಳ್ಕಾಡೆ ಚಂಡದ್ಯುತಿರಥತುರಗಂ ಬೆರ್ಚೆ ಪ್ರೋನ್ಮತ್ತರಾತಿ
ಪ್ರಳಯಪ್ರಧ್ವಾನಧೀರಂ ಮುರಮಥನಧನುರ್ಜ್ಯಾಲತಾಘೋರಘೋಷಂ॥

ಗಗನಂ ಬಾಣಾತ್ಮಕಂ ಮಾರ್ಪಡೆ ಪೆಣಮಯಮಾದತ್ತಿದೆಂತೀತನಂಬಂ
ತೆಗೆವಂದಂ ಪೂಡುವಂದಂ * ಬಿಡುವುದಱಿಯಲಾಯ್ತಿಲ್ಲ ಕರ್ಣಾಗ್ರದೊಳ್ಪ್ರೋ ।
ರ್ದಗೆವೆತ್ತಾಮುಷ್ಟಿಯುಂಮಂಡಳಿಸಿದಧನುವುಂದಿಟ್ಟಿಪಾಲೋಕಮುಂನೆ
ಟ್ಟಗೆತೋಱುತ್ತಿರ್ದವೆಂಬಂತಗಧರನಿಸುತಿರ್ದಂಸುದುರ್ಲಕ್ಷ್ಯವೇಗಂ ॥

ಶರಶರವರ್ಷಮನತ್ಯು
ದ್ಧುರಧುರದೊಳ್ ಕೃಷ್ಣಕೃಷ್ಣಮೇಘಂ ಕಱೆಯಲ್ ॥
ಪರಬಲಜೀವನಜೀವನ
ವರೆಯಾಗುತ್ತಿರ್ದದಂತದೇನಚ್ಚರಿಯೋ ॥ ೫೦

ನಾಂಟಿದುವರಿಭಟರಂಗಮ
ನೀಂಟಿದುವಸ್ರವನಡರ್ತು ಮೀಂಟಿದುವೆಲ್ವಂ ।
ಸೀಂಟಿದುವಗ್ಗಳವೆಸರಂ
ದಾಂಟಿದುವಾವೆಡೆಯನಸುರಹರನ ಶರಂಗಳ್ ॥ ೫೧

* ಕ. ಖ. ಗ —ತೆಗೆವಂಬಂ ಪೂಡುವಂಬಂ.

ಯಾದವಕುಲನಿಸೆ ತಿಂತಿಣಿ
ಯಾದವನೀಪಾಲಬಲದ ಹಯಸಂತತಿಯುಂ ।
ಸಾದಿಗಳುಂ ರಣರೌದ್ರರ
ಸಾದಿಗಳಂ ತುಱುಗಿ ನಟ್ಟುವಸ್ತ್ರಾವಳಿಗಳ್ ॥ ೫೪

ಲಘುವೇಗತ್ವದಿನರ್ಧಚಂದ್ರಶರದಿಂದೆಚ್ಚಾಡೆ ಕೃಷ್ಣಂ ಮದೇ
ಭಘಟಾಕೋಟಿಗಳತ್ತಿಬರ್ಪಕರದಂಡಂಗಳ್ವಿಖಂಡಂಗಳಾ ।
ಗಿ ಘನಾಧ್ವಾಂತಮನೆಯ್ದೆ ಪಾಱಿ ಪ್ರದಿದಿದಾರ್ಕಾಶವಾರಾಶಿಘೋ
ರಘನೋರ್ಮಿಪ್ರಕರಂಬೊಲೇನಿನಿಸುಬೇಗಂಕಣ್ಗಗುರ್ವಾದುದೋ ॥ ೫೫

ತಂಡದೆ ಪೊಯ್ದು ಕೋಟಿಪರಿಸಂಖ್ಯೆಯ ಕೈಟಭಸೂದನಾಸ್ತ್ರದಿಂ
ಖಂಡಿಸಿ ಪಾಱಿದನ್ಯಬಲಯೋದ್ಧೃಶಿರಂ ಶತಕೋಟಿಗಳ್ ಮನಂ ।
ಗೊಂಡುವದೊಂದುಬೇಗಮಸುರಾರಿಜಯೋತ್ಸವದೊಳ್ ಸುರರ್ ನಭೋ
ಮಂಡಲದಲ್ಲಿ ಕಟ್ಟಿದ ಫಲಾವಳಿಗಳ್ ದಿಟವಿಂತಿವೆಂಬಿನಂ ॥ ೫೬

ವಿಶಿಖಾಸಾರಮುಪೇಂದ್ರಚಾಪಘನದಿಂ ಸೂಸಿತ್ತದೆತ್ತಂ ವರೂ
ಥಶತಂ ಭಿನ್ನಶರೀರಮಾಗೆ ಶರಮಲ್ತುಲ್ಕಾಗಣಂ ಬಾಣಮ ।
ಲ್ತಶನಿಶ್ರೇಣಿ ಪತತ್ರಿಯಲ್ತುರಗಜಾಲಂ ಪತ್ರಿಯಲ್ತುಗ್ರವ
ಹ್ನಿಶಿಖಾಸಂತತಿ ಕಾಂಡಮಲ್ತು ಯಮದಂಡವ್ರಾತಮೆಂಬನ್ನೆಗಂ ॥ ೫೭

ವ॥ ಅಂತು ಶರವರ್ಷಮಂ ಕಱೆಯುತ್ತುಮಿರ್ದದೊಂದಭಿನವಾ
ಭ್ರಘಟೆಯನಪ್ರುಕೆಯ್ದು,

ಬಲಿರಿಪು ಕಾಲಚಕ್ರದ ವೊಲೊರ್ವನೆ ಮಾರ್ಪಡೆಯುಂ ಸ್ವಕೀಯಮುಂ
ಡಲಗತಿಯಿಂದೆ ಸುತ್ತಿದನಿತಲ್ಲದೆ ಮುಂತಣ ಪಿಂತಣಿರ್ಕೆಲಂ ।
ಗಳ ಭಟರ್ಗಲ್ಲವೆಲ್ಲೆಡೆಯೊಳಂ ನೆರೆದಾಂತುದು ಮಲ್ಲದಾಮಹಾ
ಬಲದನಿಬರ್ಗಮಂತನಿಬರಾಗಿಯೆ ತೋಱಿದನಾಜಿರಂಗದೊಳ್ ॥ ೫೮

ವ॥ ಅಂತುಮಲ್ಲದೆ,

ಆನೆನಿತು ಕೊಂಡು ಪೋರ್ವೆಂ
ಸೇನೆಯನಿಂದಿಕ್ಕುವೆಂ ಕ್ಷಣಾರ್ಧದಿನೆಂದಾ ।
ದಾನವರಿಪು ದಿವಿಜಜಯ
ಧ್ಯಾನಂ ಮಿಗೆ ಮೋಹನಾಸ್ತ್ರಮಂ ತೊಟ್ಟೆಚ್ಚಂ ॥ ೫೯

ಧುರದೊಳ್ ತಾನೆಚ್ಚ ಸಮ್ಮೋಹನಶರವಹಿತಾಷ್ಟಾದಶಾಕ್ಷೌಹಿಣೀವೀ
ರರುಮಂ ಪ್ರತ್ಯೇಕಮೋರಂತಳಱಿ ಸುೞಿಯೆ ಮೋಹಾಂಧಕರ್ ತಮ್ಮೊ
ಳೋರೆ ।
ರ್ವರನೊರ್ವರ್ ಕೃಷ್ಣನೆಂದಾಂತಿಱಿದು ಪಡಲಿಡುತ್ತಿರ್ದುದಂ ನೋಡು
ತಿರ್ದಂ
ಸರಲಂ ತೂಗುತ್ತೆ ಕೃಷ್ಣಂ ನಿಜಧನುತಟವಿನ್ಯಸ್ತಹಸ್ತಂಸ್ಮಿತಾಸ್ಯಂ॥೬೦

ವ॥ ಅಂತು ತಮ್ಮೊಳ್ ತಳ್ತಿಱಿದರಿಸೈನ್ಯದೊಳ್ ಪದಿನೆಂಟಕ್ಷೌ
ಹಿಣೀಬಲವಶೇಷಮಾಗೆ, *

ವಸುಧೆಯು ವಾರಿದಾಧ್ವದೆಡೆಯೊಳ್ ಕಣೆಗಳ್ಗಲೆ ಕೊರ್ವಿ ನಿಂದಗು
ರ್ವಿಸೆ ಘನಮಾರ್ಗದೊಳ್ ಸರಲ ಸಂತತಿ ಪಂದರವಿಕ್ಕಿದಂತೆ ಸಂ ।
ಧಿಸಿ ನಿಲೆ ದಿಕ್ತಟಾಂತರದೊಳುಗ್ರಧನುರ್ಗುಣಟಂಕೃತಂ ವಿಜೃಂ
ಭಿಸೆ ಮಗಧಾದ್ಯನೇಕನೃಪರೊರ್ಮೆಯೆ ತಾಗಿದರಂದುಶಾರ್ಙ್ಗಿಯಂ॥ ೬೧

ಇದು ನೆಲನಿದು ದೆಸೆಯಿದು ನಭ
ವಿದು ತಾನಿವರನ್ಯರೆಂಬ ಬಗೆಗಿಡೆ ನೃಪವ್ರಂ ।
ದದ ಕಱೆವಿಷುಗಳನಿಷುಜಾ
ಲದಿನೊಡನೊಡನೆಚ್ಚು ಕಡಿದು ತದನಂತರದೊಳ್ ॥ ೬೨

ಎನಗಂ ಬಿಲ್ಬಲ್ಮೆದೋರ್ಪುದ್ಧತರನಿವರ್ಗಳಂ ಚೈದ್ಯ ಮಾದ್ರೇಶ
ದುಯೋರ್
ಧನ ರಾಧೇಯ ತ್ರಿಗರ್ತಾಧಿಪ ಮಗಧನೃಪಾಲಾದ್ಯರಂ ಕೊಲ್ವೆನೆಂದಾ ।

* ಕ. ಖ. ಗ.—ಪನ್ನೆರಡಕ್ಷೌಹಿಣೀಬಲಾವಶೇಷಮಾಗೆ,

ವೆನಜಾಕ್ಷಂವೈಷ್ಣವಾಸ್ತ್ರಂದುಡೆ ಸುರರಗಿದರ್ ಸ್ಥಾಣುವೆಲ್ಲಾ ಡಿದಂವೋ
ದಿನಿಕಂಪಂಗೊಂಡುದಂಭೋಸಿಧಿಕದಡಿದದೇನುಗ್ರಮೋವೈಷ್ಣವಾಸ್ತ್ರಂ॥

ವ॥ ಆಗಳನಿಲಪಥದೊಳೊಂದಶರೀರವಾಕ್ಯಮಿಂತೆಂದುದು--ಎಲೆ ಮುಕುಂದಾ ನೀನೀಜರಾಸಂಧಪ್ರಭೃತಿನರಪಾಲರೊಳಾವೆಂಗಾವನಂ ಮೃತ್ಯುವಾಗಿ ಕಲ್ಪಿಸಿದೆ ಮುನ್ನಾಕ್ರಮದೆ ಭೀಮಾರ್ಜುನಾದಿವೀರನೃಪರೆ ನಿಮಿತ್ತಮಾತ್ರಮಾಗೆ ಕತಿಪಯಕ್ಷಿತಿಪಾಲರಂ ನಿರ್ಮೂಲಿಪುದು ; ನಿನ್ನಂಶಾಂಶದವತಾರಮೂರ್ತಿಯಿಂ ಲೋಕಲುಂಟಾಕರ*ನಾವ ಪದದೊಳ್ ಮಡಿಯಿಸಲ್ವೇಡಿರ್ದಪುದವರವರನಂತಂತೆ ಮಡಿಯಿಪುದು , ಒಂದೆ ಸಮಯದೊಳಿಂದೆ ಸಕಲದುರ್ವಿಳಸಿತಕ್ಷತ್ರಿಯರಂ ಸಂಹಾರಂಮಾಡೆ ಮುಂದೆ ನೆಗಳ್ವ ಭಾರತಯುದ್ಧಂ ಕಿಡುಗುಂ ; ಉಡುಗುಡುಗು ವೈಷ್ಣವಾಸ್ತ್ರಮಂ-ಎನೆ ಭುವನವ್ಯಾಪಾರನಾ ಮಹಾಸ್ತ್ರಮ ನುಪಸಂಹರಿಸಿ ಮತ್ತಂ ಸಮರವಿಜಯಚಿಹ್ನಮಂ ಪ್ರಕಟಿಸಲ್ಬಗೆದು,

† ಪಱಿಯೆ ಕಿರೀಟಕೋಟಿಯುನಿಸಲ್ ನೆಱದಂಗಿವರೀಶಿರಂಗಳಂ
ಪಱಿಯಿಸಲೊಲ್ವೆಡೇನರಿದೆ ಶಾರ್ಙ್ಗಿಗೆನಲ್ ಹರಿ ಬಾಣಕೋಟಿಯಿಂ ।
ಪಱಿಯಿಸೆ ರಾಜಕೋಟಿಮಕುಟಂಗಳನಂತವು ಪಾಱಿ ಪೋಗಿ ಬಾಂ
ದೊಱೆಯ ವಿಚಿತ್ರವಾರಿರುಹಕೋಟಿವೊಲಿರ್ದುವದೊಂದು ಬೇಗದೊಳ್॥

ವ॥ ಅಂತು ಮಕುಟಭಂಗದೊಡನೆ ಮನೋಭಂಗಮಾಗೆ ಮಗಧಪ್ರಮುಖನಿಖಿಲನೃಪಾಲಕರ್ ಬೆಂಗೊಟ್ಟು ಪೋಪುದುಂ ಗಗನತಳದಿಂ ಭೂತಳದ ಮೇಲೆ ಕಱಿವನೇಕನೂತನಾನರ್ಘ್ಯಮಣಿಮಕುಟವೃಷ್ಟಿಯಿಂ ತಮ್ಮ ಮೇಲೆ ಕಱಿವ ಇಂದ್ರನ ವಿಚಿತ್ರಕುಸುಮಮಾಲಾವೃಷ್ಟಿ ಭ್ರಮರವೃಂದಕ್ಕೆ ಗಂಧಾನುಮೇಯಮಾಗೆ ವಸುದೇವನಂದನರ್ ವಿಜಯಲೀಲೆಯಂ ಕೈಕೊಂಡು ನಿಂದಾಗಳಾಮಹಾಹವಮಹೀವಳಯಮಂ ಕಣ್ತೀವಿ ನೋಡಿ,

* ಖ —ಲೋಕಕಂಟಕರ. † ಮೂ—ಆ —ನಾಲ್ಕುಪಾದಗಳಲ್ಲಿಯೂ ಪ್ರಾಸಾಕ್ಷರವು ರೇಫವಾಗಿದೆ

ಆಡಿದುವಿಂದರಾತಿಭಟರಟ್ಟೆಗಳಾಜಿಯೊಳನ್ನ ಕಾರ್ಯದ
ಚಾಡಿದುದಿಂದು ಕೂಡಿದುದು ವೈರಿಬಲಾರುಣಸಿಂಧು ವಾರ್ಧಿಯಂ ।
ಕೂಡಿದುದೆನ್ನಪೇಕ್ಷೆ ಪಸಿವೋಡಿದುದಿಂದರಿಸೈನ್ಯದಿಂ ಜವಂ
ಗೋಡಿದುದೆನ್ನ ಕಣ್ಬಸಿವೆನುತ್ತೊಸೆದಾಡಿದನಂದು ನಾರದಂ ॥ ೬೫

ವ॥ ಅನ್ನೆಗಂ ಕೇಶಿಸೂದನಪ್ರಲಂಬಾಂತಕರಲ್ಲಿಂ ತಳರ್ದು ಕರವೀರಪುರಾಭಿಮುಖರಾಗಿ ಬರುತ್ತಿರಲಂತದಂ ತತ್ಪುರವರೇಶ್ವರಂ ಸೃಗಾಲನರಪಾಲಂ ಕೇಳ್ದು ಪ್ರಳಯಕಾಲಜಲಧರದಂತೆ ಗಜಱಿ ಗರ್ಜಿಸಿ,

ಗಣನೆಗೆ ಮೂವತ್ತಕ್ಷೌ
ಹಿಣಿಸೈನ್ಯಂ ಮಗಧನೃಪತಿಗಾದೊಡಮವನೊಳ್ ।
ಪೊಣರಲ್ಬರ್ಕುಂ ಬರ್ಕುಮೆ
ಪೊಣರಲ್ ರವಿದತ್ತದಿವ್ಯರಥಮುಳ್ಳನ್ನೊಳ್ ॥ ೬೬

ಸೇನಾಬಲದಿಂ ಪೊಣರ್ದಾ
ಭೂನಾಥರ ಮೊಗ್ಗ ಸಲ್ಲದೆನ್ನೊಳ್ ಕೃಷ್ಣಂ ।
ಗಾನೇಕಾಂಗದೆ ಗೆಲ್ದಪೆ
ನೀ ನೀರಜಮಿತ್ರದತ್ತರಥದಿನಮೋಘಂ ॥ ೬೭

ಪೋಗೆಲವೊ ದೂತ ಕೃಷ್ಣನ
ನೀಗಳ್ ಮೇಲೆತ್ತಿ ಬರಿಸು ಬಂದಪೆನಾನುಂ ।
ಬೇಗದಿನೆಂದಟ್ಟಿದ ಚರ
ನಾಗಳ್ ಬಂದೊದಱಿದಂ ಮುರಾಂತಕನಿದಿರೊಳ್ ॥ ೬೮

ಅದಟಿಂ ಮುಂ ಗೆಲ್ದುದಂ ನೀಂ ನೆನೆನೆನೆದು ಭುಜಾಗರ್ವದಿಂ ಪೆರ್ಚಿದಿರ್ಪೆ ರ್ಚಿದಿರಿನ್ನೀಗರ್ವದುರ್ವಂ ಬಿಡು ಬಿಡು ನಿನಗಿಂ ಸಲ್ಲದಿಂ * ಸಲ್ಲದಿಂ ಸಲ್ಲದು ಯುದ್ಧಕ್ರೀಡೆಗಣ್ಮಿಕ್ಕಿಲೆ ನಡೆ ನಡೆ ಕಂಸಾರಿ ಸೈತಾಗು ಸೈತಾಗಿದಿರಾಂತೀಬಂದನೀಬಂದನೆ ಸಮರಧರಿತ್ರೀಕರಾಳಂ ಸೃಗಾಲಂ ॥ ೬೯

---

* ಮೊ—ಅ.—ಗರ್ವಮಂ ನೀಂ ಬಿಡು ಬಿಡು ನಿನಗೀಪೌರುಷಂ

ಎಂದು ಚರನೊದಱೆ ರಥಮುಂ *
ಬಂದುದು ಹಯಖುರಮುಖಂಗಳಿಂ ನಭಮಂ ಸೀ ।
ಳ್ವಂದದೆ ದಿಕ್ತಟಮುಂ ಶರ
ವೃಂದದೆ ತೀವುತೆ ಸೃಗಾಲರಥಿ ಬರ್ಪಿನೆಗಂ † ॥ ೨೦

ಈರಥದ ರಥಿಯು ಪರಿ ಸಾ
ಧಾರಣಮಲ್ಲೆಂದು ಶಾರ್ಙ್ಗಿ ಕಱಿವೆ ಮಹಾಸ್ತ್ರಂ ।
ಸಾರಕ್ಕಲಕ್ಷ್ಯಮಾಗೆ ಜ
ವಾರಭಟಿಯಿನಾಂತುವಾ ವರೂಥಹಯಂಗಳ್ ॥ ೨೧

ವಿವಿಧಗತಿಜವದಿನಭ್ರದೊ
ಳವನಿಯೊಳಣ್ಡೆಸೆಯೊಳತ್ತಲುಂ ತೋಱುತ್ತುಂ ।
ಭುವನಂ ಕೂಡೆ ರಥಾದ್ವೈ
ತಮಾದುದೆನೆ ಪರಿದುದಾಸೃಗಾಲವರೂಥಂ ॥ ೨೨

ವ॥ ಆದಿವ್ಯರಥದ ಚಿತ್ರಗತಿವೇಗಮತಿಚಮತ್ಕಾರಮಾಗೆ ಚಾಣೂರಾಂತಕಂ ನಿಜಾಂತರಂಗದೊಳ್,

ತಳದಪುದಾಜಿಕೇಳಿಗೆ ರಥಂ ಬಹುಮೂರ್ತಿಗಳಂ ರಥಂ ರಥಂ
ಗಳನುಗುಳ್ದಿಪ್ಪುದೆಣ್ದೆಸೆ ರಥಂಗಳನೀಂದಪುದೆತ್ತಲುಂ ಧರಾ ।
ತಳಮೆ ರಥಂಗಳಂ ಬೆಸಲೆಯಾಯ್ತೆನಲೊಂದೆ ಸಹಸ್ರಕೋಟಿಮೋಲ್
ಬಳಸಿದುದಿಂತಿದಾಪರಶುರಾಮನೆ ಪೇೞ್ದ ರಥಂ ನಿರಾಕುಳಂ ॥ ೨೩

ಈರಥದ ಪರಿವ ಜವದಿಂ
ವೈರಿ ಸುದುರ್ಲಕ್ಷ್ಯನೆನಗಮಾಂ ಕಱಿವಸ್ತ್ರಂ ।
ಸಾರಂ ನಿಷ್ಫಲಮರಿಸಂ
ಹಾರಮದೆಂತಕ್ಕುಮೆಂದು ಹರಿ ಚಿಂತಿಸಿದಂ ॥ ೨೪

* ಮೊ—ಅ—ಚರನೊದಱುವಿನೆಗಂ.

† ಮೊ—ಅ—ಸೃಗಾಲರಥಮಾಕ್ಷಣದೊಳ್.

ಹರಿಯುಂ ಬ್ರಹ್ಮನುಮೆಯ್ದ್ರರಾರಥದ ಮೇಲಿರ್ದಂದು ತನ್ನೊಳ್ ದಿಟ
ಕ್ಕೆ ರಣಕ್ರೀಡೆಗೆನಿಪ್ಪುದಂ ಮಱೆದು ಕಟ್ಟೆಣ್ಕಿಂ ಸೃಗಾಲಂ ರಥಾಂ ।
ತರದಿಂ ತೊಟ್ಟನೆ ಪಾಯ್ದು ಕಟ್ಟೆದಲಗಂ ಕಿತ್ತೆಯ್ದಿ ಕೃಷ್ಣಾಸಿಯಿಂ
ಧರೆಯೊಳ್ ಬೀಳ್ದನದಂತೆ ಬುದ್ಧಿ ಕಿಡುಗುಂ ಕೇಡೆಯ್ದುವಂದಾರೊಳಂ ॥

ವ॥ ಅಂತಾಸೃಗಾಲನಂ ಸೃಗಾಲ ಕೌಲೇಯಕ ಕಾಕ ಗೃಧ್ರಸಮಾಜಕ್ಕೆ ಭಾಜನಂಮಾಡಿ ಬಱಿಕ್ಕಮಾ ದಿವ್ಯರಥದ ಸಮೀಪಕ್ಕೆ ವಂದು, ಅನಂತದ್ಯುಮಣಿಪ್ರಕಾಶನದಱ ಮಣಿರಚನಾವಿಶೇಷಮಂ, ಕುಶೇಶಯದಳವಿಶಾಲಾಕ್ಷನದಱಕ್ಷವಿಸ್ತಾರಮುಮಂ, ಧೃತಸುದರ್ಶನಚಕ್ರನದಱ ಚಕ್ರಪರಿಕ್ರಮಮುಮಂ, ವಿನಿಮರ್ೂಲಿತಕಾಲನೇಮಿಯುದಱ ನೇಮಿವಳಯವಿಳಾಸಮುಮಂ, ದಕ್ಷಿಣೇತರಕರತಳೋದ್ಧಾರಿತಗೋವರ್ಧನಾಭೀಳಕುತ್ಕೀಲನದಱ ಕೀಲಭಂಗಿಯುಮಂ, ದೈತ್ಯಕುಲಕದಳೀವನಮತ್ತವಾರಣನದಱ ಮತ್ತವಾರಣಸ್ಥಿತಿಯುಮಂ, ರೂಪಾಧರೀಕೃತಶಂಗಾರಜನ್ಮ ಜಯಂತ ನಳಕೂಬರನದಱ ನಳಕೂಬರವಿಭೂತಿಯುಮಂ ಇಚ್ಛಾಮಾತ್ರವ್ಯವಸ್ಥಿತಸಮಸ್ತಯುಗನದಱ ಯುಗಶೋಭೆಯುಮಂ, ಯಾತುಧಾನಸಂತಾನಧೂಮಕೇತುವದಱ ಕೇತುದಂಡೋನ್ನತಿಯುಮಂ, ತನುಕಾಂತಿವಿಜಿತಸಜಳಬಳಾಹಕನದಱ ಬಳಾಹಕನೆಂಬ ವಾಹಮುಮಂ, ಪರಿಕಲಿತಕೌಸ್ತುಭವಿಭೂಷಾಲಂಕೃತಸುಗ್ರೀವನದಱ ಸುಗ್ರೀವನೆಂಬ ವಾಜಿಯುಮಂ, ಪಾಂಚಜನ್ಯನಿನದಶ್ರವಣಮಾತ್ರವಿತ್ರಾಸಿತ ಶತ್ರುಸೈನ್ಯನದಱ ಶತ್ರುಸೈನ್ಯನೆಂಬಶ್ವಮುಮಂ, ಅವಾರ್ಯಸಂಹೃತಾಸುಹೃದ್ಬಲಾಂಗನಾಬಾಷ್ಪಮೇಘಪುಷ್ಪನದಱ ಮೇಘಪುಷ್ಪನೆಂಬ ತುರಗಮುಮಂ, ನಿಜಾಗ್ರಜಂಗೆ ತೋಱ ನಾಡೆಯುಂ ಮೆಚ್ಚಿ ಬಿಚ್ಚಳಿಸಿ ರೌಹಿಣೇಯುಸನಾಥನಾವರೂಥಮನಲಂಕರಿಸಿ ಕರವೀರಪುರಕ್ಕೆ ನಡೆದು ಸೃಗಾಲತನಯನಂ ತದ್ರಾಜ್ಯದೊಳ್ ನಿಲಿಸಿ ಮಗುೞ್ದುಬಂದು ಮಧುರಾಪುರದ ಪೊಱವೊೞಲಸಯ್ದಿದಲ್ಲಿ,

ಆರುಣನಾತ್ಮವಿಭ್ರಮವೆದಿರ್ಪವಿನಂ ನಡೆತಂದು ಮಂಗಳ
ಶ್ರೀರಮಣೀಸಖೀಜನಮೆನಲ್ಕಿದಿಗೊರ್ಂಡು ನಿಜೇಕ್ಷಣಾಮೃತಾ ।

ಸಾರದೆ ಬೆಳ್ಪನಿರ್ವರ್ತಿಸಿ ನಿರ್ಮಲಮುಕ್ತಿಕಮೌಕ್ತಿಕಾಕ್ಷತಾ
ಸಾರಮೆನಂದು ಸೂಸಿದುದುಪೇಂದ್ರನ ಮೇಲೆ ಪುರಾಂಗನಾಜನಂ ‖ ೭೬

ವ‖ ಅಂತು ಪೌರನಾರೀಜನದ ಸೂಸುವ ಸೇಸೆಗಳನಾಂತುಕೊಂಡು ತ್ಸವಾಸೀಕನಿಕಾಯಗೇಯಪ್ರಘೋಷಮೆಸೆಯೆ ಪೊೞಲಂ ಪೊಕ್ಕು ಪಂಚರತ್ನಮಯತೋರಣದ್ವಾರಸಮಾಜವಿರಾಜಮಾನಮಪ್ಪ ರಾಜಮಾರ್ಗದೊಳಗೆ ನಡೆತಂದು ಅನೇಕಮಂಗಳಪರಿಕರಂಗಳಿಂ ಕರಂ ಸೊಗಯಿಸುವರಮನೆಯುಂ ಪ್ರವೇಶವಿಲಾಸದಿಂದಲಂಕರಿಸಿ ವಸುದೇವೋಗ್ರಸೇನಾದಿಗಳ್ಗೆ ತಾಂ ಪೋಗಿ ಬಂದ ಕಾರ್ಯವೃತ್ತಾಂತಮಂ ಕಾಮಪಾಲಂ ಪೇೞೆ ನಿತ್ಯಲೀಲೆಯಿಂ ಕೆಲವುದಿವಸಮಂ ಕಳಿಪುತ್ತು * ಮನಾದಿನಂ ಚರರ ಬಿನ್ನಪದಿಂ ದೇಶವಾರ್ತೆಗಳನಾಲಿಸುತ್ತಿರ್ಪನ್ನೆಗಮೊಂದು ಸಮಯದೊಳೂರ್ವರಂ ವಿಖ್ಯಾತ ದೂತನೋಲಗಸಾಲೆಯುಂ ಪೊಕ್ಕು ಪುರುಷೋತ್ತಮಂಗವನತೋತ್ತಮಾಂಗನಾಗಿ ಪೊಡೆಮಟ್ಟು,

ಧರೆಯೊಳ್ ರಾಜ್ಯವಿಶೂನ್ಯರಿರ್ಕೆ ಬರಲಿಂ ಸಿಂಹಾಸನಸ್ಥರ್ ಸ್ವಯಂ
ವರಮೆಸ್ಮತ್ಸುತೆಗೆಂದು ಕುಂಡಿನಪುರೇಶಂ ಭೀಷ್ಮಕಂ ಸಾರಿಸಲ್ ।
ನೆರೆದೀಗಳ್ ಮಗಧಾದಿಗಳ್ ಮಣಿಮಯಶ್ರೀಮನ್ಮಹಾಮಂಡಪಾಂ
ತರಸಿಂಹಾಸನಕೋಟಿಯೊಳ್ ವಿಭವದಿಂ ಬಂದಿರ್ದಪರ್ ಭೂಭುಜರ್ ‖ ೭೭

ವ‖ ಎಂದು ಬಿನ್ನವಿಸೆ ಸಕಲಜ್ಞಂ ತನ್ನೊಳನುಮಾನಿಸಿ,

† ಕ‖ ಆನಂಶಾಂಶದೆ ಪುಟ್ಟಿರೆ
ತಾನುಂ ತನ್ನಂಶದಿಂದೆ ಭೀಷ್ಮಕಸುತೆಯುಂ ।
ಬೀನೆವದೆ ಲಕ್ಷ್ಮಿ ಪುಟ್ಟಿದ
ಳಾನಿರೆ ತತ್ಕನ್ಯೆಗಾರಿದಿರ್ಗಡ ಭೂಪರ್ ‖ ೭೮

* ಖ.—ಕಳಿವುತ್ತು.

† ಖ. ಗ.—ಆನಿರುತಿರೆ ತ್ರಿಜಗದ್ವಿಭು।ಮಾಸಿಸಿ ಪೆಱಳಲ್ಲ ಲಕ್ಷ್ಮಿ ಲಕ್ಷ್ಮೀಶನೆನಾಂ‖ ಏನಿದನಱಿಯರೆ ಮಿಕ್ಕಿನ । ಭೂನಾಥರ್ ಬಱಿದೆ ಬಯಸಲೇಂ ರುಕ್ಮಿಣಿಯಂ‖

ವ|| ಅಂತುಮಲ್ಲದೆಯಾಧೂರ್ತನನ್ನನೆ ಕುಱಿತು * ರಾಜ್ಯಾರ್ಹರಲ್ಲದವರ್ ಬರವೇಡ ಸಿಂಹಾಸನಸ್ಥರೆ ಬರ್ಪುದೆಂದು ಸಾರಿಸಿ ಭೀಷ್ಮಕಂ ನೆರಪಿದಾದರ್ಪಿಷ್ಠದುಷ್ಟಸಭೆಯಂ ತಾರ್ಕ್ಷ್ಯಪಕ್ಷಪವನನಿಂದಲ್ಲಕಲ್ಲೋಲಮಪ್ಪಂತು ಮಾಡುವೆನಾಸಭಾಜನಂ ನೋಡೆ ದಿವಿಜರಾಜನಿಂದೆನಗೆ ರಾಜರಾಜಾಭಿಷೇಕಮಂ ಮೆಱೆಯಿಸುವೆನಲ್ಲಿಗೀಗಳ್ ಪರಿಯಿಡುವೆನೆಂದು ತನ್ನೊಳ್ ನಿಶ್ಚಯಿಸಿ,

ನೀವಿರಿಮೆಂದು ಪೇೞ್ದು ಪುರರಕ್ಷೆಗೆ ಲಾಂಗಲಿಯಂ ಸಮಸ್ತಸೇ
ನಾವಳಿಯಂ ಬರಲ್ಬೆಸಸಿ ಸೈನ್ಯ ಬಲಾಹಕ ಮೇಘಪುಷ್ಪ ಸು ।
ಗ್ರೀವಹಯಂಗಳಿಂದೆಸೆವ ದಾರುಕಚೋದಿತಮಪ್ಪ ತೇರನಿಂ
ದೀವರನಾಭನೇಱಿ ತಳರ್ದಂ ಮಧುರಾಪುರದಿಂದಧೋಕ್ಷಜಂ ॥ ೭೯

ವ|| ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ಯೆ,

ಇದು ಚಿತ್ರಂ ತೇನತೇನಂ ನೆಗೆದುದು ಬಹುವರ್ಣಾಂಬುದಾನೀಕಮಾಕಾ
ಶದೊಳಂಬಂತಾತ್ಮಪಕ್ಷಪ್ರಬಳಶಬಳಿಮಚ್ಛಾಯೆ ಚೆಲ್ವಾಗೆ ಸಂರಂ ।
ಭದೆ ಬಂದಂ ಪಕ್ಷಿರಾಜಂಪ್ಲುತ † ಭರಮರುದುದ್ಧಾಬ್ಧಿವೀಚೀಸಮಾಜಂ
ಛದನಚ್ಛನ್ನಾರ್ಕತೇಜಂ ವಿಜಿತದಿವಿಜರಾಜಂ ಸುಪರ್ಣೀತನೂಜಂ॥೮೦

ವ|| ಅಂತು ಬಂದು ವಿನಯವಿನಮಿತಮೂರ್ಧನುಂ ಬದ್ಧಾಂಜಲಿಯುಮಾಗಿ ಮುಂದೆ ನಿಂದಿರ್ದ ದಂದಶೂಕಪ್ರಮಾಥಿಯಂ ಯಥೋಚಿತಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ ದೇವಕೀನಂದನಂ ಸ್ಯಂದನಮಂ ಕಿಱಿದುನಡೆಯಿಸೆ ಕೆಲಗೆಲದೊಳಂಬರಗತಿಯಿಂ ಬರುತ್ತುಂ ಪನ್ನಗಾರಾತಿ ತನ್ನ ಮನದೊಳ್ ಬಗೆದು ನೋಡಿ,

ವಾಹನಮುಂಟು ದಿವ್ಯರಥಮಾಂ ನೆರಮಾಹವಕೇಳಿಗೆಂಬೊಡಿ
ಲ್ಲಾಹವಮೆನ್ನನೇಕೆ ಬರವೇೞ್ದನೆನಲ್ ತಿಳಿದೆಂ ಸ್ವಚಿಹ್ನಮಂ ।

---

* ಕ.—ಕೂರ್ತು.   † ಕ. ಗ.—ಕೃತ.

ದ್ರೋಹಿಜನಕ್ಕೆ ತೋಱಿ ಮಱಸಿವೆಂದದಿಸಿವಿಭು ಮರ್ತ್ಯನೆಂಬುದಂ
ಮೋಹಿಸುತಿರ್ದದೊಂದೆ ಪದದೊಳ್ ಮಱಸಿ ಸಹಜಪ್ರಭಾವಮಂ ॥ ೮೧

ವ॥ ಎಂದು,

ವಿನಮಿತಗಾತ್ರಂ ಕೃಷ್ಣನ
ಮನಮಱಿದಾದ್ರೋಹಿಸಭೆಗೆ ನಿಜಪಕ್ಷಸಮೀ |
ರನನಿನಿಸೊದವಿಸೆ ಸಿಂಹಾ
ಸನದಿಂ ತಲೆಯೂಱಿ ಕೆಡೆದರತಿಬಲಭೂಪರ್ ॥ ೮೨

ಮಕುಟಂಗಳನವನಿಯೊಳ್ ತೂ
ಱಿ ಕೆಡೆದ ತೆಱನಚ್ಯುತಾಂಘ್ರಿಗಳ್ಗೆ ವಿನತಿಯುಮಂ |
ಪ್ರಕಟಿಪ ತೆಱನಾದನಿತಱೊ
ಳಕುಟಿಲಮನರಾದರಹಿತರೊಂದೆ ಮುಹೂರ್ತಂ ॥ ೮೩

ವ॥ ಆಗಳವರೆಂತಾನುಂ ಸಂತೈಸಿ ಪಮುಳಿಸಿ ಮಗುೞ್ದೆ ಕುಳ್ಳಿರೆ ಮಗಧಪತಿ ಜರಾಸಂಧಂ ಶಿಶುಪಾಲ ಸಾಲ್ವ ದಂತವಕ್ರಾದಿಗಳ್ ಮೊಗಮಂ ನೋಡಿ,

ಕುಳಗಿರಿಯುಂ ತೆರಳ್ಚಲರಿವಲ್ತು ತೆರಳ್ಚಲಶಕ್ಯಮುಮ್ಮನೆಂ
ಬಳವಿನ ನಮ್ಮುಮ್ಮಮಂ ಕೆಡಿಪಿದತ್ತಿದು ತಾರ್ಕ್ಷ್ಯನ ಪಕ್ಷಸಂಭವಾ |
ನಿಳನಱಿದೆಂ ಖಗೇಂದ್ರನೊಡವೆಂದಪನಾದೊಡೆ ದೇವಕೀಸುತಂ
ಜಳಶಯನಾವತಾರತನುವೆಂಬುದು ನಿಶ್ಚಯಮಾಯ್ತು ನಮ್ಮೊಳಂ ॥ ೮೪

ಸುರರನದಟಳಿದು ವೇದವ
ನುರವಣೆಯಿಂದುಯ್ದು ಶರಧಿಯುಮಂ ಪೊಕ್ಕ ತಮಾ |
ಸುರನಂ ಮತ್ಸ್ಯಾಕೃತಿಯಿಂ
ದೆರೆಗೊಂಡಾವಿಷ್ಣು ವೀತನೆಂಬುದನಱಿದೆಂ ॥ ೮೫

* ಕ, ಐ ಗ — ವಿನತಾಪುತ್ರಂ

ಧರಿಯಿಸಿ ಮಂದರಮಂ ಕೂ
ರ್ಮರೂಪದಿಂ ಜಲಧಿಮಥನದೊಳ್ ಪುಟ್ಟಿದುವಂ ।
ಸುರರ್ಗಿತ್ತಾವಸ್ತುಗಳೊಳ್
ಸಿರಿಯಂ ಕೌಸ್ತುಭಮನಾಂತನೀತನೆ ದಿಟದಿಂ ॥ ೮೬

ಬಂದಳಿನಿ ಕಮಳ ಮುಕುಳದೊ
ಳೊಂದಿದ ತೆಱನಾಗೆ ಕೋಡೊಳೆತ್ತಿದ ನೆಲನಂ ।
ತಂದು ಹಿರಣ್ಯಾಕ್ಷನುಮಂ
ಕೊಂದಾದಿವರಾಹನೀತನಪ್ಪುದಮೋಘಂ ॥ ೮೭

ಕರಕಮಳನಾಳಮೆನೆ ನಿಜ
ಕರದೊಳ್ ಕರುಳಿರೆ ನೃಸಿಂಹರೂಪದಿನಂದಾ ।
ದೊರೆಯ ಹಿರಣ್ಯಕಶಿಪುವಿನ
ಕರುಳಂ ತೆಗೆದಾತನೀತನಾಗಲೆವೇೞ್ಕುಂ ॥ ೮೮

ಧರೆಯಂ ವಾಮನರೂಪದಿ
ನೆರೆದು ಬೞಿಕ್ಕಂ ತ್ರಿವಿಕ್ರಮವ್ಯಾಜದಿನು ।
ರ್ವರೆಯುಂ ಕೊಂಡು ಬಲೀಂದ್ರನ
ನುರುಳ್ಚಿ ಕಟ್ಟಿದ ಮುಕುಂದನೇಂ ಕೇವಲಮೋ ॥ ೮೯

ಕಡಿದು ಸಹಸ್ರಾರ್ಜುನಭುಜ
ದಡವಿಯನೆಡೆಯುಡುಗದೇಕವಿಂಶತಿವಾರಂ ।
ಪೊಡವಿಯೊಳುಳ್ಳವನಿಪರಂ
ಕಡಿದೊಟ್ಟಿದ ಪರಶುರಾಮ ಗಿರಿಧರನಱಿದಂ ॥ ೯೦

ಶಿಶರಹತಿಯಿಂ ಮಕುಟೋಜ್ಜ್ವಲ
ಶಿರಂಗಳುಚ್ಚಳಿಸೆ ವಿಳಯರವಿಗಳ್ ಪಲವಂ ।
ಬರದೊಳ್ ನೆಗೆದಂತಿರೆ ದಶ
ಶಿರನಂ ಮರ್ದಿಸಿದ ರಾಮನಕ್ಕುಂ ಕೃಷ್ಣಂ ॥ ೯೧

ವ॥ ಎನೆ ಜರಾಸಂಧನಂ ಸಾಲ್ವಂ ನಿರೀಕ್ಷಿಸಿ,

ಜಗಮೇಕಾರ್ಣವಮಾಗಲೊರ್ವನುಱಿದಾನಾರಾಯಣಂ ತನ್ನ ಕ
ರ್ಣಗುಹಾಸಂಭವಕೈಟಭಾಸುರಮಧುಕ್ರವ್ಯಾದರಂ ಮರ್ದಿಸಲ್ ।
ನೆಗಟ್ದಾ ದೈತ್ಯರುದಗ್ರವಿಗ್ರಹದ ಮೇದೋರಾಶಿಯಿಂ ಭೂಮಿಯಾ
ಗಿಗಡಂ ಮೇದಿನಿಯಾದುದೇಂ ಪೊಗಟ್ದಪೆಂ ಸಾಮರ್ಥ್ಯಮಂ ಶಾರ್ಙ್ಗಿಯಾ॥

ಮನುಜರ್ ಚಿಂತಿಸಿ ನೋಡೆ ನೋಡೆ ದಿವಿಜರ್ ಬನ್ನೀಯೆ ಬೆನ್ನೀಯೆ ಕೂ
ರ್ಮ್ಮನಿದೇನೇನೆನೆ * ಮರ್ತ್ಯಲೋಕಸುರಲೋಕವ್ಯಾಳಲೋಕಂ
ಗಳಂ † ।
ಮುನಿದೀಱಿಕ್ಕೊಂಡ ನಿಶಾಟನಂ ಕೃತಯುಗಪ್ರಾರಂಭದೊಳ್ ಕೊಂದನೀ
ತನೆ ನೋಡಗ್ಗದ ಕಾಲನೇಮಿಯನದೇಂ ದೈತ್ಯಾರಿ ಸಾಮಾನ್ಯನೇ ॥ ೯೩

ವ॥ ಎಂಬುದುಂ ಸಾಲ್ವಲ ಸಿನ್ನ ನುಡಿ ಸಾಲ್ವುದೆಂದು ದಂತ
ವಕ್ರಂ ಜರಾಸಂಧಂಗಭಿಮುಖನಾಗಿ,

ನೆನೆದಾತಂ ನೆನೆಯಂ ಭವಾದಿಸುಖಮಂ ತನ್ನಂದಮಂ ಕಂಡ ಮ
ರ್ತ್ಯನಣಂ ಕಾಣನವಿದ್ಯೆಯಂ ನಿಜಪಯಸ್ಸಂಸೇವೆಯಂ ಮಾಡಿದಂ ।
ಜನನೀಸ್ತನ್ಯದ ಸೇವೆಯೊಳ್ ತೊಡರನೆಂಬಾಜಾಹ್ನವೀಸಿಂಧುವೀ
ತನಕಾಲ್ಗರ್ಚಿನ ನೀರೆನಲ್ ಹರಿಯ ಪೆಂಪಂ ನೀನದೇಂ ಬಣ್ಣಿಪೈ ॥ ೯೪

ಮುಂಗರ್ವೋದ್ಧತರಂ ಹಿರಣ್ಯಕಹಿರಣ್ಯಾಕ್ಷಾದಿದೈತ್ಯೇಂದ್ರರಂ
ತಾಂ ಗೆಲ್ದಾ ದಶಕಂಠವೈರಿಗಿತರರ್ ಮಾಱಾಂಪರಾರಾನೆದಿಂ ।
ಬಂಗಾಡಾವರಿದೆಂಬವೊಲ್ ‡ ಪೊಸೆದು ಮುಕ್ಕಲ್ಸಾಲನೇ ಶಾರ್ಙ್ಗನ
ಮ್ತಂ ಗಂಡಾಳ್ತನಮೇವುದಾಶ್ರಯಿಸುವಂ ಶ್ರೀಪಾದಮಂ ಕೃಷ್ಣನಾ ॥ ೯೫

ವ॥ ಎನೆ ತದನಂತರಂ ಮಗಧನರಪಾಲನಂ ಶಿಶುಪಾಲನಾಲೋಕ
ನಂಗೆಯ್ದು,

* ಕ. ಖ ಗ —ಬೊಮ್ಮನಿದೇನೇನೆನೆ † ಕ ಖ. ಗ.—ಲೋಕಂ ನಾಗ ಲೋಕಂಗಳಂ ‡ ಕ —ವಾಱಾಂಪರರಾರಾನೆದಿಂ ಬಂಗಂಡಾವಳಿಯೆಂಬವೊಲ್.

ಕತೆಯಂತಿರ್ಕೆವು ನಿನ್ನಿನಿಂದಿನ ಮಹಾಸಂಗ್ರಾಮದೊಳ್ ಕಾಣೆವೇ
ದಿತಿಜಾರಾತಿಯ ಬಾಹುಸಾಹಸದಗುರ್ವಂ ತ್ರಿಂಶದಕ್ಷೌಹಿಣೀ ।
ಪೃತನಾಸಂಯುತನೆತ್ತಿ ಮುಂ ಮಧುರೆಯಂ ಮತ್ತಂತೆ ಗೋಮಂತಪ
ರ್ವತಮಂ ಮುತ್ತಿ ತದೀಯಬಾಣಶಿಖಿಯಿಂದಾಸೈನ್ಯಮೆತ್ತಾ ಡದೇ ॥ ೯೬

ಅರವಿಂದೋದರನೀಜಗತ್ರಯಮನಿಚ್ಛಾಮಾತ್ರದಿಂ ಸೃಷ್ಟಿಸಲ್
ಪೊರೆಯಲ್ ಸಂಹರಿಸಲ್ ಸಮರ್ಥನದನಾನುಂ ಬಲ್ಲೆನಂತಾಮೊಡಂ ।
ಪುರುಷಂ ವೈರಮನೆತ್ತಿ ಕೊಂಡ ಬಳಿಕಂ ಭೂಪಾಲ ಕೇಳಾಗದೇ
ದೊರೆಯಂಗಃದೊಡಮಂಜಲಂತೆ ನೆಗಳ್ದಂ ತದ್ದುರ್ಯಶೋಡಿಂಡಿಮಂ ॥೯೭

ವ॥ ಎನೆ ಮತ್ತಂತೆ ಸಹಜವಿರೋಧಾನುಬಂಧದಿಂ ಜರಾಸಂಧಾದಿ ದುಷ್ಟಚತುಷ್ಟಯರ್ ಚಲಮನೊಳಕೊಂಡಿರ್ದರ್ ಅನ್ನೆಗಮತ್ತಲ್ ಪುರುಷೋತ್ತಮಂ ಕುಂಡಿನೀಪುರಕ್ಕನತಿದೂರಮೆನಿಪ ವಿದರ್ಭರಾಜಧಾನಿಯಂ ಮುಟ್ಟಿಪರ್ವದುಮಿದಿರ್ಗೊಂಡು ಪೋಗಿ ನಿಜನಿವಾಸದೊಳುತ್ತುಂಗಸಿಂಹಾಸನದ ಮೇಲೆ ಕುಳ್ಳಿರಿಸಿ ವಿದರ್ಭನತಿಹರ್ಷಸಂದರ್ಭನಾಗಿ ದೇವ ನೀವೀಸ್ವಯಂವರಕ್ಕೆ ಪೋದಲ್ಲಿ ಮೂರ್ಧಾಭಿಷಿಕ್ತನಲ್ಲೆಂದು ನಿಮಗೆ ಸಿಂಹಾಸನಸ್ಥರ ಸಮೀಪದೊಳ್ ನಿಜಾಸನಮನಿಕ್ಕುವಂತಾಗದಂತಾಂ ನಿಮಗೆನ್ನ ರಾಜ್ಯಮಂ ಕೊಟ್ಟಭಿಷೇಕಮಂ ಮಾಡಿದಪೆನೆಂದು ನುಡಿದಾಗಳ್ ಉಪೇಂದ್ರನ ಮನೋಭಿಸಂಧಿಯಿಂದತ್ತಲಾಮಹೇಂದ್ರನಾ ಪ್ರಪಂಚಮಂ ತಿಳಿದು,

ರವಿಚಂದ್ರೇಂದ್ರವಿರಿಂಚಿಮುಖ್ಯಪದಮುಂ ತದ್ಭ್ರೂಲತಾಸ್ಪಂದಸಂ
ಭವಮಾವಿಷ್ಣುಗೆ ವಿಶ್ವಲೋಕವಿಭುಗೊರ್ವಂ ಭೂಪನಾತ್ಮೀಯಭೂ
ಲವಮಂ ಕೊಟ್ಟಭಿಷೇಕಮಂ ನೆಗಳ್ವೆನೆಂದಂ ಮರ್ತ್ಯವೇಷಂಗೆ ಬಾಂ
ಧವಮಂ ತೋಱಲೆ ಬಲ್ಲನೇಕಱಿಗುಮಜ್ಞಂ ವಿಷ್ಣುಸಾಮರ್ಥ್ಯಮಂ ॥೯೮

ಅವತಾರೋಚಿತಮಾಗೆ ಕಂಸಮಥನಂಗೀರಾಜರಾಜಾಭಿಷೇ
ಕಮನಾಂ ಮಾಡುವೆನೇಕರಾಜ್ಯಪದದೊಳ್ ತಾನಿರ್ಕೆ ಮೇಣ್ಕೈತ್ರಪಾಂ ।

* ಖ. ಗ.—ಕತೆಯಂತಿರ್ಕದು

ಡವೆರಾಜ್ಯಂ ನಗಜ್ವಂತು ತನ್ನ ಪದವೆಂ ಪ್ರಿಜ್ಞನ್ನವೆಂ ಮಾಡಿ ಪಾ
ರ್ಥಿವಸಾಧಾರಣಮಾಗಿ ವರ್ತಿಸುಗಮಂ ತನ್ನಿಚ್ಛಿ ಸರ್ವೇಶನಾ ॥ ೯೯

ಅನಿಯತಪದಂ ಸ್ವಯಂಪ್ರಭು
ವಿನ ಮಾರ್ಗಮಂ ವಿಚಾರಿಸುತ್ತಿರಲೇಕಿಂ ।
ವನರುಹನಾಭಂಗಭಿಷೇ
ಚನೋತ್ಸವಂ ನಗಚ್ಕೆ ರಿಪುನೃಪರ್ ನೋೞ್ಪೆನೆಗಂ ॥ ೧೦೦

ನೆರೆದ ಜರಾಸಂಧಾದ್ಯರ
ಪರಿಷದ್ಭವನಕ್ಕೆ ಪೋಗು ಚಿತ್ರಾಂಗದ ನೀಂ ।
ಬರವೇೞಖಿಳಜಗತ್ಪ್ರಭು
ಹರಿಯ ಮಹೋತ್ಸವಮನೀಕ್ಷಿಸಲ್ಕಾನೃಪರಂ ॥ ೧೦೧

ವ॥ ಎಂದು ಪುರಂದರಂ ಬೆಸಸೆ ಗಂಧರ್ವರಾಜನೆನಿಸಿದ ಚಿತ್ರಾಂಗದಂ ಚಿತ್ರಮಣಿಭೂಷಣಂಗಳ್ ಚಿತ್ರಪಟಮಂ ಕೆದಱಿದಂತೆ ಪಸರಿಸೆ ನಭೋಂತರದಿಂದಾಸಭಾಂತರಕ್ಕವತರಿಸಿ,

ಸುರವರನಿಂದ್ರನುಪೇಂದ್ರಂ
ಗೆ ರಾಜರಾಜಾಭಿಷೇಕಮಂ ಮಾಡಿದಪಂ ।
ನರನಾಥರ್ ಬಂದು ವಿದ
ರ್ಭರಾಜಪುರದಲ್ಲಿ ನೋೞ್ಕೆ ತನ್ಮಂಗಳಮಂ ॥ ೧೦೨

ವನಜಾಕ್ಷಮಹೋತ್ಸವದ
ರ್ಶನದಿಂದಕ್ಕುಂ ಕುಟುಂಬಗೋತ್ರಪುನರ್ದ ।
ರ್ಶನಮಿಲ್ಲದೊಡಿಂದೆ ಸುದ
ರ್ಶನದಿಂ ನಿಮಗೂರ್ಧ್ವಲೋಕದರ್ಶನಮಕ್ಕುಂ ॥ ೧೦೩

ಅಗಧರನ ಪದಾಬ್ಜಕ್ಕೆಱ
ಗುಗೆ ನೃಪರೆಱಗದೊಡೆ ರಾಜ್ಯಗುಣಮುಕ್ತಾಪತ ।

* ಖ—ವರ್ತಿಸುದುಂ

ತ್ರಿಗಳೞಗುಗುವೆುೞಗೆ ಪತ
ತ್ರಿಗಳೇ * ನಿಮ್ಮಯ ಕಳೇವರಪ್ರತತಿಗಳೊಳ್ ॥ ೧೦೪

ಪಾದಾಶ್ರಿತರಾದರ ತಲೆ
ಗಾದುದು ಪಗೆಗೊಂಡ ನೃಪರ ತಲೆಗಾದುದು † ಕಾ ।
ವೋದಕಿ ನೀವೆುದಱಿಂ ಹರಿ
ಪಾದಾಶ್ರಿತರಾಗಿಪೊಲ್ಲದೊಡೆ ‡ ಪಗೆಗೊಳ್ಳಿಂ ॥ ೧೦೫

ನಂದಕಧಾರಾಜಲಮದು
ಬಂದು ಶರಣ್ಬೊಕ್ಕ ನೃಪತಿಗಮೃತಂ ಮುಳಿಸಿಂ ।
ನಿಂದ ವಿರೋಧಿಗೆ ವಿಷಮದ
ಱಿಂದೆ ಜಲಕ್ಕಾದು ¶ ವಮೃತವಿಷನಾಮಂಗಳ್ ॥ ೧೦೬

ಮೌರವರವೆಮದು ಮೃದು ಕಂ
ಠೀರವರವವಪ್ಪವೆನಿಪ ಹರಿಶಂಖಮೆಹಾ ।
ಭೈರವರವ ಮೆುದು ಕಿವಿವುಗೆ
ಘೋರವರವವೂದವೆ ರಿಪುಬಲಂ ಕಡೆದಿರದೇ ॥ ೧೦೭

ವ॥ ಎಂದು ನುಡಿದ ವಕ್ರಭಣಿತಿಗಳಾಶ್ಚರ್ಯಮಂ ಪುಟ್ಟಿಸೆ, ತಲೆಯಂ ತೂಗಿ ಬೆರಲ್ಗಳಂ ವಿಡಿದು ದೈತ್ಯಾರಾತಿಸಾಮರ್ಥ್ಯಮಂ ಪಲರುಂ ಭೂಪರುಮಾಲಿಪಂತು ನುಡಿದಿಂಪ್ರಾದೇಶಮಂ ತತ್ಸಭಾ । ಮಲಯುಂ ಭಾವಿಸಿ ನೋೞ್ಪನಂ ಮಗಧಚೇತೋಭಂಗದಿಂ ಬೋಲಕುಂ ಡಲಚಂಚತ್ಕಟಕಾಂಗದಂ ನಗೆದನಾಕಾಶಕ್ಕೆ ಚಿತ್ರಾಂಗದಂ ॥ ೧೦೮

ವ॥ ಆಗಳ್ ॥

ನಿಂದರರಾತಿಗಳ್ ಮಗಧನುಂ ಶಿಶುಪಾಲಕ ಸಾಲ್ವ ಸಾತ್ವತೀ §
ನಂದನ ದಂತವಕ್ರರುಱುದಗ್ಗದ ಭೂಭುಜರೆಲ್ಲರೆದ್ದರಾ + ।

* ಕ.—ಪತತ್ರಿಗಳೀ † ಗ.—ತಲೆಗೊಂಡುದು ‡ ಖ.—ವಲ್ಲದೊಡೆ.
¶ ಕ ಗ —ಜಗಕ್ಕಾದು.
§ ಕ ಖ.—ಸಾತ್ವಕೀ ಗ.—ಸಾತ್ಯಕೀ. + ಖ. ಗ.—ಭೂಭುಜರಿದ್ದರಾ

ನಂದದೆ ರತ್ನಹಾರಮಕುಟಾಂಗದಕಂಕಣಕುಂಡಲಂಗಳುಂ
ದೊಂದನವುಂಕಿ ಮಾಜಿರಿಸಿದೀಡೆ ಝುಣಜ್ಝಣಿತಪ್ರಣಾದಮಂ ॥೧೦೯

ವ॥ ಅಂತಾಸ್ವಯಂವರಶಾಲೆಯಿಂ ತಳರ್ದನೇಕದೇಶದ್ವೀಪಾಧಿಪ ಭೂಪಾಲರ್ ಬಂದು ವಿದರ್ಭನಗರಮಂ ಪೊಕ್ಕು ದೇವಕೀನಂದನನಿರ್ದಾ ರಾಜಮಂದಿರಾಂಗಣದೊಳ್ ದೂರೋತ್ಸಾರಿತರಾಜಚಿಹ್ನರಾಗಿ ನೆರೆದು ನಿಲ್ವುದು ಮಾಪ್ರಸ್ತಾವದೊಳ್,

ಅಮಳಂ ಹಂಸಾನ್ವಿತಂ ಬಾಂದೊರೆಯ ಪುಳಿನವೆಲ್ತುರ್ಪವೋಲ್ ದೇವಕಾಂತಾ
ಚಮರೀಜಾಂದೋಳಲೀಲಂ ಗಗನತಳದಿಸಿಂಪ್ರಾಜ್ಞಯಿಂದಂಮುಪೇಂದ್ರಂ।
ಗೆ ಮಹಾಸಿಂಹಾಸನಂ ಬಂದುದು ದಿವಿಜಜಯಧ್ವಾನಮುಂ ಕಿನ್ನರೀಗೇ
ಯಮುಮಸ್ವಪ್ನಾನಕಧ್ವಾನಮುಮೆಸೆಯೆ ವಿದರ್ಭಾಧಿಪಂ ರಾಗಿಪನ್ನಂ॥

ವ॥ ಆಮಹಾಸಿಂಹಪೀಠದ ಮುಂದೆ

ಸ್ಫುರಿತಸ್ವರ್ಣವಿಚಿತ್ರರತ್ನಮಯಶಾಖಾಪಲ್ಲವೋತ್ಫುಲ್ಲಷ
ಟ್ಚರಣಾಲಂಕೃತಮೆಂಬ ಕಲ್ಪತರುವೃಂದಾರಾಮವೀಬಂದುದು ।
ರ್ವರೆಗೆಂಬಂತೆ ವಿಚಿತ್ರವಸ್ತುರಚನಾಕಿವಿಸ್ಮಾರಿತಂ ಬಂದುದಂ
ಬರದಿಂ ಭೋಂಕನೆ ವಿಶ್ವಕರ್ಮರಚಿತಂ ದಿವ್ಯಂ ಮಹಾಮಂಟಪಂ॥ ೧೧೦

ವ॥ ಆಸಮಯದೊಳ್

ಮಂದರಮಥನಂಗಾದಪು
ದಿಂದೇ ರಾಜ್ಯಾಭಿಷೇಕಮೆಂದಳಕೇಶಂ ।
ಮುಂದಱಿದಟ್ಟಿದೊಡಂದೆ
ಬ್ತಂದುವು ವರಕನಕಕಳಶಮುಂ ನವನಿಧಿಯುಂ ॥ ೧೧೧

ವ ॥ ಆಗಳ್ ॥

ಸುರಗಿರಿಕೂಟಕುಂಜವಿವಿಧೌಷಧಿಗಳ್ ಸುರಸಿಂಧುವಾರಿನಿ
ರ್ಭರನವರತ್ನಕುಂಭತತಿಗಳ್ ಸುರನಂದನವಾಮಲೂರುಬಂ ।
ಧುರವರಮೃತ್ತಿಕಾತತಿಗಳುಂ ಸುರರಾಜನದೊಂದುಪೇಕ್ಷೆಯಿಂ
ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ॥

ಧರೆಯೆಲ್ಲಂ ಸಾನುರಾಗಂ ಘನಘುಸೃಣಪಯಸ್ಸಿಕ್ತಿಯಿಂ ದಿಕ್ಸಮೂಹಾಂ
ತರಮೆಲ್ಲಂ ಸುಪ್ರಮೋದಧ್ವನಿ ವಿವಿಧಮಹಾತೂರ್ಯನಿರ್ಘೋಷದಿಂದಂ ।
ಬರಮೆಲ್ಲಂ ಸಾಟ್ಟಹಾಸಂ ದುಗುಲದ ಗುಡಿಯಿಂ ಭೂಪರೆಲ್ಲಂ ಸಹರ್ಷರ್
ಪರಮಾಚಿತ್ಯಂಗಳಿಂದೇಂ ಪೊಗಟ್ಟೆಸನುಪಮಂ ತದ್ವಿಭೂತಿಪ್ರಪಂಚಂ ॥

ವ॥ ಅನ್ನೆಗಂ ಶುಭಮುಹೂರ್ತದೊಳ್ ಸಮಸ್ತಮಂಗಳಾಶ್ರಯಂ ಪುರುಷೋತ್ತಮನನೇಕರಾಜಲೋಕರತ್ನಕೋಟೀರಂಗಳ * ಪಾದಪೀಠಂಗಳಾಗೆ ಮಹೋತ್ತುಂಗಸಿಂಹಾಸನದ ಮೇಲೆ ಕುಳ್ಳಿರ್ದುದುಂ

ಪ್ರಭೆಯಿಂ ನಯನಭ್ರಮೆಯಾ
ಸಭೆಗಾಗಿರೆ ಬಂದು ತಾನೆ ಕೃಷ್ಣಂಗಮರ ।
ಪ್ರಭು ಪೂರ್ಣಕಳಶಮಂ ಪಿಡಿ
ದಭಿಷೇಕಂಗೆಯ್ದು ಪರಸಿ ಪೋದಂ ಮುದದಿಂ ॥ ೧೧೨

ಪೊಗಳುತ್ತಿರ್ಪಂದು ವಂದಿವ್ರಜದುಲಿ ಪಟಹಧ್ವಾನಮಂ ಮೀಱಿ ಬೆಳ್ಪಿ
ರ್ದ್ಧಿಗೆ ಸೂಸುತ್ತಿರ್ಪ ಚೆಂಬೊಂಗಳ ರುಚಿ ಪಟವಾಸಸ್ಫುರತ್ಪಾಂಸುವೆಂಕೈ।
ಮಿಗೆ ನಾನಾರಾಜಚಿಹ್ನಾವಳಿ ದೊರೆಯೆನೆ ಸಾಮ್ರಾಜ್ಯಲಕ್ಷ್ಮೀವಿಭೂಷಾ
ಳಿಗಳಂ ಪೋಲ್ತೊಪ್ಪೆ ಕೃಷ್ಣಂಗೆಸೆದುದಸದಳಂ † ರಾಜರಾಜಾಭಿಷೇಕಂ॥

॥ ಗದ್ಯ ॥ ಇದು ಸಮಸ್ತ ಕಮಲ ಭವಾಂಡ ಮೂಲಾಘಟಿತ ಘಟಿತಾರಘಟ್ಟ
ಘಟನಾ ಸ್ವತಂತ್ರ ನಿಜಸ್ವರೂಪ ನಿರೂಪಣ ಚಕಿತ ಸಕಲಾಮ್ನಾಯ ತಂತ್ರ
ಲಕ್ಷ್ಮೀಕಾಂತ ಶ್ರೀ ಪಾದ ಭಕ್ತಿಯುಕ್ತ ಸುಕವೀಂದ್ರರುದ್ರ ಪ್ರಣೀತ
ಶ್ರೀ ಜಗನ್ನಾಥವಿಜಯ ಮಹಾ ಪ್ರಬಂಧದೊಳ್ ಪರಶುರಾಮದರ್ಶನ
ಗೋಮಂತದುರ್ಗಾರೋಹಣ ತದೀಯದುರ್ಗದಾಹೋಪಶಮನ
ವಿಪಕ್ಷಾಕ್ಷೌಹಿಣೀಚತುರ್ವಿಂಶತಿನಾಶನ ಜರಾಸಂಧಪ್ರಮುಖ
ಮಕುಟಭಂಗ ಸೃಗಾಲವಧ ದಿವ್ಯರಥೋಪಲಬ್ಧಿ ದರ್ಪಿಷ್ಠ
ನೃಪಸಭೋಚ್ಚಾಟನ ರಾಜರಾಜಾಭಿಷೇಕವರ್ಣನಂ

ಅಷ್ಟಮಾಶ್ವಾಸಂ

* ಕ. ಗ.—ರತ್ನಕಿರೀಟಕೋಟೀರಂಗಳ. † ಖ —ಕೃಷ್ಣಂಗೆಸೆದುದು ಸದಳಂ.

# ನವಮಾಶ್ವಾಸಂ.

ಶ್ರೀವರನ ಸಿಂಹಪೀಠಮ
ನಾವರಿಸಿದುವೆಱಪ ನೃಪರ ಮಣಿಮಕುಟಮಯೂ ।
ಖಾವಳಿಗಳುದಯಶೈಲಮ
ನಾವರಿಸಿದ ತರುಣತರಣಿಕಿರಣಾವಳಿವೊಲ್ ॥ ೧

ವಿಪುಳಭುಜರ್ ಸಿಂಹಳ ಡಹ
ಳ ಪಾಂಡ್ಯ ಪಲ್ಲವ ಕಳಿಂಗ ಖಸರೆಂಬಱುವರ್ * ।
ನೃಪತಿಗಳಾಱುಂ ಧವಳಾ
ತಪತ್ರಮಂ ತಳ್ತು ಕಂಸವೈರಿಗೆ ಪಿಡಿದರ್ ॥ ೨

ಎರಡುಂಪಕ್ಕ ದೊಳಿರ್ದಾ
ದರದಿಂ † ಪಾಂಚಾಲ ಚೋಳರೆಂಬ ಜಪಸಿತಾ ।
ಮರರಿರ್ವರಿಕ್ಕಿದರ್ ತಾ
ಮರಸದಳಾಕ್ಷಂಗೆ ಧವಳಚಾಮರಯುಗಮಂ ॥ ೩

ಚಾರುಮಣಿವೇತ್ರಲತೆವಿಡಿ
ದಾರಾವಣದರ್ಪದಳನನೋಲಗದೊಳ್ ಪಾ ।
ಹಾರಿಕರಾಗಿರ್ದರ್ ಡೊ
ಕ್ಕರಂ ಹಂವೀರನೆಂಬ ಭೂಭುಜರಿರ್ವರ್ ॥ ೪

ಮಕುಟಧರರ್ ಪೞಯನೃಪಾ
ಲಕಮಾಳವಮಹಿಪರೆಂಬವೀರರ್ ತಾಂಬೂ ।
ಲಕರಂಡಧರರ್ ಶ್ರೀಪಾ
ದುಕಧರರಾಗಿರ್ದರಚ್ಯುತಂಗೋಲಗದೊಳ್ ॥ ೫

---

* ಕ —ಸಿಂಹಳಪಾಂಡ್ಯಪಲ್ಲವ ಕಳಿಂಗಬರ್ಬರಖಸರೆಂಬಱುವರ್.
† ಕ.ಗ. —ಪಕ್ಕದೊಳಿರ್ದಾದರದಿಂ.

ವ॥ ಅಂತನೇಕ ಭೂಕಾಂತರೋರೊರ್ವರೊಂದೊಂದುತೆಱದ ಸದ್ಭಾವಮಂ ಮೆಱೆಯೆ ವಾಸವವಿಲಾಸದೋಲಗದೊಳಿರ್ದ ಜನಾರ್ದನಂ ತನ್ನಭಿಮುಖದೊಳಿರ್ದ ಭೀಷ್ಮಕನ ಮೊಗಮಂ ನೋಡಿ,

ಭವದೀಯಾತ್ಮಜೆಗೇಂ ಸ್ವಯಂವರಮೆ ಭೂಪರ್ ಬಂದುದುಂ ತನ್ನಿಮಿ
ತ್ತವೆ ಯುಕ್ತಂ ನಿಮಗಜ್ಞರೆತ್ತಲಱಿವರ್ ಮೇಲಪ್ಪುದಂ ದೈವಯೋ
ಗವನಾಮಾತಿನೊಳೇನೊ ನಿಮ್ಮ ಮನದುತ್ಸಾಹಕ್ಕಣಂ ತಕ್ಕುದಾ
ಸವಕಟ್ಟಾಬಿಯುಮಾವಿಭೂತಿ ಸಧನರ್ಗೇಗೆಯ್ದೊಡಂ ತೀಱದೇ ॥ ೬

ವ॥ ಎನೆ ಕೇಳ್ದು,

ಭಯದೂರರನೀನೃಪರಂ
ಸ್ವಯಂವರಕ್ಕಾರೊ ಕರೆದಱಸಮಕಟ್ಟಾ ।
ಬಿಯವಾವಿಭೂತಿಯೆಂತೆ
ನ್ನಯ ಗೇಹದೊಳಾಯ್ತು ದಿಟದಿನಾನಿದನಱಿಯೆಂ॥ ೭

ವ॥ ಎಂದು ಭೀಷ್ಮಕಂ ಪ್ರಸಿಯೆ ಬಿಸರುಹಾಕ್ಷನಾಕ್ಷೇಪಗರ್ಭನಿರ್ಭರೋಪಹಸನಸ್ಫುರದಧರಕಾಂತಿದಂತಪ್ರಭಾಶಬಲಿತಸಭಾಂತರಾಳನಿಂತೆಂದಂ;-ಆ ನಿಜಪ್ರಿಯತನೂಜೆಗೆ ನೀಂ ಸ್ವಯಂವರಮಂ ಮಾಪ್ಪೆನೆಂದು ಜಗದೊಳೆಯ್ದೆ ಸಾರಿಸಿ ನೆರಪಿದ ಕ್ಷತ್ರಿಯರ ಮೇಳಾಪಕಮುಮಂ ತನ್ಮಹೋತ್ಸವಕೆಂದು ಕಾಂಚನಪಂಚರತ್ನಮಯಂಗಳಾಗೆ ಮಾಡಿಸಿದ ಸುಧಾಧವಳಿತಂಗಳಪ್ಪುಪ್ಪರಿಗೆಗಳುಮಂ ಸಮುತ್ತುಂಗಂಗಳೆನಿಸುವ ತವಂಗಂಗಳುಮಂ ಆ ರಮ್ಯಂಗಳೆನಿಸುವ ಹರ್ಮ್ಯಂಗಳುಮಂ ಆ ಚಿತ್ರಂಗಳೆನಿಸುವ ಚಿತ್ರಶಾಲೆಗಳುಮಂ ಆ ಜಗನ್ಮಂಗಲಂಗಳೆನಿಸುವ ಮಂಡಪಂಗಳುಮಂ ನೀವದೆಂತು ಪೇೞಲಱಿವಿರಂತುಟಲ್ಲದೆಯುಂ,

ಕಲಹಂಮಾಡುವವೀಸ್ವಯಂವರಕೆ ಕೃಷ್ಣಂ ಬಂದೊಡೆಂದೀಗಳೆ
ಮ್ಮೊಳೆ ಕಾದಲ್ ತರಿಸಂದುದಂ ದಿಟಕೆ ನೀವೇಂ ಬಲ್ಲಿರೇ ನೋಡಿಮಾ * ।
ಮುಳಿಸಿಂ ಕೈದುವನಾಂತ ಪತ್ತಿಗಳನಾಪಣ್ಣಿರ್ದ ಮತ್ತದ್ವಿಪಂ
ಗಳನಾಪಲ್ಲಣಿಸಿರ್ದ ವಾಜಿಗಳನಾಪೂಡಿರ್ದ ಪ್ರೊಂದೇರ್ಗಳಂ ॥ ೮

* ಕ, ಖ, ಗ —ನೋಡಿದಂ

ವ॥ ಎಂಬುದುಂ ಭೀಷ್ಮಕಂ ದೇವರವಧಾರಿಸಿಮಿದಱ ವೃತ್ತಾಂತಮಂ ತಿಳಿದೆನೀಗಳೆಂತೆಂದೊಡೆ ಮದೀಯನಂದನಂ ರುಕ್ಮಿಯೆಂಬಂ ಸ್ವಭಾವಸುಭಗಾಕಾರದಿನಹಂಕಾರಿಯುಂ ಯೌವನೋದಯಸಂಪತ್ತಿಯಿನುನ್ಮತ್ತನುಂ * ಯುವರಾಜಪದವಿಯಿಂ ಮಹಿಮಾಸ್ಪದನುಂ ನಿಖಿಲವಿದ್ಯಾಗರ್ವದಿಂ ಖರ್ವೀಕೃತಸರ್ವಲೋಕನುಂ ಅನೇಕದಿವ್ಯಾಯುಧನಿಕಾಯದಿಂದಜಯ್ಯನುಂ ಅಪ್ರತಿಹತಭುಜಪ್ರತಾಪದಿಂದಪ್ರತಿಮನುಂ ಅವಿಕಳಮಂತ್ರಶಕ್ತಿಯಿಂ ಸ್ವತಂತ್ರನುಮಾಗಿ ತನ್ನ ತಂಗೆಯಪ್ಪ ರುಕ್ಮಿಣೀದೇವಿಗೆ ಸ್ವಯಂವರವಂ ಮಾಳ್ಪೆನೆಂದು ಜರಾಸಂಧಪ್ರಭೃತಿನರಪಾಲರಂ ಬರಿಸಿ ತನ್ನಿಮಿತ್ತಮಾಸವಕಟ್ಟಾಬಿಯಮಾವಿಭೂತಿಯುಮನಾತನೆ ಮಾಡಿಸಿದನಂತುಮಲ್ಲದೆಯುಂ,

ಮುರವಿಧ್ವಂಸಕ ಕೇಳ ಕೈದುವಿಡಿದಾಳ್ ಪಣ್ದಿರ್ದಿಭಂ ಪೂಡಿ ನಿಂ
ದ ರಥಂ ಪಲ್ಲಣಿಸಿರ್ದ ವಾಜಿ ವಿಭವಾರ್ಥಂ ತಾನೆವಂ ರುಕ್ಮಿನ।
ಚ್ಚಿರನಂತಾಕಲಿ ನಚ್ಚುವಂ ಪ್ರಬಳಬಾಹಾದಂಡಮುಂ ಜ್ಯಾರವೋ
ದ್ಧುರಕೋದಂಡಮನೂರುಪೀಡಿತವಿಶಾಲಸ್ಕಂಧವೇತಂಡಮಂ ॥ ೯

ವ॥ ಎಂದು ಕುಟಿಲಹೃದಯಂ ತನ್ನ ಮಗನ ವಿಕ್ರಾಂತಮಂ ತೋಱಿ ನುಡಿಯೆ,

ಕರಿವಿಘಟನಪಟು ಕೇಸರಿ
ಕುರಂಗಚಕ್ಷುಷ್ಯೆಯನವಜ್ಞೆಗೆಯ್ವವೊಲುಗ್ರಾ।
ಸುರಮರ್ದನನಾರುಕ್ಮಿ
ಸ್ಫುರಣೆಗೆ ನಸುನಕ್ಕು ಭೀಷ್ಮಕಂಗಿಂತೆಂದಂ ॥ ೧೦

ಜಗಮಂ ರಕ್ಷಿಸಲೆಂದು ಕೃಷ್ಣವೆಸರಿಂ ಪುಟ್ಟಿರ್ದ ನಾರಾಯಣಂ
ಬಗೆವಂದಾಂ ಭವದೀಯನಂದನೆ ಮದರ್ಥಂ ರುಕ್ಮಿಣೀನಾಮದಿಂ।
ದೊಗೆದಾಲಕ್ಷ್ಮಿಯೆನಲ್ಕೆಯಾನೆ ಬಡೆಯಂ ನಾರಾಯಣಂಗುಂಟು ಪೊ
ರ್ದುಗೆ ನೀವಾಕೆಯನೀಸ್ವಯಂವರದೊಳನ್ಯರ್ಗೀಯಲೇಂ ಬರ್ಕುಮೋ॥

* ಕ. ಗ.—ಸಂಪತ್ತಿಯಿನುನ್ನತನ.ಂ

ವ॥ ಎಂದು ಪುರುಷಸಿಂಹಂ ಸಿಂಹಪೀಠದಿಂದೆಬ್ದು ನಿಂದಿರ್ಪುದುಂ,

ಅನಿತುಂ ಗಂಧಗಜೇಂದ್ರಕೋಟಿಗನಿತುಂ ಜಾತ್ಯಶ್ವಸಂತಾನಕ
ಕ್ಕನಿತುಂ ದಿವ್ಯವರೂಥವಾಜಿಗನಿತುಂ ವಾರಾಂಗನಾಸಂಕುಲ ।
ಕ್ಕನಿತುಂ ಭಾಸುರಕೋಶರಾಜಿಗಧಿನಾಥಂ ಶ್ರೀಜಗನ್ನಾಥನಂ
ದು ನೃಪಾಲರ್ ಪನವಾಲಿಗೋಲಗಿಸಿದರ್ ತಂತಮ್ಮ ಸರ್ವಸ್ವಮಂ ॥ ೧೦

ವ॥ ಆವಸ್ತುವಾಹನಂಗಳಂ ಬೇಱಬೇಱ ನೋಡಿ ಕೈಕೊಂಡು ತಾಂ ಬೞಿಲ ದಾನಾದಿಸನ್ಮಾನಂಗಳಿಂ ಭೂನಾಥರಂ ಬೀಳ್ಕೊಳಿಸಿ ದಿವ್ಯವರೂಥಮನೇಱ ಮಧುರಾಪುರಾಭಿಮುಖನಾಗಿ,

ವಿಲುಠಚ್ಚಾಮರಸಂಕುಲಂ ನಿಜಯಶಃಕ್ಷೀರಾಬ್ಧಿಕಲ್ಲೋಲಮಂ
ಗೆಲೆ ನಾನಾತಪವಾರಣಧ್ವಜಸಮಾಜಂ ಜಂಗಮೋದ್ಯಾನಮಂ ।
ಗೆಲೆ ಸೇನೋತ್ಥಿತಸಾಂದ್ರಧೂಳಿ ವಿಜಯಶ್ರೀವಶ್ಯಚೂರ್ಣೌಘಮಂ
ಗೆಲೆ ಗೆಲ್ದಿಂದ್ರಮಹಾವಿಳಾಸಮನುಪೇಂದ್ರಂ ಬಂದನಾನಂದದಿಂ ॥ ೧೩

ವ ॥ ಅನ್ನೆಗಮತ್ತ ಶಿಶುಪಾಲ ಸಾಲ್ವದಂತವಕ್ರರುಮೆಂಬ ದೈತ್ಯಾವತಾರವೀರರೊಳ್ ಜರಾಸಂಧನಾಳೋಚನತತ್ಪರನಾಗಿ,

ಜಯಮಕ್ಕೆ ಭಂಗಮಕ್ಕಾ
ಜಿಯೊಳುಚಿತಂ ಸ್ತ್ರೀನಿಮಿತ್ತದಿಂ ನೆರೆದ ಸಭಾ ।
ಲಯದಲ್ಲಿ ಭಂಗಮಂ ಕ್ಷ
ತ್ರಿಯಸಂಘಕ್ಕಿಂತು ಮಾಡಿ ಪೋಕುಮೆ ಕೃಷ್ಣಂ ॥ ೧೪

ಅವನ ಭುಜದರ್ಪಮಂ ಕಿಡಿ
ಸುವೆನಿರ್ದಪನಲ್ತೆ ಕಾಲಯವನಂ ಯದುಪಾ ।
ರ್ಥಿವಸುಭಟಮೋಘವಿಘಟನ
ಪವನಂ ರಣರಂಗವಿಜಯಲಕ್ಷ್ಮೀಭವನಂ ॥ ೧೫

ವ॥ ಅದೆಂತೆಂದೊಡೆ,

ಯುವನಾಶ್ವಕ್ಷಮಾಪುತ್ರನಂ ಪಡೆವನಂದೋರಂತಯುಶ್ರೋರ್ಗ್ಯಭ
ಕ್ಷ್ಯದಿನಾರಾಧಿಸಿ ರುದ್ರನಿಂ ಪಡೆದನಪ್ಪಾವಕ್ರನಿಷ್ಪ್ರಾರ್ಥವುಂ ।
ಪದಪಿಂದಂ ಯುವನಂಗೆ ತತ್ಫಲಮನೀಯಲ್ ಯಾದವತ್ರಾಸಿ ಪು
ಟ್ಟಿದನಂತಾಯುವನಂಗೆ ಕಾಲಯುವನಂ ದುರ್ವಾರದೋರ್ವಿಕ್ರಮಂ ॥ ೧೬

ಕಡಲಂ ಪೀರಲುಮುರ್ವಿಯಂ ತಿಱಿಪಲುಂ ಚಂದ್ರಾರ್ಕರಂ ವಿಾಂಟಲುಂ
ಸಿಡಿಲಂ ನುಂಗಲುಮದ್ರಿಜೇಶನುರಿಗಣ್ಣಂ ಮುಚ್ಚಲುಂ ಪೋರುವಂ ।
ಪೊಡೆಸೆಂಡಾಡಲುಮಾರ್ಪ ಕಾಲಯುವನಂಗೇನಾರ್ಪನೇ ಯುದ್ಧದೊಳ್
ತೊಡರಲ್ ಚಕ್ರಿ ದಿಶಾಗಜಕ್ಕೆ ಕಳಭಂ ಕೈಯಿಕ್ಕಲೇನಾರ್ಕುಮೋ ॥ ೧೭

ದೂತರನಟ್ಟಿದೊಡೇೞಿದ
ಮಾತಂಗಕ್ಷೋಹಿಣೀತ್ರಯೋದಶನಾಥಂ ।
ಗೀತೆಱದಿಂ ತತ್ಸಮವಿ
ಖ್ಯಾತನೆ ನೀಂ ಪೋಗಿ ಪೇೞ ಕಜ್ಜಮದಕ್ಕುಂ ॥ ೧೮

ವ॥ ಎಂಬುದುಂ ಸೌಭಪುರವರಾಧೀಶ್ವರಂ ಸಾಲ್ವಲನಾ ಮುಹೂರ್ತದೊಳ್ ಪೋಗಿ ನಿಜಸಾಮರ್ಥ್ಯಯೋಗ್ಯಾತಿಥ್ಯಸಂಸ್ಕಾರದಿಂ ಸಂತುಷ್ಟನಾಗಿ ಕುಳ್ಳಿರ್ದು ತನ್ನ ಬಂದ ವೃತ್ತಾಂತಮಂ ಕಾಲಯುವನಂಗೆ ಸವಿಸ್ತರಂಪೇೞೆ,

ಮನಮಯೂರವೃತ್ತಂ ॥
ಕಾಲಯುವನಂ ಪಡೆವೆನೆಂದು ಯದುವಂಶ
ಕ್ಕಾಲಯುವನಂಬುಧಿಶಯಂ ಪುಗುಗುಮಿಂ ನಾ ।
ಕಾಲಯುವನಂಚಿತಮೃದಂಗಕಹಳಾಢ
ಕ್ಕಾಲಯುವನಂಜದಿರಿಮೆಂದು ಪೊಱಮಟ್ಟಂ ॥ ೧೯

ವ॥ ಅನ್ನೆಗಮತ್ತ ಶಿಶುಪಾಲ ಸಾಲ್ವಲ ದಂತವಕ್ರಜರಾಸಂಧಾದಿಗಳುತ್ಸವದಿನಿರಲಾಗಳೊರ್ವಂ ಗುಪ್ತವಾರ್ತಿಕನಾವಾರ್ತೆಯುಂ ತಂದುಪೇಂದ್ರಂಗೆ ಬಿನ್ನಪಂಗೆಯ್ಯೆ ಮಧುರಾಪುರಕ್ಕನತಿದೂರದೊಳ್ ನಿಂದು,

ಈತ್ರಿಜಗಂಗಳನಿಚ್ಛಾ
ಮಾತ್ರದೆ ಪುಟ್ಟಿಸುವ ಕಿಡಿಪ ದೇವನುಪೇಂದ್ರಂ ।
ಧಾತ್ರಿಗೆ ನಿಜಮಾನುಷಚಾ
ರಿತ್ರಂ ನೆಗಳ್ವಂತು ಬಗೆದನೊಂದುದ್ಯಮಮಂ ॥ ೨೦

ವ॥ ಅಂತು ಬಗೆದು ತನ್ನ ಕೆಲದೊಳಿರ್ದ ಪನ್ನಗಾರಾತಿಯನತಿಪ್ರೀತಿಯಿಂ ನೋಡಿ,

ಸ್ತ್ರೀರತ್ನಾರ್ಥಂ ನೃಪತಿಸ
ಭಾರತ್ನಾಕರಮನಾಂ ಕಲಂಕಿದೆನದಱಿಂ ।
ವೈರಂ ನೆಲೆವೆರ್ಚುಗುಮದಿ
ವೀರರೊಳಂ ಸ್ತ್ರೀಜವೈರಮೇಂ ಕೇವಲಮೇ ॥ ೨೧

ಒಂದೆಸೆ ದಂತವಕ್ತ್ರದನುಜೇಂದ್ರನದೊಂದೆಸೆ ಮಾಗಧೇಶನಂ
ತೊಂದೆಸೆ ಸೌಭವಲ್ಲಭನದೊಂದೆಸೆ ಚೈದ್ಯನುಮಿಂತು ನೋಡೆ ನಾ ।
ಲ್ಕುಂದೆಸೆಯುಂ ವಿರೋಧಿಮಯಮಿನ್ನೆಮಗಂ ಮಧುರಾಪುರಾಶ್ರಯಂ
ನಿಂದಿತಮಿತ್ತ ಕಾಲಯವನಂ ಗಡ ಬಂದಪನಾಜಿದುರ್ಜಯಂ ॥ ೨೨

ರಿಪುಬಲದುರ್ಭೇದನಮತಿ
ವಿಪುಲಂ ಕ್ರೀಡೋಪಯೋಗ್ಯಮೆಂಬೆಡೆಯುಮನೀ ।
ಕ್ಷಿಪುದೊಂದು ಪೊೞಲುಮಂ ನಡೆ
ಯಿಪುದೀಗಳ್ ನಮ್ಮ ಕಟಕಮಂ ಖಗರಾಜಾ ॥ ೨೩

ವ॥ ಎಂಬುದುಂ ಕರತಳಾಮಳಕೀಭೂತಭೂತಳಂ ವೈನತೇಯು ನಿಂತೆಂದಂ

ಜಳನಿಧಿ ಪರಿಖೆಯ ತೆಱದಿಂ
ಬಳಸಿರೆ ಬಹುಗಹನಶೈಲಸುಭಗಂ ಕ್ರೀಡಾ ।
ಚಳನಂದನಶೋಭಿ ಕುಶ
ಸ್ಥಳಮಿರ್ದಪುದತಿವಿಶಾಲಮದನಾಂ ಬಲ್ಲೆಂ ॥ ೨೪

ಆಸ್ಥಳದೊಳನ್ನೆಗಂ ದೇ
ವಸ್ಥಪತಿ ನಿಜಾಜ್ಞೆಯಿಂದೆ ನಿರ್ವಿಸುಗುಂ ರ ।
ತ್ನಸ್ಥಗಿತಮೆನಲ್ ಪುರಮಂ
ಪ್ರಸ್ಥಾನಂಗೆಯ್ಗೆ ತಡೆಯದಲ್ಲಿಗೆ ಕಟಕಂ ॥ ೨೧

ವ॥ ಎಂದು ವಿನತಾನಂದನಂ ನುಡಿಯೆ ಪೊಡೆಯಲರನಾಜ್ಞೆಯಿಂದಾಗಳುಗ್ರಸೇನ ವಸುದೇವಾದಿಯಾದವಪ್ರಧಾನಪುರುಷರ್ ಸಮಸ್ತಹಸ್ತ್ಯಶ್ವರಥಪದಾತಿಬಲಂಬೆರಸು ಮಧುರಾಪುರೀನಿವಾಸಿಗಳಂ ಮುಂದಿಟ್ಟೊಡಗೊಂಡು ಪೊಱಮಡೆ,

ಇಳೆಯೆಲ್ಲಂ ಚಾತುರಂಗಪ್ರಬಲಬಲಪದಾಚ್ಛಾದಿ ರೋದೋಂತವೆಲ್ಲಂ
ಚಳನಾನಾವೈಜಯಂತೀಪಟಪಟಪಿನದಂ ದಿಶಾಚಕ್ರವೆಲ್ಲಂ ।
ಜಳಧಿಧ್ವಾನೋಚ್ಚಕೋಲಾಹಳರವಬಧಿರೀಭೂತಮೆಂಬಂತೆಗುರ್ವಿಂ
ತಳದತ್ತಿತ್ತುತ್ತಮೆತ್ತಂ ನಡೆದುದು ಕಟಕಂ ರಾಮತಾರ್ಕ್ಷ್ಯಾಭಿಗುಪ್ತಂ ॥

ವ॥ ಅನ್ನೆಗಮತ್ತ ಮಧುರಾಪುರದ ಪೊಱವೊೞಲೊಳ್,

ಪೀತಾಂಬರನಿರ್ದಂ ಸಮ
ರಾತಿಥಿ ಬರ್ಕೆಂದು ಸಾಱುವಂತೆ ಧನುರ್ಜ್ಯಾ ।
ಘಾತರವಾವೃತಸಕಲದಿ
ಶಾತಟನಾತ್ಮೀಯಭುಜಬಲೈಕಸಹಾಯಂ ॥ ೨೩

ವ॥ ಆಗಳ್

ಅನಿಮೇಷಾದ್ರಿಯನಬ್ಧಿಯಂ ಭಗಣಮಂ ಚಂದ್ರಾರ್ಕರಂ ವ್ಯೋಮವಾ
ಹಿನಿಯಂ ಕಾಣದೆ ಪದ್ಮಜಂ ವಿಕಳಚಿತ್ತಂ ಮತ್ತಮಂ ಪುಟ್ಟಿಸಲ್ ।
ಮನಮಂ ತರ್ಪಿನೆಗಂ ಜಗದ್ವಿವರದೊಳ್ ಸೇನಾರಜಂ ಕೊರ್ವಿ ಪ
ರ್ವಿನಗುರ್ವಿಂ ಪಡೆವಂತೆ ಕಾಲ್ಗಯುವನಂ ಬಂದಂ ಬಳಾಟೋಪದಿಂ ॥

ವ॥ ಆಸಮಯದೊಳ್,

ಜ್ಯಾತತರುತಿ ಮಿಗೆ ಬಳಧೂ
ಳೀತತಿಯುಂ ಗಱಿಯು ಗಾಳಿ ತೂಳ್ವಿನಮಿಷುಸಂ ।
ಘಾತದಿನಿಸುತುಂ ಕೃಷ್ಣನ
ರಾತಿಯು ಬಗೆಗಟ್ಟಿ ತಿಂಬ ಜವನಂತಿರ್ದಂ ॥ ೨೯

ವ॥ ಅಂತಿರ್ದ ದನುಜಕುಳಪ್ರಳಯಕಾಲನಂ ಕಾಲಯವನಂ ನೋಡಿ,

ಅನಿಧೇಯಂ ಕ್ಷತ್ರಲೋಕಂ ನೆರೆದು ಪ್ರೋಣದೊರ್ಡಾ ತ್ರಿಂಶದಕ್ಷೌಹಿಣೀಸೈ
ನ್ಯವನೋರೊರ್ವಂದೆ ಮೆಯ್ಯಿಂ ತವಿಸಿ ತವದ ದೋಃಕಂಡುವಿಂದೀತನಿಂದೆ ।
ಮ್ಮೃವನಿಂತೇಕಾಂಗದಿಂದಂ ಗೆಲಲೊಡರಿಪನೀತೇಜದಿಂ ದರ್ಪದಿಂ ಸಾ
ಷ್ಠವದಿಂ ಶಸ್ತ್ರಾಸ್ತ್ರವಿಜ್ಞಾನದ ಯದುಕುಲನೊಳ್ ಗೆಲ್ಲವೇಕಾಗದಿರ್ಕುಂ

ವ॥ ಎಂದು ಮನದೊಳ್ ಮೆಚ್ಚಿ ಬಿಚ್ಚಳಿಸಿ ತನ್ನ ಸೈನ್ಯಮಂ ಕೈವೀಸೆ,

ಪಕ್ಕರೆಯಿಕ್ಕಿದಶ್ವತತಿ ಪಣ್ಣಿದ ದಂತಿಘಟಾಳಿ ಸನ್ನಣಂ
ಬೊಕ್ಕ ಪದಾತಿ ಹೇತಿ ರಥ ಸೂತ ಹಯಾನ್ವಿತವಾದ ತೇರ್ಗಳ್ ।
ಕ್ಕೈಕ್ಕೆಯಿನೆಯ್ದೆ ವರ್ಪರಿಬಳಾಬ್ಧಿಯನಚ್ಯುತನೊಂದೆ ಮುಷ್ಟಿಯೊಳ್
ಲಕ್ಕಸರಲ್ಗಳಂ ತುಡುತುಮೆಚ್ಚು ತಱುಂಬಿದನಸ್ತ್ರವೇಳೆಯಿಂ ॥ ೩೧

ವ॥ ಅನಂತರಂ,

ಅನಿತಾಳನನಿತುಕುದುರೆಯ
ನನಿತಾನೆಯನನಿತುತೇರನೊರ್ಮ್ಮೊದಲೊಂದಂ ।
ಬಿನ ಕೊನೆಯಿಂ ತವಿಸುವೆನೆಂ
ದನಲಾಸ್ತ್ರಮನಸುರವೈರಿ ತೊಟ್ಟಾರ್ದೆಚ್ಚಂ ॥ ೩೨

ಪಡಿಮಾತೇನಿದು * ಕೃಷ್ಣನಾಜ್ಞೆಯೊಳ್ ವಿದ್ವಿಟ್ಸೇನೆಯಂ ಸುಟ್ಟು ಮಾ
ಣ್ಬೊಡೆ ಮಾಣ್ಗುಂ ಪೆಱತಾದೊಡೀತ್ರಿಜಗಮಂ ನಿಶ್ಶೇಷಮಪ್ಪನ್ನೆಗಂ ।

* ಕ ಖ. ಗ —ಪಡೆಮಾತೇನಿದು

ಸುಡುಗುಂ ತಾನಿದಿರೊಳ್* ಉಯ್ದಗ್ನಿ ನೆಲಸಿತ್ತೆಂಬಂತು ತತ್ಸಾಯಕಂ
ಕಿಡಿಯುಂ ಕೇಸುರಿ ಸೂಸೆ ಬಂದಬಿರ್ದು ಕೊಂದತ್ತಾಚತುಸ್ಸೈನ್ಯಮಂ॥

ವೈಕುಂಠಶರಾಗ್ನಿಶಿಖಾ
ನೀಕದೆ ಭಸ್ಮಾವಶೇಷಮಾಗಿ ವಿಪಕ್ಷಾ ।
ನೀಕಂ ಚತುರಂಗವ್ಯೂ
ಹಾಕಾರದೆ ರಂಗವಲಿವೊಲಿರ್ದುದು ರಣದೊಳ್ ॥ ೨೪

ಪಡೆಯೆನಿತನಿತಱ ಬಲ್ಪಂ
ಪೊಡರ್ಪುಮೀತನೊಳೆ ನೆಲಸಿದತ್ತೆನೆ ಸೈನ್ಯಂ ।
ಮಡಿವುದುಮದೊಂದಗುರ್ವಿಂ
ಗೆಡೆಗೊಂಡಿಸುತಿರ್ದನತಿಬಳಂ ಯವನಸುತಂ ॥ ೨೫

ಜ್ಯಾತತಘೋಷಂ ಪುದಿಯೆ ದಿ
ಶಾತಟಮಂ ಕಾಲಯವನನಿಸೆ ತಚ್ಛರನಿ ।
ಘಾತಂ ಪಡೆದುದು ಹರಿಗಂ
ಕೌತುಕಮಂ ಹರವರೋದ್ಭವಂ ಕೇವಲಮೋ † ॥ ೨೬

ಕಾಳಾಹಿ ಕಾಳದಂಡಂ
ಕಾಳಾಗ್ನಿಜ್ವಾಲೆಯೆನಿಪ ಕಾಳಾಯಸಬಾ ।
ಣಾಳಿಗಳಿಂ ದಾನವಕುಲ
ಕಾಳಯಮಂ ಕಾಳಯವನನಂ ಪೂಣ್ದೆಚ್ಚಂ ॥ ೨೭

ಧನು ಶಾರ್ಙ್ಗಂ ದನುಜಾರಿ ಪೂಣ್ದಿಸುವನಂತುಂ ನಾಂಟದಸ್ತ್ರೌಘಮಾ
ತನ ಮೆಯ್ಯಿಂ ಕಿಡಿ ಸೂಸೆ ತಾಗಿ ಸಿಡಿದುಂ ಪಿಂಮೊಟ್ಟೆಯುಂ ಪಿಕ್ಕಿ ಪಿಂ
ತನೆ ಬಂದುಂ ತಿಱುವಾಯ್ಗೆ ಪೊರ್ದಿಯುಮಗುರ್ವಾದತ್ತಯಶ್ಚೂರ್ಣಸೇ
ವನೆಗೆಯ್ದಾ ಫಲದಿಂದೆ ಪೆತ್ತ ತನಯಂಗಸ್ತ್ರೌಘಮೇನಾರ್ಕುಮೋ ॥ ೨೮

ವ॥ ಆಗಳದರ್ಕೆ ವಿಸ್ಮಿತಸ್ವಾಂತನಾಗಿ

---

* ಕ ಗ.—ತಾನಿದಱೊಳ್ † ಪಿ ೧. ಅ ಕೇವಲನೇ.

ಕೆಡೆಯೆ ರಥಾಶ್ವಂ ಸಾರಧಿ
ಮಡಿಯೆ ರಥಂ ಕಟಿಲೆ ಮುಱಿಯೆ ಕನಕಧ್ವಜಮುಂ ।
ಕಡಿಯಾಗೆ ಪಗೆಯ * ಚಾಪಂ
ಕಡುಕೆಯ್ದು ಮುರಾರಿ ಬಾಣದಶಕದಿನೆಚ್ಚಂ ॥ ೩೯

ವ॥ ಅಂತು ವಿರಥನಂ ಮಾಡೆ ಬಾಹುಕದನಮನೊಡರ್ಚಲೆಂದು ನಿಟ್ಟುಸುರಂಗೊಂಡು । ಮುಟ್ಟೆ ಬರ್ಪನಂ ಕಂಡು

ಯದುಕುಲದುರ್ಜಯನಪ್ಪಂ
ತದೊಂದುಮಮರವೆಂ ತ್ರಿಣೇತ್ರರೂಪದೆ ತಾನಿ ।
ತ್ತುದನಱಿದು ಪಗೆಗೆ ವಧಮಂ
ಯದುವಂಶ್ಯಂ ಪೆಱತುಪಾಯದಿಂ ‡ ಚಿಂತಿಸಿದಂ ॥ ೪೦

ಹರವರಮಂ ಮನ್ನಿಸಲಂ
ದರಿಯಂ ಪೆಱನಿಂದೆ ಕೊಲಲೊಡರ್ಚಿದನಂತುಂ ।
ಹರಿ ರಿಪುವಧದೊಳ್ ಪ್ರಾಗ್ರ್ಯಮೆ
ಬೆರಗಂ ತ್ರೈಲೋಕ್ಯಹರಣಭರಣಸಮಗ್ರಂ ॥ ೪೧

ಕದನಮನಿತ್ತುಪೆನಿಲ್ಲಂ ।
ದೊದಱುತ್ತುಂ ಪರಿವ ಕೃಷ್ಣನಂ ತತ್ಖಳನೆ ।
ಯ್ದಿದನಿಲ್ಲಂ ಕಮ್ರ್ಗ ಸಂಸಾ
ರದ ಪಾರಮನೆಂತುಮೆಯ್ದಲಾಱದತೆಱದಿಂ ॥ ೪೨

ವಿಕ್ರಮದಿಂ ನೆಗೞ್ದೆದಱಿಂ
ವಿಕ್ರಮದಿಂ ಪಾಱಿದಪ್ಪೆ ನೀನೆಂದು ಖಳಂ ।
ವಿಕ್ರಮದಿಂ ಹರಿ ಹರಿಯೆ ಪ
ವಿಕ್ರಮದಿಂ ಗರ್ಜಿಸುತ್ತೆ ಬೞಿಯನೆ ಪರಿದಂ ॥ ೪೩

---

* ಕ.ಗ—ಕಡಿಯೆ † ಕ.—ನಿಟ್ಟುರಿಗೊಂಡು
ಗ—ನಿಟ್ಟುಲಿಗೊಂಡು. ‡ ಕ ಖ ಗ—ಯದುವಂಶಂ ಪೆಱತುಪಾಯಮಂ.

ಮುನಿಗಳ್ ದಿವ್ಯಜ್ಞಾನಿಗ
ಳನಘರ್ ಮನದಿಂದಮೆಯ್ದು ಲಾಱದ ಪರಮಾ।
ತ್ಮನನಾದುಶ್ಚರಿತಂ ನಿಜ
ತನುವಿಂ ಪರಿದೆಯ್ದ ಲೆಂತುಮೋನಾರ್ತಪನೇ॥ ೪೪

ವ॥ ಅಂತು ಪೋಗಿ ಕಾಲಯವನಂಗೆ ಕಾಲಯಮುನ ವದನದ್ವಾರಮೆನಿಸಿದ ಗುಹಾದ್ವಾರಮಂ ಪೊಕ್ಕಾಗಳದಱೊಳಗಣ ಮಣಿಮಾಡದೋವರಿಯ ಮಂಚದೊಳ್,

ಬಱಗಿರ್ದಂ ನಿದ್ರೆಯಿನೆ
ೞ ಱಿಸಿದರಂ ಕೋಪಶಿಖಿಯಿನುರುಪುವ ವರದಿಂ।
ನೆಱೆದು ಕೃತಯುಗದೊಳಸುರರೊ
ಳಱಿದ ಪರಿಶ್ರಮದೆ ರಾಜಮುನಿ ಮುಚುಕುಂದಂ॥ ೪೫

ವ॥ ಆ ನಿದ್ರಾಮುದ್ರಿತನೇತ್ರನೆೞ್ಚಱದಂತಚ್ಯುತಂ ಮೆಲ್ಲನೆ ಕೆಲಕೆ ಸಾರ್ದು ನಿಲ್ವುದುಂ, ಪ್ರಾಪ್ತಕಾಲಂ ಕಾಲಯವನಂ ಮುಟ್ಟಿವಂದು ಪಟ್ಟಿರ್ದ ಮುಚುಕುಂದನಂಮುಕುಂದನೆಗೆತ್ತೊದೆಯೆ ತತ್ಪ್ರಬೋಧಿತನಾವಿರೋಧಿಯುಂ ಕ್ರೋಧಹುತಾಶನಂಗಾಹುತಿಮಾಡಿ ಮುಱಿದು ನೋಡಿ ಸಮಕ್ಷದೊಳ್ ನಿಂದ ಪುಂಡರೀಕಾಕ್ಷನಂ ಕಂಡು ನೀನಾರ್ಗೆಂದು ಬೆಸಗೊಳ್ ಶಶಿವಂಶಜಾತನೆಂ ವಸುದೇವಪ್ರಸೂತನೆನೆಂದು ಪೇೞೆ,

ಸ್ಮರಿಯಿಸಿದಂ ಮುಚುಕುಂದಂ
ಚಿರೋಕ್ತಮುಂ ಮನದೊಳಿರ್ಪತೆಂಟನೆಯ ದ್ವಾ।
ಪರದಂತ್ಯದಲ್ಲಿ ಧರೆಯೊಳ್
ಹರಿ ಪುಟ್ಟುಗುಮೆಂಬ ವೃದ್ಧವರ್ಗದ ನುಡಿಯಂ॥ ೪೬

ವ॥ ಅಂತು ನೆನೆದು ತನುವಿನೊಳ್ ಹರ್ಷಪುಳಕಮುಂ ನಯನದೊಳಾನಂದಬಾಷ್ಪಜಲಮುಂ ನೆಗೆಯಲೊಗೆದ ನಿರ್ಭರಭಕ್ತಿಯಿಂ ಗೋವರ್ಧನೋದ್ಧಾರಂಗೆ ಬದ್ಧಾಂಜಲಿಯಾಗಿ

ಪುರುಹೂತಂಗೆ ಸಹಾಯನಾಗಿ ಕಡುಕೆಯ್ದಾಂ ಕಾದುವಂದಾಸುರಾ
ಸುರರ್ಗಂ ದುಸ್ಸಹವೆನ್ನ ತೇಜವೆನಗಂ ನಿನ್ನೊಂದು ತೇಜಂ ಪಯೋ ।
ಧರಗಂಭೀರರವೋಕ್ತಿ ಪಾದತಳಪೀಠಾಕಂಪಿತಕ್ಷ್ಮಾತಲಂ
ಪಿರಿದುಂ ದುಸ್ಸಹವಾಗುತಿರ್ಪುದದಱಿಂ ನೀನೇ ಸರೋಜೇಕ್ಷಣಂ ॥ ೪೭

ನೀಂ ಶರಧಿತಲ್ಪನೈ ಶಶಿ
ವಂಶದೊಳುದಯಿಸಿದೆ ಮರ್ತ್ಯಲೋಕಹಿತಾರ್ಥಂ ।
ಸಂಶಯಮಿಲ್ಲದು ನಿನ್ನಂ
ಶಾಂಶದ ತನುವೀಪ್ರಭಾವಮನ್ಯರ್ಗುಂಟೇ ॥ ೪೮

ವಿವಿಧತರವರ್ಣನಿರ್ಣೀ
ತವೆನಿಸಿ ಸಂಕಲ್ಪತೂಲಿಕಾಭಿತ್ತಿಯೊಳೀ ।
ಭುವನತ್ರಯಮಂ ಚಿತ್ರಿಸು
ವ ವಿರಿಂಚನ ವಿದ್ಯೆಗಧಿಪ ನೀಂ ಗುರುವಲ್ತೇ ॥ ೪೯

ಶತಪತ್ರಾಕ್ಷ ನಿಜಸ್ವರೂಪಮೆನದಾರುಂ ಬಲ್ಲರೇ ನೀಂ ಗುಣ
ವ್ಯತಿರಿಕ್ತಂ ವಿತನುತ್ವದಿಂ ಗುಣಯುತಂ ಬ್ರಹ್ಮಾದಿಷಾಂಗತ್ವದಿಂ ।
ದತಿಸೂಕ್ಷ್ಮಂ ಪರಮಾತ್ಮರೂಪದಿನತಿಸ್ಥೂಲಂ ಜಗದ್ರೂಪದಿಂ
ಹೃತಕಾಲಂ ಧ್ರುವಭಾವದಿಂ ಸ್ವಗತಕಾಲಂ ನಶ್ವರವ್ಯಕ್ತಿಯಿಂ ॥ ೫೦

ಇನನೀಶಂ ಹರಿಯೆಂದು ಬೇರ್ಪಡಿಸಿ ನಿನ್ನಂ ಪೂರ್ವಸಂಸ್ಕಾರವಾ
ಸನೆಯಿಂದೆಂತುಟು ದೈವವೆಂಬರವರ್ಗಂತಂತಪ್ಪೆ ನೀನಾದೊಡೆ ।
ರ್ವನೆ ನಿನ್ನಿಂ ಭುವನೋದಯಸ್ಥಿತಿಲಯಂ ನೀಂ ದೇವ ಚೈತನ್ಯರೂ
ಪನಮೇಯಂ ಸದಸದ್ವಿಕಲ್ಪರಹಿತಂ ನಿತ್ಯಂ ಮುನಿಪ್ರತ್ಯಯಂ ॥ ೫೧

ಬಂದೆರಡಿಲ್ಲ ದೈವವೆರಡಾಯ್ತದೆ ಮೂಱಱಿನಿಂತು * ಮತ್ತೆ ನಾ
ಲ್ಕಂದದ ವೇದದಿಂದ್ರಿಯಮನೈದನಡಂಗಿಸಲಾಱನೇಱಿಪಂ ।
ದಿಂದೆನಗಾದುದೆಂಟನಯ ನಿನ್ನವತಾರಮನೀಕ್ಷಿಸಲ್ ವಿವೇ
ಕಂ ದಿಟವೊಂಬತುಂ ನಿಧಿ ಬರಲ್ ಮತಿ ಪತ್ತದು ದೃಷ್ಟಿಸೌಖ್ಯಮಂ ॥ ೫೨

* ಕ ಗ — ದೈವವೆರಡಂತದೆ ಮೂಱಿನೆಂತು, ಖ — ದೈವವೆರಡಂತದೆ ಮೂಱಿನದೆಂತು

ಪ್ರಿಯು ಕೀರ್ತಿಶ್ರೀ ದಶಾಶಾವಧಿಯೆನೆ ನವರತ್ನೋತ್ಕರಾಷ್ಟಾಪದಪ್ರೀ
ತಿಯುನೊಕ್ಕೀವೈಸಿ ಸಪ್ತವ್ಯಸನದೊಳರಿಷಡ್ವರ್ಗಮಂ ಬಿಟ್ಟು ಪಂಚೇಂ।
ದ್ರಿಯಮಂ ವಟ್ಟೈಸಿ † ಚಾತುರ್ವಿಧಕರಣಮನಂತಸ್ಸ್ಥಮಂ ತೂಳ್ದಿ ತಾಪ
ತ್ರಯಮನ್ನೊಳ್ ಪಿಂಗಲಾಂ ದ್ವಂದ್ವಮನುಳಿದೆನಗಾದೈಕ್ಯದಿಂದೊಂದಿ ‡ ನಿಲ್ವೆಂ ॥ ೫೩

ವ॥ ಎಂದರವಿಂದನಾಭನ ದಯಾವಲೋಕನಪ್ರಸಾದದಿಂದಾದನೂನಜ್ಞಾನದಿಂಪಾಮುಚುಕುಂದನಾಮಹಾಗುಹಾದ್ವಾರದಿಂ ಪೊಱಮಟ್ಟು ಗಂಧಮಾದನನಗೇಂದ್ರೋಪಾಂತದ ಬದರಿಕಾಶ್ರಮದ ನರನಾರಾಯಣಸ್ಥಾನಕ್ಕೆ ಪೋದಂ. ಅಗಳಾನಾಗಾರಿಕೇತನಂ ದಾರುಕಾನ್ವಿತವರೂಥಸ್ಥನಾಗಿ ಕುಶಸ್ಥಳಕ್ಕೆ ತಳರ್ದಂ ಅನ್ನೆಗಮೆತ್ತ ಕುಂಭಕರ್ಣಾವತಾರಂ ದಂತವಕ್ತ್ರಂ ನಿಸರ್ಗವೈರದಿಂದಸುರವೈರಿಯ ಪೆಸರ್ಗಳ್ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನನಾಕ್ರಮಿಸಿಯುಂ, ಪೀತಾಂಶುಕನೆಂದು ಪಾವಕನಂ ಮೂವೀದಿವಡಿಸಿಯುಂ, ಗೋಪನಂದನನೆಂದು ದಂಡಧರನನಂಡಲೆದುಂ, ನಾಗನಿಳಯನೆಂದು ನೈಋುತಿಯುಂ ನಿರಾಕರಿಸಿಯುಂ, ವನಮಾಲಾಸ್ಪದನೆಂದು ಯಾದಃಪತಿಯನದಿರ್ಪಿಯುಂ, ಅದ್ರಿಧರನೆಂದು ಪವಮಾನನನವಮಾನಿಸಿಯುಂ, ರಾವಣದ್ವೇಷಿಯೆಂದು ಕುಬೇರನಂ ದೂಷಿಸಿಯುಂ, ಶ್ರೀಧರನೆಂದು ಶಂಕರನಂ ಮಾಂಕರಿಸಿಯುಂ, ಧರಣೀಧರನೆಂದು ಸುರಶೈಳಮಂ ಚಾಳಿಸಿಯುಂ, ಶಂಖಚಕ್ರಾನ್ವಿತನೆಂದು ಉದಧಿಯುಂ ಕಲಂಕಿಯುಂ, ಅನಂತಾಖ್ಯನೆಂದು ಭೂಮಿಯುಂ ತಿಗುಱಿದಿರುಪಿಯುಂ, ಅಬ್ಜೋದರನೆಂದು ಗಗನಮಂ ಗರವಟಿಸಿಯುಂ ಮಾಣದೆ, ಚಾಣೂರಸೂದನನೊಳ್ ಕಾದಲೆಂದಟ್ಟಿದ ದೂತಂ ಜೀಮೂತನಾದನೆಂಬಂ ಬರುತ್ತುಮಕೂಪಾರತೀರಂಬಿಡಿದು ನಡೆತರ್ಪ ಕಾಳಿಯಸರ್ಪದರ್ಪದಳನನನದಿರದಿದಿರೊಳ್ ಕಂಡು,

---

* ಕ.—ಪ್ರಿಯೆಕೀರ್ತಿ ಶ್ರೀದಶಾಂಶಾವಧಿಯೆನೆ. ಗ—ಪ್ರಿಯಕೀರ್ತಿಶ್ರೀದಶಾಂಶಾವಧಿಯೆನೆ † ಕ ಗ—ಪುಷ್ಟೈಸಿ.

‡ ಕ. ಗ.—ದ್ವಂದ್ವಮನುಳಿದು ನಮಾಂಪೈಕ್ಯದಿಂದೆ ೯ಂದಿ, ಖ—ದ್ವಂದ್ವಮನುಳಿದು ಸಾಂದ್ರೈಕ್ಯದಿಂದೊಂದಿ.

ಅಂಬುರುಹನಾಭ ನಿಲ್ ನಿ
ಲ್ಲಾಂ ಬಂದೆಂ * ದಂತವಕ್ತ್ರದೂತನೆನವನಾ ।
ಡಂಬರಮಂ ನೆಱೆ ಪೇೞೆ ಮೆ
ನಂ ಬೆದಱುಗುಮೆಂತದರ್ಕೆ ಪೇೞ್ದಪೆನೊಂದಂ ॥ ೫೪

ಜವನಧಿಕಾರಂ ಮಿೞ್ತುವ
ಜವಕೆ † ಮೊಗಂದಿರುಪೆ ಕೊಲ್ವ ಮೆಯ್ಸಿರಿ ನೆಲಸಿ ।
ತ್ತವನೊಂದು ಗದೆಯೊಳನಲಾಂ
ಪವನಾವಂ ದಂತವಕ್ತ್ರನೊಳ್ ರಿಪುವೀರಂ ॥ ೫೫

ಇಂ ಬಿಸುನೆತ್ತಱನೀಂಟಲ್
ಮುಂಬಸಿಱೊಳ್ ತೀವಿದಮರರಕ್ತಮನುಗುೞ್ದು ।
ತ್ತೆಂಬಂತೆ ಬದ್ಧಕೌಸುಂ
ಭಾಂಬರದಂಚಲದ ‡ ಗದೆವಿಜೃಂಭಿಪುದವನಾ ॥ ೫೬

ತಱಿಸಿ ಜವನದಱ ನಿರ್ಮಾ
ಲ್ಯರಕ್ತಪುಷ್ಪಮನೆ ಮುಡಿದು ಭೀಕರನಾದಂ ।
ಧರೆಗೆನೆ ರಕ್ತಸ್ರಗ್ಭೀ
ಕರಂ ಗದಾದಂಡಮಿರ್ದುದಸುರನ ಕೈಯೊಳ್ ॥ ೫೭

ಎತ್ತಿ ತಿರುಪಲ್ಕೆ ತೆರಳ್ವ ವಿ
ಯತ್ತಳತಾರಕನಿಕಾಯಮಿದಱೊಳ್ ತೊಡರ್ದಿ ।
ರ್ದತ್ತೆನೆ ವಜ್ರದ ಮೊಳೆಗಳ
ಮೊತ್ತಮೆಗುರ್ವಿಸುವುದಾನಿಶಾಟನ ಗದೆಯೊಳ್ ॥ ೫೮

ಪತ್ತಿದ ನೆತ್ತಱ ಪೊಲಸಿಂ
ದೆತ್ತಂ ಮೊಱೆದೆಱಪ ಮಶಕಮಕ್ಷಿಕಮಂ ಸೋ ।
ವುತ್ತುಮನವರತಮೋಲಗಿ
ಸುತ್ತಿರ್ಪುವು ಭೂತಕೋಟಿ ದನುಜನ ಗದೆಯಂ ॥ ೫೯

---

* ಕ. ಖ. ಗ.—ಬಂದಪೆ
† ಕ. ಗ.—ಬವಕೆ.
‡ ಕ. ಗ.—ಕೌಸುಂಭಾಂಬರದಿಂತೆಗೆದ.

ಅಸುರನ ಗದೆ ಭೂತಪಿಶಾ
ಚಸಮಿತಿಗೆಱೆಯಿಸುವ ನೆತ್ತಱಱವಟ್ಟಿಗೆ ತೆ ।
ತ್ತಿಸಿದೆಲ್ವಿನ ಸೊದೆವನೆಯಿ
ಕ್ಕಿಸುವೆಡಗಿನ ವಾರಿಸತ್ತ್ರವೆಚ್ಚರಿ ರಣದೊಳ್ ॥ ೬೦

ತ್ರಿದಶೇಂದ್ರಮಕುಟಮಂ ಪೊಡೆ
ದ ದೈತ್ಯಗದೆಯಿಂ ಸಿಡಿಲ್ದ ಶಕಳಮೆ ತಾನಾ ।
ದುದು ಕೃಷ್ಣ ನಿನ್ನ ಗದೆಯೆನೆ
ಗದೆಯ ವಿಜೃಂಭಣೆ ಭಯಾವಹಂ ದಾನವನಾ ॥ ೬೧

ಲಯಮೆಯ್ದಿ ಯದುಬಲಂ ಪ
ಕ್ಕಿಯ ಗೋಸನೆಗುಡುಕು ಜವನ ಕೈಬೋನಂ ಮಾ ।
ರಿಯ ಬುತ್ತಿ ಮರುಳ್ಗಳ ಕ
ಜ್ಜಯಮೆನಿಸದೆ ಗದೆಗೆ ನೀಡೆ ದನುಜಂ ಕರಮಂ ॥ ೬೨

ನೆಗಪಿದೊಡೆ ನೆತ್ತಿಯಿಂದಸು
ನೆಗೆಗುಂ ತೂಗಿದೊಡೆ ಪಗೆಯ ದೇಹಂ ತೂಗಾ ।
ಡುಗುಮಸುರಂ ಗದೆಯಂ ತಿ
ಱಗೆ ತಿರುಪಿದೊಡೊಡನೆ ತಿರುಗುಗುಂ ಭೂಚಕ್ರಂ ॥ ೬೩

ರಯದೊಳಗಿಂದುಬಿಂಬವನುದಿರ್ಚುವ* ಸಾಗರಮಂ ತುಳುಂಕುವ
ದ್ರಿಯನಗೆಯೆತ್ತುವುರ್ವಿಯನಡಂಗಿಪ ಸಂಗಿಯೊಳಿಲ್ಲ ಭೇದಮಾ ।
ಕ್ಷಯಪವನಂಗಮಾತನ ಗದಾಪವನಂಗಮದೊಂದೆ ರಕ್ತಚ
ರ್ಚೆಯ ಪೊಲಸುಂಟೆ ದೈತ್ಯನಗದಾನಿಳನಲ್ಲದೊಡಾಕ್ಷಯಾನಿಳಂ ॥ ೬೪

ಸಮದ† ಮಹಾವಿಜೃಂಭಣದೆ ಪೆರ್ಚಿದನಪ್ಪೊಡೆ ತೊಟ್ಟನಬ್ಜಜಾಂ
ಡಮನೊಡೆದಾಸ್ಯಮುಂ ಭುಜಮುಮಂಘ್ರಿಗಳುಂ ಪೊಱಮಟ್ಟಿರಲ್ಕೆ ಪ
ಕ್ಷಮನವಲಂಬಿಸಿರ್ದ ಕಮಳಪ್ರಭವಾಂಡಮದೊಂದು ಚರ್ಮವ
ರ್ಮಮೆನಿಪಿಕೆಯ್ವುದೇವೊಗಪ್ಪೆನದ್ಭುತಮಾಕೃತಿ ದಂತವಕ್ರನಾ ॥ ೬೫

* ಕ. ಗ.—ಬಿಂಬವನದಿರ್ಚುವ. † ಖ—ಸಮರ

ವ॥ ಎಂದು ಜೀಮೂತಂ ತನಗನ್ವರ್ಥನಾಮಮೆನೆ ಗಜಱಿ ಗರ್ಜಿಸೆ ಲೀಲೆಯಿಂದಾಲಿಸಿ,

ತನ್ನ ರಣರಾಗಭರಮಂ
ತನ್ನ ರಣೋಚ್ಚಂಡಜಯಯುರಃಪಾಂಡಿಮಮಂ ।
ತನ್ನಧರದಂತರುಚಿಗಳ್ ।
ಕನ್ನಡಿಸೆ ಸರೋಷಹರ್ಷನಾದಂ ಕೃಷ್ಣಂ ॥ ೬೬

ವ॥ ಅನ್ನೆಗಂ

ಪಡೆಯು ನಿಮಿರ್ಕೆಗೀಧರಣಿ ಸಾಲದು ಕೇತುಗಳೇಟೆಗಂ ನಭಂ
ಕಡುಕಿಱಿದಾನಕಧ್ವನಿಯು ಪರ್ಬುಗೆಗೀಕಮಲೋದ್ಭವಾಂಡವಿ ।
ಟ್ಟೆಡೆಯೆನೆ ದಂತವಕ್ತ್ರದನುಜಂ ನಡೆತಂದಸಹಾಯಶೌರ್ಯದಿಂ
ಪೊಡರ್ವ ಮುರಾರಿಯಂ ಪ್ರಳಯಭೈರವನೆಂದು ಬಿಗುರ್ತು ನೋಡಿದಂ॥

ವ॥ ಅಂತು ಮುರಾಂತಕನಂ ನಿರೀಕ್ಷಿಸಿ ರಾಕ್ಷಸೇಶ್ವರಂ ತಾನು ಮೇಕಾಂಗವೀರನಪ್ಪಹಂಕಾರದಿಂದಿಂತೆಂದಂ —

ನೀನೊರ್ವನೆ ಪೊಣರ್ವಗಡಾಂ
ಸೇನಾನ್ವಿತನಾಗಿ ಕಾದುವಲ್ಲಿವರಂ ನೀಂ ।
ಗಾನಮೆ ಪೇಳೆನ್ನೀಗದೆ
ತಾನೊಂದೆ ಗೆಲಲ್ಕೆ ಸಾಲದೇ ಹರಿ ನಿನ್ನಂ ॥ ೬೮

ವ॥ ಎಂದು ಗಂಡಮುಚ್ಚರದಿಂ ದುರ್ಮುಖಂ ಪರಾಭವಿಸಿ,

ಪೊಱಮಟ್ಟತ್ತಬ್ಧಿಯಿಂ ಬಾಡವಶಿಖಿಯೆನೆ ಕಾಂತಾರಸಂತಾನದಿಂದಂ
ಪೊಱಮಟ್ಟತ್ತುಗ್ರದಾವಾನಳನೆನೆ ಸಜಳಾಂಭೋದಸಂದೋಹದಿಂದಂ ।
ಪೊಱಮಟ್ಟತ್ತೊಂದು ವಜ್ರಜ್ವಲನಮೆನೆ ನಿಜವ್ಯೂಹದಿಂ ದೀಪ್ತದೇಹಂ
ಪೊಱಮಟ್ಟಿತ್ತಂದನಾಗಳ್ ನಿಜಭುಜಗದೆಯಂ ತೂಗುತುಂ ದಂತವಕ್ತ್ರಂ ॥

ತುಂಗಭುಜೋದ್ಧೃತಗದೆಗಳ್
ಶೃಂಗಂಗಳ ಪಾಂಗನಿಱಿಸಲುದಯಾಸ್ತನಗೇಂ ।

ದ್ರಂಗಳ್ ತಮ್ಮೊಳ್ ಪೊಣರ್ದುವು
ಸಂಗತಮೆನೆ ಕೃಷ್ಣದಂತವಕ್ರರ್ ಪೊಣರ್ದರ್ ॥ ೩೦

ಇನಿಸಿನಿಸು ತಿರುಪಿ ಗದೆಗಳ
ನಿನಿಸಿನಿಸುಂ ಮುಟ್ಟೆ ಮುಟ್ಟೆ ಪೊಣರ್ದಿನಿಸಿನಿಸುಂ ।
ಮನದೊಳಗಂ ಸೂಸದೆ ತೂಂ
ಕಿ ನೋಡಿದರ್ ದಿಟ್ಟಗಲಿಗಳೊರ್ವರನೊರ್ವರ್ ॥ ೩೧

ಪದಚಾರಿಗೆ ಪದಚಾರಿಯ
ನೊದವಿಸುತುಂ ಗಜಜಿ ಗಜಜುತುಂ ಗದೆಯುಂ ಬೀ ।
ಸಿದೊಡೊಡನೆ ಬೀಸುತುಂ ಕೃ
ಷ್ಣ ದಾನವರ್ ಪೊಕ್ಕು ಪೊಯ್ದರೊರ್ವರನೊರ್ವರ್ ॥ ೩೨

ಪುಗೆ ಪೊಕ್ಕಡಿಗಡಿಯುಂ ಜಂ
ಘೆಗೆ ಜಂಘೆಯುನೂರುಗೂರುವಂ ಕಟಿಗೆ ಕಟೀ ।
ಯುಗಮನುರಕ್ಕುರಮಂ ನೆ
ತ್ತಿಗೆ ನೆತ್ತಿಯನೆತ್ತಿ ಪೊಯ್ದು * ರೊರ್ವರನೊರ್ವರ್ ॥ ೩೩

ಬಳ್ಕೆ ನೆಲಂ ಪದಭರದಿಂ
ತುಳ್ಕೆ ಪಯೋರಾಶಿ ಗದೆಯ ಗಾಳಿಯ ಕೋಳಿಂ ।
ಶಳ್ಕಂಗಳ್ ಗದೆಯಿಂ ನೆಗೆ
ದುಳ್ಕಂಗಳನಿಱಿಸೆ ಕಾದಿದರ್ ಕಡುಗಲಿಗಳ್ ॥ ೩೪

ಅಧಮುಂ ಮಧ್ಯಮುಮೂರ್ಧ್ವಮೆಂಬ † ಭುವನಂಗಳ್ ಪೊಯ್ದ ಬಾಹಾಗದಾ
ಯುಧವಿಕ್ಷೇಪವಿಜೃಂಭಣಭ್ರಮಣದಿಂ ಪ್ರಕ್ಷೋಭಿಸಲ್ ಯುದ್ಧಕೇ ।
ಳಿಧುರೀಣರ್ ದನುಜಾರಿಯುಂ ದನುಜನುಂ ಸೂಪ್ಪೊಯ್ಗಳಿಂ ಧೊಟ್ಟುಧ
ಟ್ಟು ಧೊಗಲ್ ಧೊಪ್ಪು ಛಟಲ್ ಛುಗಿಲ್ಗರೆವಿನಂ ಪೊಯ್ದರ್ ಗದಾದಂಡದಿಂ॥

---

* ಕ.—ಪೊಯ್ದು. † ಕ.—ಅಧಮುಂ ಮಧ್ಯಮುಮೂರ್ಧ್ವಮೆಂಬ, ಗ.—ಅಧಮುಂ ಮಧ್ಯಮುಮೂರ್ಧ್ವಮೆಂಬ.

ಚಲವಂ ಚಲವೆಣ್ಣಿಣ್ಮಂ
ಬಲವಂ ಬಲವೋಜೆಯೋಜೆಯುಂ ಧೃತಿ ಧೃತಿಯುಂ ।
ನಿಲವಂ ನಿಲವಳವಳವಂ ।
ಗೆಲೆ ಗೆಲಲರಿದಾಯ್ತು ತಮ್ಮೊಳೂರ್ವರನೊರ್ವರ್ ॥ ೭೬

ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್
ದೆಸೆಯಿಂ ಪಿಂಪೆಟ್ಟೆ ವೃಂದಾರಕಸಮಿತಿ ಗದಾಕ್ರಾಂತಿಯಿಂ ದೂರದಿಂದೀ
ಕ್ಷಿಸೆ ಯುದ್ಧಂ ದಂತವಕ್ತ್ರಾಚ್ಯುತಜನಿತಮಗುರ್ವಾದುದಾಕ್ಷಿಪ್ತ * ಶೈಲ
ಪ್ರಸರಂ ಪ್ರೋಜ್ಜೃಂಭಿತಾಶಾಮುಖಮತಿಮಥಿತಾಂಭೋದರೋದೋ
ತರಾಳಂ ॥ ೭೭

ಸಂಗಡಿಸಿ ಗದೆಯು ಘಟ್ಟನ
ದಿಂ ಗದೆಯ ಬಹುಪ್ರಹಾರದಿಂ ಪುಟ್ಟಿದ ಕಿ ।
ಚ್ಚು ಂ ಗಾಳಿಯುಮೆನೆ ರವಿಮಾ
ನಂಗಳನಡರ್ದತ್ತು ಭೀಮಮಾಸಂಗ್ರಾಮಂ ॥ ೭೮

ಸರದಿಯ ಬಾಡಬಂ ಸಭದಿನಿಕ್ಕಿದ ವಿಭಾಶನ ಲೋಚನಾಗ್ನಿ ಸಂ
ಹರಣದೊಳುಳ್ಳ ಕೊಳ್ಳ ದಹನಂ ನೆಗೆದೀಶಿಖಿಯಿಂ ಸಿಡಿಲ್ದ ಮು ।
ಯ್ಗರೆದ ಶಿಖಾಲವಂಗಳನೆ ತಮ್ಮ ಗದಾಪರಿಘಟ್ಟನಾಗ್ನಿ ಬಾಂ
ಬರಮೊಗೆದತ್ತದೇಂ ಪಿರಿದೊ ಯುದ್ಧಮಧೋಕ್ಷಜದಂತವಕ್ತ್ರರಾ ॥ ೭೯

ಅನಿಳಾನಳಾಂಬು† ಗಗನಾ
ವನಿಭೂತಾತ್ಮಕವಜಾಂಡತತಿ ನಿಜತನುರೋ ।
ಮನಿವಿಷ್ಟಮೆನಿಪ ಕೃಷ್ಣಂ
ಬಿನದದೆ ಸಮಸತ್ತ್ವನಂತೆ ಕಾದಿದನವನೊಳ್ ॥ ೮೦

ಅರಿಯುಂ ಕೈಗಾಪೊಡೆ ಪೊ
ತ್ತಿರವಕ್ಕುಂ ಕೊಳ್ಳ ಬಗೆ ಬರಲ್ ನಿಮಿಷದಿನೇ ।

* ಕ. ಖ. ಗ —ದಕ್ಷಿಪ್ತ. † ಕ ಖ ಗ.—ಅನಿಲಾನಲಾರ್ಕ.

ದೊರೆಯನುವಂ ಕೊಲ್ವುದೆನಲ್
ಹರಿ ಕೊಂದಂ ಗದೆಯೊಳಱಗಿ ಪೊಯ್ದಾರಿಪುವಂ ॥ ೮೧

ಪಾಯೆ ಭುಗಿಲೆಂದು ಮೊಗಿಂ
ಬಾಯಿಂ ಬಿಸುನೆತ್ತರಾಜಿಯೊಳ್ ಕೆಡೆದಾದ್ಯ ।
ತೇಯಂ ನೆನೆಯಿಸಿದಂ ಶ
ಕ್ರಾಯುಧನಿಹತಾಗ್ರಧಾತುನಿರ್ಝರಗಿರಿಯಂ ॥ ೮೨

ಪೊಗದಿಂ ಕಣ್ಣಿಂದೆ ಮೂಗಿಂದೊದವಿರೆ ರುಧಿರಂ ನೆತ್ತಿಯಿಂ ಕೋೞ್ಮೆದುಳ್ ಸೂ
ಸೆ ಗದಾದಂಡಪ್ರಹಾರಪ್ರಬಳಭುಜಬಲಾಟೋಪದಿಂದಂದು ಕೊಂದಂ ।
ನೆಗೞ್ದುರ್ವಾದಂತವಕ್ರಾಸುರನನಸುರಸೇನಾಸುರಾಕಾರಕೋಪಾ
ಗ್ನಿಗಳಜ್ವಾಲಾಕಲಾಪೋಲ್ಬಣರಣರಸರಕ್ತಾಕ್ಷನಂಭೋರುಹಾಕ್ಷಂ॥೮೩

ವ॥ ಅಂತು ದಂತವಕ್ರನಂ ಕೃತಾಂತವಕ್ತ್ರಮಂ ಪುಗಿಸಿ ತದ್ಬ
ಲೋದ್ಭೂತಕ್ಷೋಭನಂ ಕಂಡು ವಿಶ್ವರೂಪನಾರೋಪಿತಚಾಪನಾಗಿ
ಸವ್ಯಾಪಸವ್ಯಕ್ರಮದಿನತಿವೇಗದಿಂದೆಚ್ಚು,

ಕಾದಲುವೋಡಲುವರಿದೆನ
ಲಾದನುಜನ ಬಲಮನಸ್ತ್ರಪಂಜರದಿಂ ಸಂ ।
ಛಾದಿಸಿ ಬೞಿಕಭಯಮನಿ
ತ್ತಾದರಿಸಲ್ ತನಗದಾಯ್ತು ಪರಿವಾರಬಲಂ ॥ ೮೪

ವ ॥ ಆಸಮಯದೊಳಪೂರ್ವಚತುರ್ವರ್ಗಲಲಕ್ಷ್ಮಿಯಿಂದೆಸೆವ ಕೌ
ಮೋದಕೀಲಕ್ಷ್ಮನಲ್ಲಿಗೆ ವಿಹಂಗರಾಜಂ ಬಂದು ತದ್ವಿಭೂತಿವೃತ್ತಾಂತಮಂ
ಆತ್ಮಗತದೊಳ್ ತಿಳಿದು ವಿಕಸಿತಾನನಂ ಮುಕುಳಿತಾಂಜಲಿಯಾಗಿ ಕಂಜನಾ
ಭಂಗೆ ತಾಂ ಪೋಗಿ ಬಂದ ವೃತ್ತಾಂತಮಂ ಪೇೞಲೆಂದಿಂತೆಂದಂ : — ಆನುಂ
ಪ್ರಲಂಬಪ್ರಸೂದನನುಂ ಯಾದವಪರಿಸ್ಪಂದಮುಮಂ ಮುಂದಿಟ್ಟೊಡ
ಗೊಂಡು ಪೋದೆವು. ಅನ್ನೆಗಂ ಮುನ್ನಮೆ ನಿಮ್ಮಾಜ್ಞೆಯಿಂದಾ ವಿಶ್ವಕ

ರ್ಮಂ ನಿಜಕರ್ಮತತ್ತ್ವಮೀ ನಗರನಿರ್ಮಾಣದಿಂ *ಸಫಲಮಾದುದೆನೆ ಪೊೞಲನೞವಡಿ ಮಾಡಿ ಕೋಟಾಚಕ್ರಚತುರ್ದ್ವಾರವೇಧಿಯುಮಂ ಮಾಡಿ ಪ್ರತಿಗೃಹಸಾದೃಶ್ಯಂ ದ್ವಾರಪಙ್ಕ್ತಿಯಿಂ † ತನ್ನ ಬಗೆಗೆ ಸೊಗಯಿಸಿದ ಕಾರಣದಿಂ ದ್ವಾರವತಿಯುಮೆಂಬ ಪೆಸರನಿಟ್ಟುಪ್ರೀದಂ ಅಲ್ಲಿ ನಮ್ಮ ಬೀಡಿನ ಸಮಸ್ತಜನಂಗಳ್ ತಮತಮಗೆ ಯೋಗ್ಯಮೆನಿಸಿದ ಮನೆಗಳಂ ಪೊಕ್ಕು ನಿಜನಿಜವ್ಯಾಪಾರದಿಂ ಸುಖದಿನಿರ್ದರ್ ಆಪೊೞಲ ಚೆಲ್ವದೆಂತೆನೆ,

ವಾರಿಧಿ ತನ್ನ ಗಡ' ತನಗೆ ರೈವತಶೈಲಮುಪಾಂತಶೈಲಮಂ
ಭೋರುಹಲೋಚನಂ ತ್ರಿಭುವನಪ್ರಭು ತನ್ನಧಿನಾಥನೆಂದೊಡಿ ।
ನ್ನಾರಭಿವರ್ಣಿಸಲ್ ನೆಱೆವರೆಂಬಿನಮಿರ್ದುದುದಗ್ರಗೋಪುರಂ
ದ್ವಾರವತೀಪುರಂ ಜಿತಸುರೇಂದ್ರಪುರಂ ವಸುಧಾಂಘ್ರಿನೂಪುರಂ ॥ ೮೫

ವ ॥ ಆಪುರದ ಪೊಱವೊೞಲೊಳ್

ಬಳಸಿರ್ದದ್ರಿಯ ಕಲ್ಗಳೆಲ್ಲಮವು ಪೊನ್ನುಂ ರನ್ನಮುಂ ಪೂಗೊಳಂ
ಗಳ ನೀರೆಲ್ಲಮನೇಕಸಿದ್ಧರಸಮುಂ ಪೀಯೂಷಮುಂ ಕೆಯ್ವೊಲಂ
ಗಳ ಸಸ್ಯಾವಳಿಯೆಲ್ಲಮೊಳ್ಗಬೆಯುಂ ಪುಂಡ್ರೇಕ್ಷುವುಂ ನಂದನಂ
ಗಳ ಧಾತ್ರೀರುಹಜಾತಮೆಲ್ಲಮಮರೋರ್ವೀಜಾತಮುಂ ಚೂತಮುಂ ॥

ನೆಗಪೆ ಕಳಸ್ವನಂ ಕಳಮದಿಂ ಕಳಮಕ್ಕೆ ವನಾಳಿಯಿಂ ವನಾ
ಳಿಗೆ ಕೊಳದಿಂ ಕೊಳಕ್ಕೆ ಕೃತಕಾಚಲದಿಂ ಕೃತಕಾಚಲಕ್ಕೆ ಪಿಂ ।
ಡಗಲದೆ ಪಾಱುತಿರ್ಪುವಿದಿರುಂ ಬೞಿಯುಂ ಶುಕಭೃಂಗಹಂಸಕೋ
ಕಿಗಳನುರಕ್ತಪಾಂಥಜನದಳ್ಕೆರ್ದೆ ಪವ್ವನೆ ಪಾಱುತಿರ್ಪಿನಂ ॥ ೮೭

ನಳಿನೀತೀರಲತಾಗೃಹಂಗಳ ನೆೞಲ್ ನೇರ್ಪಟ್ಟಿರಲ್ ಪಟ್ಟು ಕಾ
ಲ್ಗಳನಿಂಬಿಂ ಪರಿಕಾಲೊಳಿಟ್ಟತಿಮುದಂ ಕೈಸಾರೆ ಕೈಸಾರೆಯೊಳ್ ।
ಬಳೆದಿರ್ಮಾವಿನ ಜೊಂಪಳೆಯೊಳಗಳ ಪಣ್ಣಂ ಪಣ್ಣನೋರೊರ್ಮೆಮೆ
ಲ್ದೆಳನೀರೀಂಟಿ ಪಥಾರ್ತರಿರ್ಪರಳಿಕೀರಧ್ವಾನದುದ್ಯಾನದೊಳ್ ॥ ೮೮

* ಕ. ಖ. ಗ.—ನಿರ್ಮಾಪಣದಿಂ. † ಕ. ಗ—ಸಾದೃಶ್ಯದ್ವಾರಪಙ್ಕ್ತಿಯುಂ.

ಮಿಸುಪಂಗಂ ಬೆಮರೇಱೆ ನೀಳ್ದ ನಗೆಗಣ್ ಕೆಂಪೇಱೆ ಬಿಂಬಾಧರಂ
ನಸುಬೆಳ್ಪೇಱೆ ಪೊದಟ್ದ ಕಾಮರಸದಿಂ ರಾಗಾಬ್ಧಿ ನೀರೇಱೆ ವ |
ಕ್ತ್ರಸರೋಜಂ ಪೊಳಪೇಱೆ ಸುಯ್ಯ್ನಿ ಮಿಱೆ ಚಿತ್ತಂ ಕೂಡೆ ತಣ್ಪೇಱೆ ಸಂ
ತಸದಿಂ ನಂದನದಲ್ಲಿ ದಂಪತಿ ಮನೋಜಕ್ರೀಡೆಯಂ ಮಾಡುಗುಂ || ೮೯

ಮದನಸುಖಶ್ರಮಂ ತೊಲಗೆ ತಣ್ಣೆಲರಿಂದೆ ಬೞಿಕ್ಕೆ ಪೂಗಸ
ಸ್ಯದೊಳೊಲೆದುಯ್ಯಲಾಡುವಲಗೊರ್ಗಂಬಿನೊಳಾಯ್ದಲರ್ಗೊಯ್ವ ಚೂ
ತಗೇ |
ಹದೊಳಲರ್ವಚ್ಚಮಂ ತುಡುವ ಪೂಗೊಳದೊಳ್ ಜಲಕೇಳಿಯಿಂದಮಿ
ರ್ಪಿವಱೊಳ್ ನಾಡೆ ಪೊೞ್ತುಗಳೆಗಂ ಬನದೊಳ್ ಪುರನಾರಕಾಂತೆಯರ್ ||

ಅಳಿಮಾಲಾಕೇಶಮಂ ಮೆಲ್ಲನೆ ಬರೆತೆಗೆದಬ್ಜಾನನಾಮೋದಮಂ ಪೀ
ರ್ದುಲತಾಂಗಾಲಿಂಗಮಂ ಸಂಗಳಿಸಿ ಕೃತಕಶೈಲೇಂದ್ರಶುಂಭನ್ನಿತಂಬ |
ಸ್ಥಳದೊಳ್ ತನ್ನಿರ್ಝರಾಂಬುಸ್ಮರರಸಮೊಸರ್ವಂತೆಱು ನಿಚ್ಚಂ ವನಶ್ರೀ
ಗೊಲವಂಮಾಡುತ್ತುಮಿರ್ಕುಂಚತುರವಿಟನವೋಲ್ದಕ್ಷಿಣಾಶಾಸಮೀರಂ ||

ತೊಳಗುವ ರತ್ನಕೂಟತಟದೊಳ್ ಸುೞಿದಾಡುವ ಸೋಗೆ ಸೋಗೆಯಂ
ಕಳರವದಿಂದಮಾಡಿಸುವ ದಂಪತಿ ದಂಪತಿಯುಪ್ಪ * ಪೆಂಪಮಂ |
ಜಳಲವದಿಂದೆ ಸಿಂಪಿಸುತುಮಿರ್ಪ ಸುಧಾಕರಕಾಂತನಿರ್ಝರಾವಳಿ
ಬಗೆಗೊಪ್ಪಿ ಮಾೞ್ಪುದು ಚಮತ್ಕೃತಿಯಂ ಕೃತಕಾದ್ರಿಸಂಕುಳಂ || ೯೦

ಆಗಳುಮುಳ್ಳಲರ್ದಲರ್ವ ಪೂಗಳ ಕಂಪಿನ ಸೊಂಪಿನಬ್ಬರ
ಕ್ಕಾಗರವಾದ ಪುಷ್ಪಲತೆ ಪೂಗಿಡು ಪೂಮರನೆಂಬಿವಂ ಮನೋ |
ರಾಗದಿನಾಗಳುಂ ಮುಸುಱಿ ನಿಂದಳಿಮಾಲೆಯ ಗೀತನಿಸ್ವನಾ
ಭೋಗದೆ ಪುಷ್ಪವಾಟಿ ಬಗೆಗೊಳ್ವುದನಂಗನ ಗೀತಶಾಲೆವೋಲ್ || ೯೧

ವ || ಅಂತು ಸೊಗಯಿಸುವ ಪೊಱವೊೞಲಿಂದೊಳಗೆ,

---

* ಮೊ-ಅ—ದಪ್ಪುತಿಯಪ್ಪ.

ನೆಸುಳಲ್ಬಾರದು ಸಪ್ತಸಪ್ತಿಯು ವೆರೂಥಕ್ಕೆಂದುಮೆಂಬಂತೆ ಕಾ
ಳಸಗೊಂಡಾಗಸದೊಳ್ ನಿಜಸ್ಥಗಿತರತ್ನದ್ಯೋತವಿಸ್ತಾರದಿಂ ।
ದೆಸೆಯಂ ಚಿತ್ರಿಸುತುಂ ವಿಶಾಲತರಶಾಳಂ ವಿಸ್ತೃತಾಟ್ಟಾಳವಂ
ದ್ಘಸವಿಚೀನಪಟಧ್ವಜಂ ಕನಕಕೋಟಾಮಂಡಲಂ ರಂಜಿಕುಂ ॥ ೯೪

ಆದಜೊಳ್ ಚಂಡಾಂಶುಬಿಂಬಂ ತೊಡದರ್ದು ಮಿಡುಕದಿರ್ದಪ್ಪುದೆಂಬಂತಿ ರಾತ್ಮಾ
ಗ್ರದೊಳ್ಪೊಪ್ಪಂಬೆತ್ತ ಚೆಂಬೊಂಗಳಸದೆಳಪಿಸಿಲ್ ಸಂತತಂ ವ್ಯೋಮಗಂಗಾ ।
ಬ್ಜದ ಪೆರ್ಚಂಮಾಡೆ ಕೂಟಧ್ವಜದ ದುಗುಲದಿಂ ಸಂಚರತ್ಖೇಚರೀಲೋ
ಲದುಕೂಲಭ್ರಾಂತಿಯಂ ಪುಟ್ಟಿಸುತುಮೆಸೆವುದಭ್ರಂಕಷದ್ವಾರಹರ್ಮ್ಯಂ ॥

ನಿಳಯಕೊಕ್ಕೇರೊಂದುಕೇಳೀವನವುಮಮೃತಕಾಸಾರಮುಂ ವಾಟಮುಂ ತ
ನ್ನಿಳಯಂಗಳ್ ಮಾಡಮುಂ ಮಂಟಪಮುಮುಪರಿಯುಂ ತನ್ನಿವಾಸಂಗಳೊಳ್ ಗೋ ।
ಕುಳಮುಂ ಧಾನ್ಯಂಗಳುಂ ತೀವಿದ ನವಸಿಧಿಯುಂ ತದ್ಗೃಹಸ್ಥರ್ಕಳಾಪೇ
ಕ್ಷಳರುಂ ಗಂಭೀರರುಂ ಭೋಗಿಗಳುಮೆನೆ ಪುರಶ್ರೀಕರಂ ರಂಜಿಸಿರ್ಕುಂ॥

ಘನತರವಾದ ಕತ್ತುರಿಯ ನೀರ್ದಳಿಪಂ ಪುದಿದಿರ್ದ ತೋರಣಂ
ತ್ತಿನ ಕಡೆ ತಳ್ತ ಹೇಮಮಯಪುಷ್ಪದ ಪೂವಲಿ ನೀಲಚೀನಕೇ ।
ತನತತಿ ಮಾಲೆಗೊಂಡ ಮಣಿದೋರಣಮೆಂಬಿವು ಬೀದಿಬೀದಿಯೊಳ್
ಮನೆಮನೆಯೊಳ್ ವಿರಾಜಿಸೆ ವಿರಾಜಿಸುತಿರ್ದುದು ತತ್ಪುರಾಂತರಂ ॥ ೯೭

ಘನಕಾಳಾಗರುಧೂಪಧೂಮಮೆಳಸಿವ್ಯೋಮಂ ತ್ರಿಸಂಧ್ಯಾನಕ
ಧ್ವನಿಶಬ್ದಾತ್ಮಕದಿಕ್ತಟಂ ಶಿಖರಮಾಣಿಕ್ಯಾತಪೋಜ್ಜೃಂಭಿತ ।
ದ್ಯುನದೀವಾರಿಜಮೊಪ್ಪುತಿರ್ಪುದು ಸುರಾಗಾರೋತ್ಕರಂ ನತ ಕೀ
ಜನತೋಲ್ಲಾಸಿತಕೇಕರಂ ವಿವಿಧಲೀಲೋದ್ಯಾನಶೋಭಾಕರಂ ॥ ೯೮

ಅವಿರಳವಾದ ಕೇಳಿವನಕೇಳಿಸರೋವರಶೋಭೆಯಿಂ ಸುಧಾ
ಧವಳತರಮ್ಯಹರ್ಮ್ಯನಿಕುರಂಬಕದಿಂ ವರವಾರಕಾಮಿನೀ ।

ವಿವಿಧವಿಡಂಬದಿಂ ಸೊಗಯಿಕುಂ ವಿಟವೃಂದವಿಹಾರಿಗಳ್ ಮನೋ
ಭವಜಯಕಾರಿಗಳ್ ಹೃದಯಹಾರಿಗಳಲ್ಲಿಯ ಸೂಳೆಗೇರಿಗಳ್ ॥ ೯೯

ಕಳ ಕರ್ಪೂರದ ಕಸವಂ
ತಳಿ ಕತ್ತುರಿನೀರಸಿಕ್ಕು ಮುತ್ತಿನ ಕಡೆಯಂ ।
ಬೆಳಗು ಮಣಿದೀಪಮಂ ಪೊಗೆ
ಗೊಳಿಸಗರುವನೆಂಬರಲ್ಲಿ ಸೂಳೆವೆಳರ್ಕಳ್ ॥ ೧೦೦

ಪೊಸತೆನಿಪೊಂದು ಪಕ್ವಫಲಮೆಂದರುಣಾಧರಮಂ ಕರ್ದುಂಕಲೋ
ದಿಸುತಿರಲಾಡುಗರ್ಚಿ ಭರದಿಂ ನಿಲೆ ತತ್ಫಲಮೆತ್ತವೋದುದೆಂ ।
ದಸಿಯಳ ಹಸ್ತದಿಂದಿಱದು ತನ್ಮಣಿಕುಟ್ಟಿಮದೊಳ್ ತೊಳಲ್ದು ವೀ
ಕ್ಷಿಸುವತಿಮುಗ್ಧರಾಜಶುಕಮೊಪ್ಪುಗುಮಾಗಣಿಕಾಗೃಹಂಗಳೊಳ್ ॥ ೧೦೧

ಮುನಿದುಱದಿರ್ದು ಪೋಪುಱುದು ಪೋದೊಡೆ ಪಿಂದನೆ ಬರ್ಪ ಬಂದು ಕ
ಣ್ಬನಿ ಕರೆಗಣ್ಮೆ ಕಾಲ್ವಿಡಿವ ಕಾಲ್ವಿಡಿದೋಪನನೋಪಳಾಯ್ದು ಸಂ ।
ದನತರುಮಧ್ಯಕೇಳಿಗೃಹಮಂ ಪುಗುತಿರ್ಪ ವಿಚಿತ್ರಚಿತ್ರದಿಂ
ಜನಿಯಿಪುವಾಸುದಾಗೃಹದ ಭಿತ್ತಿಗಳುರ್ವಿಗಪೂರ್ವಭಿತ್ತಿಯಂ ॥ ೧೦೨

ಟಂಕೃತಿ ಮಿಗೆ ಜೇವೊಡೆಯೆ
ತ್ತುಂ ಕರ್ಬಿನ ಬಿಲ್ಲನರಲ ಸರಲಂ ತೂಗು ।
ತ್ತುಂ ಕರಮೆಸೆದಲ್ಲಿ ತೊಳ
ಲ್ವಂ ಕಡುಬಿಲ್ಗಾಱನತನುವೆಂಬ ತಳಾಱಂ ॥ ೧೦೩

ಸುದತಿಯುರಕ್ಕುಱಿಂದಿರುಳೊಳಿಕ್ಕಿದ ಚಂದನಪಂಕದಣ್ಪು ಸೂ
ಡಿದ ಪೊಸಜಾದಿ ತೊಟ್ಟ ನವಮೌಕ್ತಿಕಮಂಡನಮೊಪ್ಪೆ ನೇತ್ರಕೌ ।
ಮುದಿಯೊಳ ಮಾಸ್ಯಚಂದ್ರಮನೊಳಂ ಬೆಳಗುತ್ತಿರೆ ಶುಕ್ಲಪಕ್ಷಮ
ಲ್ಲದೆ ಸಲೆ ಕೃಷ್ಣಪಕ್ಷಪರಿವರ್ತನಮಿಲ್ಲೆನಿಕುಂ ಪುರಾಂತದೊಳ್ ॥ ೧೦೪

ಪುರದೊಳಗಲ್ಲಿಗಲ್ಲಿಗೆರಡುಂ ತಱದಿಂದೆಸೆವೊಳ್ಪಿನಿಂದಮಂ
ಬರಚರಕಾಮಿನೀತತಿಗೆ ಚಂದನದಣ್ಪಿನ ಸೊಂಪವೀಯುತುಂ ।

ಸಿರಿಗೆ ನಿವಾಸವೆನಿಪ ಪಿರಿಯಂಗಡಿಗಳ್ ಕರವೊಪ್ಪಿ ತೋರ್ಪುವಾ
ಪುರವರಲಕ್ಷ್ಮಿ ತೊಟ್ಟ ಪೊಸಮುತ್ತಿನ ಹಾರದವೊತ್ತದಂದದಿಂ* ॥೧೦೫॥

ಅಗಣಿತಧನಂಗಳಿಂದಂ
ನಗುತಿರ್ಕುಂ ಮೇರುನಗಮೆನಿಸೆ ನೆಗಳ್ದಳಕಾ ।
ನಗರೀಶಂ ಬರ್ಕುಮೆ ತ
ನ್ನಗಂದ ಕಡೆಪಟ್ಟ ಪರದರೊರೆಗಂ ದೊರೆಗಂ ॥ ೧೦೬

ದೆಸೆಗಳ್ ನಿಜಾಂಶುವಿಂ ರಂ
ಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ।
ಕೊಸಗಿನ ಮರದುಱುಗಲರ
ಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರವೆಸರಂ ॥ ೧೦೭

ಅಜರಾಮರತ್ವಮಂ ಪಾ
ರಜನಂಗಳ್ಗೀವ ತನ್ನ ವಿವಿಧೌಷಧಿ ನಾ ।
ಕಜನಗದ ಮಹೌಷಧಿಗಳ
ನಿಜಸೃಷ್ಟಿಯೊಳಸಿಪ್ರುವಲ್ಲಿ † ಗಂದಿಗವೆಸರಂ ॥ ೧೦೮

ಭೀಕರಬಾಡಬಾಗ್ನಿಯು ದವಾಗ್ನಿಯು ತೀವ್ರತೆಗಳ್ಕಿ ಬಂದು ನಿ
ರ್ವ್ಯಾಕುಳವಿರ್ಪಗಳ್ಳಿಲ್ಲಿ ನೆಲಸಿತ್ತ ಜಳಾತ್ಮಕರೂಪವಾಗಿ ರ ।
ತ್ನಾಕರಸಂಕುಳಂ ಶಿಖರಿನಾಮವಿವರ್ಜಿತವಾಗಿ ರೋಹಣಾ
ನೀಕವೆನಲ್ಕೆ ‡ ರನ್ನವೆಸರಂ ಬಗೆಗಚ್ಚರಿಯಂ ನಿಮಿರ್ಚುಗುಂ ॥ ೧೦೯

ಸಲೆದೋಷಾಕರನಂ ಕಳಂಕಯುತನಂ ತಾಳ್ದಿರ್ಪುದೀವ್ಯೋಮಮಂ
ಡಳಮೆಂದಂತದನೊಲ್ಲದಪ್ರತಿಮವಾರಸ್ತ್ರೀಜನಾಸ್ಯೇಂದುಸಂ ।
ಕುಳಮಂ ತಾಳ್ದುದಿಂತಿದೆಂದು ಪುರದೊಳ್ ಬಂದಿರ್ದ ತಾರಾಗಣಂ
ಗಳಿವೆಂಬಂತಿರೆ ಕಂಚುಗಾಱವೆಸರಂ ಮಾಱ್ಕುಂ ಮನೋರಾಗಮಂ॥೧೧೦

* ಗ.—ಮುತ್ತಿನಂದದಿ.ಂ
† ಕ. ಖ. ಗ.—ಳಿಸೈದುವಲ್ಲಿ. ‡ ಕ. ಖ. ಗ.—ಪಿರಲ್ಕೆ.

ಸುರತರು ಕುಸುಮವೆಂಬರದೊ
ಳ್ಪರಿಪಾಟಿ ಬಣ್ಣಿಸುಯೆ ನೆಯ್ದ ನೂಲಿಂ ರಂಗಿಂ ।
ದೊರೆಕೊಳ್ಳದೆನಿಪ ದಿವ್ಯಾಂ
ಬರಂಗಳಿಂದೆಸೆವುವಲ್ಲಿ ದೂಸಿಗವಸರಂ ॥ ೧೧೧

ಬಳ್ಳಡು ಬಳ್ಕ ಪೆರ್ಮೊಲೆ ವಿಜೃಂಭಿಸೆ ಕಂಕಣಕಿಂಕಿಣೀರವಂ
ಗಳ್ನಸು ಪೊಣ್ಮೆ ಹಾರಲತೆ ನರ್ತಿಸೆ ಸುಯ್ನೆಲೆವೆರ್ಚೆ ಕುಂತಳಂ ।
ಗಳ್ಕಿಮಿದಿರ್ಗಡೆ ಘರ್ಮಜಲಮುಣ್ಮೆ ವಿರಾಜಿಸುತಿರ್ಪರಲ್ಲಿ ತೋ
ಳ್ಗಳ್ನಲಿದೊಪ್ಪೆ ನೀಳ್ದುಡುಗಿ ಘಟ್ಟಿಮೆಗುಬ್ಬುವ ಘಟ್ಟಿವೆಳ್ತಿಯರ್ ॥೧೧೨

ಬಗೆಗೊಳ್ವಮ್ಮವಲೋಕಮಾತ್ರದೊಳೆ ಪೂಣ್ದೀಲೋಕಮಂ ಗೆಲ್ದ ಕಂ
ತುಗೆ ಪೂಜಾರ್ಧಮಿದೆಂದು ಸುಯ್ಗಳಗುವುನ್ಮತ್ತಾಳಿಯಿಂ ಬೀರದೇ ।
ಜಗಳಂ ಪಾಡಿಸುತುಂ ಜಯಧ್ವಜಮೆನೆತ್ತಿರ್ಪಂತಿರೆತ್ತಿರ್ದ ಮಾ
ಲೆಗಳಂ ತೋಳ್ಗಳುಮೊಪ್ಪೆ ಕಣ್ಗೊಳಿಸುತಿರ್ಕುಂಪುಷ್ಪಲಾವೀಜನಂ ॥

ಮಸೃಣಮೇದಾಳಿಸ್ವನಮು
ತ್ಕಸುಮಿತವನರಾಜಿಯಂತೆ ವಿಪ್ರಜನಾಳೀ ।
ವಿಸರದ್ವೇದಸ್ವರದಿಂ
ದೆಸೆದಿರ್ಕುಂ ಬ್ರಹ್ಮಪುರಿಯ ಸೌಧಸಮೂಹಂ ॥ ೧೧೪

ಅವನೀದೇವಸಮಾಜಮೋದುವುದನಾದಂ ಕೇಳ್ದು ಕೇಳ್ದೋದುತಿ
ರ್ಪುವು ವೇದಂಗಳನೋದೆ ತಪ್ಪುವಿಡಿದಂತೀವಾಸಿಗಳ್ಗೋದುವೇ ।
ಳ್ವುವು ತಮ್ಮೋದಿನ ಬಲ್ಮೆಯಿಂ ದ್ವಿಜವರರ್ಗಾನಂದಮಂ ಮಾಡುತಿ
ರ್ಪುವು ಕೇಳೀಶುಕಸಾರಿಕಾತತಿಗಳುರ್ವೀದೇವಸದ್ಮಂಗಳೊಳ್ ॥ ೧೧೫

ಚದುರ ಪೊದಟೆ[+] ಸಂಪದದ ಬೊಂಬುಳಿ ಸತ್ಯದ ಬಿತ್ತರಂ ವಿವೇ
ಕದ ನೆರವೀವ ವೈಮೆ ದಯೆಯುನ್ನತಿ ಧರ್ಮದ ಪೆರ್ಮೆ ಸಜ್ಜನ ।
ತ್ವದ ವಿಮಲತ್ವಮಾರ್ಪಿನ ಪೊಡರ್ಪು ವಿಳಾಸದ ದೇಸೆ ಕೂಡೆ ಭೋ
ಗದ ಕಣಿಯಾಯ್ತು ತಾಂ ತನಗೆ ಪೌರಜನಂಸ್ಥಿರಸೌಖ್ಯಭಾಜನಂ ॥೧೧೬

+ ಕ ಖ. ಗ.—ತಂ.

ವ॥ ಆಪುರದ ರಮ್ಯಪ್ರದೇಶದೊಳ್,

ಜಲಧರತತಿಯಂ ನಿಜಮೇ
ಖಲೆಯೊಳ್ ತಳೆದಿರ್ದ ಮೇರುವೆನೆ ಕನಕಮಯಂ ।
ವಿಲುಳಿತ ಪರಿಖಾಲಹರೀ
ವೇಲಯಿತಮರಮನೆಯ ಕೋಂಟೆ ಸೊಗಯಿಸುತಿರ್ಕುಂ ॥ ೧೧೭

ಸತತಂ ಪೊಂಗಳಸದ ದೀ
ಧಿತಿಮುನ್ನತಿಗಳ್ಕಿ ಬಳ್ಕಿ ಕೆಲಸಾರ್ದು ದಿವಾ ।
ಪತಿ ದಕ್ಷಿಣಗತ್ಯುತ್ತರ
ಗತಿಯಾದಂ ಪೊಗೞ್ವರಳವೆ ಬಾಗಿಲ್ವಾಡಂ ॥ ೧೧೮

ವ॥ ಅಲ್ಲಿಂದೊಳಗೆ,

ಮಂದರದಳನತ್ರಾಸದೆ
ಬಂದಿರ್ದುವು ಧವಳಮೇಘವೃತಕುಲಗಿರಿಗಳ್ ।
ಮಂದರಧರನಿರ್ಪೆಡೆಗೆಂ
ಬಂದದೆ ಸೊಗಯಿಪ್ಪುವು ಸೌಧಶಾಲೆಯ ಕರಿಗಳ್ ॥ ೧೧೯

ರವಿರಥತುರಗಮುಮುಚ್ಚೈ
ಶ್ರವಮುಂ ಪರಿಪಾಟಿಯಲ್ಲಿವಿವಱೊಳ್ ರೋಮ ।
ಚ್ಛವಿಗಮೆನಲ್ ಕಣ್ಗೆಸೆದಿ
ರ್ಪುವು ಪಳುಕಿನ ಮಂದುರಂಗಳೊಳ್*ತುರಗಂಗಳ್ ॥ ೧೨೦

ಸೊದೆವೆಳಗಿನ ಬೆಳ್ದಿಂಗಳ
ನೊದವಿಸುಗುಂ †ಸೆಜ್ಜೆಯೋಲಗದ ಶಸ್ತ್ರಾಗಾ ।
ರದ ಕೊಟ್ಟಾರದ ಭಂಡಾ
ರದ ಬಾಸಣ‡ದನ್ನವಾಸದುಪ್ಪರಿಗೆಗಳುಂ ॥ ೧೨೧

---

* ಕ. ಗ.—ಮಂಡಪಂಗಳೊಳ್. | † ಕ. ಖ. ಗ.—ಬದವಿಸುತಿರೆ.
‡ ಖ. ಗ.—ಬಾಣಸ.

ಸ್ಮರರಾಜಂ ವನಪಾಲನಾಗೆ ರತಿಲಾವಣ್ಯಪ್ರವಾಹೋತ್ಕರಂ
ಪರಿನೀರಾಗೆ ನಿರಂತರಂ ಋತುಗಳಾಳ್ಗಂ ಕಾಪಿನಾಳಾಗೆ ಚೈ |
ತ್ರರಥೋದ್ಯಾನದ ಚೆಲ್ವನೊತ್ತರಿಸಿ ಕೇಳೀಶೈಲಕೇಳೀಸರೋ
ವರಕೇಳೀಗೃಹಮೆಂಬಿವಂ ತಳೆದು ಕೇಳೀನಂದನಂ ರಂಜಿಕುಂ ||೧೨೨

ಪುದಿದುದ್ಯಾನದೊಳಂತವು
ರದ ಬೆಳ್ಳಿಯ ಬಳ್ಳಿಮಾಡಮೆಸೆದುವು ಪಲವೊ |
ರ್ಮೊದಲಲೆವ ಪವನನಿಂದು
ಚ್ಚಿದ ವಾರ್ಧಿಯೊಳಾಗೆದ ಫೇನಪಿಂಡಂಗಳವೋಲ್ || ೧೨೩

ಆಮಾಡಂಗಳ ನಡುವು
ದ್ದಾಮಂ ಕರುಮಾಡಮೊಪ್ಪುಗುಂ ಧವಳಾಭ್ರ |
ಸ್ತೋಮಂ ಬಳಸಿರೆ ನಡುವಣ
ರಾಮಂತೆಯಿಂ ಹೇಮದಚಳಮೊಪ್ಪುವ ತೆಱದಿಂ || ೧೨೪

ನೀಲದ ಕೇರ್ಗಳ್ ನಡುಮು
ಕ್ತಾಲಂಬೂಷದ ನೆಱಿಗಳಂ ತಳೆದಿರ್ದಂ |
ಲೀಲೆಯನಾಂತುವೊ ಪೂತ ತ
ಮಾಲಲತಾಜಾಲದಂತೆ ಹರ್ಮ್ಯಾಂತರದೊಳ್ || ೧೨೫

*ಪಿಂಗಳಸುವರ್ಣಲಂಬೂ
ಷಂಗಳ ಮಾರ್ಪೊಳ್ಪು ತಳ್ತ ಪಚ್ಚೆಯ ಕಂಭಂ |
ಭಂಗಿವಡೆದಿರ್ದುವಲ್ಲಿ ಬೆ
ಡಂಗಿಂ ಕುಟ್ಮಳಿತಮಾದ ಚಂಪಕಲತೆವೋಲ್ || ೧೨೬

*ಅದಱ ವಿಚಿತ್ರಮಣಿಸ್ತಂ
ಭದ ಹಿಮಕರಕಾಂತಪುತ್ರಿಕಾತತಿ ನಿಜಕಾಂ |
ತಿಮಕೂಲದಿಂದಲಂಕರಿ
ಪುದುಪಾಂತದ ನೀಲಪುತ್ರಿಕಾಸಮುದಯಮಂ || ೧೨೭

* ಈ ಗುರುತುಳ್ಳ ೨ ಪದ್ಯಗಳು ಖ ಪುಸ್ತಕದಲ್ಲಿಲ್ಲ.

*ಪಳುಕಿನ ಕುಟ್ಟಿಮದೊಳ್ ಮೂ
ರ್ತೊಳಗುವ ಪರಿನೀಲಮಣಿಯ ಸೂಸಕದ ನಱು |
ಗ್ಗಳನಸಿತಾಹಿಗಳೆಂದೊಸೆ
ದೆಳಸುವ ದೀಪದ ನವಿಲ್ಗಳೂರ್ವ್ವರುಮವೆಯೊಳ್ ॥ ೧೨೮

ವರವನಿತಾಜನದಲತೆಗೆ
ವೊರೆದಡಿವಜ್ಜೆಗಳನಾಂತು ಪಜ್ಜಳಿಸುವುದುಂ |
ಮರಕತರಂಗವುಮಂ
ತಾವರೆಗೊಳನೆಂದಲ್ಲಿ ಸುಳಿವ ಹಂಸಗಳಸೆಗುಂ ॥ ೧೨೯

ಸೊಗಯಿಪ ಚೌಕದ ಬಿಡುಮು
ತ್ತುಗಳೊಳ್ ಪೂವಲಿಯ ಮಲ್ಲಿಕಾಮುಕುಳಶ್ರೀ |
ಣಿಗಳಂ ಭಾವಿಸಲಱಿಯದೆ
ಮೊಗಸುತ್ತಿಹುವಗರುಧೂಪಧೂಮಕ್ಕಳಿಗಳ್ ॥ ೧೩೦

ಶರ್ವಾಣೀಶಗ್ರಹಕ್ಕೆ ಸು
ಪರ್ವೇಂದ್ರಗ್ರಹಕ್ಕಮೆ ಸಮುದಾತ್ತೀಯಕಳಾ |
ಸರ್ವಜ್ಞತೆಯುಂ ಮೆಱೆದಂ
ಗೀರ್ವಾಣಸ್ಥಪತಿ ನಿಮ್ಮ ಗೃಹವಿರಚನೆಯಿಂ ॥ ೧೩೧

†ಅಹಿರಾಜಂ ದ್ವಿಸಹಸ್ರಜಿಹ್ವನಱಿಯಂ ವ್ಯಾವರ್ಣಿಸಲ್ಬಲ್ಲನೇ
ಮಹಿಯೊಳ್ ಮಾನವನೊಂದೆ ನಾಲಗೆಯೊಳಂ ತದ್ಭೂಭುಜಾಗಾರಮಂ ॥
ಬಹುವಿಸ್ತಾರವಮನಿಂದ್ರ ಪುಷ್ಪಕವಿಮಾನಾಕಾರಮಂ ತನ್ಮಹಾ
ಮಹಿಮಾಧಾರಮನತ್ಯುದಾರಮನಿಳಾಚಕ್ರೀತಶ್ಚಮತ್ಕಾರಮಂ ॥ ೧೩೨

ವ॥ ಎಂದು ಪುರಮನಭಿವರ್ಣಿಸಿ ಸುಪರ್ಣಂ ಬೀಳ್ಕೊಂಡು ಪೋ
ಪುದುಂ,

---

† ಈಪದ್ಯವು, ಖ ಗ. ಪುಸ್ತಕಗಳಲ್ಲಿಲ್ಲ.

ಉರುಚಾತುರ್ವಲಚಕ್ರದಿಂ ವಿವಿಧಶಸ್ತ್ರಾಸ್ತ್ರ ಪ್ರಭಾಚಕ್ರದಿಂ
ದ್ವಿರದಸ್ಯಂದನಕೇತುಚಕ್ರದಿನಿಳಾಚಕ್ರಂ ದಿಶಾಚಕ್ರಮಂ ।
ಬರಚಕ್ರಂ ನೆಱೆ ತೀವೆ ಮೇರುವ ಗುಹಾಚಕ್ರಕ್ಕೆ ವಾದಿತ್ರಚ
ಕ್ರರವಂ ಮಾರ್ದನಿವೀಱೆ ಚಕ್ರಧರನೆಯ್ತಂದಂ ಮಹೋತ್ಸಾಹದಿಂ॥೧೩೩

ವ॥ ಅಂತು ಬಂದು ಸಕಲಶುಭಮುಹೂರ್ತದೊಳ್ ಪುರಪ್ರವೇಶಮಂ ಮಾಡಿ,

ಗರುಡಂ ಪೇೞ್ದಂದದಿಂದೊಪ್ಪುವೆನಿಜಪುರಮಂಕೂಡೆನೋಡುತ್ತುಮೆತ್ತಂ
ತರಳಾಪಾಂಗಾಂಶುಜಾಳಂ ದ್ವಿಗುಣಿಸೆನಗರಸ್ತ್ರೀಜನಂಸೂಸುವಾಪಾಂ॥
ಡುರಶೇಷಾನೀಕಮಂ ಕೈಕೊಳುತ್ತುಮತುಳಗೀತಾನಕಧ್ವಾನಮುಣ್ಮು
ತ್ತಿರೆ ಪೊಕ್ಕಂ ವಾಸವಾವಾಸವೆನಿಪ ನಿಜಾವಾಸಮಂ ವಾಸುದೇವಂ ॥೧೩೪

ಇದು ಸಮಸ್ತ ಕಮಲಭವಾಂಡ ಮಾಲಾ ಘಟೀ ಘಟಿತಾರಘಟ್ಟಘಟನಾ
ಸ್ವತಂತ್ರನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ
ಲಕ್ಷ್ಮೀಕಾಂತಶ್ರೀ ಪಾದಭಕ್ತಿಯುಕ್ತ ಸುಕವೀಂದ್ರರುದ್ರ
ಪ್ರಣೀತಶ್ರೀಜಗನ್ನಾಥವಿಜಯಮಹಾಪ್ರಬಂಧದೊಳ್
ಕಾಲಯವನದಹನ ದಂತವಕ್ರವಿಕ್ರಮಾಡಂಬರ
ತತ್ಸಂಹರಣ ದ್ವಾರಕಾನಗರನಿರ್ಮಾಪಣ
ತತ್ಪುರಪ್ರವೇಶವರ್ಣನಂ
ನವಮಾಶ್ವಾಸಂ
ಸಂಪೂರ್ಣಂ.

---

## ದಶಮಾಶ್ವಾಸಂ.

ಶ್ರೀಪಾದಕಲ್ಪಪಾದಪ
ಮಾಪನ್ನಾಶ್ರಿತಸುಖಪ್ರದಂ ಭುಜಭುಜಗಂ ।
ವೈಪಕ್ಷಜೀವಪವಮಾ
ನಾಪಹಮೆನೆ ಕೃಷ್ಣನಿರ್ದನಾದ್ವಾರಕೆಯೊಳ್ ॥ ೧

ವ॥ ತದನಂತರಂ,

ದೇವಜ್ಞೋಪ್ತನ ಪಸದಿಂ
ರೈವತಕಂ ತಂದು ತನ್ನ ಮಗಳಂ ಕುಡಲಾ ।
ರೇವತಿಯೊಳ್ ಬಲರಾಮಂ
ವೈವಾಹೋತ್ಸವದೆ ಪರಮ ಸುಖದಿಂದಿರ್ದಂ ॥ ೨

ವ॥ ಅನಂತರಮೊಂದುಸಮಯದೊಳ್,

ಮದಿರಾಪಾಂಗವಧೂವಿಳಾಸರಸತೋಯಂಚಂಚಲಚ್ಚಾಮರೋ
ನ್ಮದಹಂಸಂ ಪ್ರತಿಹಾರಸಾರಸರವಂ ನಾನಾಮಹೀಪಾಲಪೌ ।
ಳಿದಳತ್ಕೋಕನದಂ ಸಭಾಂಬುರುಹಷಂಡಂ ರುಕ್ಮಿಣೀಲಕ್ಷ್ಮಿಗಾ
ಸ್ಪದಮಪ್ಪಂತೆವೊಲೊಪ್ಪುವೋಲಗದೊಳಿರ್ದಂ ಯಾದವಾಧೀಶ್ವರಂ ॥ ೩

ವ॥ ಆಗಳ್,

ಬಿಸಿಲಂ ಬೆಳ್ದಿಂಗಳೊಟ್ಟೈಸಿದುದೊ ಪಗಲೊಳಂ ಚಕೋದ್ಯಮೆಂಬಂತು ಚೆಲ್ವಾ
ಗಸದಿಂ ತಳ್ಪುಯ್ವುದುಂ ಕೇಡಿದು ಖಚರದುಕೂಲಾಂಬರದ್ಯೋತಮೋ ವ್ಯೋ ।
ಮಸರಿಡ್ಡಿಂಡೀರಪಿಂಡಪ್ರಭೆಯೊ ದಿಗಿಭದಂತಾವಳೀಚ್ಛಾಯೆಯೋ ಭಾ
ವಿಸಲೆಂದಾವೇಗದೊಳ್ವಿಸ್ಮಯರಸವಿಸರಸ್ಯಂದಿಯಾದಂಮುಕುಂದಂ ॥ ೪

ಕಣ್ಣಾಳ್ಕೆಯುಮಾಶ್ಚರ್ಯಾವಿ
ಷ್ಣಾರದೆಂತೆನುಮರೆಬರಿೀಕ್ಷಿಸೆ ನಭದೊಳ್ ।

ತೀಣ್ಣ ಮೆನಲ್ ಪಸರಿಸಿಗ
ಕ್ಷ್ಣಣ್ಣ ಪ್ರಥಯೊಳಗೆ ಪೂಳದುದೊಂದಾಕಾರಂ ॥ ೫

ವ॥ ಅನ್ನೆಗಂ,

ಶಾರದಪಾಂಡುಮೇಘಮೆ ತಟಿಲ್ಲತೆಯಂ ಭಗಣಂಗಳಂ ಸ್ಫುರ
ತ್ತಾರಕರಾಜಮಂಡಲಮೆನಾಂತಿಱವಂತಿರೆ ಪೊನ್ನ ಮುಂಜೆ ಮು ।
ಕ್ತಾರುಚಿರಾಕ್ಷಮಾಲೆ ಶಶಿಕಾಂತಕಮಂಡಲು ತನ್ನ ಪಾಂಡುರಾ
ಕಾರದೊಳೊಪ್ಪೆನಾರದನದೇನಿೞತಂದನೊ ನೀರದಾಧ್ವದಿಂ ॥ ೬

ಪೂಮರದೊಳ್ ನವಕುಸುಮರ
ಜೋಮಯವಿಚರನ್ಮದಾಳಿಮಾಲೆಗಳೆಸೆವಂ ।
ತಾಮುನಿಬೃಂದಾರಕನೊಳ್
ಹೇಮಪಿಶಂಗಸ್ಫುರಜ್ಜಟಾಳಿಗಳೆಸೆಗುಂ ॥ ೭

ಪರಿವೃದ್ಧಿವೆತ್ತುಬೀೞ
ಲ್ವರಿದುದುರಸ್ಸ್ಥಳದೊಳೀಮುನೀಂದ್ರನ ಹೃದಯ ।
ಸ್ಫುರದಮಳಸತ್ವಮೆನೆ ಮುನಿ
ವರನೊಳ್ ಯಜ್ಞೋಪವೀತತತಿ ಸೊಗಯಿಸುಗುಂ ॥ ೮

ಬಂದಪುದು ಮುನಿಪನೊಡನೆಯು
ದೊಂದು ವಿಯನ್ನದಿಯ ಕಿಱುಗಡಲ್ ಕೌತುಕಮಂ ।
ಬಂದದೆ ದುಗುಲದ ಕೌಪೀ
ನಂ ದಂಡಾಗ್ರದೊಳದೊಂದು ಯತಿಪತಿಗೆಸೆಗುಂ ॥ ೯

ಕುಂದಧವಳಾಂಗರುಚಿ ನಗೆ
ತಂದು ಶುಚಿಭೂತವಾಗಿ ವೃತ್ತಾಕೃತಿಯಿಂ ।

---

* ಕ. ಖ. ಗ.—ಪಸರಿಸೆ ತತ್ಕ್ಷಣ್ಣ.

ಬಂದುದು ಮುನಿಪನ ಮೇಲೆನ
ಲಂದೆಸೆದುದು ಬಿಳಿಯಬಟ್ಟೆಗೊಡೆ ನಾರದನಾ ॥ ೧೦

ವ॥ ಅಂತು ಸೊಗಯಿಸಿ ನಭೋಂತರದಿಂ ಸಭಾಂತರಕ್ಕವತರಿಸಿ ದಾಗಳ್,

ನೀಲೀಪಟಮಂ ದೆಸೆವೆ
ಣ್ಗೋಲೈಸೆ ನಿಜಾಂಗಕಾಂತಿ ಕೌಸ್ತುಭರುಚಿ ತ ।
ಳ್ತಾಲಿಂಗಿಸೆ ಮುನಿಯಂ ವನ
ಮಾಲಿ ಕನತ್ಪೀತವಸನನೊಸೆದಿದಿರೆಳ್ದಂ ॥ ೧೧

ವ ॥ಅಂತು ಮೃಗೇಂದ್ರಪೀಠದಿಂದಿದಿರೇಳ್ವುದುಂ,

ಯದುವಂಶೋತ್ಪನ್ನನಾದಂ ಜಲಧಿಶಯನನೆಂಬೊಂದಭಿಜ್ಞಾನದಿಂ ನಾ
ರದನಾಕೃಷ್ಣಂಗೆ ಮುನ್ನಂ ಮನದೊಳಱಗಿದಂ ಕೃಷ್ಣನುಂ ರುದ್ರಮು ದ್ರಾ ।
ಸ್ಪದನೆಂದಾನಮ್ರನಾದಂ ಮುನಿಗೆ ನೆಗಳ್ದುದಂತಾಮುನೀಂದ್ರಂಗಮಾಶ್ರೀ
ಸದನಂಗಂಮಾನಸಂಕಾಯಿಕಮೆನಿಪಸಕೃತ್ತಥ್ಯಮಿಥ್ಯೋಪಚಾರಂ॥೧೨

ಪೂಜಾಸತ್ಕೃತನಾಗಿ ಸ
ರೋಜಾಸನತನಯನಿರೆ ವಿಶಿಷ್ಟಾಸನದೊಳ್ ।
ರಾಜೀವನಯನನಿರ್ದಂ
ರಾಜಿಸೆ ನಿಜಮೂರ್ತಿ ತನ್ಮಹಾಸ್ಥಾಯಿಕೆಯೊಳ್ ॥ ೧೩

ವ॥ ಅನಂತರಂ,

ಪೂರಿಸುವ ನವದೆ ಮುಂ ಪೀ
ವರ್ಾರುಚಿಮುತ್ಪಾಂಚಜನ್ಯರಶ್ಮಿಯನತ್ಯು ।
ದ್ಗಾರಿಪವೊಲ್ ದಂತದ್ಯುತಿ
ರಾರಾಜಿಸಿ ಮುಖದಿನುಣ್ಮೆ ನುಡಿದಂ ಕೃಷ್ಣಂ ॥ ೧೪

ಭವದೀಯಯೋಗಮವಿಂದು ಯೋಗಮುಹದಂತೀಂದತ್ತು ಸ್ವೈಪಂ ತ್ವದಂ
ಘ್ರಿವನೇಜಾತಪರಾಗಮಾಗಿಸಿದುದುವೀತರಾಗಮುಂ ಯುಷ್ಮದೀ।
ಯವಿಲೋಕಂ ಯದುಲೋಕಮುಂ ವೃಜಿನದಿಂ ಮುಯ್ಪಿಂಗಿಸಿತ್ತೀಸಭಾ
ಭವನಕ್ಕಿತ್ತುದು ನಿಮ್ಮ ವಾಕ್ಸುಧೆ ಸುಧಾಶ್ರೀಯಂ ರದಜ್ಯೋತ್ಸ್ನೆಯಿಂ॥

ವ॥ ಎಂದುಪೇಂದ್ರಂ ಮುನೀಂದ್ರಂಗೆ ನುಡಿಯೆ,

ಆಮುನಿಪವದನಚಂದ್ರಸು
ಧಾಮಳರುಚಿ * ಮುಖದಿನುಣ್ಮಿದಪ್ಪುದೆನೆ ದಶನೋ।
ದ್ದಾಮಧವಳಾಂಶು ಪಸರಿಸೆ
ತಾಮರಸಾಕ್ಷಂಗೆ ಮುನಿಪನಂದಿಂತೆಂದಂ ॥ ೧೬

ದರಹಾಸಜ್ಯೋತ್ಸ್ನೆಯಿಂ ದರ್ಪಕವಿಶದಯಶಂ ಕೊರ್ವೆ ಲಾವಣ್ಯದಿಂದಂ
ಸ್ಮರತೇಜಂ ಪೆರ್ಚೆ ಕಣ್ಗೊಂಡವಳಧವಳನೇತ್ರಾಂಚಲಾಲೋಕಮಾತ್ರಂ॥
ರಮಾದತ್ತಂಗಜಂಗೀತ್ರಿಜಗಮುಮಿದಿರಿಲ್ಲೆಂಬಿನಂ ಪೂವಿನಂಬಂ
ತಿರುವಾಯೊಳ್ಪಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿ
ರ್ದಳ್ ॥೧೭

ವಶವರ್ತಿಮಾಳ್ಕುಮಂಗಜ
ವಿಶಿಖದಿನೀಕ್ಷಿಸಿದವಿಟರನವಯವದೊಳಮಂ।
ಗಸಲಾಕೆಯೊಳಂ ಪ್ರತ್ಯೇ
ನೆಕಶೋಭೆ ಸಮುದಾಯಶೋಭೆಗಳ್ ರುಕ್ಮಿಣಿಯಾ॥ ೧೮

ವ॥ ಅಂತು ಸಕಲಲಕ್ಷಣೋಪಲಕ್ಷಿತಾವಯವಸಂಪನ್ನೆಯಪ್ಪ ಕ
ನ್ನೆಯ ರೂಪಮನಾಪಾದಮಸ್ತಕಾಗ್ರಂಬರಂ ಪೇೞ್ವನದೆಂತೆನೆ,

ಸಲ್ಲದು ಸೆಣಸಲ್ ತನಗಿನಿ
ಸಲ್ಲದು † ಚೆಲ್ವನಿಸಿ ಗೆಲ್ದು ಸತಿಯಡಿದಳಿರ್ಗಳ್ ।

---

* ಕ —ಆಮುನಿಪನವಮಾನಸಹಂಸಾಮಳರುಚಿ

† ಕ.—ತವಗಿದುಸಲ್ಲದು.

ಪಲ್ಲವಕಮನೀಯತೆಯಿಂ
ಪಲ್ಲವಕಮನಃಪ್ರಮೋದಮಂ ಪೆರ್ಚಿಸುಗುಂ ॥ ೧೯

ಸ್ತನಸಂಗಮಿರಲ್ ಸದ್ಯ
ಸ್ತನಸಂಗಂ ನೆಗೞ್ಗುಮೆಮ್ಮೊಳಧಿಪತಿಗೆ ಕುಚಕ ।
ಕ್ಕನಿಸುನ್ನತಿಯೇಕೆನುತುಂ
ಕಿನಿಸುವವೋಲ್ ನಿಮಿರ್ದು* ಕನ್ನೆಯಂಗುಳಿಯೆಸೆಗುಂ ॥ ೨೦

ಕಾಮನ ತಿಳಿಗೊಳವೆನಿಪ ನಿ
ಕಾಮನಖದ್ಯುತಿಜಲಪ್ರವಾಹದೊಳಸೆವಾ ।
ವಾಮೆಯ ಮೆಲ್ಗಾಲ್ ಸೊಗಯಿಸು
ವಾಮೆಯನನುಕರಿಸಿ ಮನಮನಿೞ್ಕುಳಿಗೊಳ್ಗುಂ ॥ ೨೧

ಕುಂದದರಸ್ಮಿತೆಯ ಮಡಂ
ಕುಂದದ ಚೆಲ್ವಿಂ ಮನೋಜರಾಜಕ್ರೀಡಾ ।
ಕಂದುಕಮೆನೆ ಜನದ ಮನ
ಕ್ಕಂದು ಕರಂ ಮುದಮನೊದವಿಕುಂ ಮೃದುಗತಿಯಿಂ ॥ † ೨೨

ಪೊಣರದೆ ಮದನನ ಡೊಣೆಗಳ
ಪೊಣರದೆನಲ್ ನಂಬಿ ಕೇಳ್ವುದಾಯುವತಿಶಿಖಾ ।
ಮಣಿಯ ಕಿಱುದೊಡೆಯನೀಕ್ಷಿಸೆ
ಮಣಿಯುದರಾರ್ ಮದನನಿಸುವ ಮೋಹನಶರದಿಂ ॥ ೨೩

ರಂಭಾವಿಭವದಿನಧಿಕತ
ರಂ ಭಾವಿಸೆ ಪತಿಮನೋಮದೇಭಾಲಾನ ।
ಸ್ತಂಭವೆನೆ ನೋಡೆ ಸುಗತಿ
ಸ್ತಂಭವನೊಡರಿಪುವು ಬಟ್ಟದೊಡೆ ರುಕ್ಮಿಣಿಯಾ ॥ ೨೪

---

* ಕ. ಖ. ಗ.—ಮಲರ್ದು ಕನ್ನೆಯುಂಗುಟಮೆಸೆಗುಂ.

† ಕ. ಖ. ಗ —ಈ ಪದ್ಯವು ೨೧ನೆಯ ಪದ್ಯದ ಹಿಂದೆಯೆ ಇರುತ್ತದೆ

ಕಾಂತನ ಹೃತ್ಕೇಕಿ ದಿಟ
ಕ್ಕಾಂತನವಧಿಮುದಮನಲ್ಲಿ ನಲಿವುದಱಿಂದಂ ॥
ಕಂತುವ ಕೃತಕಾದ್ರಿಯೆನ
ಲ್ಕಂತು ವನೇಜಾಸ್ಯೆಗೆಸೆಗುಮುನ್ನತಜಘನಂ ॥ ೬೫

ಬಾಸೆಯೆ ತನಗದು ಸರವಂ
ಬಾಸೆಯೆ ಪಿರಿದದಱಿನುಡಿಯದೊಳ್ಕುಡುವೆಂಬೀ ।
ದೇಸೆಗೆ ಸಂದಂಗಜನೊಂ
ದೇಸೆ ಗೆಲಲ್ ಜಗಮೆನವಳ ತೆಳ್ವಸಿಱಿಸೆಗುಂ ॥ ೬೬

ನಳನಳಿಸಿ ಬಳೆದು ವಿರಹಾ
ನಳನಳುರ್ಗುವಮಾವಿಳಾಸರಸದ ತರಂಗಾ ।
ವಳಿಗಳನೀಟಿಸುವ ಮಧ್ಯದ
ವಳಿಗಳನೀಕ್ಷಿಸಿದ ನೀಱರಂ ರುಕ್ಮಿಣಿಯಾ ॥ ೬೭

ವನಿತೆಯ ತೆಳ್ವಸಿಱಳತೆಯ *
ವನಿತೆಯತನುರಸತಟಾಕಕುಱುಯೆನೆ ಚಂದ್ರಾ ।
ನನೆಯ ಕುಟಿವೊರ್ಕುಪೆಸೆದುದು
ನನೆಯ ಸರಲ್ ನಾಂಟೆ ತನ್ನ ನೀಕ್ಷಿಸಿದವರಂ ॥ ೬೮

ಬಾಳಕಿಗಳಿನಿಚಯದೊಳಂ
ಬಾಳಕಿಗಾರೋಮರಾಜಿ ರಂಜಿಸುತಿರ್ಕುಂ ।
ನೀಳದ ಕಾಂಚೀಮಧ್ಯದ
ನೀಳದ ನೆಗೆದುನ್ಮುಖಪ್ರಭಾರೇಖೆಯವೋಲ್ ॥ ೬೯

ಸಮನೆನೆ ಪೊಣರ್ವಕ್ಕಿ ವಿಳಾ
ಸಮನೆನಿಸಂ ತಳೆದ ಘನಕುಚಂ ನಿಬಿಡತೆಯಿಂ ।

---

* ಕ, ಗ - ತೆಳ್ವಸಿ ರಳತೆಯು.

ರಮಣಿಗೆ ಸೊಗಯಿಸುಗುಂ ಹಾ
ರಮಣಿಗೆ ನುಸುಳಲ್ಕೆ ತೆಱಪುಗುಡದನವರತಂ ॥ ೩೦

ರತಿಕಾಂತನಸಿಯ ನುಣ್ಪಿಂಗ
ರತಿಕಾಂತದ್ಯುತಿಯನಾಂತು ಚೆಲ್ವಿನೊಳಧಿಕಂ ।
ಲತೆಯ ಮೊದಲ್ಗೆನೆ ರತಲೋ
ಲತೆಯನಿನಂಗೀವುವವಳ ತೋಳಮೊದಲ್ಗಳ್ ॥ ೩೧

ತಾಮರಸಮುಖಿಯ ನಳತೋಳ್
ತಾಮರಸ ಬೆಡಂಗುವೆತ್ತು ಸಿರಿಸದ ಸುಮನೋ ।
ದಾಮಕಮಂ ಗೆಲೆವೆಂದೆಸೆ
ದಾಮಕರಧ್ವಜನ ಪಾಶಮೆನೆ ಸೊಗಯಿಸುಗುಂ ॥ ೩೨

ತರುಣಿಮೃಗಾಕ್ಷಿಯ ದೊರೆವೆ
ತ್ತರುಣತಳಂ ಬಾಹುಲತೆಯ ಪಲ್ಲವಮೆನೆ ಭಾ ।
ಸುರತಮೆನಾಗಿರ್ದಿನನೊಳ್
ಸುರತಮನಿರ್ಮಾಡಿಸುಗುಂ ನಿಜಸ್ಪರ್ಶನದಿಂ ॥ ೩೩

ಕದನಮನೊಡರ್ಚೆ ಮೊಲೋ
ಕದ ನವಯೌವನರಸಲೆವ ನನೆಗಣೆಗಳನಲ್ ।
ಮದನಭುಜವಿಜಯಮಂ ತಾ
ಮದನಭಿವರ್ಣಿಸುವುವವಳ ಹಸ್ತಾಂಗುಳಿಗಳ್ ॥ ೩೪

ಮನಮಂ ಸಲೆ ಸೋಲಿಪ ಕಾಮನ
ಮಂಗಳಶಂಖದಂತಿರೆಸೆವವಳ ಕೊರಲ್ ।
ಜನವಾದಮೆಸೆವಿನಂ ಭಾ
ಜನವಾದತ್ತುಪಮೆಗಾಸ್ಯಮುಕುರದ ಪಿಡಿಯೊಳ್ ॥ ೩೫

ತವದಿಂಪಿಂ ನಲ್ಲಂಗಮೃ
ತವದಿಂ ಪೆಱತಲ್ಲದೆನಿಸಿ ಬಂದುಗೆಯಲರಂ ।

ಜವಳದ ಬಟ್ಟಂ ಗೆಲೆವ
ರ್ಜವಳಧರಂ ಮೊಣವಧರಿಕುಂ ಪಲ್ಲವಮಂ ॥ ೩೬

ರದನಾಳಿಯನಾರ್ ಬಣ್ಣಿಪ
ರದನಾಳಿಗೊಳುತ್ತು ಮಿರ್ದು ಮುತ್ತಿನ ಚೆಲ್ವಂ ।
ಪುದು ತನ್ನ ಕಾಂತಿ ಪತಿಗೆನಿ
ಪುದು ತನ್ನವಪಲ್ಲವೋಪಮಾನಾಧರೆಯಾ ॥ ೩೭
*
ಪಿಂಗದೆ ಲಾವಣ್ಯದ ಸೊಂ
ಪಿಂಗದೆ ತಾಂ ನಿಳಯಮೆನಿಸಿ ಯೌವನಲಕ್ಷ್ಮೀ ।
ಮಂಗಳಮಣಿದರ್ಪಣಿಯು
ಗ್ಮಂಗಳವೆಂದೆನೆ ಕಪೋಲಮಂಗನೆಗೆಸೆಗುಂ ॥ ೩೮

ರಾಜಿಪ ಮುಖಲಕ್ಷ್ಮಿಗೆ ನೀ
ರಾಜಿಪ ಮಣಿಪಾತ್ರಯುಗಳಮೆನೆ ಸೊಗಯಿಸುಗುಂ ।
ರಾಜೀವಮುಖಿಯ ಮಣಿರುಚಿ
ರಾಜೀವಳತಾವತಂಸಕರ್ಣಯುಗಂಗಳ್ ॥ ೩೯

ಸಂಪಗೆಯೊಳ್ ತನಗನುದಿವ
ಸಂಪಗೆ ಚೆಲ್ವಿಂದಮೆನಿಪ ನಾಸಾಮುಕುಳಂ ।
ಕಂಪನವಟ್ಟೈಸಿ ತುಂಬಿಗೆ
ಕಂಪನಮಂ ವಿಟಶಿರಕ್ಕೆ ಪಡೆವುದು ಸತಿಯಾ ॥ ೪೦

ಕೈದುವೆನಿಱುಕೆಯುದ್ದಿಟ
ಕೈದುವೆನಲರಂಬ † ನತನು ಜಗಮಂ ಗೆಲ್ವಂ ।

---

* ರದನಂ ಗಡಣಂಬಡೆದಾ
ರದನಂಗನ ಕೀರ್ತಿಲತೆಯ ಬಿತ್ತೆನಿಸಿದುರ್ದಂ ।
ಪುದು ತನ್ನ ಕಾಂತಿ ಪತಿಗೆನಿ
ಪುದು ತನ್ನವಪಲ್ಲವೋಪಮಾನಾಧರೆಯಾ ॥
ಈ ಪದ್ಯವು ಕ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ.

† ಕ. ಖ. ಗ.—ನಲರಂಬಿ.

ನ್ನೈದಲ * ನೀರೇಜದ ಚೆ
ನ್ನೈದಲಱಂ † ಸೋಲದೆನಿಸುವವೆಳಕ್ಷಿಗಳಿಂ ॥ ೪೧

ಕಮನೀಯಂ ಸ್ಮರಧನು ಕೊಂ
ಕಮನೀಯಂದದೊಳ್ ಪಡೆಯದೆನೆ ನಿಡುವುರ್ವಾ ।
ರಮಣೀಮುಖೇಂದುಬಿಂಬದ
ರಮಣೀಯಕಲಂಕಲೇಖೆವೋಲ್ ಸೊಗಯಿಸುಗುಂ ॥ ೪೨

ಸಕಳಂಕಮೊದ ಪೆಱೆಯೆನೆ
ಸಕಳಂ ಜಗಮೆಯ್ದೆ ಪೊಗೞಲಳಕದ್ಯುತಿಮೇ ।
ಚಕಿತಮತಿಕಾಂತಿಕಾಂತಂ
ಚಕಿತಮೃಗೇಕ್ಷಣೆಯ ಪೆಱೆನೊಸಲ್ ಸೊಗಯಿಸುಗುಂ ॥ ೪೩

ಕಮಳಕ್ಕೆಱಪಳಿಗಳನ
ಲ್ಕಮಳಕ್ಕೆ ಮುಖಾಂಬುಜಕ್ಕೆ ನಿಟಿಲಾಗ್ರಚಲ ।
ದ್ಭ್ರಮರಕಮತಿಶಯಮೆಸೆಗುಂ
ಭ್ರಮರಕದಂಬಾಂಶುರುಚಿರಗುರುಕಚಭರೆಯಾ ॥ ೪೪

ವೀರವನತನುಗೆ ನಿಜಮೌ
ರ್ವೀರವಮಿದಱಂತು ಕುಡದು ಕೋಕಿಲನಿನದಂ ।
ಸಾರಮಿನಿತಿಲ್ಲದಮೃತಾ
ಸಾರಮಿದೆನೆ ಕಿವಿಗೆ ಸೊಗಯಿಕುಂ ದನಿ ಸತಿಯಾ ॥ ೪೫

ದೊರೆ ಗಡ ಚೆಂಬೊನ್ನಿದಱೊಂ
ದೊರೆಗವಣಂ ಬಾರದೆನಿಸುವಾಪೀನಸಯೋ ।
ಧರೆಯ ತನುಕಾಂತಿ ಸತತಂ
ಧರೆಯನನನ್ಯಜನ ತೇಜದಂತೆಂಡಲೆಗುಂ ॥ ೪೬

---

* ಕ. ಖ. ಗ.—ನೈದಿಲ. † ಖ ಗ.—ಚೆನ್ನೈದಿಲ.

ನಿರವಧಿಸೌಷ್ಠವದಿಂ ತ
ನ್ನಿರವಧಿಕಂ ಚೆಲ್ವುವೀಱೆ ಕಬರೀಭರದಿಂ |
ಪರಭಾಗಂಬೆತ್ತಾಕೆಯ
ಪರಭಾಗಂ ಪತಿಯ ಮನಮನುಱೆ ಸೆಱೆವಿಡಿಗುಂ ‖ ೪೭

ವಳಯದ ನೂಪುರದುಲಿ ಭೂ
ವಳಯದ ಕಿವಿಗಮರ್ದುಗಱೆಯುಲತನುಗೆ ವಿಟರೊಳ್ |
ಕಳಹಂ ಸಮನಿಸೆ ಚೆಲ್ವಿಂ
ಕಳಹಂಸಮನಿೞಿಪುದಲಸಗತಿ ರುಕ್ಮಿಣಿಯಾ ‖ ೪೮

ಈಕೆಯ ರೂಪಿನ ಪರಿಯಂ
ಕೋಕನದಜನಂದು ಕಂಡೊಡಂತಾಗಾರೀ |
ಶ್ರೀಕಾಂತೆಯರಾಕೃತಿಯಂ
ಪ್ರಾಕೃತಮೆನೆ ಮಾಡನೆನಿಸಿ ರುಕ್ಮಿಣಿಯೆಸೆಗುಂ ‖ ೪೯

ಆರಮಣೀಶಿಖಾಮಣಿಗೆ ನೀಂ ಬಗೆ ಸೋಲ್ತೊಡವಳ್ಗೆ ಸೋಲ್ವನ
ನ್ನಾರಿಗೆ * ಸೋಲಮಂ ಪಡೆಯುವೇೞ್ಪುದದೆಂತೆನೆ ರುಕ್ಮಿ ಮೊೞ್ಪು ಕೈ |
ವಾರದೆ ಚೈದ್ಯನಾರಮಣಿಗುಂಗುರವಿಟ್ಟು ವಿವಾಹಲಗ್ನಮಂ
ಪಾರುತುಮಿರ್ದನಿಂ ಸೆರಗುವಾರದೆ ಚಿಂತಿಸಿದರ್ಕುಪಾಯಮಂ ‖ ೫೦

ಅನುರಾಗಮುರ್ವಿಗುರ್ವುಗೆ
ಜನಿಯಿಸುಗಾನಂದವಮರಸಮಿತಿಗೆ ಶಿಶುಪಾ |
ಲನಭೀಷ್ಟಸಿದ್ಧಿ ತೊಲಗುಗೆ
ನಿನಗಕ್ಕೆ ವಿವಾಹಮಂಗಳಂ ರುಕ್ಮಿಣಿಯೊಳ್ ‖ ೫೧

ವ‖ ಎಂದು ಪರಸಿ ಸರಸಿಜಾಕ್ಷನನುಜ್ಞೆಯಿಂ ನಾರದಂ ಸೀರದಪ
ಥಕ್ಕೆನೆಗೆವುದುಂ,

---

*ಕ. ಖ. ಗ.—ಸೋಲವಿನ್ನಾರಿಗೆ. ಮೊ—ಅ—ಸೋಲದೀನಾರಿಗೆ.

ತಾಂ ಗಡ ಕುಡುವೆಂ ಶಿಶುಪಾ
ಲಂಗೆ ಗಡಂ ಪೂಣ್ದು ರುಕ್ಮಿ ರುಕ್ಮಿಣಿಯಂ ಲ ।
ಗ್ನಂ ಗಡ ಸಮೀಪವರ್ತಂ ವಿಜ
ಯಾಂಗನೆವೆರಸಿಂದೆ ತಂದಪೆಂ ರುಕ್ಮಿಣಿಯಂ ॥ ೫೦

ವ॥ ಎಂದು ಮನದೊಳ್ ಮಂತಣಮಿರ್ದು,

ಗೃಹರಕ್ಷೆಗೆ ಸಾತ್ಯಕಿಯಂ
ಮಹೀಧರಂ ನಿಲಿಸಿ ತಳರ್ದನಗ್ರಜಸಹಿತಂ ।
ಬಹಿರುದ್ಯಾನಾಲೋಕ
ಸ್ಪೃಹೆಯಿಂ ತಳರ್ವಂತು ರುಕ್ಮಿಣೀಹರಣಾರ್ಥಂ ॥ ೫೩

ವ॥ ಅಂತು ತಳರ್ದು ಪರಿಣಯೋತ್ಸವೋತ್ಸುಕನಾಗಿ ಶಿಶುಪಾಲದಾ
ನವಂ ಬಂದಿರ್ದ ಭೀಷ್ಮಕಪುರಕ್ಕಭಿಮುಖನಾಗಿ,

ಅನಿಲಜವಂ ಗರುಡಜವಂ
ಮನೋಜವಂ ಕಿಱಿದು ತನ್ನ ಜವದಿಂದೆನೆ ಕುಂ ।
ಡಿನಪುರದ ಬಹಿರ್ವನಮಂ
ದನುಜಾರಿವರೂಥಮೆಯ್ದೆ ವರ್ಪವಸರದೊಳ್ ॥ ೫೪

ಪೊದೆಯಿಸಿದತ್ತೊ ಚಿತ್ರಪಟದಿಂ ಪರಿನಿರ್ಮಿಸಿದತ್ತೊ ಪಂಚರ
ತ್ನದಿನಮರೇಂದ್ರಚಾಪನಿಕುರಂಬಕದಿಂ ಪೆಣೆದತ್ತೊ ಚಿತ್ರಮಿಂ ।
ತಿದು ಬಗೆಗಂಬಿನಂ ತಳಿರ ಪೂವಿನ ತುಂಬಿಯ ಕಾಯ ಪಣ್ಣ ಬ
ಣ್ಣದಿನೆಸೆದತ್ತು ಕೀರಪಿಕಹಂಸನಿನಾದವಿಡಂಬನಂ ಬನಂ ॥ ೫೫

ವ॥ ಆಮನೋಹರೋದ್ಯಾನಮಂ ಪೊಕ್ಕು ಪಂಕಜಾಕ್ಷಂ ನಿರೀಕ್ಷಿ
ಸುತುಂ ಬರ್ಪಲ್ಲಿ,

ಪಾವನವನದೊಳ್ ನಿರ್ಮಲ
ಜೀವನವನಜಾತಷಂಡಮಾರುತಲೀಲಾ ।

ಧಾವನವನಮಧ್ಯಮದೇಂ
ದೇವನ ವನಮಾಲೆಯುಂ ತೆಱಂಬೊಳಯಿಸಿತೋ ॥ ೫೬

ಲಳಿತಗತಿಕ್ರಿಯೋತ್ಸವದಿನೊಪ್ಪುವ ಪಾಂಡುರಪಕ್ಷಪಕ್ಷದಿಂ
ಕಳರುತಿವೀಱುತಿರ್ಪ ಕಳಹಂಸಕದಂಬಕಚಕ್ರಚಕ್ರದಿಂ ।
ಬಳೆದಳಿವಿಂಡು ಬಂದೆಳಸುತಿರ್ಪ ಚಳಜ್ಜಳಜಾತಜಾತದಿಂ
ವಿಳಸಿತವಾದುದಂ ನಲಿದು ನೋಡಿದನಂಬುಜಷಂಡಷಂಡವಂ ॥ ೫೭

ವ॥ ಆಸರೋವರದೊಳ್,

ವರವರಧವಳಾಂಗದ್ಯುತಿ
ಚರಚರದೂರ್ಮಿಸ್ಫುಟತ್ತಟೋಜ್ಜ್ವಲಫೇನೋ ।
ತ್ಕರಕರದೊಳ್ ತಡೆವಾಯಿರೆ*
ಪರಿ ಪರಿರಂಜಿಸುವುದೊಂದು ಕೂಳನಂ ಕಂಡಂ ॥ ೫೮

ಕೇಸರರಸರಸರಜಃಪರಿ
ಧೂಸರಸರಮಂ ನಿರೀಕ್ಷಿಸಲ್ ಯದುವಂಶಾ ।
ಗ್ರೇಸರಸರಭಸನಯನಂ
ವಾಸರಸರಸಿರುಹದಂತಿರೊಪ್ಪಿದುದಾಗಳ್ ॥ ೫೯

ಸಾರಸರಸವದ್ಧ್ವನಿಯಿಂ
ನೀರಜರಜದಿಂ ಮದಾಳಿಗಳ ಗಳರುತಿಯಿಂ ।
ಸೌರಭರಭಸದಿನದು ಸಂ
ಚಾರಣರಣದೂರ್ಮಿ ಪದ್ಮವನವನಮಧ್ಯಂ ॥ ೬೦

ಬಸೆದೇಂ ನೋಡಿದನೋ ಮುರಾರಿ ಲಹರೀಸಂಘಾತಸಂಘಾತದಿಂ
ದೆಸೆಯೊಳ್ ಸೀರ್ಪನಿಸೂಸುತಿರ್ಪ ವಿಚಳತ್ಪತ್ರಾಳಿಪತ್ರಾಳಿಯಿಂ ।
ಬಿಸಜಂಗಳ್ ಮಲದೊರ್ಪ್ಪುತಿರ್ಪ ಜಗತೀಪಾನೀಯಪಾನೀಯದಿಂ
ಜಸಮಂ ತಾಳ್ದಿದ ಮಾನಸಾಬ್ಜವನಶಂಕಾಸಾರಕಾಸಾರಮಂ ॥ ೬೧

* ಖ.—ತಡವಾಯಿಂ.

ದೇಸೆವೆಡೆದತ್ತು ರತ್ನಶಿ
ಳಾಸೋಪಾನದಿನಪಾರಸಾರಸರವದಿಂ ।
ಕಾಸಾರವಮೂರ್ಮಿಜಳಕಳಿ
ಕಾಸಾರೋಪಾಂತ * ಪುಷ್ಪಕಳಿಕಾಸಾರಂ ॥ ೬೦

ಕೌತುಕವೆನೆ ಪಾಱುವುದಳಿ
ನೀತತಿ ಹಂಸಂ ರಥಾಂಗಮೀತಾವರೆಯಿಂ ।
ದಾತಾವರೆಗೀತಡಿಯಿಂ
ದಾತಡಿಗೀಪುಳಿನದಿಂದವಾಪುಳಿನಕ್ಕಂ ॥ ೬೩

ವ॥ ಆಪುಂಡರೀಕಷಂಡವಮಂ ಪುಂಡರೀಕಲೋಚನಂ ಕಂಡು ಮನಂಗೊಂಡು,

ಸರಸಿಯೊಳಪೊಕ್ಕು ಪದನಖ
ಕಿರಣದಿನಿರ್ಮಡಿಸಿ ಜಲಮನಾಸ್ಯಾಂಬುಜದಿಂ ।
ಪರಿಮಳವನಿತ್ತು ವಾರಿಗೆ
ಕರದೊಳ್ ಲೀಲಾಬ್ಜಮೆಸೆಯೆ ಪೊಱಮಟ್ಟಾಗಳ್ ॥ ೬೪

ಕಲಕೀರಾಲಾಪಮಂ ಕೋಕಿಲಕಲರವಮಂ ಭೃಂಗಝುಂಕಾರಮಂ ಚಂಚಲಕಾಂಚೀಕ್ವಣಿತಂ ಕಂಕಣಝುಣಝುಣಿತಂ ಸಿಂಜಿನೀಸಿಂಜಿತಂ ಮಾರ್ಮಲೆಯುತ್ತುಂ ಕಂತುಸೇನಾಕಳಕಳರುತಿಯಿಂದೆತ್ತಲುದ್ಯಾನಮಂ ತೀವಲದಂ ಕೇಳ್ದಂಗನಾಭೂಷಣರಣಿತಮಿದೇನೆಂದು ವಿಭ್ರಾಂತನಾದಂ॥ ೬೫

ವ॥ ಅಂತು ವಿಸ್ಮಿತಸ್ವಾಂತನಾಗಿ ವನಮಾಲಿ ತನ್ನ ಸಮೀಪದೊಳಿರ್ದ ವನಪಾಲನಂ ಸ್ನಿಗ್ಧಮಧುರಾಲೋಕನವಾಕ್ಯಂಗಳಿಂ ಸಂಭಾಷಿಸಿ ಬೞಿಯುಂ ಮೆತ್ತಿಂತೆಂದಂ,

ವಿವಿಧಾಲಂಕೃತನಿಸ್ವನಂ ನೆಗೞ್ವಿನಂ ಭೃಂಗೋತ್ಕರಂ ಬೆರ್ಚಿ ಪಾಱುವಿನಂ ಪುಷ್ಪಪರಾಗಮೆಲ್ಲುಗುವಿನಂ ಪೂದೊಂಗಲಲ್ಲಾಡಿ ತೋ ।

* ಬ—ಪಾರೋಂತರದ. ಗ.—ಪಾರೋಸ್ನತದ

ಱುವಿನಂ ಕಣ್ಮಲರ್ಗಳ್ಪ್ಪ ಕೆಂದಳದ ಕೆಂಪ್ಪೋರೆಯೊಂದನೊಟ್ಟೈಸಿ ಪೊ
ಣ್ಮುವಿನಂ ಲೀಲೆಯಿನಾಪ್ರದೇಶದೊಳದಾರ್ ತನ್ವಂಗಿಯರ್ ಕ್ರೀಡಿಪರ್ ॥ ೬೬

ವ॥ ಎಂದು ಬೆಸಗೊಳ್ವುದುಂ ಚಕ್ರಿಗವಕ್ರಶೀಲಂ * ವನಪಾಲನಿಂತೆಂದಂ. ಆಕುಸುಮಿತವನಾಂತರದೊಳ್ ಕತಿಪಯಪರಿಚಾರಿಕಾಸಖೀಜನಂಬೆರಸು ಭೀಷ್ಮಕರಾಜಪುತ್ರಿ ರುಕ್ಮಿಣೀದೇವಿ ಪುಷ್ಪಾಪಚಯವಿನೋದಮಂ ನೆಗೞುತಿರ್ದಪಳ್. ಆಮಂದಗಮನೆ ಲೀಲೆಯಿಂದೀಗಳೀ ಪೂಗೊಳಕ್ಕೆ ಬರ್ಪಳೆಂದು ಬಿನ್ನವಿಸುತಿರ್ಪನ್ನೆಗಂ,

ಚಾರುಲತಾವನಾಂತರದೊಳೋರಗೆವೂಗಳನಾಯ್ದು ಕೊಯ್ದಳಂ
ಕಾರಮನಾಲತಾಂತತತಿಯಿಂ ಸಮೆದಾಂತ ಬೆಡಂಗು ಕಣ್ಗೊಳಲ್ ।
ವಾರವಿಳಾಸಿನೀತತಿ ಲತಾವನದಿಂ ಪೊಱಮಟ್ಟುದೆಂದು † ಸಂ
ಚಾರಿಲತಾವನಂ ವನಲತಾವನದಿಂ ಪೊಱಮಟ್ಟುದೆಂಬಿನಂ ॥ ೬೭

ಅಮಿತವಿಳಾಸದಿಂ ಮದನಭೂಭುಜನೋಲಗದಂಗನಾಸಮೂ
ಹಮನಿಱುಪಂಗನಾಸಮಿತಿ ಸುತ್ತಲುಮೆಯ್ತರೆ ಬರ್ಪ ರುಕ್ಮಿಣೀ ।
ರಮಣಿ ವಿಲೋಚನೋತ್ಸವಮನಿತ್ತಳುಪೇಂದ್ರನೊಳಂಗಜನ್ಮಜಂ
ಗಮಲತಿಕಾವನಂಬೆರಸು ಬಂದಪಳೋ ವನದೇವಿಯೆಂಬಿನಂ ॥ ೬೮

ವನಿತಾರತ್ನದ ರೂಪಮೀಕ್ಷಿಸಲೊಡಂ ‡ ಲಾವಣ್ಯಮುಂ ಮುಂಚಲಿ
ಲ್ಲನೆ ಕೃಷ್ಣೇಕ್ಷಣದೊಳ್ ತುಳುಂಕಿ ಬಱಿಯಂ ಭೃಂಗಾಳಕಾನೀಕದಿಂ।
ವನಜಾತಾನನದಿಂ ರಥಾಂಗಕುಚದಿಂ ಮೀನಾಕ್ಷಿಯಿಂದಿತ್ತುದಾ ¶
ವನಜಾಕ್ಷಂಗೆ ಮನೋಜಜಂಗಮಸರಶ್ರೀಯೆಂಬ ವಿಭ್ರಾಂತಿಯಂ ॥ ೬೯

ಅಲಕಂ ತುಂಬಿ ತಳಂ ತಳಿರ್ ತೊಡೆ ಮಡಲ್ ತೋಳ್ ಶಾಖೆ ಸುಯ್ಗಂಪು ಕಂ
ಪಲರ್ಗಣ್ಣೊಪ್ಪುವಲರ್ ಮುಗುಳ್ನಗೆ ಮುಗುಳ್ ಬಿಂಬಾಧರಂ ಪಣ್ಣೆನಿ ।
ಪ್ಪ ಲತಾಂಗೀತನುಚೂತವಲ್ಲರಿಯೊಳಂದೆಕ್ಕೆಕ್ಕೆಯಿಂ ನಾಟಕಂ
ನಲಿಯುತ್ತಿರ್ದುವು ನೇತ್ರಷಟ್ಪದಮನಃಕೀರಂಗಳಾಕೃಷ್ಣನಾ ॥ ೭೦

* ಕ. ಖ. ಗ. ಚಕ್ರಿಗೆವಕ್ರಶೀಲಂ. † ಕ. ಖ. ಗ. ಪೊಱಮಟ್ಟುಬಂದು.
‡ ಕ. ಖ. ಗ. ರೂಪನೀಕ್ಷಿಸಲೊಡಂ. ¶ ಕ. ಖ. ಗ.—ಮೀನಾಕ್ಷಿಯಿಂದಿತ್ತಳಾ.

ವ॥ ಅಂತು ವನರುಹಾಕ್ಷನಾಮನೋಹರಿಯಂ ನಿರೀಕ್ಷಿಸುತ್ತಿರ್ದು ನಿಜಾಂತರಂಗದೊಳ್,

ಪಡೆದಂ ಪದ್ಮಜನೆಂತೊ ಭೂಷಣಕೆ ಭೂಷಾಲಕ್ಷ್ಮಿಯಂ ಜವ್ವನ
ಕ್ಕಡಕಿಲ್ಲ ವ್ಯಸನಮಂ ವಿರಾಜಿಸುವ ಲಾವಣ್ಯಕ್ಕೆ ಲಾವಣ್ಯಮಂ ।
ಪಡೆದೀರೂಪಿನ ಕೋಮಲಾಂಗಿಯುನೆನಲ್ ಮಚ್ಚಿತ್ತದೊಳ್ ಸೋಲಮಂ
ಪಡೆದಂ ಮಾಣ್ದಳ್ ದರ್ಪಕಂಗೆ ಪಡೆದಳ್ ದುರ್ವಾರಮೋಗರ್ವಮಂ ॥

ಸುದತೀರತ್ನದ ರೂಪಮೆನ್ನ ಬಗೆಗಾದಂ ಸೋಲಮಂ ತಂದು ತಂ
ದುದು ಕೂರ್ಪಂ ಭುಜದರ್ಪಮಂ ಕುಸುಮಬಾಣಕ್ಕಂ * ಮನೋಜಂಗಮಿಂ।
ತಿದವಶ್ಯಂ ಸ್ಮರವಶ್ಯವಿದ್ಯೆಯೆ ವರಸ್ತ್ರೀರೂಪಮಂ † ನೋಡೆ ಪೆ
ತ್ತುದಗುರ್ವಂ ಪೆಚ್ಚಿತಾವುದಾದೊಡೆನಗಿಂತೀ ‡ ಸೋಲಮೀಕಾಂತೆಯಿಂ॥ ೨೨

ಮದಭಾರಾಲಸಲೋಲನೇತ್ರೆ ಮದನೋದ್ಯತ್ತೇಜಮಂ ಕೊರ್ವಿ ಪ
ರ್ವಿದ ಲಾವಣ್ಯದ ತೇಜದಿಂದತನುಸಾಮ್ರಾಜ್ಯಾಂಗಮಂ ಕೋಮಲಾಂ।
ಗದಿನಂಗೋದ್ಭವಕೀರ್ತಿಕೌಮುದಿಯ ಬೆಳ್ಪಂ ಮೌಕ್ತಿಕಾಕಲ್ಪಕೌ
ಮುದಿಯಿಂ ತಾಂ ಗೆಲೆವಂದು ಗೆಲ್ದಪಳಪಾಂಗಾಲೋಕದಿಂ ಲೋಕಮಂ॥

ವ॥ ಎಂದಾಸೊಬಗರೂಪೆಯ ರೂಪಯೌವನವಿಳಾಸವಿಭ್ರಮಂಗಳಂ ಮನದೆ ಕೊಂಡು,

ನೀಲಸರೋರುಹಾರುಣಸರೋರುಹಪಾಂಡುಸರೋರುಹಪ್ರಭಾ
ಮಾಲೆಯನೀಟ್ದು ಕೊಂಡದನೆ ¶ ಬೀಱಿದುದೀತನಪಾಂಗವೆಂಬಿನಂ ।
ಶ್ರೀಲಲನಾಧಿನಾಥನಧಿಕೋತ್ಸವದಿಂ ವಿಲಸತ್ತ್ರಿವರ್ಣಮಂ
ಲೋಲದಪಾಂಗಮಾಲೆಯಿ § ನನಂಗಲತಾಂಗಿಯು ಮೇಲೆ ಸೂಸಿದಂ॥ ೨೪

---

* ಖ—ತಂದುದಿಂತೆದೆಯಾರ್ಪಂಭುಜದರ್ಪಮಂಸಹಸಮಂಮಿಕ್ಕಂ.
ಗ-ತಂದುದಿಂತಿದೆಯುರ್ಪಂಭುಜದರ್ಪಮಂಕುಸುಮಬಾಣಕ್ಕಂ.

† ಮೊ—ಅ—ಸ್ತ್ರೀರೂಪದಿಂ. ‡ ಮೊ-ಅ.—ಪೆಚ್ಚಿತಾವುದಾದೊಡೆನಗಿಂತೀ.

¶ ಕ, ಖ, ಗ, ಕೊಂಡುಮೆನೆ. § ಕ, ಖ, ಗ,-ಮಾಲೆಯು.

ಶಂಬರವೈರಿ ತನ್ನೆಸೆವ ದೃಷ್ಟಿಸುಧಾರಸವೃಷ್ಟಿಯೊಳ್ ತಗು
ಳ್ದಂಬಿನ ವೃಷ್ಟಿಯುಂ ಕಱಿವಿನಂ ವನಮಾಲಿ * ಕಟಾಕ್ಷಮಾಲೆಯಿಂ।
ದಂಬುಜನೇತ್ರೆಯುಂ ಬಳಸುವಾಗಳನಂಗತರಂಗಿಣೀತರಂ
ಗಂ ಬಳಸಿರ್ದ ಪದ್ಮಿನಿಯ ಭಂಗಿಯನಾಲಲಿತಾಂಗಿ ತಾಳ್ದಿದಳ್ ॥ ೭೫

ಮನಸಿಜನಂಬು ನಾಂಟಿ ತನುವಂ ಮನವೆಚ್ಚದಂತೆ ವಾರಿಜಾ
ಕ್ಷನೊಳಿರೆ ರುಕ್ಮಿಣೀರಮಣಿ ಚಿತ್ರದ ಲೆಪ್ಪದ ಕಲ್ಲ ಪೆಣ್ಣ ರೂ।
ಪೆನೆ ಮರವಟ್ಟಳಾವಳನನಂಗಶರಕ್ಕೆಡೆಮಾಡದಾವಳಂ
ನೆನೆಯಿಸಿಕಾಡದಾವಳನದಿರ್ಪದು ಕೃಷ್ಣನ ರೂಪವಿಭ್ರಮಂ ॥ ೭೬

ಅಸಿಯಳ ಲಜ್ಜಾಸಾಧ್ವಸ
ರಸಮಂ ಕಳೆದೊಲ್ದು ತನ್ನನೀಕ್ಷಿಸುವಂತೇಂ।
ಬಸಮಾಗೆ ಮಾಡಿದುದೊ ಕ
ಣ್ಗೆಸೆವಾಕಾರಂ ಭುಜಂಗವೈರಿಧ್ವಜನಾ ॥ ೭೭

ಸ್ಮರನಂ ಕೂರ್ಪೆಱಿಸಲ್ ಸಾರ್ದಲರ್ಗಣೆ ಕಡುಕೂರ್ಪೆಱಿರಲ್ ತನ್ನ ಕೂರ್ಪಿಂ
ತರದಿಂದಂಮಿಂಚುಮಿಂಚಂತುಡಕಿಪಿಡಿದುದೋಕಾಮನಂಬಂಬನಟ್ಟಿಂ।
ಬರಿಗೊಂಡೆಟ್ಟಿತ್ತೋ ಕೇದಗೆಯೆಸಳಸಳಂ ಕರ್ಚಿ ಪಾಱಿತ್ತೊ ಕೇಳ
ಚ್ಚರಿಯೆಂಬಂತಾಗೆ ನೀಳ್ದತ್ತವಳ ಧವಳನೇತ್ರತ್ರಿಭಾಗಾವಲೋಕಂ॥೭೮

ಬಾಲೆಯನೇತ್ರದಿಂದಮುರ್ದಿನೊಳ್ದರೆಮಾಲೆ ಪೊದಱ್ದು ನೀಳ್ದು ಬಂ
ದೀಲಲಿತಾಂಗನಂ ಬಳಸಿದತ್ತೆನೆ ಕೃಷ್ಣನ ಮೇಲೆ ಬಾಲೆ ಕ।
ಣ್ಣೋಲದಿನಂದು ಬಿತ್ತರಿಸಿದಳ್ ನಗೆವೀಱುವ ಮುದ್ದುವೀಱುವಾ
ಲೋಲತೆವೀಱುವುಜ್ಜ್ವಲತೆವೀಱುವ † ಮುಗ್ಧಕಟಾಕ್ಷಮಾಲೆಯಂ ॥ ೭೯

ವ॥ ಆಸಮಯದೊಳ್,

ಅಂಗಜಮಾರ್ಗಣೌಘಮೆಱಗಿತ್ತೊ ಮನೋಜನುದಾತ್ತಕೀರ್ತಿ ಬೆ
ಳ್ಳಂಗೆಡೆದತ್ತೊ ದರ್ಪಕಸುಧಾರಸವೃಷ್ಟಿ ವಿಜೃಂಭಿಸಿತ್ತೊ ಚೆ।

* ಕ. ಗ — ವನಮಾಲೆ. † ಕ. ಉಜ್ವಲಿಕೆವೀಱುವ. ಗ. — ಉಜ್ಜಳಿಕೆ ವೀಱುವ.

ಲ್ವಿಂಗೆಡೆಯಾಗೆ * ಬಿತ್ತರಿಸಿದಳ್ ಮುದವುಂ ಮದಮುಗ್ಧಸಸ್ಮಿತೋ
ದ್ಭಂಗುರಪಕ್ಷ್ಮಸಂಚಳಸುತೀಕ್ಷ್ಣವಳಕ್ಷಕಟಾಕ್ಷಮಾಲೆಯಿಂ † ॥ ೮೦

ವ॥ ಆಸಮಯದೊಳ್,

ಪದಪಿಂದೀಕೆಯ ರೂಪನೀಕ್ಷಿಸಲೊಡಂ ಕಣ್ಣೋಲವೆನ್ನೊಳ್ ಪೊದ
ಱಿದವಿತ್ತಂಬಿನಿತಲ್ಲದೆನ್ನನಮರ್ದಿಂದೋಲಾಡಿಪಂತೀಕ್ಷಿಪೀ ।
ಪದದೊಳ್ ತನ್ನೊಡವಂದ ಪೂಗಣೆ ನಡಲ್ ಮೆಚ್ಚಿತ್ತಮಂ ನಟ್ಟಪಾಂ
ಗದ ಪಾಂಗಿಂದವೆ ಕನ್ನೆ ಕನ್ನಡಿಸಿದಳ್ ತನ್ನೊಂದಭಿಪ್ರಾಯಮಂ ॥೮೧

ವ॥ ಎಂದರವಿಂದಲೋಚನನಂ ಮನದೊಳ್ ವಿಭಾವಿಸುತ್ತಿರ್ಪ
ನ್ನೆಗಂ,

ಮನವೊಲ್ದುದ್ದಂಡದಂಡಾಬ್ಜದ ಕೊಡೆವಿಡಿದುತ್ತುಂಗವಕ್ಷೋಜೆಯರ್ ಬ
ರ್ಪಿನೆಗಂ ಪೊಂಬಾಳೆಯಿಂ ಬಾಳೆಯರನವರತಂ ಚಾಮರಂಬೀಸುತುಂ ಬ|
ರ್ಪಿನೆಗಂ ಲೀಲಾಬ್ಜದಿಂ‡ ಸುಯ್ಯುಱಪಳಿಗಳನಬ್ಜಾಕ್ಷಿಯರ್ ಸೋವುತುಂ ಬ
ರ್ಪಿನೆಗಂ ಬಂದಳ್ ಲತಾಕೋಮಲೆ ಮದನಜಯಶ್ರೀಯೆ ಬರ್ಪಂದದಿಂದಂ॥

ಸಲ್ಲಲಿತಾಂಗಿ ಭೂಷಣಮಣಿದ್ಯುತಿಯಿಂ ಧವಳೇಕ್ಷಣಾಂಶುವಿಂ
ಪಲ್ಲವಪುಷ್ಪಶೋಭೆಗಳನೆಯ್ದೆ ವನಾವನಿಜಕ್ಕೆ ಮಾಳ್ಪನಿ ।
ತ್ತಲ್ಲದೆ ಕೋಮಲಾಂಘ್ರಿರುಚಿಯಿಂ ನಖರೋಚಿಯಿನಧ್ವವಲ್ಲಿಗಂ
ಪಲ್ಲವಪುಷ್ಪಶೋಭೆಗಳನಾಗಿಸುತುಂ ನಡೆತಂದಳಕ್ಕಱಿಂ ॥ ೮೩

ವ॥ ಅಂತು ನಡೆತಂದು,

ಲೋಲಕಟಾಕ್ಷಮಾಲೆ ವನಮಾಲೆಗೆ ಚಂದ್ರಿಕೆವೀಱೆ ಕೈಯ ಪೂ
ಮಾಲೆಗೆ ಭೃಂಗಮಾಲೆ ಮೊಱೆದೆಯ್ದೆ ಶಿರೀಷದ ಮಾಲೆಯಂ ಪ್ರಭಾ ।
ಮಾಲೆಯಿನೇಱಿಸುತ್ತಿರೆ ಭುಜಂ ನಖಮಾಲೆ ಮಯೂಖಮಾಲೆಯಂ
ಸಾಲಿಡೆ ಬಾಲೆ ಬಂದು ವನಮಾಲಿಗೆ ಮಾಲೆಯನೊಲ್ದು ಸೂಡಿದಳ್॥ ೮೪

* ಕ. ಗ. ಚೆಲ್ವಿಂಗೆಡೆಯಾಗಿ, † ಕ. ಖ. ಮಾಲೆಯಂ
‡ ಕ.—ನೀಲಾಬ್ಜದಿಂ.

ವ॥ ಅಂತು ನಡೆತಂದು ತನಗೆ ರುಕ್ಮಿಣೀದೇವಿ ಮಾಲೆಯಂ ಸೂಡೆ ಪರಿಪೂರ್ಣಮನೋರಥನಾಗಿ ರಥಾಂಗಪಾಣಿ ನಿಜರಥಮನಾರಥಾಂಗೋತ್ತುಂಗಸ್ತನೆಯನೇಱಿಸಿ,

ಉಱದಾನುಯ್ದ ಪೆನೀಸಮಸ್ತಗುಣಮಾಲಾರಾಮೆಯಂ ರಾಮೆಯಂ
ಮಱುವಕ್ಕಂ ಪೆಱಗೆಯ್ದೆ * ನಿಂದು ಕುಡುವೆಂ ಸಂಗ್ರಾಮಮಂ ಗ್ರಾಮಮಂ ।
ಪೊಱಮಟ್ಟೆನ್ನೊಳಿದಿರ್ಚಿ ತೋಱುಗೆ ನಿಜಾಸ್ತ್ರಾದಾನವಂ ದಾನವಂ
ಬಱಿಕೆಯ್ಗುಂ ರಿಪುವೀರರಂ ವಿಬುಧವೃಂದಾನಂದಕಂ ನಂದಕಂ ॥ ೯೫

ವ॥ ಎಂದು ವಿಧೂತನಂದಕಂ ದ್ವಾರಕಾಭಿಮುಖನಾಗಿ ಸಮರಮಂ ಪಾರ್ದು ಮೆಲ್ಲಮೆಲ್ಲನೆ ನಡೆಯುತಿರ್ಪುದುಮಿತ್ತಂ,

ತ್ವರಿತಂ ಸೋಲಿಸಿ ಕನ್ನೆಯಂ ಮುರಹರಂ ಕೊಂಡುಯ್ದ ವಾರ್ತಾಪರಂಪರೆಯಂ ಕೇಳ್ದು ವನೇಭಬೃಂಹಿತನಿನಾದಂಗೇಳ್ದ ಸಿಂಗಂ ನಗಾಂ ।
ತರದಿಂ ಲಂಘಿಸುವಂತೆ ವಿಷ್ಟರದಿನೆಟ್ಟಂ ಮೂರ್ಧರತ್ನಾಂಶುಕೇ
ಸರನುತ್ಖಾತನಿಶಾತಖಡ್ಗನಖರಂ ರಕ್ತೇಕ್ಷಣಂ ರಾಕ್ಷಸಂ ॥ ೯೬

ವ॥ ಅಂತು ಶಿಶುಪಾಲಂ ಸಿಡಿಲ್ದೆಱೆ ತದೀಯಮಿತ್ರಂ ಭೀಷ್ಮಕರಾಜಪುತ್ರಾನಿಂತೆಂದಂ,

ನೀಂ ನಡೆವನ್ನಮುಂಟೆ ಸಮರಂ ಶಿಶುಪಾಲ ಚತುರ್ಬಲಪ್ರಯು
ಕ್ತಂನಡೆದಾನೆ ಕನ್ನೆಯುಮನಾತನುಮಂ ಪಿಡಿದಪ್ಪೆನೆಂದು ದ ।
ರ್ಪೋನ್ನತಿಯಿಂದೆ ರುಕ್ಮಿ ಬರೆ ನೋಡಿ ದರಸ್ಮಿತನಾಗಿ ರಾಮನಂ
ಕನ್ನೆಗೆ ಕಾಪುವೇೞ್ದು ರಥದಿಂದಿೞಿದೊರ್ವನೆ ಶೌರಿ ತಾಗಿದಂ ॥ ೯೭

ವ॥ ಆಗಳ್,

ಮೊದಲೊಳ್ ಕಾಣಲಾಯ್ತರಿಬಲಂ ಪಡಲಿಟ್ಟುದನಂತೆ ಕೇಳಲಾ
ದುದು ಸುರದುಂದುಭಿಧ್ವನಿಯನಲ್ಲದೆ ನಿಟ್ಟಿಸಲಾದುದಿಲ್ಲ ತ‍ಱ ।

* ಕ. ಗ.—ಮಱುವಕ್ಕಂಪೆಱಗೆಯ್ದಿ. ಖ. —ಮಱುವರ್ಕಂಪೆಱಗೆಯ್ದಿ.

ಗಿದ ಪೊಣರ್ದಿಕ್ಕಿ ಗೆಲ್ದ ಪರಿಯಂ ಮನವೊಲ್ದೊಡೆ ಕೊಂಡು ಪೋರ್ವನ
ಲ್ಲದೊಡರಿಸೇನೆಯಂ ಕ್ಷಣದಿನಿಕ್ಕುವನಿಂತುಟೆ ಲೀಲೆ ಕೃಷ್ಣನಾ ॥ ೮೮

ವ॥ ಅಂತು ಚತುರಂಗಬಲಮೞಿಯೆ ರುಕ್ಮಂ ತನ್ನ ಭುಜಬಲಮನೆ ನಚ್ಚಿ ಬಿಚ್ಚಳಿಸಿ,

ಲೋಳಮಣಿಕುಂಡಲಂ ರಣ
ಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ ।
ಬಾಳಂಕಿಡ್ತೆಯ್ದುವಿನಂ
ಬಾಳಂ ಪಿಡಿವಡೆವ ಮಾೞ್ಕೆಯಿಂ ಪಿಡಿವೆತ್ತಂ ॥ ೮೯

ತೇರೊಳ್ ರುಕ್ಮಿಣಿ ಭುಜದೊಳ್
ವೀರಾಂಗನೆ ಪಾದಪೀಠದೊಳ್ ರುಕ್ಮಿಯಿರಲ್ ।
ಶೌರಿಯೊಳೊಲವುಂ ನಲವುಂ
ಕಾರುಣ್ಯಮುಮೊಡನೆ ಪೆರ್ಚುತಿರ್ದುದಳುಂಬಂ ॥ ೯೦

ವ॥ ಅಂತು ಚಾಣೂರವೈರಿ ಕಾರುಣ್ಯದಿಂ ಪ್ರಸನ್ನಚಿತ್ತನಾಗಿರಲ್ ಕನ್ಯಾಗ್ರಜನ್ಮನಂತಾಕನ್ಯಾರತ್ನಮನೊಡಂಬಟ್ಟುಕೊಟ್ಟುಬೀೞ್ಕೊಂಡು ಕುಂಡಿನೀಪುರಕ್ಕೆ ಪೋದಂ. ಇತ್ತ ಪುರುಷೋತ್ತಮಂ ಪ್ರಳಂಬಪ್ರಸೂದನಚೋದಿತಸ್ಯಂದನಂ ಭೀಷ್ಮಕನಂದನೆವೆರಸು ಬಂದು ದ್ವಾರಾವತಿಯ ಪೊಱವೊೞಲನೆಯ್ತರ್ಪ ಸಮಯದೊಳ್ ತನ್ನ ಬರವಿಂಗಪ್ಪುಶೋಭಾವಿಶಿಷ್ಟತರಮಾಗಿ ರಾಜಿಸುವ ನಿಜರಾಜಮಂದಿರಮಂ ಪುಗುವಲ್ಲಿ,

ಮಂಗಳಭೂಷಣಾವಳಿಯ ಬೆಳ್ಪು ಮುಗುಳ್ನಗೆವೆಳ್ಪು ಸಸ್ಮಿತಾ
ಪಾಂಗದ ಬೆಳ್ಪು ಪೊಂದಳಿಗೆಸೂಸಿದ ಸೇಸೆಯ ಬೆಳ್ಪು ತಳ್ತಿರಲ್ ।
ಜಂಗಮಪುಷ್ಪವಲ್ಲರಿಗಳೆಂಬಿನೆಗಂ ನಡೆತಂದು ಯಾದವೋ
ತ್ತುಂಗನ ಮೇಲೆ ಬಿತ್ತರಿಸಿದರ್ ಧವಳಾಕ್ಷತಮಂ ಲತಾಂಗಿಯರ್ ॥ ೯೧

ವಿಗಳದ್ಧಮ್ಮಿಲ್ಲದಿಂ ಮಲ್ಲಿಗೆಯುಗೆ ತೊಡವಿಂ ಮಂಜುಗುಂಜಾರವಂ ಕೈ
ಮಿಗೆ ಬಂದಾನಂದದಿಂ ನೋೞ್ಪಬಲೆಯರ ವಿಲೋಲತ್ಕಟಾಕ್ಷಚ್ಛಟಾಶ್ರೀ ।

ಣಿಗಳಂ ಕೈಕೊಂಡಳ್ಳುಂಬಂ ತೆಱೆವೆಸಗಿದನಂಗಾಮೃತಾಂಭೋಧಿವೊಲ್ * ತ
ನ್ನಗರಂ ಬೇಱೊಂದುಚೆಲ್ವಂ ಕುಡೆ ನೃಪಗೃಹಮಂ ಬಂದು ಪೊಕ್ಕಂ ಮುಕುಂದಂ ॥೯೨

ವ॥ ಅಂತು ಪೊಕ್ಕು ಗೃಹಮಹತ್ತರನಂ ಕರೆದು ವಿವಾಹಮಂಟಪಮಂ ಮಾಡಿಸೆಂದು ಬೆಸಸುವುದುಮಾತನತಿಪ್ರಭೂತಚೇತೋರಾಗನಾಗಿ ಸಮಸ್ತವಾಸ್ತುಲಕ್ಷಣೋಪಲಕ್ಷಿತಮುಂ ಶುಭಮುಹೂರ್ತೋದಯೋತ್ತಂಭಿತಸ್ತಂಭಸ್ಥಾಪನಮುಂ ನಿಖಿಲಮಾಂಗಲ್ಯಲಕ್ಷ್ಮೀಶೃಂಗಾರಾಲಂಕರಣಪ್ರದೇಶಮುಮೆನಿಸಿ ತಳದಿನಗ್ರಂಬರಂ ತೀವಿದೆನಿತಾನುಂ ತೆಱದ ಪೊನ್ನ ರನ್ನದ ರೂವಾರಂಗಳ್ † ಮನಂಗೊಳೆ ವಿವಾಹಗೇಹಮಂ ಮಾಡಿಸಿದಾಗಳ್,

ಒಂದಿದನೇಕರತ್ನರಚನಾರುಚಿರದ್ಯುತಿ ತಳ್ತು ತಮ್ಮೊಳೊಂ
ದೊಂದನವುಂಕಿರಲ್ ಬರೆದು ಬರ್ಚಿಸಿದಂತೆವೊಲಾಗೆ ಬಂದ ಮಾ ।
ಕಂದಮಹೀಜದಂತೆಸೆದುದುನ್ನಮಿತೋತ್ಸವಕೇತನಂ ಶುಭಾ
ನಂದಿತಲೋಕಚೇತನಮತೀವವಿನೂತನವಾನಿಕೇತನಂ ॥ ೯೩

ಒದವಿದ ಚೆಲ್ವು ನೂರ್ಮಡಿಸೆ ನೂರ್ಮಡಿಕುಂ ಹರಿದಶ್ಮಭಿತ್ತಿಜಾ
ಳದ ಪಸುರಿಂದೆ ಜಾಗದ ‡ ಪಸುರ್ಪುಪಹಾರಮನೋಹರಪ್ರಸೂ ।
ನದ ಕಡುವೆಳ್ಪಿನಿಂದೆ ಕಡೆಯಿಕ್ಕಿದ ಮುತ್ತಿನ ಬೆಳ್ಪು ರತ್ನದೀ
ಪದ ಬೆಳಗಿಂದೆ ಮಾಣಿಕದ ಕಂಬದ ಕೆಂಬೆಳಗಾನಿವಾಸದೊಳ್॥ ೯೪

ಮಿಸುಗುವ ಚೌಕದ ಮುತ್ತಿನ
ಪಸೆವಾಸಿನ ಪಟ್ಟವಳಿಯ ದುಗುಲದ ರುಚಿಗಳ್ ।
ಪಸರಿಸೆ ಪೊಂಜಗಲಿ ವಿರಾ
ಜಿಸುತಿರ್ದುದು ಗಾಂಗತುಂಗಪುಳಿನಶ್ರೀವೋಲ್ ¶ ॥ ೯೫

* ಕ ಖ ಗ — ತಱೆವುಸಗಿದನಂಗಾಮೃತಾಂಭೋಧಿಯೊಳ್.
† ಮೊ— ಅ-ಸಿರಿವಾರಂಗಳ್.
‡ ಕ. ಖ. ಗ.— ಜಾಗರ. ¶ ಕ ಖ. ಗ.— ಶ್ರೀಯೆಂ.

ಮಸೆವಟ್ಟ * ಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಶೇಷಾಕ್ಷತಂ
ಬಿಸಸೂತ್ರಂ ಸಿತದೂರ್ವೆ ನೂತನಯವಗ್ರೈವೇಯಕಂ ತನ್ನೊಳೊ ।
ಪ್ಪೆ ಸಮಸ್ತೌಷಧಿ ಪಂಚರತ್ನಸಹಿತಂ ಪೂತಾಂಬುಪೂರ್ಣಂ ವಿರಾ
ಜಿಸಿದತ್ತಂಚಿತಶಾತಕುಂಭಮಯಕುಂಭಂ ವೇದಿಕಾಮಧ್ಯದೊಳ್ ॥ ೯೬

ಸಾರಸುವರ್ಣವೇದಿಕೆ † ದುಕೂಲವಿತಾನಮಪೂರ್ವಭಂಗಿ ಭೃಂ
ಗಾರಘಟಾಳಿ ಪೂರ್ಣಕಲಶಂ ಮಣಿದೀಪಿಕೆ ಪಲ್ಲವೋಲ್ಲಸ ।
ತ್ತೋರಣಮುನ್ನತಧ್ವಜಮೆನಿಪ್ಪವು ಮಂಗಳಲಕ್ಷ್ಮಿ ತೊಟ್ಟಲಂ
ಕಾರನಿಕಾಯದಂತಿರೆ ಮನೋಹರಮಾಯ್ತು ವಿವಾಹಮಂಟಪಂ ॥ ೯೭

ಜವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥಮಾರ್ದ್ರಾಕ್ಷತಂ
ಧವಳಾಬ್ಜಂ ಸಿತದೂರ್ವೆ ನೂತನಫಲಂ ಗೋರೋಚನಂ ಲಾಜೆ ಬ ।
ಣ್ಣವುರಂ ರನ್ನದ ತಣ್ಗೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂ
ಬಿವಱಿಂ ತೆಕ್ಕನೆ ತೀವಿ|ಪೊಂಬರಿಯಣಂ ಚೆಲ್ವಾದುವಾಸದ್ಮದೊಳ್ ॥೯೮

ವ॥ ಆ ಮಹೋತ್ಸವದೊಳ್ ವನಮಾಲಿ ಮಜ್ಜನಶಾಲೆಗೆ ಬಿಜಯಂಗೆಯ್ದು ಮಜ್ಜನಪೀಠಮನಲಂಕರಿಸಿದಾಗಳ್,

ಉಗುಗುರ್ಗೆನೆಯಿಂದಮೊಗುರಿಸುವೋಜೆ ತಱಂತಱದಿಂ ಶಿರೋಜಮಂ
ನೆಗಪುವ ಭಂಗಿ ಬಿತ್ತರದಿನೆತ್ತುವ ಕೆಂದಳದೊಂದು ಲಾಘವಂ ।
ಸೊಗಯಿಸುತಿರ್ಪಿನಂ ಸಹಜದಿವ್ಯಸುಗಂಧನ ಕೇಶಪಾಶಮಂ
ಮೃಗಮದಗಂಧಿ ಪೂಸಿದಳುಪಾಸಿತಚಂಪಕಗಂಧತೈಲಮಂ ॥ ೯೯

ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ ಕರ್ಣೋತ್ಪಲಮು
ಲ್ಲುಗೆ ಪೊನ್ನೋಲೆ ಕದಂಪನಪ್ಪಳಿಸೆ ಮಧ್ಯಂ ಬಳ್ಕೆ ಘರ್ಮಾಂಬು ಕೈ ।
ಮಿಗೆ ಕಣ್ಗೊಂಡು ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂ
ಬುಗಿಸಿತ್ತಂದು ಸುಹೃಜ್ಜನಂ ವಿರಚಿಸಿನ್ನಂ ಮಂಗಳಾಚಾರಮಂ ॥ ೧೦೦

*ಕ.—ಈಪದ್ಯವೇ ಇಲ್ಲ ಖ. ಗ.—ಮಸವುರ್ಗಟ್ಟು.
†ಕ. ಗ —ಸುಪರ್ಣವೇದಿಕೆ

ವ॥ ಅನಂತರಂ ನೈಪಥ್ಯನಿಳಯಕ್ಕೆವಂದಲ್ಲಿ,

ಮನಮನಲರ್ಚುತಿರ್ಪ ನವಪುಷ್ಪಸಮೃದ್ಧಿ ವಸಂತಚೂತನಂ
ದನಮಲರ್ವಂತು ಮಾಂಗಳಿಕಸಾರಧನಂ ಧವಳಪ್ರಸಾಧನಂ ।
ತನಗಮದೊರ್ಪ್ಪೆ ತದ್ವಿಮಲಮೌಕ್ತಿಕಮಂಡನಕಾಂತಿಪೂರದಿಂ
ನೆನೆಯಿಸಿದಂ ಮುಕುಂದನಮೃತಾಬ್ಧಿಯೊಳಿರ್ಪ ನಿಜಾದಿಮೂರ್ತಿಯಂ॥

ವ॥ ಆಗಳೊಂದು ಶೃಂಗಾರವೇಶ್ಮದೊಳ್ ಭೀಷ್ಮಕಸುತೆಯನಲಂಕರಿಸಲೆಂದು ನೆರೆದನೇಕವಿಧದ ವನಿತೆಯರಾಕೆಯ ಸೌಕುಮಾರ್ಯಮಂ ನಿರೀಕ್ಷಿಸಿ,

ವಿಳಸಿತಮಪ್ಪದೊಂದು ಪೊಳೆಪಂ ತಳೆದಿರ್ದುದನಿಂದುಲೇಖೆಯಂ
ಪೊಳಪಿಡವೇೞ್ಪುದೇ ಸಹಜಸೌಂದರರೂಪೆಯನೀ ಮೃಣಾಳಕೋ ।
ಮಳೆಯನದೇನಲಂಕರಿಸವೇೞ್ಪುದೆ ಮಂಗಳವರ್ಧನಾರ್ಥಮಿಾ
ಲಳನೆಯನಿಂದಲಂಕರಿಸುವಂ ವಿವಿಧಾಭರಣಪ್ರತಾನದಿಂ ॥ ೧೦೩

ವ॥ ಎಂದು ನುಡಿದು ಮತ್ತಮವರೊಳೊರ್ವಳತಿಚಾತುರ್ಯವತಿಯಿಂತೆಂದಳ್ —

ಲಳನಾಭೂಷಣಮೀಕೆ ಭೂಷಣಕೆ ಭೂಷಾಲಕ್ಷ್ಮಿಯಂ ಮಾೞ್ಪುದೀ
ಲಳಿತಾಕಾರೆಯ ರೂಢಿವೆತ್ತವಯವಂ ತತ್ಕಾರಣಂ ಭೂಷಣಂ ।
ಗಳನೀಕಾಂತೆಗೆ ಶೋಭೆಯಂ ಪಡೆವ ಮಾತಂತಿರ್ಕೆ ವಲ್ ಭೂಷಣಾ *
ವಳಿಗೀಕೋಮಲೆಯಂಗಸಂಗದೆ ನವಶ್ರೀಶೋಭೆಯಂ ಮಾಡುಗುಂ ॥

ವ॥ ಎಂದು ಪೊಗೞೆ ತದನಂತರಂ,

ಉದಯಿಸುವೆಳವೆಱೆಯಂ ಪರು
ಣದಿಶಾವಧು ಸಂಜೆಗೆಂಪಿನಿಂ ರಂಜಿಸವೊಲ್ ।
ಸುದತಿಯನದೊರ್ಬಳನುರಾ
ಗದೆ ಕುಂಕುಮೆಂದಂಗರಾಗದಿಂ ರಂಜಿಸಿದಳ್ ॥ ೧೦೪

* ಕ. ತದ್ಭೂಷಣಾ

ಘುಸೃಣರಸದಿಂದವೊಸೆದಳ್
ಕಿಸಲಯದಿನಶೋಕಕಾಂತಿಕೆ ಕೇಸರರಜದಿಂ ।
ಬಿಸಜಿನಿ ಕೆಂಗವಸಣಿಗೆಯಿ
ನಸವಾಯುಧಚಾಪಲೇಖೆಯೊಸೆವಂತಿರವಳ್ ॥ ೧೦೫

ವ॥ ಮತ್ತೊರ್ವಳಳಘುಜಘನೆ ದುಗುಲವಂ ನಿಱಿವಿಡಿದು ತಂದು ಕುಡೆ,

ಬಂಬಲ್ನಿಱಿ ಮದನನ ನನೆ
ಯಂಬಿನ ಪೊದೆಯೆನಿಸೆ ಕಣೆಯವೊಳವಟ್ಟಿರೆ ಮು ।
ಯ್ವಂ ಬಳಸಿದ ಮೇಲುದು ಕುಚ
ಮಂ ಬಿಗಿದಿರೆ ಗುರುನಿತಂಬೆ ದುಗುಲವನುಟ್ಟಳ್ ॥ ೧೦೬

ಗೆಲೆವಂದಮೃತಾರ್ಣವಫೇ
ನಲಕ್ಷ್ಮಿಯಂ ಮಿಸುಪ ದುಗುಲದುಳ್ಪುಡೆ ಪಿರಿದುಂ ।
ಲಲಿತಾಂಗಿಗೆ ಸೊಗಯಿಸಿದ
ತ್ತೆಲದೊರ್ಗಂಗಲ್ ಕಲ್ಪಲತೆಗೆ ಸೊಗಯಿಪ ತೆಱದಿಂ ॥ ೧೦೭

ವ॥ ಮತ್ತೊರ್ವಳುಪಹಾಸಕಲಿತಕಲಭಾಷಿಣಿ,

ಒದೆಯೆ ಪುರುಡಿಂದಮಾಕೆಯ
ಪದದಲತಗೆ ಕೃಷ್ಣಸಂಗದೊಳ್ ಪೊರೆಗುಂ ಬೇ ।
ಟದ ಮುದ್ರೆಗಳಂತೆನುತುಂ
ಸುದತಿಯ ಕೇಸಡಿಯನೂಡಿದಳ್ ಜತುರಸದಿಂ ॥ ೧೦೮

ತರುಣಿಯ ಪದತಳವಲತಗೆ
ವೊರೆದೆಸೆದುವು ತಮ್ಮನಚ್ಯುತಂ ಮೂರ್ಧದೊಳಾಂ ।
ತಿರೆ ತನ್ಮಣಿಮಕುಟದ್ಯುತಿ
ಪೊರೆದಪುದೀಕ್ರಮದೊಳೆಂದು ಸೂಚಿಪ ತೆಱದಿಂ ॥ ೧೦೯

ವ॥ ಮತ್ತೊರ್ವಳ್ ಕುಂದಮಂದಸ್ಮಿತಾಂಶುವಿಶದಾಕ್ಷರಾಳಾಪೆ,

* ಕ. ಖ. ಗ.—ಪದತಳದಲತೆಗೆ.

ಹರಿ ಪಾದಾನತನಾಗೆ ತನ್ಮಕುಟಸಂಘಟ್ಟಂಗಳಿಂದಾದ ನೂ
ಪುರದೊಂದಿಂಚರವೀಲತಾಂಗಿಯ ಮಹಾಸೌಭಾಗ್ಯಮಂ ಸಾಱುವಂ ||
ತಿರವೇೞ್ಕುಂ ದಿಟಮೆಂದು ರುಕ್ಮಿಣಿಗದೊರ್ವಳ್ ಕಟ್ಟಿದಳ್ ರತ್ನನೂ
ಪುರಮಂ ತತ್ಪದಕಾಂತಿ ನೂರ್ಮಡಿಪಿನಂ ಮಂಜೀರಿಕಾಕಾಂತಿಯಿಂ ||
ವಿರುವನ್ಮಣಿನೂಪುರಯುತ
ಚರಣಾಬ್ಜದಿನೆಸೆದಳಸಿಯುಳಬ್ಜಪರಾಗಂ |
ಬೊರೆದು ಮೊಱೆವಳಿಗಳಂ ತಳ
ದರುಣಾಬ್ಜದಿನೆಸೆದು ತೋಱುತಿರ್ಪಬ್ಜನಿನ್ರೋಲ್ † || ೧೧೧

ವ|| ಮತ್ತೊರ್ವಳತಿಚತುರವಚನೆ, ‡

ಕಲಕಾಂಚಿಯ ಗಂಟೆಗಳೀ
ಲಲನೆಯ ಲಾವಣ್ಯನದಿಯ ಪ್ರೋಣರ್ವಕ್ಕಿಗಳುಂ |
ದುಲಿಪುವೆನಲುಲಿಗುಮೆನುತುಂ
ಲಲನೆಗೆ ಕಟ್ಟಿದಳ್ ರಮಣಿ ಮಣಿಮೇಖಲೆಯಂ || ೧೧೨

ಧರಿಯಿಸಿ ಮಣಿಮೇಖಲೆಯಂ
ಕರಮೆಸೆದತ್ತಲಘುಜಘನೆಯತಿಘನಜಘನಂ |
ಸ್ಮರಕುಂಭಿಕುಂಭಮಾಂತುದು
ಸುರತ್ನನಕ್ಷತ್ರಮಾಲಿಕೆಯನೆಂಬಿನೆಗಂ || ೧೧೩

¶ ಅಸುರಾರಿಗೆ ಸೋಲ್ತಂದ
ಯ್ದುಸರಕ್ಕೆಡೆಗೊಟ್ಟ ಸತಿಯ ಕುಚಯುಗಮಧ್ಯಂ |
ತಿಸರಕ್ಕೆಡೆಗುಡದೆಂದಾ
ಅಸಿಯುಳ್ಗೆ ಸೆವೆಕ್ಕಸರಮನಿಕ್ಕಿದಳೊರ್ವಳ್ || ೧೧೪

---

* ಖ ಕಾಂತಿಯಿಂ † ಕ ಗ, ತೋಱುತಿರ್ಪಬ್ಜಿನಿಯೊಲ್

‡ ಖ ಗ —ವಚನಚತುರೆ.

¶ ಅಸುರಾರಿಗೆ ಸೋಲ್ತಂದೈ
ದುಸರಕ್ಕೆಡೆಗೊಟ್ಟ ಸತಿಯ ಕುಚಮಧ್ಯದೊಳ್ |
ಕ್ಕೆಸರಂ ನುಸುಳಲ್ಬರದು
ಬಿಸವಂದವಿದೆನಿಸಿ ಯುವತಿಗೆಸೆದುದು ಹಾರಂ ||
ಎಂದು ಪಾಠಾಂತರವು ಕ, ಪುಸ್ತಕದಲ್ಲಿದೆ.

ಸ್ತನಪುಳಿನದಲ್ಲಿ ಸೂಸಿದ
ತನುಲಾವಣ್ಯಾಪಗಾಪಯಃಕಣಗಣವೆಂ ।
ಬಿನೆಗಂ ಕುಚದೊಳ್ ನೀಹಾ
ರನಿಜೋಜ್ವಳಹಾರಮೆಸೆಯೆ ರುಕ್ಮಿಣಿಯೆಸೆದಳ್ ॥ ೧೧೫

ಇವಳ ಭುಜಲತಿಕೆಗಳ್ಗವು
ನವಮುಕುಳಾವಳಿ * ಪೊಲೆಸೆಗುಮೆನುತುಂ ದ್ಯುತಿವೀ ।
ಱುವ ಮುತ್ತಿನ ಚಳಕಿಗೆಯುಂ
ಯುವತಿಯು ನಳತೋಳ್ಗೆ ಕಟ್ಟಿದಳ್ ಮತ್ತೊರ್ವಳ್ ॥ ೧೧೬

ಸ್ಮರಕರಿಣೀಹಸ್ತಾಗ್ರಂ
ಸುರುಚಿರಬಿಸಕಾಂಡವೆಲಯುವೇಲ್ಲಿತವಾದಂ ।
ತಿರೆ ನಳತೋಳ್ಗಳ್ ಮುತ್ತಿನ
ಸರಿಗೆಯನಾಂತೆಸೆಯೆ ಕಾಂತೆ ಬಿಂಕಮನಾಂತಳ್ † ॥ ೧೧೭

ಪೂಗಣೆ ಗಣನೆಯೊಳಿರ್ಪೊಡಿ
ಯಾಗಿರ್ಪುವಭಿನವಂಗಳವೆಱೊಳ್ ಮುದ್ರಾ ।
ಯೋಗವಿಧಿಯೆಂದು ಬೆರಲಿಂ
ಗಾಗಳ್ ಮುದ್ರಿಕೆಯನೊರ್ವಳಿಟ್ಟಳ್ ಸತಿಯಾ ॥ ೧೧೮

ಉಡಿಸಿದ ನನೆಗಣೆಯಂತಿರೆ
ತುಡಿಸಿದ ಮುದ್ರಿಕೆಯಿನೆಸೆವ ಬೆರಲಿಂ ಬೆರಲಂ ।
ಮಿಡಿಯಿಸಿ ರುಕ್ಮಿಣಿ ಜಗವಂ
ಮೃಡರಿಪು ಬೆರಲೆತ್ತಿ ನಿಲ್ವಿನಂ ಬಗೆಗೊಂಡಳ್ ॥ ೧೧೯

ಈಲಲನೆಯ ಮುಖಚಂದ್ರನ
ನೋಲೈಸಲ್ಕೆಂದು ಬಂದು ಮಂಡಳಿಸಿದ ತಾ ।

* ಕ, ಖ, ಗ.—ನವಮುಕ್ತಾವಳಿ.
† ಕ, ತೋಳ್ಗಳ ಕಂಕಣ ಹರಿಣೀನೇತ್ರೆಯ ಕರಂಗಳಂ ಸೊಗಯಿಸುಗುಂ,

ರಾಳಿಸುವ್ರೊಲಸೆವುದೆನುತುಂ
ಬಾಲೆಗೆ ಕಿವಿಗಿಕ್ಕೆ ಮುತ್ತಿನೋಲೆಯನೊರ್ವಳ್ ॥ ೧೨೦

ಮಂಡಳಿಸಿ ನಿಂದುವೀಕೆಯ
ಪಾಂಡುರಲೋಲತ್ಕಟಾಕ್ಷಮಾಲಾಚ್ಛಟೆಗಳ್ ।
ಗಂಡಸ್ಥಳದೊಳನಲ್ ಬಗೆ
ಗೊಂಡುವು ಪೊಸಮುತ್ತಿನೋಲೆಗಳ್ ಶಶಿಮುಖಿಯಾ ॥ ೧೨೧

ಮದನಜಯವಶ್ಯಯಂತ್ರಮ
ನಿದೆ ಚಿತ್ರಿಸಿದಪ್ಪಳಂಬಿನಂ ಚಿತ್ರಿಸಿದಳ್ ।
ಸುದತಿಯ ಕಪೋಲದೊಳ್ ಸ
ಮ್ಮದದಿಂ ಮೃಗಮದದ ಪತ್ರಭಂಗಮನೊರ್ವಳ್ ॥ ೧೨೨

ವದನಾಮೋದಕ್ಕೆಱಗುವ
ಮದಭೃಂಗದ ಕರ್ಣಪೂರಕ್ಕೈರವದ ನೆೞಲ್ ।
ಪುದಿದತ್ತು ಕಪೋಲದೊಳನೆ
ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ ॥ ೧೨೩

ಕೆಂದಾವರೆವಂಡುಂಡಾ
ನಂದದಿನೋಕರಿಸುವಳಿಗಳನಿಸುಗುಮಿವೞಿಂ ।
ದೊಂದಿದ ಕುರುಳಂದೊರ್ವಳ್
ಸಂದಿಸಿದಳ್ ಚೆನ್ನ *ಪೂವನಬಲೆಯ ಕುರುಳೊಳ್ ॥ ೧೨೪

ಎಳವಿಸಿಲ ತಮದ ಮೞಗಳ್
ಕೆಳಗೊಂಡಿರ್ದಪುವು ಮುಗ್ಧ ಶಶಿಯ ಸಮೀಪ ।
ಸ್ಥಳದೊಳನೆ ಚೆನ್ನ† ಪೂಗಳು
ಮಳಕಂಗಳ್ ನಿಟಿಲತಟದೊಳೆಸೆದುವು ಸತಿಯಾ ॥ ೧೨೫

---

* ಮೊ—ಅ, ಚಿನ್ನ. † ಮೊ—ಅ, ಚಿನ್ನ

ತಿಲಕಿಸೆ ಮದನದ್ವಿರದಂ
ತಿಲಕಮನೀಕನ್ನೆಗಿಡುವೆನೆನುತುಮದೊರ್ವಳ್ ।
ತಿಲಕಮನಿಡೆ ಸತಿ ಶೃಂಗಾ
ರಲಕ್ಷ್ಮಿ ಕಣ್ದೆಱೆದ ತೆಱದೆ ತಿಲಕದಿನೆಸೆದಳ್ ॥ ೧೨೬

ನೆಲೆಯುಂ ಗಾಡಿಯುಮುಳ್ಳವಡೆ
ಲಲನೆ ಪೆಱಳ್ ದಿವ್ಯಮಾಲೆಯಂ ಮುಡಿಯಿಸಿದಳ್ ।
ಮಲೆವ*ಜಗವೆಲ್ಲಮಂ ಸಲೆ
ಗೆಲೆವಂದಸಮೇಷು ಪೂಣ್ದು ಮುಡಿಗಿಕ್ಕುವಿನಂ ॥ ೧೨೭

ವ॥ ಮತ್ತೊರ್ವಳ್,

ನಿನ್ನ ಮುಖಪ್ರತಿಪಕ್ಷನ
ನಾನ್ನೋಡಿದೆ ಸೆಱೆಗೆ ತಂದೆನಿಂದುವನೆಂಬಂ ।
ತುನ್ನತಕುಚೆ ತೋಱಿದಳಾ
ಚೆನ್ನೆಗೆ ಕನ್ನಡಿಯನಮಲಮಣಿಶೃಂಖಲವುಂ ॥ ೧೨೮

ಜಿತಚಂದ್ರಮಂಡಲಕ್ಕ
ಪ್ರತಿಮಕ್ಕೀಕೆಯ ಮೊಗಕ್ಕೆ ಕಂಡೆವಿದೊಂದಂ ।
ಪ್ರತಿಮಾನಮನನೆ ವದನ
ಪ್ರತಿಕೃತಿ ಚೆಲ್ವಾಯ್ತು ಮುಕುರದೊಳ್ ರುಕ್ಮಿಣಿಯಾ ॥ ೧೨೯

ವ॥ ಅಂತು ಕೈಗೆಯ್ಸಿ ರುಕ್ಮಿಣಿಯಂ ಪರಿಣಯನಭವನದೊಳ್ ಯಥೋಚಿತಾಚಾರದಿಂದಿರಿಸಿ,

ಕೋಮಳಮಾತುಳುಂಗಫಳದಿಂ ಬಲಗೈ ಕಳಮಾಕ್ಷತಪ್ರ† ಪೂ
ರ್ಣಾಮಳಶಂಖದಿಂದಮೆಡಗೈಯೆಸೆಯುತ್ತಿರೆ ಬಂದನುತ್ಕಟ ।
ಪ್ರೇಮನುದಾತ್ತವೇದಮತಿ ಕೃಷ್ಣ ಸಭಾವಳಯಕ್ಕೆ ವಿಶ್ವವಿ
ದ್ಯಾಮಹಿತಂ ದ್ವಿಜೌಘಸಹಿತಂ ಯದುವಂಶಹಿತಂ ಪುರೋಹಿತಂ ॥ ೧೩೦

---

* ಕ. ಖ ಗ ಮುಡಿಯಿಸೆ ಕೋಮಲೆಗೆ, † ಗ.—ಕಲಮಾಕ್ಷತಾದ್ಯ.

ವ॥ ಅಂತು ಬಂದು ಪುರೋಹಿತನುಚ್ಚಾರಿತಸ್ವಸ್ತಿಶಬ್ದನಾಗಿ ಪ್ರಾತು ಳಂಗಫಲಮಂ ನೀಡಿ ವಿವಾಹಲಗ್ನಮಾಸನ್ನಮೆಂದು ಬಿನ್ನಪಂಗೆಯ್ಯ್ವು ದುಮಂಬುರುಹನಾಭಂ ಸಂಭ್ರಮದಿಂ ಪರಿಣಯನಭವನಾಭಿಮುಖನಾಗಿ,

ಬಳವೆದಪಾರವೇದರುತಿ ಗೇಯರವಂ ಪಟಹಸ್ವನಂ ಪುರೀ
ಕಳಕಳದಿಂ ದಳಂಬಡೆದು ವಿಶ್ವಜಗಜ್ಜನಕೀರ್ತನಾರವಂ ।
ಗಳಿನಿನಿಸೇಣ್ಗೆವೆತ್ತು ದಿಗಿಭವ್ರಜಬೃಂಹಿತಭೂರಿನಾದದಿಂ
ಜಳಧಿಯನಾಂತು ಘೂರ್ಣಿಪಿನಮಾಗೃಹಮಂ ಪುಗುತಂದನಚ್ಯುತಂ ॥

ವ॥ ಅಂತು ವಿವಾಹಮಂಟಪಮಂ ಪುಂಡರೀಕಾಕ್ಷಂ ಪುಗುವುದುಂ ಮ ಹೋತ್ಸಾಹಪರಂಪರೆ ನೆಗಪೆ ತದನಂತರಂ,

ತೋಗೆ ದುಕೂಲಕಾಂಡಪಟಮುತ್ತಮಲಗ್ನದೊಳೂರ್ವರೊರ್ವರಂ
ನಲಿದೊಲವಿಂದೆ ದಂಪತಿಗಳೀಕ್ಷಿಸೆ ನೋಟದ ಬಳ್ಳಿವಳ್ಳಿ ನೆ ।
ಯ್ದಿಲ ಮಱೆವೊಲ್ ಸುಧಾರಸದ ಸೋನೆವೊಲಂಗಜಬಾಣವೃಷ್ಟಿವೊಲ್ *
ಸಲೆ ನಿಲೆ ಪರ್ವಿ ಕೊರ್ವಿದುದು ಕೂಡೆ ವಿವಾಹಗೃಹಾಂತರಾಳದೊಳ್ ॥

ವ॥ ಅಲ್ಲಿಂ ಬೞಿಯಂ

ಮೃದುಗತಿವಿಲೋಲಹಾರರ್
ಪ್ರದಕ್ಷಿಣಂಬಂದು ದಕ್ಷಿಣಾವರ್ತಶಿಖಾ ।
ಸ್ಪದನಂ ಹೋಮಾನಳನಂ
ಮದುಮಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್ ॥ ೧೩೩

ಪರಿಕಲಿಸಿ ಕಲಸೆ ಪಟವಾ
ಸರಜಂ ಸುರಿವಮಲಮೌಕ್ತಿಕಾಕ್ಷತನಿಕರಂ ।
ಕರಮೆಸೆದತ್ತು ಬಿಸಿಲ್ಮಟೆ
ಸುರಿವಂತೆವೊಲಾವಿವಾಹಸಮಯೋತ್ಸವದೊಳ್ ॥ ೧೩೪

* ಕ ಖ.—ಮಱೆಯೊಳ್ ಸ ಧಾರಸದ ಸೋನೆಯೊಳಂಗಜಬಾಣವೃಷ್ಟಿಯೊಳ್.

ಲಳಿತಾವಯವದ ಚೆಲ್ವಿಂ
ತೊಳಗುವ ಲಾವಣ್ಯರಸದಿನಬಳಾವಳಿ ತ ।
ನ್ನಿಳಯಮಣಿಪುತ್ರಿಕಾಸಂ
ಕುಳದೊಳ್ ಯಾನಾನುಮೋದಮಾಯ್ತು ಪದದೊಳ್ ॥ ೧೩೫

ಶೀತಕರೋದಯೋತ್ಸವದೊಳಂಬುಧಿ ಘೂರ್ಣಿಸುವಂದದಿಂ ಮುರಾ
ರಾತಿವಿವಾಹದುತ್ಸವದೆ ಘೂರ್ಣಿಸುತಿರ್ಪ ರಸಪ್ರಸಂಗಸಂ ।
ಗೀತನಿನಾದದಿಂ ದೆಸೆಯೊಳುಣ್ಮುವ ಮಾರ್ದನಿಗಳ್ ದಿಶಾಧಿಪ
ವ್ರಾತಮ ರಾಗದಿಂ ಪರಸುವಂತೆವೊಲಾದುದು ತನ್ಮುಕುಂದನಂ ॥ ೧೩೬

ವ॥ ಅಂತು ವಿವಾಹಮಂಗಳಂ ಪರಿಪೂರ್ಣಮಾಗೆ ಚತುರ್ಥಮಹೋತ್ಸವಾನಂತರಮಂದಿನಿರುಳೊಳ್,

ದ್ಯಾವಾಪೃಥಿವೀವಲ್ಲರಿ
ತೀವಿದುವಲರಂಬಿನಿಂದಮೆನೆ ಬಳ್ದಿಂಗಳ್ ।
ತೀವಿರೆ ಜಗಮಂ ಕೃಷ್ಣಂ
ದೇವೀಯುತನಮಳಧವಳಶಯನದೊಳಸೆದಂ ॥ ೧೩೭

ನುಡಿಸಲ್ ಕೇಳಿಶುಕಾಳಿಯೊಳ್ ನುಡಿವ ಸೋಂಕಲ್ ಪಿಂಗೆ ಸಾರ್ದ ದರ್ಪಕೌ
ಳುಡೆಯುಂ ಸೋಂಕುವ ವಕ್ತ್ರಮಂ ಪಿಡಿದುನೋಡಲ್ಪಾರ್ಶ್ವವಿದ್ಧಂಗಳಂ
ನಡೆನೋಟ್ಪೋಪಳದೊಂದುಭಾವರಸಗರ್ಭಕ್ರೀಡೆಯುಂ ವ್ರೀಡೆಯುಂ*
ಪಡೆಗನ್ನಂ ಮುದಮಂ ಮುಕುಂದನತಿರಾಗೋದ್ರೇಕಮಂತಾಳ್ದಿದಂ ॥ ೧೩೮

ಬೆರಲೊಳ್ ಮುದ್ರಿಕೆಯಂ ತೊಡರ್ಚುವ ಕಪೋಲಸ್ಥಾನದೊಳ್ ಪತ್ರವ
ಲ್ಲರಿಯಂ ಚಿತ್ರಿಪ ಹಾರಮಂ ಪಿಡಿದುನೋಟ್ಪಸ್ಯಾಂಬುಜಸ್ವೇದಮಂ ।
ಕರದಿಂದಂ ತೊಡೆವೊಯ್ಯನುಳ್ಳುಡೆಗೆ ಕಾಂಚೀದಾಮಮಂ ಸಾರ್ಚುವೊ
ಳ್ಗುರುಳಂನೇರ್ಪಡೆತಿರ್ದುವೀನವದಕೃಷ್ಣಂನಲ್ಲಳಂಪೊರ್ದಿದಂ ॥ ೧೩೯

ಬಲವಿಂ ನೋಡುವನೋಟದಿಂ ಪದೆದುಸೋಂಕುತ್ತಿರ್ಪಸೋಂಕಿಂಮನಂ
ಗೆಲೆ ಮಾತಾಡುವ ಮಾತಿನಿಂ ಕಳದು ಲಜ್ಜಾಸಾಧ್ವಸೋದ್ರೇಕಮಂ ।

---

* ಬ—ಪ್ರೌಢಿಯುಂ.

ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯುಂ ಮಾಡಲ್ ಬೞಿಕ್ಕಂ ಕಳಾ
ನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗಪ್ರಸಂಗಂಗಳಂ ॥೧೪೦

ನವಲಜ್ಜೆಯೆಂಬ ಕಾಂಡಪ
ಟವೊಯ್ಯನೋಸರಿಸೆ ಸೂತ್ರಧಾರಕನಪ್ಪಾ ।
ತ್ಮವರಂಗೆ ಪಡೆದುದತ್ಯು
ತ್ಸವಮಂ ರತನಾಟಕಪ್ರಗಲ್ಭತೆ ಸತಿಯಾ ॥ ೧೪೧

ಮಾನಿನಿಯು ಸುರತರತ್ನನಿ
ಧಾನಂ ಚಾತುರ್ಯದೀಪವರ್ತನೆಯಿನದೆಂ * ।
ತಾನುಂ ಕೋಳ್ವೋಯ್ತೆನಲಾ
ಮಾನಿನಿಯೊಳ್ ಚಕ್ರಿ ಸುರತಸುಖದಿಂದಿರ್ದಂ ॥ ೧೪೨

ಅನುದಿನಮಿಂತು ಕಾಮಸುಖದಿಂದನುರಾಗಮನಿತ್ತು ರುಕ್ಮಿಣೀ
ವನಿತೆಗೆ ರಕ್ಷಣಕ್ಷಮತೆಯಿಂ ಪತಿಹರ್ಷಮನುಂಟುಮಾಡಿ ಮೇ ।
ದಿನಿಗೆ ಮಹತ್ತ್ವದಿಂ ಜಸಮನ ಗಿಸಿ ಯಾದವಸಂಕುಳಕ್ಕೆ ಪೆಂ
ಪನುಗುಣಮಾಗಿರಲ್ ಸುಖದಿನಿರ್ದನಚಿಂತ್ಯಬಲಂ ಬಲಾನುಜಂ † ॥೧೪೩

॥ ಗದ್ಯ ॥ ಇದು ಸಮಸ್ತ ಕಮಳ ಭವಾಂಡ ಮಾಲಾ ಘಟೀ ಘಟಿತಾರಘಟ್ಟ
ಘಟನಾಸ್ವತಂತ್ರನಿಜಸ್ವರೂಪನಿರೂಪಣಚಕಿತಸಕಳಾಮ್ನಾಯತಂತ್ರ
ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತಸುಕವೀಂದ್ರನಾದ್ರಪ್ರಣೀತ
ಶ್ರೀಜಗನ್ನಾಥವಿಜಯಮಹಾಪ್ರಬಂಧದೊಳ್
ನಾರದಾಗಮನ ರುಕ್ಮಿಣೀರೂಪಪ್ರಶಂಸನ
ತದೀಯದರ್ಶನ ತದಗ್ರಜಯುದ್ಧ
ತದ್ವಿವಾಹವರ್ಣನಂ
ದಶಮಾಶ್ವಾಸಂ

---

* ಕ. ಖ ಗ. ದೀಪವರ್ತಿಸಿಯಿನದೆ. † ಕ.—ಬಲಾನ್ವಿತಂ

## ಏಕಾದಶಾಶ್ವಾಸಂ.

ಶ್ರೀಕಂಠರಿಪುವಿನಸ್ತ್ರಾ
ನೀಕಂ ಬಗೆವುಗಲದೊರ್ವ ಸತ್ರಾಜಿತ್ಕ ।
ನ್ಯಾಕಾರಂ ಬಗೆವೊಕ್ಕುದು
ಲೋಕಜನಸ್ತುತಿಗಳಿಂ ಗರುತ್ಮದ್ಧ್ವಜನಾ ॥ ೧

ಅನಿಶಂ ಪಾರಕಪಾರದಿಂ ಕಥಕರತ್ಯಾಳಾಪದಿಂ ವಂದಿವಂ
ದನದಿಂ ಗಾಯಕಗೇಯದಿಂ ನೆಗಳ್ದ ಸತ್ರಾಜಿತ್ಸುತಾರೂಪಯೌ ।
ವನಲಾವಣ್ಯವಿಲಾಸಲಕ್ಷಣಗುಣಂಗಳ್ ಮಾಡಿ ಸಮ್ಮೋಹಮಂ
ಮನಮಂ ಧೈರ್ಯಮನೀಡುಕೊಳಲ್ ಮುರಹರಂ ವಿಭ್ರಾಂತಿಯಂ ತಾಳ್ದಿದಂ।

ಸತ್ರಾಜಿನ್ನೃಪನಲ್ಲಿಗೆ
ಮೈತ್ರೀಮಿಷದಿಂದೆ ಪೋಗಿ ತನ್ನಯ ರೂಪಂ ।
ಗೋತ್ರಧರಂ ತೋಱಿ ತ
ತ್ಪುತ್ರಿಗೆ ತೋಱಿವನನಂಗನಿಷುಕೌಶಲಮಂ ॥ ೩

ಮನಸಿಜನಂಬು ನಾಂಟೆ ತನುವಂ * ಮನವುಂ ಮನದಾಣ್ಮನಾದ ಕೃ
ಷ್ಣನ ಬಟಿಸಂದೊಡಾತರುಣಿ ಚಿತ್ರದ ಲೆಪ್ಪದ ಕಲ್ಲ ಪೆಣ್ಣ ರೂ ।
ಪೆನೆ ಮರವಟ್ಟಳಾವೆಳನನಂಗಶರಕ್ಕಡೆಮಾಡದಾವಳಂ
ನೆನೆಯಿಸಿ ಕಾಡದಾವಳನದಿರ್ಪುದು ಕೃಷ್ಣನ ರೂಪವಿಭ್ರಮಂ ॥ ೪

ಆನೆಗಟ್ಟಿಂದ್ರನಾಮದನನಾನಳಕೂಬರನಾಜಯಂತನು
ದ್ದಾನಿಯ ಚೆಲ್ವುವೀಕಮಳನೇತ್ರನಪಾಂಗಮರೀಚಿಗಪ್ಪೊಡಂ ।
ತಾನೆಣೆವಾರದೆಂದೆನಿಪ ಕಂಸವಿರೋಧಿಯನೊರ್ವ ಕಂಡೊಡಂ
ಮೌನಿನಿಯರ್ ಮನೋಜನಲರಂಬಿನ ಕೋಳ್ಗಡೆಯಾಗದಿರ್ಪರೇ ॥೫

* ಕ, ಗ, —ತನುವುಂ.

ನವಕಾವೋದ್ರೇಕದಿಂ ಚಿಂತಿಸುವ ಮತಿ ಮತಿಗ್ಲಾನಿಯಿಂದಶ್ರುವಂ ಸೂಸುವ ಕಣ್ ಕಣ್ಣೀರೆ ಬಾನಸ್ವರಿದು ಬೆಳಪ ಮೆಯ್ ಮೆಯ್ಯ ಸಂತಾಪದಿಂ ಬಾಡುವ ವಕ್ತ್ರಂ ವಕ್ತ್ರಮಂ ತಳ್ತಳಕನಳಕಸಂದೋಹವಂ ಮಾಣದಳಾಡುವ ಸುಯ್ ಸುಯ್ವಂಕೆಯಿಂದಿರ್ಪಗಳಿದಧರಮವಳ್ಗಿತ್ತುದಂದೊಂದು ಚೆಲ್ವಂ ॥೬

ಎಡೆಗೊಟ್ಟು ಮನಮನೋಪಂ
ಗೆಡೆಗುಡದಿನಿಸುಂ ಸುಖಕ್ಕೆ ಬೇಟದ ಬೆಣ್ಪಿಂ ।
ಬಿಡೆ ಜೋಲ್ವ ತೆಱದಿನಿಕ್ಕಿದ
ಳೊಡಲಂ ಬಾಲಕಿ ವಿಶಾಲತಲ್ಪಸ್ಥಲದೊಳ್ ॥ ೭

ವ॥ ಅಂತು ಶಯ್ಯೆಯೊಳ್ ಮೆಯ್ಯನೀಡಾಡಿ ಗಣನಗಳುಂಬವೊದ ವೇದನೆಯನೊಳಕೊಂಡು ತನ್ನ ಮೆಲ್ಲಡಿಗಳಂ ಮೆಲ್ಲನೊತ್ತಲೆಂದಾಟಿಸುವ ಚೇಟಿಯರ ಕರಾಗ್ರಮಂ ಚರಣಾಂಗುಷ್ಠದಿಂ ಪೋಗೆ ನೂಂಕಿಯುಂ, ಪರೆದ ಕುರುಳ್ಗಳಂ * ಸಡಿಲ್ದ ಮುಡಿಯುಮಂ ಸಾವಗಿಸಲೆಂದೆಳಸುವ ವಿಳಾಸಿನಿಯರಂ ಹೂಂಕಾರದಿಂ ನಿರಾಕರಿಸಿಯುಂ, ವೀಳೆಯಂಗುಡಲೆಂದು ಮೇಳ್ಯೆಸುವ ತಾಂಬೂಲಕರಂಡಕವಾಹಿನಿಯರಂ ಪುರ್ವಿನಿಂ ಜರ್ವಿಯುಂ, ಹಾಸ್ಯರಸಮನೆಡರಿಸಲೆಂದನುಗೈವನೇಕವಾಮನವುಬ್ಜ ಕುಬ್ಜಖಂಜಪ್ರಭೃತಿಪರಿಹಾಸಕರನಕ್ಷಿವಿಕ್ಷೇಪದಿಂ ಮಾಣಿಸಿಯುಂ, ಇಂತಿರಲ್ವೇಡ † ಮಜ್ಜನಂಬುಗಲುಂ ಆರೋಗಿಸಲುಂ ವೇಳ್ಕುಮೋಲೆಂದು ನುಡಿವ ಧಾತ್ರಿಯರಂ ಗಜನಿಮೀಲನದಿನವಜ್ಞೆಗೆಯ್ದುಂ, ಅಸ್ಫುಟತಮೌನಮುದ್ರಾಪರಿಮ್ಲಾನದೀನವದನೆಯುಮವಿರಳಸರಳಸೋಷ್ಣಶ್ವಾಸಶೋಷಿತಾಧರೆಯುಮನವರತವಿಗಳದಶ್ರುಧಾರಾಪರಿಕಲಿತ ಕಪೋಲೆಯುಮಶ್ರಾಂತನಿತಾಂತಸಂತಾಪಸಂತಪ್ತತನುಲತಿಕೆಯುಮಾಗಿರ್ದ ಸತ್ಯಭಾಮೆಯುಂ ಕಂಡು ಕಾಮಲೇಖೆಯೆಂಬ ಮನದನ್ನಳಪ್ಪ ಕೆಳದಿ ಮೆಲ್ಲನಾಕೆಯ ಕೆಲಕ್ಕೆವಂದೆಲ್ಲರುಮಂ ಕಣ್ಣೆತ್ತಿ ಕಳಿಪಿ,

* ಖ.—ಕುರುಳ್ಗಳುಮಂ. † ಖ.—ನೀವಿಂತಿರಲ್ವೇಡ.

ಅಂಬುಜನೇತ್ರೆ ನಿನ್ನ ಮೊಗಮಂ ಕವಿದೀಕುರುಳ್ಗೋಳಿ ಧೂಸರ
ತ್ವಂಬಡೆದೀಕುಚಂ * ಕೊರಗಿದೀಕಮಳಾನನವಿಪ್ರುಗುಂದಿದೀ ।
ಬಿಂಬಫಲಾಧರಂ ಸ್ಖಲನಮಂ ತಳೆದೀನುಡಿ ಬಾಡಿದೀಲತಾಂ
ಗಂ ಬಿಸುಪೇಱಿದೀಶ್ವಸಿತಮಿಂತಿವು ಪೇೞುವೆ ನಿನ್ನ ಚಿಂತೆಯಂ ॥ ೮

ಸ್ತನಮಂ ಚಿತ್ರಿತಪತ್ರಲೇಖೆ ನೊಸಲಂ ಬಾಲೇಯಕಂ ಲೋಲಲೋ
ಚನಮಂ ಕಾಡಿಗೆ ಕಂಠಮಂ ತರಳಹಾರಂ ಕೇಶಮಂ ಪುಷ್ಪಮಾ ।
ಲೆ ನಿತಂಬಸ್ಥಲಮಂ ಸುರತ್ನಕಟಿಸೂತ್ರಂ ಸಾರ್ದುವಿಲ್ಲೋಹೊ ಕಾ
ಮನ ಕಾಟಕ್ಕೊಳಗಾದೆ ನೀಂ ಪೆಱತಿದಲ್ತಂಭೋಜಪತ್ರೇಕ್ಷಣೇ ॥ ೯

ವ॥ ಎಂದು ಕಾಮಲೇಖೆ ಮನಮಱಿದು ಮಾತಾಡೆ,

ಬಗೆಯೊಳ್ ಬೆಚ್ಚವ್ರೊಲಾದ ಮಾತು ಕಿವಿಗೆಯ್ದಲ್ಮಿಾಂಬೊಣರ್ತೋರಮು
ತ್ತುಗಳಂ ಕಾಱುವ ಮಾಣ್ಕೆಯಿಂ ತರಳನೇತ್ರದ್ವಂದ್ವದಿಂ ಬಾಷ್ಪಬಿಂ ।
ದುಗಳಂ ಸೂಸಿ ಲತಾಂಗಿ ಭಂಗಿವಡೆದಿರ್ದಳ್ ಬೇಂಟವೆಂಬೊಂದು ಬ
ಳ್ಳಿಗೆ ಪೊಯ್ನೀರೆಱೆವಂದದಿಂ ನುಡಿದಳಿಲ್ಲೇನೊಂದುಮಂ ಕಾಂತೆಯೊಳ್॥

ಸಮಧಿಕಚಿಂತೆಯಿಂ ನುಡಿಯಲುಂ ಬಗೆವೇೞಲುಮೊಲ್ಲದಾಶರ
ತ್ಸಮಯದ ಸೋಗೆಯಿರ್ಪ ತೆಱದಿಂ ಕಡುವಿನ್ನನ ಮೂಗುವಟ್ಟು ಖೇ ।
ದಮನೊಳಕೊಂಡು ನಿಂದಬಲೆಯಿರ್ದಿರವಂ ಸಖಿ ನೋಡಿ ಮತ್ತಮಾ
ಕಮಲದಳಾಯತೇಕ್ಷಣೆಗಿದಂ ನುಡಿದಳ್ ಬಗೆಗಲ್ವ ಬಲ್ಮೆಯಿಂ ॥ ೧೧

ಸುದತಿ ಮನೋರಥಂ ಸಖಿಗೆ ಪೇೞದೆ ಸಿದ್ಧಿಸದೆನ್ನ ನಿನ್ನ ಕೂ
ಟದ ತೆಱನಂತುಟಲ್ತು ನಿನಗಾಂ ಪೆಱತೊಂದು ನಿತಂಬಿನೀಸ್ವರೂ ।
ಪದ ಹೃದಯಂಬೊಲಿರ್ದನೆನಗಂ ಬಗೆವೇೞದೆ ನಾಣ್ಚಿ ಬಾಷ್ಪಮಂ
ಕೆದಱಲಿದೇಕೆ ಪೇೞ ನಿನಗಾದುದಿದೇಕಿನಿತೊಂದುಮುಬ್ಬೆಗಂ ॥ ೧೨

ವ॥ ಎಂಬುದುಂ ಬಾಷ್ಪಜಲನಿಮಜ್ಜಜ್ಜಲಚರಾಲೋಲನಯನೆ ಬಗೆವೇೞಲುಜ್ಜುಗಂಗೆಯ್ದು ಲಜ್ಜಾರಸಮನೆಂತಾನುಮಂತರಂಗದಿಂ ತೊಲಗಿಸಿ,

* ಕ—ಕಚಂ.  † ಕ. ಖ. ಗ ನುಡಿದಳಿಲ್ಲೇನೆಂದುಮಾ.

ನೀನೆ ವಿದಗ್ಧೆ ನೀನೆ ಹಿತಕಾರಿಣಿ ನೀನ ಮನಕ್ಕೆ ವಿಶ್ರಮ
ಸ್ಥಾನಮದಿರ್ಕೆ ಕೇಳಬಲೆ ಪೇೞ ಪೆನಾಂ ನಿಜರೂಪು ಯೌವನಾ ।
ನೂನವಿಲಾಸಮುತ್ತಮಗುಣಂ ಬಗೆಗೊಳ್ವನಮಿಲ್ಲಿಗಂದು ಒಂ
ದಾನಳಿನಾಕ್ಷನೊಂದುತೆಱನೀತೆಱದಿಂ ಪಡೆದತ್ತು ಚಿಂತೆಯಂ ॥ ೧೩

ಕೆಳದಿ ತರವೇೞ್ಪುದೆನಗಾ
ನಳಿನಾಕ್ಷನನಲ್ಲದಂದು ಪೋದಪುದಸುವೀ ।
ಗಳೆ ಮದನನಿಸುವ ಪೊಸಕೆಂ
ದಳಿರ್ಗಳ ಕೆಂಗರಿಯು ನನೆಯ ಮೊನೆಯಂಬುಗಳಿಂ ॥ ೧೪

ನನೆಯಿಸಿ ಕಾಡುಗುಂ ಸತತಮಾತನುದಗ್ರಲಲಾಟಪಟ್ಟಮಾ
ತನ ಪೃಥುವಕ್ಷಮಾತನತನೂದರಮಾತನ ಚಲ್ಲೆಗಣ್ಗಳಾ ।
ತನ ಬಗೆಗೊಳ್ವ ಪೆರ್ದೊಡೆಗಳಾತನ ಸಿಂಹಕಟೀತಟಂಗಳಾ
ತನ ನಿಡುದೋಳ್ಗಳಾತನಳಕಾಳಿಗಳಾತನ ನೀಳ್ದ ಪುರ್ವುಗಳ್ ॥ ೧೫

ವ॥ ಎಂದು ಬಗೆವೇೞ್ದು ನೊಂದು ನುಡಿದ ಸತ್ಯಭಾಮೆಗಾಕಾಮ
ಲೀಖೆಯಿಂತೆಂದಳ್,

ಬಯಸಿದೆ ನೀಂ ದುರ್ಲಭನಂ
ಪ್ರಿಯೆ ಬಯಕೆಗೆ ಬಡವರಿಲ್ಲೆನಿಪ್ಪವೊಲಸುರಾ ।
ರಿಯುನಂತಾದೊಡಮೇಂ ನಿ
ನ್ನಯ ರೂಪುಂ ಕುಲಮುಮೊಲಿಸುಗುಂ ಕೃಷ್ಣನುಮಂ ॥ ೧೬

ನರೆದಪೆ ಲತಾಂಗಿ ನೀಂ ಮುರ
ವಿರೋಧಿಯೊಳ್ ಕಲ್ಪಲತಿಕೆ ಕಲ್ಪದ್ರುಮದೊಳ್ ।
ನರೆವಂತೆಂದೊಡದೆಂದಾಂ
ನೆರೆದಪೆನೆಂದಾಂತಳಮಳವಸ್ಥಾಂತರಮಂ ॥ ೧೭

ಅಳುರ್ವ ತುಷಾರವರ್ಷದೊದವಿಂದರವಿಂದಿನಿ ಕಂದಿ ಕುಂದಿ ಪಾ
ಡೞಿವವೊಲಾವಗಂ ಕಱಿವ ಕಾಮಶರಾವಳಿಗಳ್ಕಿ ಬಳ್ಕಿ ಕೋ ।
ಮಳ ನಡೆತಂದು ಪೊಕ್ಕು ಬನಮಂ ಸಖಿಯರ್ ತಳಿವಾಲಿನೀರ್ಗಳಿಂ
ಕುಳಿರ್ವಲವಾ ಸಿನೊಳ್ ಪೊರಳುತಿರ್ದಳಗುರ್ವಿನಾಬೇಟದೇಟ್ಗೆಯಿಂ॥೧೮

ಲಲನೆ ಹಿಮೋಲ್ಲಸದ್ಭವನದೊಳ್ ವನದೊಳ್ ವನದೊಳ್ ಪೊರಳ್ದು ನಿ
ಚ್ಚಲುಮಿಸೆ ಕಂತು ನಿಪ್ಪಸರದಿಂ ಸರದಿಂ ಸರದಿಂಪುದೋಱೆ ಕೋ।
ಗಿಲೆ ವಿಧು ಬೀಱೆ ಭೀತಿಕರಮಂ ಕರಮಂ ಕರಮಂ ಕಪೋಲದೊಳ್
ನಿಲಿಸುವಳೆಯ್ದೆ ನೋವಳಧಿಪಾಂಗದಪಾಂಗದ ಪಾಂಗದಗ್ಗಳಂ ॥ ೧೯

ಪಾಸುವ ಪಲ್ಲವಾಸ್ತರಣಮೊಟ್ಟುವ ಬಾಳಮೃಣಾಳಸಂಕುಳಂ
ಸೂಸುವ ಚಂದ್ರಕಾಂತಜಲಮೊತ್ತುವ ಶೀತಳಿಕಾಕದಂಬಕಂ।
ಬೀಸುವ ಪುಷ್ಪವೀಜನಮಮರ್ಚುವ ಕಪ್ಪುರವೆಚ್ಚವಾಗಳುಂ
ಪೂಸುವ ಚಂದನಂ ಬಿಸುಪನಾಱಿಸಲಾಱುವೆ ಸತ್ಯಭಾಮೆಯಾ ॥ ೨೦

ಮೇಳಿಸಿ ಪೊರ್ದಿದಾಳಿಯರ ಮೈ ಬಿಸುಪೇಱೆ * ಬೆಮರ್ತುವಂಗದೊಳ್
ಬಾಳಮೃಣಾಳಿಕಾಸಮಿತಿ ಚುಯ್ಯೆನುತುಂ ನೊರೆವಿಟ್ಟುದಶ್ರುಧಾ।
ರಾಳಿ ಕಪೋಲದೊಳ್ ಕುದಿದು ಬತ್ತಿದುದೊಯ್ಯನೆ ಬೀಸುತಿರ್ಪ ಪೊಂ
ಬಾಳೆಯ ಚಾಮರಂಗಳುರೆ † ಸೀದುವು ತನ್ವಿಯ ದೇಹದಾಹದಿಂ ॥೨೧

ವ॥ ಅಂತು ಸತ್ಯಭಾಮೆಗಗ್ಗಳಮಾದ ವಿರಹಪರಿತಾಪಮಂ ಕಂಡು ಬಗಟೊಂಡೀಕೆಯ ಬೇಟಮಂ ಕೈಟಭಾರಾತಿಗೆಯ್ದಿಸದೊಡೆನ್ನಂ ದೋಷಮೆಯ್ದುಗುಮಿದಂ ಮೊದಲೊಳೀಕೆಯ ತಾತಂಗೆ ಪೇೞ್ದಾತನನುಮತಿಯಿನಭಿಮತಮಂ ಮಾಳ್ಪೆನೆಂದು ನಡೆತಂದು ಸತ್ರಾಜಿದ್ಭೂಪನಲ್ಲಿಗೆ ಬಂದೇಕಾಂತದೊಳಿಂತೆಂದಳ್

ಅಂದೊರ್ವಳ್ ನಿಮ್ಮ ಮನೆಗೆ
ಬ್ಬಂದಾವಸುದೇವಸುತನ ರೂಪಂ ರೂಪಿ।
ಟ್ಟಂದು ಮೊದಲಾಗಿ ನೃಪ ನಿಜ
ನಂದನೆಯುಂ ಮಾಣದಿಸುವನುದ್ಗಮಬಾಣಂ ॥ ೨೨

ತೊಲಗಿಸಿ ಭೂಷಣಪ್ರತತಿಯಂ ಮತಿಯುಂ ಪತಿಯುಂಗಶೋಭೆಯೊಳ್
ನಿಲಿಸೆ ಮನೋಭವಾಗ್ನಿ ವಿಧುವಿಂ ಮಧುವಿಂ ಮಧುವಿಂಗೆ ಪೆರ್ಚೆ ತ।
ಣ್ಣೆಲೆವನೆ ಕೊಳಕ್ಕೆ ವಂದಮಳಿನಂ ಪುಳಿನಂ ನಳಿನಂ ನಿಜಾರ್ತಿಯಂ
ಗೆಲೆ ಪಡೆಯಲ್ ಬೞಿಕ್ಕವಳಱಿಲ್ದು ಬಳಲ್ದು ತೊಱಿಲ್ದು ಜಾನಿಪಳ್ ॥೨೩

* ಕ. ಗ — ಬಿಸುಪೇಱಿ † ಕ. ಗ. — ಚಾಮರಂಗಳರೆ.

ವ॥ ಅಂತುಮಲ್ಲದೆ,

ಸೋಂಕಿದ ಗಾಳಿ ದಳ್ಳುರಿಪ್ರೊಲಾದುದು ಪೊಕ್ಕ ಸರೋವರಾಂಬು ಕಾ
ಯ್ಪಿಂ ಕುದಿದತ್ತು ನಂದನವನಂ ಕರಿಕೆಟ್ಟುದು ನೋಡೆ ಸುಯ್ದು ಸು।
ಯ್ವಿಂಕಿಯಿನೆಯ್ದೆ ಚಂದ್ರಿಕೆ ಬಿಸಿಲ್ಗೆಣೆಯಾದುದನಂಗತಾಪದಿಂ
ಪಂಕರುಹಾಕ್ಷಿ ಕಾಮಶಿಖಿ ಪೆಣ್ಬರಿಜಂ ತಳೆದಂತೆ ತೋಱಿದಳ್ ॥ ೧೪

ವ॥ ಅಂತುಮಲ್ಲದೆ,

ಅವಯವದ ಸಾರಸರ್ವ
ಸ್ವವನಾಹುತಿಗೆಯ್ದಳಂಗಜಾಗ್ನಿಯೊಳುಚಿದ।
ತ್ತವಳೊಳಸುವೊಂದೆ ಸತಿ ಮಾ
ಱ್ಕವನಾಕುಳಕಾಮಶಿಖಿಗೆ ಪೂರ್ಣಾಹುತಿಯುಂ ॥ ೧೫

ವ॥ ಎನೆ ತತ್ಪ್ರಪಂಚಮುಂ ಕೇಳ್ದು,

ರೂಪಯಶೋದುಂದುಭಿನಿನ
ದಾಪೂರಿತಮಹಿಗೆ ಸತ್ಯಭಾಮೆಗೆ ಹರಿ ತಾ।
ನೋಪನೆನೆ ನೆಗಟ್ಟಮಾಕೆಗೆ
ರೂಪಯಶೋಯೋಗ್ಯಮೆನಿಪ * ಸೌಭಾಗ್ಯಯಶಂ ॥ ೧೬

ಪರಮಪದನಾತನಾಮುರ
ಹರನನೊಡಂಬಡಿಪೊಡೆನ್ನ ನಣ್ಪಿನ ನುಡಿಯೊಳ್।
ಪುರುಳಿಲ್ಲೀಕೆಯ ರೂಪೀ
ಕರುಣಮೊಡಂಬಡಿಕುಮೆಲಗೆ ನಿನ್ನಯ ನುಡಿಯುಂ †। ೧೭

ವ॥ ಅದುಕಾರಣಂ ನೀನೆ ಪೋಗಿ ನಿನ್ನ ಬಲ್ಲಂದದಿಂ ಪುಲ್ಲನಾಭನ ನೊಡಂಬಡಿಸು ಪೋಗು; ಈಗಳ್ ನಿಮಿತ್ತಂಗಳುಂ ಶುಭಸೂಚಕಂಗಳಾಗಿರ್ದಪುವು—ಎಂದು ಕಳುಪುವುದುಂ ಕಾಮಲೇಖೆ ‡ ॥

* ಕ. ಗ.—ಯೋಗ್ಯನೆನಿಪ. † ಕ. ಖ ಗ.—ನುಡಿಯಿಂ.
‡ ಕ.ಗ.—ಕಾಮಲೇಖೆ ಪುರದಿಂ ಪೊಱಮಟ್ಟು ಬರುತ್ತುಂ.

ಪೌರವಿನಿರ್ಗತೆಯಾಗಿ ಮ
ನೋರಥಮನೆ ಕಾಣ್ಬ ತೆಱದಿನಿದಿರೊಳ್ ಕಂಡಳ್ ।
ನಾರದನನಖಿಲತತ್ತ್ವವಿ
ಶಾರದನಂ ಕಾಂತಿಜಿತಶರನ್ನೀರದನಂ ॥ ೭೮

ವ॥ ಆಗಳಾಕೆಗೆ ಮುನೀಂದ್ರನಿಂತೆಂದಂ

ದ್ವಾರಕೆಯ ಬಹಿರ್ವನದೊಳ್
ನಾರಾಯಣನಿರ್ಕುಮಿದಿರೊಳಭಿಮತಮಕ್ಕುಂ ।
ನಾರೀಜನದೊಳ್ ಬೇಟದ
ನಾರಿ ಮುಕುಂದಂಗೆ ಸತ್ಯಭಾಮೆಯೆನಿಕ್ಕುಂ ॥ ೭೯

ವ ಎಂದು ಮುನೀಶನಾದೇಶಂಗೆಯ್ದು ಪೋಗೆಂದು ಕಳುಪಿದೊಸಗೆಗೆ ಮನದೊಳ್ ಗುಡಿಗಟ್ಟಿ ಬಗೆಯೊಳ್ ಬದ್ದವಣಂಬೊಯ್ದು ರಾಗರಸದೊಳ್ ಸಿಂಪಿಣಿಯಾಡಿ ನಡೆದೆಯ್ದಿವಂದಾದ್ವಾರಾವತಿಯ ಪೊಱವೊಱಲ ಬನಮಂ ಪೊಕ್ಕು,

ನೀಲಮಣಿರುಚಿರನಂ ವನ
ಮಾಲಿಯನಾಲೋಲಮಕರಕುಂಡಲನಂ ದ್ಯೋ ।
ತಾಲಂಕೃತಕೌಸ್ತುಭನಂ
ಹೇಲಾಗತಿ * ರುಚಿರಪೀತಪಟನಂ ಕಂಡಳ್ ॥ ೮೦

ವ॥ ಅಂತಿದಿರೊಳ್ ಯದೃಚ್ಛೆಯಿಂದುತ್ಸಾರಿತಪರಿವಾರನಾಗಿರ್ದ ವಾರಿಜಾಕ್ಷನ ಸಮಕ್ಷಕ್ಕೆ ವಂದು,

ಪಿಸರಸ ಸುಖಮಂ ಚೆಲ್ವಿಂ
ನೀನೊಲಿಸಿದ ಸತ್ಯಭಾಮೆಯುಂ ನೆನೆವೈ ತ ।
ನ್ಮಾನಿನಿಯಟ್ಟಿದ ದೂತಿಯೆ
ನಾನಭಿಧಾನದೊಳ್ † ಕಾಮಲೇಖೆಯೆಸಂಬೆಂ ॥ ೮೧

---

* ಖ.—ಲೀಲಾಗತಿ. † ಕ ಗ.—ನಾನಭಿಧಾನಕದೆ.

ಎಂದು ನುಡಿದವಳ ನುಡಿಗಳ್
ಕಂದರ್ಪನ ಕಬ್ಬುವಿಲ್ಲ ಜೇವೊಡೆಯೊಡನೆ।
ಯ್ತಂದು ಕಿವಿವುಗುವುದುಂ ಪುಗು
ತಂದುವು ನನೆಯಂಬುಗಳ್ ಮುಕುಂದನ ತನುವಂ ॥ ೨೦

ವ॥ ಅಂತು ಕಂತುಶರಭರಿತಹೃದಯತೂಣೀರನಾಗಿ ಚಾಣೂರ ವೈರಿ,

ಎಂತೆಂತು ನಿನ್ನ ನಟ್ಟದ
ಳಂತೆಂತೆನ್ನಂ ಪಲುಂಬಿ ಪಂಬಲಿಸುವಳಂ।
ತೆಂತಿರ್ದಳವಳ್ ಬೇಟದಿ
ನಂತದನೆಲೆ ಕಾಮಲೇಖೆ ನುಡಿ ವಿಸ್ತರದಿಂ ॥ ೨೨

* ವ॥ ಎಂಬುದುಂ ಮಾತಿನ ನಲವಿಂದೀತನ ಮನದೊಲವಱಿಯ ಲಾದುದೆಂದು ಸಂತಸದಿಂದಿಂತೆಂದಳ್,

ವನಿತೆಯುರನಾವನುಂ ನೋ
ಡಿ ನೋಡಿಸಲ್ † ಸೋಲ್ತು ಸೋಲಿಸಲ್ ನೆಱೆಯಂ ನೀಂ।
ವನಜಾಕ್ಷ ಸೊಬಗನೈ ರೂ
ಪಿನ ಪೊಳಪನೆ ತೋಱಿ ನೀಱೆಯುಂ ಕೂರಿಸಿದೈ ॥ ೨೪

---

* ಚಳದಳಕಾಳಿಗಳ್ ಪದಪಯೋರುಹದೊಳ್ ನಸುನೀಳ್ದು ಜೋಲ್ದು ಕ
ಪ್ಪಳಿಸೆ ವಿನಮ್ರೆಯಾಗಿ ದರಹಾಸವಿಲೋಕನದಿಂ ಪ್ರಸಾದಮಂ।
ತಳೆದು ನೃಪೇಂದ್ರ ಮಂಗಳಮ ದೇವರ ದಕ್ಷಿಣಬಾಹುಶಾಖೆಗಂ
ದೆಲೆಗೆಲೆ ಕಾಮಲೇಖೆ ನಿನಗಾದನುರಾಗದಿನಲ್ತೆ ಮಂಗಳಂ ॥
ಧರಣೀನಾಥಂಗೆ ಸತ್ರಾಜಿಗೆ ಕುಶಲಮ ತನ್ವಂಗಿ ಪೇಱ ವಾರ್ತೆಯಂ ತ
ತ್ಪುರದೊಳ್ ತಚ್ಚಕ್ರವಾಕಸ್ತನಿಗೆ ಬಿನದಮೇಂ ತತ್ಸತೀಸಂಕುಲಕ್ಕೇಂ।
ಕರಣೀಯಂ ನೀನಗಲ್ದಿಂತೆನಿತು ದಿವಸಮಾಕನ್ನೆಯಂ ನಿನ್ನ ಬಂದೀ
ಬರವಾದಂ ಚಿತ್ರಮೆಂದಿಂಬಳವಡೆ ಬೆಸಗೊಂಡಂ ಸರೋಜಾತನೇತ್ರಂ ॥

ಈ ಎರಡು ಪದ್ಯಗಳು ಕ. ಗ. ಪುಸ್ತಕಗಳಲ್ಲಿ ಹೆಚ್ಚಾಗಿವೆ.

† ಖ.—ನಾಡೆಯುಂ

ತನು ತನಗಿಲ್ಲದಂಡಲೆವ ಗಾಳಿಯನೋವದೆ ಪಾವು ಕೊಂಡ ಚಂ
ದ್ರನನುರಿದಿರ್ದ ಮನ್ಮಥನನಾಱಡಿದುಂಬಿಯನೋವದೇಕೆ ಪೆ।
ತ್ತನೊ ಬಿದಿಯೆಂದು ತೀಡುವೆಲರ್ಗುಜ್ಜಳಿಪಿಂದುಗೆ ಕಾಡುವಂಗಜಂ
ಗನುನಯದಿಂದೆ ಪಾಡುವಳಿಗಂತವಳೇಂ ಬೆದಱುತ್ತುಮಿರ್ಪಳೋ ॥೩೫

ಯುವತಿಯ ಬಾಡಿದಂಗಲತೆ ಬತ್ತಿದ ಬಾಯ್ ಕೊರಗಿರ್ದ ವಕ್ತ್ರಮೆಂ
ಬಿವನೆಸೆವಾತ್ಮಕೋಮಲತೆಯಿಂದರುಣಚ್ಛವಿಯಿಂ ಸುಕಾಂತಿಯಿಂ।
ವನಲತೆಗಂ ಪ್ರವಾಳಲತೆಗಂ ಹಿಮರೋಚಿಗಮಾಯ್ತು ಪೋಲಲೊಂ
ದವಸರವಿಂತವರ್ಕೆವಳ ಬೇಟವೆ ಬೆಂಬಲವಾದುದೆಂಬಿನಂ ॥ ೩೬

ತನುತಾಪಂ ಚೈತ್ರನಿಂ ಚಂದ್ರನಿನತಿಶಯವಾಗಿರ್ದುದಾಚೈತ್ರನಿಂ ಚಂ
ದ್ರನಿನಾಗಿರ್ದುತ್ಕಟಂ ನಂದನದಿನೊಗೆದುದಾಚೈತ್ರನಿಂ ಚಂದ್ರನಿಂ ನಂ
ದನದಿಂ ತಳ್ಪೊಯ್ವ ತೆಂಗಾಳಿಯಿನೊದವಿದುದಾಚೈತ್ರನಿಂ ಚಂದ್ರನಿಂ ನಂ
ದನದಿಂ ತೆಂಗಾಳಿಯಿಂದ್ಯೆವಡಿವಳೆದವಳಾತಾಪಮಂ ಪೇಳ್ವೆನೇನಂ ॥೩೭

ಚಿತ್ತಂಬೊಕ್ಕಿರ್ದೆಯೆಂತೈ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂ
ಬೆತ್ತಂ ಮೈಸೋಂಕಿ ಮಂದಾನಿಳನುರಿದನದರ್ಕಾಳಿಯರ್ ದೂಱದಿಂ ಸೂ।
ಸುತ್ತಿರ್ಪರ್ ತೋಯಮಂ ಜೇಕೊಟಿವಿಯೊಳ್ ಮನೋಜಾತನೆಷ್ಟೆದ್ದಿ ಸಲ್ಕಾ *
ರ್ದೆತ್ತುಂಗೋಲಿಕ್ಕುವಂ ಭಾವಿಸುವರಳವೆ ಸತ್ರಾಜಿತೀದೇಹದಾಹಂ ॥ ೩೮

ಎನಸುಂ ಮೈಬಿಘುಪೇಱ ವಾಸಗೃಹಮಂ † ತೀವಿತ್ತು ಸುಯ್ಗಾಳಿ ನಂ
ದನಪತ್ರಂಗಳನಾಱಸಿತ್ತು ‡ ವಿಗಳದ್ಬಾಷ್ಪಾಂಬುಧಾರಾಳಿ ತ।

---

* ಕ. —ಜಾತನಿರ್ದುದ್ದಿ ಸರ್ಕ್ಕಾ. ಖ. —ಜಾತನಿರ್ದುದ್ದಿ ಶಕ್ಕಾ. ಗ. —ಜಾತನಿದ್ದುರ್ದ್ದ್ಯಸಲ್ಕಾ.

† ಕ, ಗ. —ಪೈಮುಗೃಹಮಂ. ‡ ಗ. —ನಾಡಿಸಿತ್ತು.

ದ್ವನಭೂಜಾವಳಿಗಾಲವಾಲಜಲವಾಯ್ತುಬ್ಬಾಷ್ಪ ನಿನ್ನಂದಮಂ
ನೆನೆಯುತ್ತುಂ ಮನಮಂ * ತಱುಂಬುತಿರೆ ಜೀವಂ ನಿಂದುದಾತನ್ವಿಯಾ ॥ ೩೯

ವ॥ ಅಂತಾವಿರಹವಿಹ್ವಲೆಯ ಜೀವಿತಾಶ್ರಯದೊಳ್ ಸಂದೇಹಮುಂಟಲ್ಲದೆನ್ನನುಡಿಯೊಳ್ ಸಂದೇಹಮಿಲ್ಲವೆಂತು ಬಂದು ನೋಳ್ಪುದೆಂಬು ತನ್ನ ಮನದೊಳೊಡಂಬಡಿಸಿದಂತೆ ನುಡಿದ ದೂತಿಯ ಮಾತಿಂಗೊಡಂಬಟ್ಟು ವಿಟವೇಷದಿಂ ಪ್ರಚ್ಛನ್ನತನುವಾಗಿ ಕಾಮಲೇಖೆಯೊಡನೆ ನಡೆಗೊಂಡು ನಿಜಕಾಮಪ್ರೇಮರಥಮನಾಹತಮತಿಜವದಿನೆಯ್ದಿಸಲೆಯಿ ಸತ್ಯಭಾಮೆಯಿರ್ದ ಬನಮಂ ಪೊಕ್ಕು ತದ್ವನವಿಭೂತಿಯಂ ನೋಡಿ ಪೊೞ್ತುಗಳೆಯಲೊಲ್ಲದೆ ಚಿತ್ತವಲ್ಲಭೆಯಂ ನೋಡುವುತ್ಕಲಿಕೆಯಿಂದಾ ಕಾಂತೆಯಿರ್ದೇಕಾಂತಪ್ರದೇಶಕ್ಕೆ ಬಂದು ತತ್ಸಮೀಪದ ಜವನಿಕೆಯ ಮಱೆಯೊಳ್ ತನ್ನ ನಾರುಂ ಕಾಣದಂತು ತನಗಾಕನ್ನೆಯ ರೂಪುಗಾಣಲುಂ ಮಾತುಗೇಳಲುಂ ಬರ್ಪಂತು ಕಾಮಲೇಖೆವೆರಸು ನಿಂದು,

ಕೆಂದಳಿರ್ವಾಸಿನೊಳ್ ಕಡುಬೆಳತ್ತುರ್ಕರಂ ಬಡವಾದ ತನ್ವಿ ತ
ನ್ನೊಂದಿರವಿಂದೆ ಸಂಜೆಮುಗಿಲೊಳ್ ನಸುದೋರ್ಪ ಕಲಾವಶೇಷಮ ।
ಪ್ಪಿಂದುವ ಲೇಖೆಯಂತೆಸೆದು ಮೆಲ್ಲದೆಯಂ ನಡುವೆಂಗಜಾಸ್ತ್ರದಿಂ
ನೊಂದು ಕಟಿಲ್ದ ಬಿಲ್ವ ಪರಿಯಂ ಹರಿ ಕಂಡೆರ್ದೆಯಾಱೆ ನೋಡಿದಂ ॥ ೪೦

ಮಾಡಿ ‡ ಬೆಡಂಗಿ ಕಣ್ಗೆ ಕಡುಸೋಲಮನೆನ್ನ ಮನಕ್ಕೆ ಸೋಲಮಂ
ಮಾಡುವಲಂಪಿನಿಂ ಪುಗುವವೋಲೆರ್ದೆವೊಕ್ಕನಗಿಂದು ಕೈತ್ಯಮಂ ।
ಮಾಡಿದಳೀಕೆ ಕಾಮಪರಿತಪ್ತೆಗಡೆಂತಿವಳಿಂದೆ ತಣ್ಪು ಕೈ
ಗೂಡಿದುದೆನ್ನ ಮೂಢತೆಯೊ ಮೇಣಿವಳಂಗಜತಪ್ತೆಯಲ್ಲಳೋ ॥ ೪೧

* ಕ. ಗ. —ನೆನೆಯುತ್ತಿರ್ಪಮನಂ. † ಕ. ೯. —ಕನಲ್ದೊನಲ್ಕೆ.
‡ ಕ. ಖ. ಗ. —ಮಾಡೆ.

ವ॥ ಎಂದರವಿಂದಲೋಚನನಾಕನ್ನೆಯಂ ಕಂಡು ತನ್ನೆರ್ದೆಯಾ ಱಿದಂದಮುಮನಾಕನ್ನೆಯ ರೂಪುಮಂ ಬೇಟದ ಕಾಯ್ಪುಮ ನನುಕ್ರಮದೊಳ್ ಬಗೆಯುತ್ತಿರ್ಪಿನಮಾದರ್ಪಕಪ್ರದಾರಿತವಿಘುರಿತಸ್ವಾಂತೆ* ನಿಜಾಂತರವೇದಿಸಖೀಜನಂಗಳೊಳೊರ್ವ ಚಾತುರ್ಯವತಿಯುಮೊಗಮಂ ನೋಡಿ,

ಅನಲಸಹಾಯನಪ್ಪ ಯಮದಿಙ್ಮುಖದಿಂ ನಡೆತರ್ಪ ತೆಂಬೆಲರ್
ಮನಸಿಜವಹ್ನಿಯಂ ಬಿಡದೆ ಪೆರ್ಚಿಪುದುಂ ಕಡುನೋವನೀವುದುಂ ।
ವನರುಹವಕ್ತ್ರೆ ವಿಸ್ಮಯಮೆ ತಾಪಹರಂ ಜನಸೌಖ್ಯಕಾರಿ ನಂ
ದನನೆನಗಂಗತಾಪಮುಮನೋವದೆ ನೋವುಮನೀವುದದ್ಭುತಂ ॥೪೦

ಕೆಳದಿಯರಿಟ್ಟಿಱಿಂ ತಳಿವ ಚಂದನಮಿಶ್ರಿತಚಂದ್ರಕಾಂತಶೀ
ತಳಜಳವಾಱಿಸಲ್ ನೆಱೆಯುಮೆಂದು ಹಿಮೋದಕಪೂರ್ಣಮಪ್ಪ ಪೂ ।
ಗೊಳದೊಳ್ ಪೊಕ್ಕುಮೆನ್ನ ವಿರಹಾಗ್ನಿಯನಾಱಿಸಲಾರ್ತನಿಲ್ಲ ನೀ
ರೊಳಮುರಿವೊಂದು ದಳ್ಳುರಿಯನಂಗನೆ ನಂದಿಸುವಂದಮಾವುದೋ ॥೪೩

ಖಳಮದನಾಸ್ತ್ರಪುಂಜದವೊಲಪ್ಪಲರ್ವ್ರಜಮುಮಂಗಸಂಭವಾ
ನಳನವೊಲಪ್ಪ ಕೆಂದಳಿರ ಪಾಸಿಕೆಯುಂ ವಿಷನಾಮವುಳ್ಳ ಶೀ ।
ತಳಜಳಮುಂ ವಿಷಾಹಿಕುಲಮೊಂದಿದ ಚಂದನದಣ್ಪುಮಕ್ಕ ಕೇ
ಳಮೆನಗಾಭಿಚಾರವಪಚಾರಮಿದೇಂ ಶಿಶಿರೋಪಚಾರಮೋ ॥ ೪೪

ಸಮನಿಸಿದುಷ್ಣರೋಚಿಯ ಮರೀಚಿಯ ನಿರ್ಭರತಾಪವಾಱುಗುಂ
ಕುಮುದಿನಿಗಿಂದುದರ್ಶನದಿನಾಱುಗುಮೇ ಪೆಱತೊಂದು ವಸ್ತುವಿಂ ।
ಹಿಮಕರವಕ್ತ್ರೆ ಕೇಳ್ನಗೆ ಪೆರ್ಚಿದ ಮನ್ಮಥತಾಪವಾಱುಗುಂ
ಕಮಳದಳಾಕ್ಷದರ್ಶನದಿನಾಱುಗುಮೇ ಶಿಶಿರೋಪಚಾರದಿಂ ॥ ೪೫

ಆಸ್ತವನೀಯನೀಲತನುಶೌಷ್ಠವಮಾನವಪೀತವಸ್ತ್ರವಾ
ಕೌಸ್ತುಭರತ್ನಹಾಮಕರಕುಂಡಲವಾವನಮಾಲೆ ರಂಜಿಪಾ ।

* ಕ, ಗ, —ಪ್ರದರವಿಧುರಿತ ಸ್ವಾಂತೆ, ಖ, —ಪ್ರದಾರಿತ ವಿದಾರಿತಸ್ವಾಂತೆ,

ವಿಸ್ತೃತವಕ್ಷವಾಸುಭುಜವಾಕಮಲೇಕ್ಷಣವೀಸ್ಮರಾನಲಾ
ರ್ಚಿಸ್ತತಿದಗ್ಧಹೃನ್ಮುಕುರದೊಳ್ ಪೊಳೆದೊಪ್ಪುವ ಭಂಗಿ ವಿಸ್ಮಯಂ ॥೪೬

ಹೃದಯದ ತಾಪವನೆನ್ನೀ
ಹೃದಯಸ್ಥಂ ಗೋಪಚಂದ್ರನಾಱಿಸನೆನೆ ಕೇಳ್ ।
ಸುದತಿ ಕಡುದೂರದಾಕಾ
ಶದ ಚಂದ್ರಮನೆಂತುಮೂಱಿಸಲ್ ನೆಱೆದಪನೇ ॥ ೪೭

ಹೃದಯಾಗ್ನಿ ಪೆರ್ಚೆ ವನತತಿ
ಗೆ ದವಾಗ್ನಿವೊಲಾಯ್ತುದೆಂತು ಹರಿಯಿರ್ದಪನೀ ।
ಹೃದಯಾಗ್ನಿಯೊಳಗ್ನಿಸ್ತಂ
ಭದ ವಿದ್ಯೆಯನೀಗಳೆಂತು ಕಲ್ತನೊ ಸಖಿಯೇ * ॥ ೪೮

ತಾನಿರ್ದ ನಿಳಯಮಿದು ಮದ
ನಾನಳನಿಂದುರಿದುದಕ್ಕ ತನ್ನಿರ್ದೆಡೆಯಂ ।
ತಾನಾರಯ್ಯದನೆನ್ನನ
ದೇನಾರಯ್ದಪನೆ ಬಂದು ಕಮಲದಳಾಕ್ಷಂ ॥ ೪೯

ಧರೆಯಂ ಮೂಱಡಿಮಾಡಿದ
ಹರಿ ಬಪ್ಪೊಡೆ ತಡವೆ ಮನದೊಳೊಲ್ಲದ ಬರವಿಂ ।
ಬರೆ ಕಿಱಿದೆಡೆ ಪಲವಡಿಯಾ
ಗಿರೆ ತಡೆದನೊ ಬಾರದಿರ್ದು ತಡೆದನೊ ಕೆಳದೀ ॥ ೫೦

ಪ್ರಾಣೇಶನ ಬರವಿಂಗಿವು
ಮಾಣದೆ ಕೆತ್ತಿದಪುವೆಡದ ಕಣ್ಣುಂ ತೋಳುಂ ।
ಪ್ರಾಣೇಶನ ಬರವಿಲ್ಲಂ
ಪ್ರಾಣೇಶಂ ಬರ್ಕುಮೆನ್ನನುಯ್ಯಲವೋಘಂ ॥ ೫೧

* ಕ. ಗ. —ವಿದ್ಯೆಯನೀಗಳೆಂತೆಕಲಿವೇಱ್ಪಿತಿಯಂ

ವ॥ ಎಂದು ದರ್ಪಕದಶಮಾವಸ್ಥಾತುರತೆಯಿಂ * ಪರ್ಯಾಕುಲ ಜೀವಿತೆಯಾಗಿ ಕನ್ನೆ ಮೂರ್ಛಾಪ್ರಪನ್ನೆಯಪ್ಪುದುಂ ಅದಂ ಸಖೀಜನಂಗಳ ಸಂಭ್ರಮಧ್ವನಿಯಿನಱಿದು ಗರುಡಧ್ವಜಂ ಜವನಿಕೆಯಿನೊಳಪೊಕ್ಕು ಆದರ್ಪಕಸರ್ಪದಷ್ಟೆಗೆ ಅವಸರೋಚಿತ ಸ್ವಕೀಯಸ್ನಿಗ್ಧವೀಕ್ಷಣವೆ ಮಂತ್ರವಾಗೆ ನಿಜಕರಸ್ಪರ್ಶನವೆ ಸಂಜೀವನಾಮೃತಸ್ಪರ್ಶನವಾಗೆ ಮೂರ್ಛೆಯಿಂದೆೞ್ಚಱಿಸಿ ;

ಪರಮಸ್ನೇಹಾಮೃತಾರ್ದ್ರೇಕ್ಷಣರುಚಿನಿಚಯಂ ಸೇಸೆ ಸಂಭಾಷಣಂತೂ
ರ್ಯಾರವಂಕಂದರ್ಪರಾಗೋದಯಮಳದಳರ್ವಂದಲ್ಪೊದೞ್ದಂಗಶೃಂಗಾ।
ರರಸಂ ಕೈನೀರ್ ಮಾದಂ ಪೊಂಗಳಸಮೊಲವು ಮೌಹೂರ್ತವಾಗಲ್ತದ
ಲ್ಲೋ
ದರಿಯೊಳ್ ವೈವಾಹವಪ್ಪನ್ನೆಗಮಭಿನವವೈವಾಹದಿಂ ಕೃಷ್ಣನಿರ್ದಂ ॥೫೦

ವ॥ ಅಂತಾಮಹೋತ್ಸವಪ್ರಪಂಚಮಂ ಕಾಮಲೇಖೆಯಿಂ ಸತ್ರಾಜಿನ್ನೃಪಂ ಕೇಳ್ದುಮತಿಹರ್ಷದಿಂ ಪುರುಷೋತ್ತಮನುಮಂ ಸತ್ಯಭಾಮೆಯುಮಂ ನಿಜನೃಪೇಂದ್ರಮಂದಿರಕ್ಕೊಡಗೊಂಡು ಬರಿಸಿ ನಿಖಿಳ ಮಂಗಳಾಚಾರಮಂ ನೆಗೞ್ದು,

ಕುಳವೃದ್ಧರ್ ನಲಿದಾಡೆ ಬಂಧುನಿವಹಂ ಕೊಂಡಾಡೆ ಸಾಮಂತಮಂ
ಡಳಿ ಹಾರೈಸೆ ಬೆಯಂ ಪೊದೞ್ದ ಜಸಮಂ ತಳ್ಕೈಸೆ ವಾದಿತ್ರಕಾ।
ಹಳಗೇಯಸ್ವನಮುಣ್ಮೆ ವೇದನಿನದಂ ಕೈಗಣ್ಮೆ ವೈವಾಹಮಂ
ಗಳಮಂ ಮಾಡಿದನಚ್ಚುಱಿಂದವರ್ಗೆ ಸತ್ರಾಜಿನ್ಮಹೀಪಾಲಕಂ ॥೫೧

ವ॥ ಅಂದಿನಿರುಳೊಳ್,

ತಳೆದುಜ್ಜ್ವಳತ್ವಮಂ ಪಾ
ಲೊಳ್ ತೊಳೆದಂತೊಪ್ಪಿ ಪೊೞ್ಪೊಸವೆಳ್ದಿಂಗಳ್ ।
ಬೆಳಗುತ್ತಿರ್ದುದು ಬೆಳ್ದಿಂ
ಗಳ ರೂಪಿಂ ಬಿಸಿಲೆ ಬೆಳಗಿದಪುದೆಂಬಿನೆಗಂ ॥ ೫೨

* ಕ. ಗ.—ಕಂದರ್ಪಾವಸ್ಥಯಾತುರೀಯಾವಸ್ಥೆಯಿಂ,

ವ॥ ಆಗಳತನುರಾಗೋದ್ದೀಪನಕಾರಣವಸ್ತುವಿಸ್ತಾರಸಂಸ್ತೃತ ವಿಸ್ತಾರವಾದ ಶಯನಸ್ಥಾನದೊಳ್ ದುಕೂಲಪ್ರಚ್ಛದಾಚ್ಛಾದಿತಮರಾಳ ತೂಳಶಯ್ಯಾತಳಮನಲಂಕರಿಸಿದಲ್ಲಿ,

ಪುಳಕನವಾಂಕುರಂ ನೆಗಪೆ ಘರ್ಮಪಯೋಲವಕುಟ್ಮಲಂ ಪುದುಂ
ಗೊಳೆ ರತಿರಾಗಪಲ್ಲವಮೊಡರ್ಚೆ ಕಟೀಕೃತಕಾದ್ರಿನಿರ್ಝರಂ ।
ತುಳುಕೆ ಮುಖಾಂಬುಜಂ ಮಿಱುಗೆ ಮಾಧವಸಂಗತಿ ಮಾಧವೋತ್ಸವಾ
ನಿಳನವಸಂಗಮಾದುದು ಮಹಾವನಲಕ್ಷ್ಮಿಗೆ ಸತ್ಯಭಾಮೆಗಂ ॥ ೫೫

ಮದನಸುಖಕ್ಕೆ ತಾನೆ ನೆಲೆ ಪೆಂಡಿರೊಳೆಂಬಿನಮಂತುಟೊಂದು ನೋ
ಟದ ತೆಱನಂತುಟೊಂದು ತನಿಸೋಂಕಿನ ಸಮ್ಮದಮಂತುಟೊಂದು ಮೋ
ಳದ ಚದುರಂತುಟೊಂದು ಪರಿರಂಭದ ಸಂಭ್ರಮಮಂತುಟೊಂದು ಕೂ
ಟದ ಪರಿ ಸತ್ಯಭಾಮೆಗೊಡಗೂಡೆ * ಮುರಾರಿಗೆ ಕೂಡಿತುತ್ಸವಂ ॥ ೫೬

ಕರಕೃಷ್ಟಾಳಕಮುತ್ಪದಾರ್ಪಿತನಖಂ ನಿಷ್ಪೀಡಿತೋಷ್ಠಂ ಸಮ
ತ್ಸರಹಸ್ತಾಹತಿ ಹೂಂಕೃತಾನ್ವಿತಪದಾಘಾತಂ ಯದೃಚ್ಛಾವಚ ।
ಸ್ಸ್ಫುರಣಂ ಸಭ್ರುಕುಟೀಕ್ಷಣಂ ದೃಢಪರಿಷ್ವಂಗಂ ವಿಮುಕ್ತಾಂಗ † ಸಂ
ವರಣಂ ಕೈತವವೃತ್ತವೇಂ ನೆಗೞ್ದುದೋ ಸಂಭೋಗಕೋಲಾಹಲಂ ॥ ೫೭

ಅವಲುಪ್ತಾಂಗವಿಲೇಪನಂ ಚ್ಯುತಲಲಾಮಂ ಸ್ರಸ್ತಮಾಲಾಳಿ ವ
ಕ್ರವತಂಸಂ ಶ್ಲಥಮೇಖಲಂ ತ್ರುಟಿತಹಾರಂ ಮುಕ್ತಮಂಜೀರಕಂ ।
ಪ್ರವಿಕೀರ್ಣಾಳಕಮಸ್ತಬಂಧಕಬರಿ ಚ್ಛನ್ನಾಂಗ ‡ ಮಾರಕ್ತನೇ
ತ್ರವರಾಗಾಧರಮಾಯ್ತು ಕಾಮಕಳಹಂ ಸತ್ರಾಜಿತೀದೇವಿಯಾ ॥ ೫೮

ಸರಸೀಜಾಕ್ಷನೊಳಿತ್ತುದಾಸತಿಯು ಸಂಭೋಗಂ ಸನೃತ್ಯತ್ಕಚಂ
ಸರುವತ್ಕಾಂಚಿ ಸಚುಂಬನಂ ಸಪರಿರಂಭಂ ಸಪ್ರಹಾರಂ ಸನಿ ।
ರ್ಭರವಕ್ತ್ರಶ್ವಸಿತಂ ಸಲೀಲಮತಿ ಸಸ್ನೇಹಂ ಸರೋಮೋದ್ಗಮಂ
ಸರಸಾಂಗಂ ಸನಿಮೀಲಿತಂ ಸಸಮಪಾತಂ ಸೌಖ್ಯಸಂಪತ್ತಿಯಂ ॥ ೫೯

---

* ಕ. ಖ. ಗ.— ಸತ್ಯಭಾಮೆಯೊಡಗೂಡೆ.
† ಕ. ಗ.—ವಿಮುಕ್ತಾಂಕ. ‡ ಖ.–ಕಚವಸ್ನಿಗ್ಧಾಂಗ.

ಉರದಿಂ ಪೆರ್ಮೊಲೆ ಬೆಂಗೆ ಮೂಡೆ ಬೆಮರಂಬುಂ ವಜ್ರಲೇಪಂಬೊಲಾ
ಗಿರೆ ಕೀಲ್ಗೊಟ್ಟೆ ಬೆಡಂಗನೀಯೆ ಪುಳಕಂ ತೋಳ್ ತಳ್ತು ಗಂಟಿಕ್ಕಿದಂ।
ತಿರೆ ಮೆಯ್ಮೆಯ್ಯೊಳಡಂಗುವಂತಮರೆ ಗಾಢಾಲಿಂಗನಂಗೆಯ್ದು ನ
ಲ್ಲರದೇನಿರ್ದರೊ ಕಾಸಿ ಬೆಚ್ಚ ತೆಱದಿಂ ಶ್ರೀಸತ್ಯಭಾಮಾಚ್ಯುತರ್ ॥ ೬೦

ವ॥ ಅಂತು ಸಂತತಂ ನಿಕಾಮಪ್ರೇಮಕಾಮೋತ್ಸವಂ ನೆಗೞೆ,

ವಿಭುಗಿನಿಯಳ್ ರುಕ್ಮಿಣಿ ಸ
ತ್ಯಭಾಮೆ ಜಾಂಬವತಿ ನಾಗ್ನಜಿತಿ ಲಕ್ಷ್ಮಣೆ ಮ।
ದ್ರಭವೆ ಕಳಿಂದಜೆಯೆಂಟನೆ
ಯಭಿನುತಗುಣೆ ಮಿತ್ರವಿಂದೆ ಮತ್ತಂ ನೂರ್ವರ್ ॥ ೬೧

ಅಷ್ಟೋತ್ತರಶತಸತಿಯರೊ
ಳಿಷ್ಟಸುಖಂ ನೆಗೞಲಿರ್ದನಸುರಾರಿ ಭುಜಾ।
ಕೃಷ್ಟಧನು ದುಷ್ಟನಿಗ್ರಹ
ಶಿಷ್ಟಾನುಗ್ರಹಸಮಗ್ರನೆನೆ ನಿಜಪುರದೊಳ್ ॥ ೬೨

ವ॥ ಅಂತಿರ್ದೊಂದುದಿವಸವೋಲಗಸಾಲೆಯೊಳೊಡ್ಡೋಲಗಂ ಗೊಟ್ಟಿರ್ದಲ್ಲಿ,

ಸ್ಮರಕರಿಡಿಂಡಿಮಸ್ವನಮನೇೞಿಸೆ ಕಂಕಣಕಿಂಕಿಣೀಸ್ವನಂ
ಸರಸಲತಾತ್ರಿಭಂಗಿಯನದಿರ್ಪೆ ನಿಜಾಂಗಲತಾತ್ರಿಭಂಗಿ ಚಾ।
ಮರರುಚಿಯುಂ ಕಟಾಕ್ಷರುಚಿಯೇೞಿಸೆ ಚಾಮರವಿಕ್ಕಿದರ್ ಪಯೋ
ಧರವತಿಯರ್ ಸರೋಜವನದೊಳ್ ಸುೞಿದಾಡುವುದಂಚೆವಿಂಡೆನಲ್ * ॥ ೬೩

ಪರಿಕಲಿಸಿ ಕಲಸಿ ಕಪ್ಪುರ
ದ ರಜಂ ಕುಂಕುಮ ರಜಂ ಮೃಗೋದ್ಭವರಜಮೇಂ।
ತೆರೆಗೊಂಡುವೊ ಸಿತಚಾಮರ
ಮರುದಭಿಹತಿಯಿಂದಮಾಸಭಾಕುಟ್ಟಿಮದೊಳ್ ॥ ೬೪

* ಖ. -ಸುೞಿದಾಡುವುವಂಚೆಯೆಂಬವೊಲ್.

ನಿರುಪಮರೂಪಮಪ್ರತಿಮಯೌವನಮೂರ್ಜಿತವಿಭ್ರಮಂ ಮನೋ
ಹರದರಹಾಸಮುತ್ಕಟಕಟಾಕ್ಷನಿರೀಕ್ಷಣಕಾಂತಿ ಮಂಗಳಾ ।
ಭರಣಮೊಡರ್ಚೆ ಕಂತುಭುಜಶಕ್ತಿಯೆ ಕಾಂತೆಯರಾಗಿ ನಿಂದವೊಲ್
ಸರಸಿಜನಾಭನೋಲಗದೊಳಿರ್ದುದು ವಾರವಿಳಾಸಿನೀಜನಂ ॥ ೬೫

ನೆಗೞ್ದಿಂದ್ರಾದ್ಯಮರೌಘಮೋಲಗಕೆ ಮಂದೆವ್ಕೆಂದದಿಂ ಭಕ್ತಿಮೀ
ಱುಗುಮಿಂದೀವಿಭುಗೆಂದು ಸೂಚಿಸವೊಲಿರ್ದರ್ ಭಕ್ತಿಸದ್ಭಾವದಿಂ ।
ಮೊಗಮಂ ನೋಡಿದೊಡಂತೆ ಕೈಮುಗಿವ ಮಾತಿಂಗೊರ್ಮೆ ಜೀಯೆಂ ಬಮೆ
ಚ್ಚುಗುಡಲ್ಕೊಂಡು ಮಹಾಪ್ರಸಾದಮೆನುತಿರ್ಪುರ್ವೀಶರಾಸ್ಥಾನದೊಳ್॥ ೬೬

ವ॥ಆಪ್ರಸ್ತಾವದೊಳ್,

ದಿನಮಣಿದೀಧಿತಿಯುಂ ಮಂ
ಡನಮಣಿದೀಧಿತಿಗಳೞಿಸೆ ಗಗನದಿನಿೞಿತಂ ।
ದು ನಿಜೈರಾವತದಿಂದಿೞಿ
ದು ನಿಂದನರಮನೆಯ ಬಾಗಿಲೊಳ್ ದೇವೇಂದ್ರಂ ॥ ೬೭

ವ॥ ಆಗಳ್,

ಸರಸೋಕ್ತಿಪ್ರೌಢಿಯಿಂದಂ ನಿಲಿಸಿ ಪಡಿಯಱಂ ಬಂದು ಪ್ರೋತ್ಕಾಸಭಾಭ್ಯಂ
ತರಮಂ ಭಾಳಸ್ಥಳೀಕುಟ್ಮಳಿತಕರನಘೀ ಬಿನ್ನಪಂ ದೇವ ದೇವೇ ।
ಶ್ವರನೆೞ್ತಂದಿರ್ದಪಂ ಬಾಗಿಲೊಳೆನೆ ಬರವೇೞೆಂದತರ್ಕ್ಯಪ್ರಭಾವ
ಸ್ಫುರಿತಭ್ರೂಪಲ್ಲವಸ್ಪಂದನದೆ ಬೆಸಸಿದಂ ಶ್ರೀಜಗನ್ನಾಥದೇವಂ ॥ ೬೮

ವ॥ ಅನ್ನೆಗಂ ದೌವಾರಿಕನಿವೇದಿತಸ್ವಕೀಯಾಗಮನವೃತ್ತಾಂತನ ಪೆಸರಂಬಡೆದುಪೇಂದ್ರಾಸ್ಥಾನದ ಭದ್ರಮಂದಿರಮನಿಂದ್ರಂ ಬಂದು ಪೊಕ್ಕು ತದೀಯಶ್ರೀಪಾದಪದ್ಮಪೀಠೋಪಕಂಠಭೂಮಿಯೊಳ್ ನಿರ್ಭರ ಭಕ್ತಿರಚಿತಪುಷ್ಪಾಂಜಲಿಯಾಗಿ,

ಪಸರಿಸಿದುದು ನಡುವಗಲೊಳ್
ಕಿಸುಸಂಜೆ ವಿಚಿತ್ರಮೆನೆ ಸುರರ್ವೆರಸಿಂದ್ರಂ ।
ವೆಸುಮತಿಯೊಳ್ ಮೆಯ್ಯಿಕ್ಕಿರೆ
ಪಸರಿಸಿದುದು ತತ್ಕಿರೀಟಮಣಿಘೃಣಿಪಟಲಂ ॥ ೬೯

ವ॥ ಅಂತು ಗೀರ್ವಾಣರುರ್ವೀತಳಾಲಿಂಗಿತಸರ್ವಾಂಗರಾಗಿ ಸಮನಂತರಮೆೞ್ದು ನಿಂದಿರ್ಪುದುಂ,

ಅಮಿತದಯಾಲೋಕನಸಂ
ಭ್ರಮವಚನದರಸ್ಮಿತಂಗಳಿಂಬಿವೞಿನಂ ।
ಕ್ರಮದಿಂ ಸಂಭಾವಿಸಿದಂ
ಕಮಲಾಕ್ಷಂ ಶಕ್ರಮುಖ್ಯದಿಕ್ಪಾಲಕರಂ ॥ ೭೦

ಪ್ರಬುದ್ಧಮಣಿವಿಷ್ಟರಂಗಳೊಳನುಕ್ರಮಂ ತಪ್ಪದಂ
ತೆ *ಬಂದು ಮಘವಾಗ್ನಿಧರ್ಮದಿತಿಜಪ್ರಚೇತೋಮರು ।
ತ್ಕುಬೇರಹರರಿರ್ಪುದುಂ ಸಭೆಯೊಳುಣ್ಮಿ ಪೊಣ್ಮಿತ್ತು ಜಾಂ
ಗುಬೊಲ್ಲಶುಭಬೊಲ್ಲಮೆಾಂಗಳಿಕಬೊಲ್ಲಮೆಂಬೀರವಂ ॥ ೭೧

ಅಱಚದೆ ಪೋ ಮೊಣೆಂಬೆಡೆ
ಯಱದಿರಿಮೆಂಬಿಕ್ಕು ಗದ್ದುಗೆಯನೆಂಬಿನ್ನುಂ ।
ಪೆಱಸಾರೆಂಬಗ್ಗದ ಪಡಿ
ಯಱರ ರವಂ ನೆಗೞ್ದುದಾಮಹಾಸ್ಥಾಯಿಕೆಯೊಳ್ ॥ ೭೨

ಇರದೊಗೆದುದಲ್ಲಿ ಸೂಹಾ
ಯ್ತುರ ಕಳಕಳಮೆಱ್ಱ ಳಾಯ್ತುರುಲಿಪುಂ ನಾಗಾ ।
ಯ್ತುರ ಗಳಗರ್ಜನೆ ಗೋಹಾ
ಯ್ತುರ ಬಹುಳಧ್ವಾನಮಾಸಭಾಭ್ಯಂತರದೊಳ್ ॥ ೭೩

ವ॥ ಆಗಳವಸರೋಚಿತಜ್ಞಂ ಮಹಾಪ್ರತಿಹಾರನುತ್ತಂಭಿತಕರಾಂದೋಲನದಿಂ ಕಳಕಳಮಂ ನಿವಾರಿಸೆ ನಿಷ್ಪವನಸಮಯಜಲಧಿಯಂತೆ

* ಕ—ದಪ್ಪದಂತೆ. ಖ—ದಪ್ಪದಂದು.

ಸಭಾಜಲಧಿ ನಿಶ್ಶಬ್ದಮಾಗಿರ್ಪುದುಂ ವಾಸವಭ್ರೂಸಂಜ್ಞೆಯಿಂ ವಾಚಸ್ಪತಿ ವಿಜ್ಞಾಪನೋದ್ಯುಕ್ತನಾಗಿ,

ಹರಿಯೊಳ್ ವಿಜಯಶ್ರೀಯಂ
ನೆರಪಲ್ಕೆ ದುಕೂಲಕಾಂಡಪಟಮಂ ಪಿಡಿವಂ ।
ತಿರಲಭಿಮುಖದೊಳ್ ಪರಿಕಲಿ
ಸಿರೆ ರದನದ್ಯುತಿಗಳೆಸೆಯೆ ಸುರಗುರು ನುಡಿದಂ ॥ ೨೪

ಅಮರಾರಾತಿಬಳಂಗಳೆಂಬ ತೃಣಮಂ ಸಾಲ್ವನ್ನೆಗಂ ಮೇದು ದು
ರ್ದಮದೈತ್ಯೇಂದ್ರರ ಜೀವಮೆಂಬ ತಿಳಿನೀರಂ ತೃಪ್ತಿಪರ್ಯಂತಮೀಂ ॥
ಟಿ ಮಹಾಂಭೋಜಭವಾಂಡಮೆಂಬ ಘಟಮಾದಂ ತೀವೆ ಸತ್ಕೀರ್ತಿದು
ಗ್ಧಮನೀನಂದಕಖಡ್ಗಧೇನು ಕಱೆಯಲ್ ವೇಡಿರ್ದುದಿನ್ನಚ್ಯುತಾ ॥ ೨೫

ಜ್ಯಾನವಮೇಘಧೀರರುತಿ ನಾರದಚಂದ್ರಕಿಲಾಸ್ಯವಸ್ತ್ರಸಂ
ತಾನಕವೃಷ್ಟಿದುಷ್ಟದಿವಿಜಾರಿಶರೀರವಿಮುಕ್ತ ಜೀವಜಂ ।
ಝಾನಿಳಮುದ್ಧತಾರಿವನಿತಾಕ್ಷಿಜಲಪ್ಲವಮುರ್ವಿಸಲ್ * ಸಮಂ
ತೀನಿಜಶಾರ್ಙ್ಗಕಾರ್ಮುಕದ † ಕಾರ್ಮುಕವಾದಪುದಿಂ ಜನಾರ್ದನಾ ॥ ೨೬

ಗಗನಂ ನಾಟ್ಯನಿಕೇತನಂ ದಿವಿಜರೆಲ್ಲರ್ ನೋಟಕರ್ ದೇವ ನೀ
ನೆ ಗಡಂ ನಟ್ಟುವನಾಗೆ ಶಾತ್ರವಶಿರೋರತ್ನಪ್ರತಾನಂಗಳ ।
ಲ್ಲುಗೆ ಪುಷ್ಪಾಂಜಲಿಯಂತೆ ನಾರದಕಟೀತಾಳಂಗಳಿಂ ಪೆರ್ಚಿ ನಿ
ನ್ನ ಗದಾನರ್ತಕಿ ನರ್ತಿಸಲ್ ಪದೆದಪಳ್ ರಕ್ಷಶ್ಶಿರೋರಂಗದೊಳ್ ॥ ೨೭

ಸುರಿತರೆ ಲೋಹಿತಂ ಧರೆಗುರುಳ್ವ ನಿಶಾಟಶಿರಂಗಳಿಂದೆ ಕೀ
ಸುರಿ ಪೊಱಪೊಣ್ಮುವಾವಗೆವೊಲೊಪ್ಪಿರಲತ್ತಲದೊಂದು ಮಸ್ತಕಂ ।
ಬೆರಸು ಘನಾಧ್ವದೊಳ್ ತಿರುಗುತುಂ ಭುಜದಂಡಹತಂ ಘಟಾನ್ವಿತಂ
ತಿರಿಪ ಕುಲಾಲಚಕ್ರಮೆನಿಕುಂ ನಿಜಚಕ್ರವದಿಂ ಮುರಾಂತಕಾ ॥ ೨೮

* ಕ ಗ.—ವನಿತಾಶ್ರುಜಲಂ ನೆಱೆಪರ್ವಿಸಲ್.

† ಕ, ಗ.—ಕಾರ್ಮುಕದೆ.

ವ॥ ಅದೆಂತೆನೆ,

ಅದು ಕಾಲಾನಲನೊಂದೆರಡಱ * ವಿಷವೆರಡಱ್ಕಱೀಶ್ವರಾಭೀಳಭಾ
ಳದ ಚಕ್ಷುಶ್ಶಿಖಿ ಮೂಱುನಾಲ್ಕು ಬಲವದ್ದಾವಾಗ್ನಿ ನಾಲ್ಕೈದಿರ ।
ಮ್ಮದವಯ್ದಾಱು ಲಯಾರ್ಕಮಂಡಲವದಾಱೇೞಾರ್ವೇೞೆಂಟು ಪ್ರ
ಟ್ಟಿದುವೆಂಬಂತೆ ನೆಗೞ್ದುಗುಂ ನರಕನಾಟೋಪಂ ಜಗದ್ದ್ವೇಷವಂ॥ ೭೯

ಮುನಿದಾಚಾಣೂರನಣ್ಮುಮುರನ ಮಸಕಮಾಕಂಸನುರ್ವಾ ಹಿರಣ್ಯಾ
ಕ್ಷನ ಬಾಹಾಗರ್ವಮಾಕೈಟಭನ ರಭಸಮಾವೃತ್ರನಾಟೋಪಮಾಜಂ।
ಭನ ಸೊರ್ಕಾಶುಂಭನುರ್ಕಾದಶಶಿರನಳವಾಪಾಕನುದ್ರೇಕವೆಂಬಿಂ
ತಿನಿತೇಕಾಯತ್ತಮಾದಂತಿರಲದಟಲೆವಂಲೋಕಮಂಭೌಮದೈತ್ಯಂ॥ ೮೦

ವ॥ ಮತ್ತಮಾದೈತ್ಯೋತ್ತಮನಾತ್ಮೀಯ ಕಾರ್ಮುಕನಿರ್ಮುಕ್ತ ಸಾಯಕನಿಕಾಯನಿರ್ದಾರಿತೈರಾವತಹಸ್ತಮಸ್ತಕೋಚ್ಚಲಿತನಿಸ್ತುಲ ಸ್ಥೂಲಮುಕ್ತಾಫಲಪ್ರಕರವಿಕೀರ್ಯಮಾಣಶೇಷಾಕ್ಷತಂಗಳಿನಿಮಹೇಂದ್ರನ ಮಕುಟಪೀಠದೊಳ್ ನಿಜಾಜ್ಞಾದೇವತೆಯಂ ಪ್ರತಿಷ್ಠಿಸಿಯುಂ, ಆ ನಿಶಾಚರಚಕ್ರವರ್ತಿ ಶಾತ್ರವಕಲತ್ರನೇತ್ರನಿರ್ಗಲದನರ್ಗಲದುಸ್ತರ ಬಾಷ್ಪಸಲಿಲಧಾರಾಸಾರವಿಸ್ತಾರದುಸ್ತರದೋಸ್ತರವಾರಿವಾರಿಧಾರಾಪೂರ ದಿಂದೀಪಾವಕನತೇಜಃಪ್ರಭಾವಮನಡಂಗಿಸಿಯುಂ, ಆನಿಶಾಚರಾಧಿನಾಥಂ ಸ್ವಕೀಯಸಾಂಪರಾಯಕೇಳೀಪಟಿಷ್ಠನಿಷ್ಠುರಭುಜಾವಷ್ಟಂಭಸಂಭ್ರಮ ಸಂಹೃತಾಹಿತಸುಭಟಸಂಖ್ಯಾವಿಜ್ಞಾಪನಚತುರಚಿತ್ರಗುಪ್ತವಚನಾಕರ್ಣ ನವ್ಯಾಪಾರದೊಳೀಯಮನನನುಶಾಸಿಸಿಯುಂ, ಆದನುತನೂಜರಾಜರಾಜನಕಾಳಕಾಳರಾತ್ರಿವಚನಧುರಂಧರಾಂಧಕಾರ ಶಿತಿವರ್ಣಾಯಿತಾಸ್ಥಾನ ನಾಕಲೋಕಭೀಕರ ಭ್ರುಕುಟೀ ಧೂಮಸಮುದಯ ಶ್ಯಾಮದಿಂದೀ ಮನುಜವಾಹನನ ದೇಹಕಾಳಿಮಮನಿರ್ಮಾಡಿಸಿಯುಂ, ಆ ಸುಪರ್ವಾರಿಸಾರ್ವಭೌಮಂ ಭೂರ್ಭುವಸ್ಸ್ವರ್ಲೋಕದಿಕ್ಪಾಲ † ಕ್ಷಯಾಶುಶುಕ್ಷಣಿತೀಕ್ಷ್ಣಾಯಮಾನದುರ್ಧರ ಧಗಧಗತ್ಕಾರಾಟೋಪ ಶಿಖಾಕಳಾಪ

* ಕ, ಗ.—ಬಂದೆದಲ್.

† ಕ, ಗ.—ಸ್ಸ್ವರ್ಭುವರ್ಯ್ಯೈಕದಿಕ್ಪಾಲ, ಖ, ಸ್ವಸ್ವಹ್ಯೈಕದೀಕ್ಷಾದಕ್ಷ,

ಕೋಪಹುತವಹಮಹಾರ್ವದಿಂದೀವರುಣನ ಸಮುದ್ರಮನಿಂಟ * ಸಮಸ್ತವಸ್ತುಸಹಿತಮಮೃತಸ್ರಾವಿಯೆನಿಸಿದ ಮಹಾರುಣಚ್ಛತ್ರಮನೆಡೆದುಕೊಂಡುಂ, ಅನಕ್ತಂಚರಮೂರ್ಧಾಭಿಷಿಕ್ತನಶೇಷಬಲವದನಿಮಿಷಾಮಿಷಕಬಳನೋತ್ಥ ಮಹೋತ್ಸಾಹಿತವಿಡಗಜಿಹ್ವೋಪಬೃಂಹಿತಬಂಹಿಮವದ್ಬಾಹು † ಪವನಾಶನಾಧೀಶನಿಂದೀಪವನನಂ ನಿಶ್ಶೇಷಮೆನೆ ಪೀರ್ದುತವಿಸಲುದ್ಯೋಗಿಸಿಯುಂ, ಆ ಯಾಮಿನೀಚರಗ್ರಾಮಣಿ ಸಂವರ್ತಸಮಯಮಹಾಭೈರವಸ್ಫುರಹೂಂಕಾರಶಂಕಾವಹತ್ರಿವಿಷ್ಟಪಾತಂಕಧನುಷ್ಟಂಕಾರನಾದಾಕರ್ಷಣಮಂತ್ರ ಪ್ರಥಮೋಂಕಾರ ನಾದದಿಂದೀಕುಬೇರನೈಶ್ವರ್ಯಲಕ್ಷ್ಮಿಯನಾಕರ್ಷಣಂಗೆಯ್ದುಂ, ಆ ರಾಕ್ಷಸೇಶ್ವರಂ ಜಗದೇಕವೀರಪರಾಹಂಕಾರ ಜನಿತಶರ್ವದೀಶ್ವರಾಭಿಧಾನ ಮಾತ್ಸರ್ಯನಿರ್ಭರಕುಲಿಶನಿಶ್ಶೇಷಭೀಷಣಘೋಷಭಾಷಾಪರಂಪರೆಯಿನೀಮಹೇಶನಂ ಭಿಕ್ಷಾವೃತ್ತಿಯೊಳ್ ನಿಲಿಸಲೊಡರಿಸಿಯುಂ, ಇಂತವಿಶ್ರಾಂತವಿಕ್ರಾಂತನುಮನಾಹತಬಾಹುಸಾಹಸನುಮಪ್ರತಿಮಪ್ರಭಾವನುಮೆನಿಸಿ,

ಸ್ತಂಬೇರಮನೆಂಟುಮನೊ
ತ್ತಂಬದೆ ದಿಗಧಿಪರೊಳೀಟ್ಟುಕೊಂಡವನದಟಿಂ ।
ಕಂಬಕ್ಕಂ ತಳಿಗಂ ತೊಡೆ
ಗಂ ಬೀದಿಗಮೆಳವಡಲ್ ಖಳಂ ಶಿಕ್ಷಿಸಿದಂ ॥ ೮೧

ಸ್ತ್ರೀರತ್ನಶೂನ್ಯಮೆಮರಾ
ಗಾರಮೆನಲ್ ಸಿದ್ಧಸಾಧ್ಯವಿದ್ಯಾಧರರಯು ।
ಕ್ಷೋರಗಸುರಕನ್ಯೆಯರುಮ
ನೀರೆಣ್ಚಾಸಿರ್ವರಂ ನಿಶಾಟಂ ತಂದಂ ॥ ೮೨

ಇದು ರುದ್ರಾದ್ರಿಗೆ ಮಿಗಿಲೆನಿ
ಸಿದ ರತ್ನಾದ್ರಿಯನೆ ಕಿಟ್ಟು ತಂದದಱ ಗುಹಾ ।
ಸದನಸಹಸ್ರಂಗಳೊಳಿರಿ
ಸಿದನಾಷೋಡಶಸಹಸ್ರಸುರಕನ್ಯೆಯರಂ ॥ ೮೩

* ಖ.—ಸಮಂತಮಿಾಂಟಿ. † ಖ. ಮಹಿಮವದ್ಬಾಹು

ವ|| ಅಂತುಮಲ್ಲದೆ ,

ಬಳವೆದ್ಪ್ಭುಜಬಲದಿಂದಿ
ರ್ಕುಳಿಗೊಂಡಂ ನರಕನದಿತಿದೇವಿಯ ಮಣಿಕುಂ |
ಡಳಮಂ ದ್ಯುತಿಜಿತರವಿಮಂ
ಡಳಮಂ ನಿಜಕೀರ್ತಿಮಂಡಿತಾಖಂಡಳಮಂ || ೮-೪

ವ|| ಆ ನರಕಪುರಂ ಪ್ರಾಗ್ಜ್ಯೋತಿಷಪುರಮೆಂಬುದಂಬುದಮಾರ್ಗಚುಂಬಿತಪ್ರಾಕಾರಧ್ವಜತೋರಣಸಮಾಜವಿರಾಜಿತಂ. ಅಂತಾ ಪುರಂ ಮೇರುನಗಕ್ಕನತಿದೂರದೊಳಿರ್ಪುದು. ಅದಱ ಪೊಱಮೊಱಲಂ ಬಳಸಿ ಯೋಜನಪ್ರಮಾಣದಗಲದಿಂ * ಸಪ್ತಮವಾತಸ್ಕಂಧಪರ್ಯಂತಂ ಮೇಲೆ ಚರಿಯಿಸುವ ಖಚರಕಿನ್ನರವಿದ್ಯಾಧರರಂ ಕಡಿಖಂಡಮಾಗೆ ಕತ್ತರಿಸಿ ಕೊಲ್ವ ಮೌರವಪಾಶಮಿರ್ಪುದು. ಅಲ್ಲಿಂದೊಳಗೆ ಚತುರ್ಗೋಪುರಪ್ರದೇಶದೊಳ್ ಬೇಱಿವೇಱಿ ಚತುರಕ್ಷೌಹಿಣೀಬಲಂಬೆರಸು ಮುರ ಹಯಗ್ರೀವ ಪಂಚಜನ ನಿಶುಂಭರೆಂಬ ನಾಲ್ವರ್ ದನುಜನಾಯಕರಿರ್ಪರ್. ಅದರ್ಕೆ ತಕ್ಕುದಂ ನೆಗೞ್ದು ,

ಜಯವಧು ಕೂಡೆ ಕೈನಿಱಿದು ನಾರದನಾಡೆ ಸುರಾಳಿ ನೋಡೆ ನಿ
ನ್ನಯ ಕರಚಾಪದಿಂ ಕಱಿವೆ ಬಾಣಕಳಾಪದಿನಾಂತ ಕೋಪದಿಂ |
ಭಯದಮೆನಲ್ಕೆ ಧಾತ್ರಿ ಪೊಗೞಲ್ಕೆ ಜಸಂ ನಿಮಿರಲ್ಕೆ ಕೊಲ್ ವಿರೋ
ಧಿಯನಪರಾಧಿಯಂ ಕುಟಿಲಯೋಧಿಯನಾಹವದೊಳ್ ಜನಾರ್ದನಾ ||೮-೫

ಸುರಪನ ಲೀಲೆಯಂ ಶಿಖಿಯ ತೇಜಮನಂತಕನಾಜ್ಞೆಯಂ ಕ್ಷಪಾ
ಚರನ ಪಟುತ್ವಮಂ ವರುಣನುತ್ಸವಮಂ ಪವಮಾನನೇಷ್ಟೆಯಂ |
ಹರಸಖನುನ್ನತಿಕ್ಕೆಯನುಮೇಶನ ವ್ಮೈಮೆಯನೊಲ್ದು ನೀಂ ಸಮು
ದ್ಧರಿಪುದು ದೇವ ತಂದದಿತಿದೇವಿಯ ಕುಂಡಲಮಂ ಜನಾರ್ದನಾ † ||೮-೬

ವ|| ಎಂದು ವಾಚಸ್ಪತಿ ವಾಕ್ಪರಿಣತಿಯಿಂದುದಧಿ ‡ ಗಂಭೀರನಾದದಿಂ ಬಿನ್ನವಿಸೆ ನರಕಾಟೋಪಮಂ ಕೇಳ್ದು ಸಕ್ರೋಧಹೃದಯನಾಗಿ,

* ಕ. ಗ.—ಯೋಜನಪರಿಪ್ರಮಾಣದಗಲದಿಂ,
† ಕ. ಗ—ಗದಾಧರಾ ‡ ಕ. ಗ.—ವಾಚಸ್ಪತಿತಟತ್ಪತಿಯಂತೆ,

ಹೃದಯದೊಳಂಕುರಿಸಿ ಮುಖಾ
ಗ್ರದಿಂದೆ ಕುಡಿವರಿವ ಕೋಪವಿಷಲತೆಯೆ ತಳಿ ।
ರ್ತುದು ಪೂತುದೆನಲ್ ತನ್ನಧ
ರದಂತದೀಧಿತಿಗಳೆಸೆಯೆ ಕೃಷ್ಣಂ ನುಡಿದಂ ॥ ೮೭

ಸಮರಸಂಕ್ಷೋಭದಿಂ ಭೂವನಿತೆಗವನ ರಕ್ತಾಂಬುವಿಂ ಕುಂಕುಮಾಲೇ
ಪಮನಿತ್ತಾ ಶಾಲತಾಸಂತತಿಗವನ ಮಹಾಮಾಂಸದಿಂ ಪಲ್ಲವಶ್ರೀ ।
ತಮನಿತ್ತಾದಿತ್ಯಬಿಂಬಕ್ಕವನ ತಲೆಯಿನುತ್ಫುಲ್ಲರಕ್ತಾಂಬುಜಾತಾ
ರ್ಘ್ಯಮನಿತ್ತಾನಿತ್ತಪೆಂ ಕುಂಡಲಮನದಿತಿಗಿನ್ನಿಂತಿದರ್ಕೇನೊ ಗಾನಂ॥೮೮

ವ॥ ಎಂದಭಯಮಂ ಕೊಟ್ಟು ದಿವಿಜರಾಜನಂ ಯಥಾಯೋಗ್ಯ ದಾನಸನ್ಮಾನದಿಂ ಬೀಳ್ಕೊಳಿಸಿ ಕಳಿಪಿ,

ಅನಿಮಿಷರಭಿಮತಮಂ ಮಾ
ೞ್ಪ ನೆವದೆ ಷೋಡಶಸಹಸ್ರಸುರಕನ್ಯೆಯರಂ ।
ದನುಜಪುರಸ್ಥಯರಂ ಮದು
ವೆ ನೆರೆದಪೆಂ ನರಕವಧಮಿದಭಿಮತಮೆನಗಂ ॥ ೮೯

ವ॥ ಇಂತು ಪರಹಿತದೊಳಾತ್ಮಹಿತಮುಂ ದೊರೆಕೊಳ್ವ ಕಾರ್ಯ ದೊಳ್ ತಡಮೇವುದೀಗಳ್ ನಡೆವೆನೆಂದರವಿಂದಲೋಚನನಾಲೋಚನಂಗೆಯ್ದು ವಿಜಯಗಮನೋದ್ಯುಕ್ತನಾಗಿ ನಾಗಾರಿಯಂ ಸ್ಮರಿಯಿಸೆ,

ಪೃಥಿವೀಚಕ್ರಂ ಪ್ರಕಂಪಾಕುಳಿತಮುದಧಿ ಸೀಮಾತಿಮಾತ್ರಂ ಘನಾಧ್ವಂ
ಮಥಿತಾಂಭೋವಾಹಮಪ್ಪಂತೊದವೆ ಬಹುಳಪಕ್ಷಾನಿಳಂ ಕೂಡೆಬಂದಂ
ಪ್ರಥಿತಾವಷ್ಟಂಭದಿಂ ರೋಹಣಶಿಖರಿಸಮುಚ್ಚಾಯನಸ್ತಾವಿಧೇಯಂ
ಪೃಥುಕಾಯಂ ದುಷ್ಪ್ರಮೇಯಂ ಸಕಲಖಗಕುಲಜ್ಯಾಯನಾವೈನತೇಯಂ ॥೯೦

ವ॥ ಅಂತು ಬಂದು ದೇವಕೀನಂದನಂಗೆ ವಿನತಾನಂದನಂ ಸಾಷ್ಟಾಂಗ ಪ್ರಣತನಾಗಿ ಕೈಗಳಂ ಮುಗಿದು,

ಆರ ಶರೀರಸರ್ಪಗ್ರಹಮಂ ಪುಗಲಿರ್ದುದು ಶಾರ್ಙ್ಗಮುಕ್ತಬಾ
ಣೋರಗವಾರಸೃಗ್ಜಲಧಿಯೊಳ್ ನಲಿದಪ್ಪುದು ಚಕ್ರನಕ್ರಮಿಂ ।
ದಾರಡಗಿಂ ತಳರ್ತಪ್ಪುದು ನಂದಕವಲ್ಲರಿ ಫುಲ್ಲನಾಭ ಪೇ
ಟಾರೊಡನಾಯ್ತುವೀರಭಟವಿಗ್ರಹಕಂಪನಕಾರಿ ವಿಗ್ರಹಂ ॥ ೯೧

ವ॥ ಎನೆ ವನಜನಾಭಂ ಗಮನಾಭಿಪ್ರಾಯಮಂ ವೈನತೇಯಂಗೆ ಬೆಸಸಿ, *

ತಳರ್ವನ್ನಂ ರಿಪುಪಕ್ಷದಿಂ ಸಿರಿ † ವಿಪಕ್ಷೋಚ್ಚಂಡದೋರ್ದಂಡದಿಂ
ತಳರ್ವನ್ನಂ ಜಯಲಕ್ಷ್ಮಿ ಶಾತ್ರವಕಳತ್ರಶ್ರೋತ್ರಯುಗ್ಮಂಗಳಿಂ ।
ತಳರ್ವನ್ನಂ ಶ್ರುತಿಮಂಡನಂ ರಿಪುಚಮೂಸಂಹಾರದಿಂ ಭೂಭರಂ
ತಳರ್ವನ್ನಂ ತಳರ್ದಂ ವಿಹಾಸದೆ ಸುಪರ್ಣೀನಂದನಸ್ಯಂದನಂ ॥ ೯೨

ಇದು ಸಮಸ್ತಕಮಳಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಾಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತಶ್ರೀ
ಪಾದಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗನ್ನಾಥವಿಜಯ
ಮಹಾಪ್ರಬಂಧದೊಳ್ ಸತ್ಯಭಾಮಾವಿಪ್ರಲಂಭತದೀಯವಿವಾಹಾ
ಷ್ಟೋತ್ತರಶತಸತೀಸ್ವೀಕರಣನಾಕಜೇಂದ್ರಾಗಮನ
ನರಕಾಡಂಬರವರ್ಣನಂ
ಏಕಾದಶಾಶ್ವಾಸಂ.

ಸಂಪೂರ್ಣಂ

---

* ಕ. ಗ.—ಎಂದ ವೈನತೇಯಂಗನೇಕಸಕಲಾಭಿಪ್ರಾಯಮಂ ಬೆಸಸಿ.

† ಖ.—ರಿಪುವಕ್ಷದಿಂದಸು, ಗ.—ರಿಪುವಕ್ಷದಿಂ ಸಿರಿ.

## ದ್ವಾದಶಾಶ್ವಾಸಂ

---

ಶ್ರೀಕರಮೆನಿಸುವ ಚೀನಪ
ತಾಕಾವಳಿತೋರಣಾವಳೀವೃತಪುರಮಂ ।
ವೈಕುಂಠನೊಸೆದು ನೋಡು
ತ್ತಾಕಾಶಕ್ಕೊಗೆದನುರಗಮಥನಾರೂಢಂ ॥ ೧

ಪೀತಾಂಬರಕೌಸ್ತುಭರುಚಿ
ಪೀತಾಂಬರವಳಯನಾಗಳಸೆದಂ ಫಣಿಜಿ ।
ತ್ಕೇತನನುತ್ಪಲಕಾಂತಿನಿ
ಕೇತನನಾಲೋಲಮಕರಕುಂಡಲಯುಗಳಂ ॥ ೨

ಅತ್ತ ನಿಶಾಚರೇಶ್ವರನ ವಾಮವಿಲೋಚನವಾಮಬಾಹುಗಳ್
ಕೆತ್ತಿದುವೆತ್ತಿ ಕಟ್ಟಿ ಮದದಂತಿಯ ಸೋರ್ವ ಮದಂ ಕರೇಣುಗಾ ।
ದತ್ತ ಹಯಾಳಿ ಕಣ್ಬನಿಯನಿಕ್ಕಿದುವಂದೊರೆಯಿಂದಮುರ್ಚಿ ಬಿ
ಚ್ಚಿದತ್ತಸಿಧೇನು ಸೂಸಿದುವು ಕೇಸುರಿ ಬೀಸುವ ಚಾಮರಂಗಳಿಂ ॥ ೩

ಪುಟ್ಟಿದುವಲ್ಲಿಗಲ್ಲಿಗೆ ಶಿಲೀಂಧ್ರಚಯಂ* ಕರುಮಾಡದಲ್ಲಿ ಜೇ
ನಿಟ್ಟಿದು ಬೞ್ಕು ಮಾಡವೊಗದೊಳ್ದುದು† ಮಂದಿರದೇವತಾಳಿ ಗೋ
ೞಿಟ್ಟುದು ನಟ್ಟಿರುಳ್‡ ನಗೆದುದಿಂದ್ರನ ಬಿಲ್ ದಿವಸೋಳ್ಕಸಂಕುಳಂ
ತೊಟ್ಟನೆ ಬಿದ್ದುವುಣ್ಮಿದುದು ಕಾವಳ ಕೊಂಡುವು ರಕ್ತವೃಷ್ಟಿಗಳ್ ॥ ೪

ವ॥ ಅಂತನೇಕದುರ್ಣಯಮನಿಮಿಷದ್ವೇಷಿಪುರದೊಳಾಗೆ ಸುಪರ್ಣಕೇತು ಜೀಮೂತಪಥದಿಂದತಿವೇಗದಿಂ ಪೋಗೆವೋಗೆ;

---

* ಖ.—ಶಿಖಿಪ್ರಚಯಂ   † ಕ.—ಮಾಡವೊಗದೊಳ್ದುದು.
‡ ಖ.—ಪೋದಿರುಳ್.

ನರಸೇನೆಗರಿದು ಲಂಕಾ
ಪುರದ ಬಹಿರ್ಜಲಧಿ ದಾಂಟಲಿಂತಿದು ದೇವಾ ।
ಸುರಗರ್ವಮುರಿದೆನಿಸಿ ನರಕನ
ಪುರಮಂ ಬಳಸಿರ್ದುದೊಂದು ಮೌರವಪಾಶಂ ॥ ೫

ವ॥ ಆಮೌರವಯಂತ್ರಪಾಶಮಂ ಕೇಶಿಸೂದನಂ ಸುದರ್ಶನಚಕ್ರದಿಂ ಭೇದಿಸಿ ನಡೆಯೆ ನಡೆಯೆ,

ಇದಸಂಖ್ಯಾತಮಿದಪ್ರತರ್ಕ್ಯಮಿದಗುರ್ವೀಸೈನ್ಯಮಂ ವ್ಯೋಮಮಿಂ
ದುದೊ ದಿಕ್ಚಕ್ರವನಾರತಂ ಬೆಸಲೆಯಾಯ್ತೋ ಭೂತಳಂ ಕೂಡೆ ಪೆ ।
ತ್ತುದೊ ಮುನ್ನಂ ಲಯಮಯ್ದಿ ಪೋದ ಪಲವುಂ ಲೋಕಂಗಳಿಂತೀಗ† ಪು
ಟ್ಟಿದುವೋ ಪೇಳೆನಿಸಿರ್ದುದಲ್ಲಿ ಮುರಸೈನ್ಯಂ ಪಶ್ಚಿಮದ್ವಾರದೊಳ್ ॥ ೬

ವ॥ ಅದಂಕಂಡು,

ಅಮರಾರಾತಿಬಲಕ್ಕ ಸ್ವೈಶಸುರಚಾಪಂ ತಾನಿದೆಂಬಂತುವಿ
ಕ್ರಮದಿಂದೇಱಿಸಿದಂ ಮುರಾರಿ ಜನಿತಾರಿಸ್ತ್ರೀಮನಸ್ತಾಪಮಂ ।
ದಮಿತದ್ರೋಹಿ‡ ಬಲಾವಲೇಪಮನುದಗ್ರಾಟೋಪಮಂ ಚಂಡರೂ
ಪಮನಸ್ತಾಮರವೇಪಮಂ ವಿಜಯವೃಕ್ಷಾವಾಪಮಂ¶ ಚಾಪಮಂ ॥ ೭

ವ॥ ಅಂತಧಿಜ್ಯಮಾದ ಕೋದಂಡಮಂ ಸಮಾಸ್ಫುರಿತಂಮಾಡೆ,

ಕಿವಿಯೊಳ್ ತೀವಿ ದಿಗೀಶರಾಶಯದೊಳತ್ಯಾನಂದಮಂ ತೀವಿತೀ
ರವಮಿಂ ತೀವುಗುಮಂತಕಾವಸಥಮಂ ದೈತ್ಯಾಳಿ ದೈತ್ಯಾಂಗನಾ ।
ನಿವಹಂ ತೀವುಗುಮಶ್ರುವಾರಿಯಿನೆನಲ್ ಮೂಲೋಕಮಂ ತೀವಿ ಸಾ
ಱುವವೋಲಾದುದು ಶಾರ್ಙ್ಗಧನ್ವನ ಧನುರ್ಮೌರ್ವೀರವಂ ಬೀರವಂ ॥ ೮

---

* ಕ. ಖ. ಗ.—ಪುರಗರ್ವಮುರಿದೆನಿಪ.

† ಮೋ—ಅ.—ಲೋಕಂಗಳಿಂದಿಂತು. ‡ ಕ. ಖ ಗ.—ದ್ರೋಹ.

¶ ಕ.—ಸಜಯವೃಕ್ಷಾವಾಪಮಂ. ಖ.—ಸಜಯಪಕ್ಷಾಟೋಪಮಂ. ಗ.— ಸಜಯವೀರಾಳಾಪಮಂ.

ಆವಿಪುಲನಾದದೊಡನೆ ರ
ಣಾವೇಶದಿನೊಗೆದ ಮುರಜಚತುರ್ವಲತುಮುಲೋ |
ಚ್ಚಾವಚನಾದದಿನಾದಂ
ತೀವಿದ ಕುಪ್ಪಿಗೆವೊಲಾದುದಬ್ಜಭವಾಂಡಂ || ೯

ವ|| ಅನ್ನೆಗಂ,

ಸ್ಫುರಿತಮಣಿಕುಂಡಲದ್ಯುತಿ
ಭರಿತಂ ಮಂಡಳಿತಕಾರ್ಮುಕಂ ಮಂಡಲದೊಳ್ |
ದೊರೆಯೆನೆ ಕಿರಣಾಳಿವೊಲಂ
ಬರಮಂ ತುಂಬಿದುವು ಗೋಪಮಾರ್ತಂಡಶರಂ || ೧೦

ಕೈಟಭರಿಪು ರಿಪುಸೇನೆಯ
ನಾಟಂದಿಸುತಿರೆ ಶತಂ ಸಹಸ್ರಂ ಲಕ್ಷಂ |
ಕೋಟಿ ಶತಕೋಟಿ ನಾನಾ
ಕೋಟಿಯೆನಲ್ ತುಱುಗಿ ಪಾಯ್ದುವಂಬಂಬರದೊಳ್ || ೧೧

ಶ್ವಸನನು ಮರ್ಕಪ್ರಭೆಯುಂ
ನುಸುಳದೆನಲ್ ಪಾಯ್ವ ಕಣೆಯ ಕಣೆಗಟ್ಟಲೆಯೊಳ್ |
ಮಿಸುಪ ಕಲಧೌತಪುಂಖ
ಪ್ರಸರಂ ಖದ್ಯೋತತತಿವೊಲಾದುದು ನಭದೊಳ್ || ೧೨

ಕೆದಱಿದುದು ಶಿಲೀಮುಖಪಾ
ತದಿಂದೆ ಶೋಣಿತಪರಾಗತತಿ * ಪದ್ಮವ್ಯೂ ||
ಹದೊಳನೆ ಕೃಷ್ಣಶರಾಘಾ
ತದಿನೊಗೆದುದು ದೈತ್ಯಬಲದೊಳರುಣಜಲೌಘಂ || ೧೩

ಕದನಮೆಗುರ್ವುವೆತ್ತುದಿಷುಘಾತದಿನಳ್ಕಿದ ಬಳ್ಕಿದುಳ್ಕಿದು
ನ್ಮದಗಜರಾಜಿಯಿಂ ತರದೊಳಟ್ಟಿದ ತಟ್ಟಿದ ನುಟ್ಟಿದೊಂದು ತೇ |

---

* ಕ ಗ—ಸೇನಾಪರಾಗರಂಜ.

ಪುರ್ದುವೊದವಿಂ ಕರುಳ್ಪಿಣಿಲೆಳಲ್ವ ಕಳಲ್ವ ಬಳಲ್ವ ವಾಜಿಬೃಂ
ದದಿನಳವುರ್ಕುಸೊರ್ಕಾಟಿದುರುಳ್ವ ಪೊರಳ್ವ ನರಳ್ವ ವೀರರಿಂ ॥ ೧೪

ವ॥ ಆಗಳದ್ಭುತಭುಜಾಟೋಪದಿಂ ವಿಶ್ವರೂಪನಿಸುತಿರೆ,

ಘೋರಧನುರ್ಲತಾವಳಿ ವನಾವಳಿಯಂ ಗೆಲೆ ಭೂರಿಗರ್ಜಿತಂ
ನೀರದಗರ್ಜಿತಂಬೊಲೊದವುತ್ತಿರೆ ವರ್ಮಮರೀಚಿ ತಿಗ್ಮರೋ ।
ಚೀರುಚಿಯಂ ಪರಾಭವಿಸೆ ಕಾರ್ಮುಕನಿರ್ಗತಮಾರ್ಗಣೋತ್ಕರಂ
ಮಾರುತಮಾರ್ಗಮಂ ಪುದಿಯೆ ತಾಗಿದುದಂದಸುಹೃದ್ಧನುರ್ವಲಂ ॥ ೧೫

ವ॥ ಆಗಳ್,

ಅನಿತುಂಭಟೌಘಮೆಚ್ಚಂ
ಬನಂಬಿನಿಂ ತಱಿದು ತದ್ಭಟಾಂಗೋಪಾಂಗಂ ।
ಪುನರುಕ್ತಂ ಛಿದ್ರಿತಮ
ಪ್ಪಿನಮೆಚ್ಚು ಮುರಾರಿ ತವಿಸಿದಂ ಬಿಲ್ವಡೆಯಂ ॥ ೧೬

ಪಲಗೆಗಳಂ ಪೊಳೆಯಿಸಿ ಕಡಿ
ತಲೆಯಂ ಜಡಿದೆಯ್ದುವಣಿಯ ವೀರರನೆಚ್ಚಂ ।
ಪಲಗೆಯುಮುರಮುಂ ತೆತ್ತಿಸೆ
ತಲೆಯುಂ ಕಡಿತಲೆಯುಮೊಡನೆ ಪಱಿಯೆ ಮುಕುಂದಂ ॥ ೧೭

ಪೊಳೆವುತ್ಖಾತಾಸಿಜಾಳಂಗಳ ಸಕಲುಷಸಾದೀಕ್ಷಣೋದಂಶುಜಾಳಂ
ಗಳ ತಳ್ಪಂ ತಾಳ್ದಿ ಚಂಚಚ್ಚಪಲಶಫರಸಂದೋಹದಿಂದಂ ಪ್ರವಾಳಾ ।
ವಳಿಯಿಂದಂ ತಳ್ತ ವೀಚೀಚಯಮಿದೆನಿಸಿ ಸೈನ್ಯಾಬ್ಧಿಯಿಂ ಬರ್ಪ ವಾಹಂ
ಗಳನೌರ್ವಜ್ವಾಲೆಯಂತಚ್ಯುತನಕಣೆಗಳೞ್ಕಾಡಿಸುತ್ತಿರ್ದುವೆತ್ತಂ ॥ ೧೮

ಅವಿಧೇಯಧ್ವಜಿನೀನಿಶಾಟನಿವಹಂ ನಾಗಾಳಿಯಂ ಗಾಳಿಯಂ
ಜವದಿಂ ಗೆಲ್ವಿನಮಾರ್ದು ನೂಂಕಿ ನೆಗೆಯಲ್ ಸೇನಾರಜಂ ನಾರಜಂ ।
ಕವಿಯಲ್ ಬರ್ಪರಿಸೈನ್ಯದಂತಿಘಟೆಯಂ ಕೋದಂಡದಿಂ ದಂಡದಿಂ
ಜವನಾಂಪಂತೆವೊಲಾಂತು ಸಂಹರಿಸಿದಂ ಕಂಜೋದರಂ ಜೋದರಂ ॥ ೧೯

ನಡುತುಂ ಮೊಗಮಂ ಪೇೞಕ
ದೆಡೆಯಿಂದೊಂದೊಂದೆ * ನಾರಚಂ ನುಸ ೞ ಪಡ |
ಲ್ಗೆಡೆದುದಿಭಮಾಲೆ ಜೀವಮು
ಮೊಡಲಿಂಬೇೞಿಲ್ಲದಂತದೊರ್ಮೆಯೆ ಧುರದೊಳ್ || ೨೦

ಟಂಕೃತಿ ಧನುವಿಂ ಶರದಿಂ
ಛೀಂಕೃತಿ ಚೀತ್ಕೃತಿ ರಥಾಂಗದಿಂ ಸಾರಥಿಯಿಂ |
ಹೂಂಕೃತಿ ಹೇಷಿತರುತಿ ಹಯ
ದಿಂ ಕಡುವೊದಗುವಿನಮೆಯ್ದಿದುವು ರಥನಿವಹಂ || ೨೧

ಅತಿರಥಸಹಸ್ರಮಿರಲು †
ಪ್ರತಿರಥನೊರ್ವನ ಮುಕುಂದನಿಸೆ ಪಾಯ್ದುವಿಷು ||
ಪ್ರತತಿಗಳಧಿಕಂ ತಚ್ಛರ
ತತಿಯಿಂ ಗಣನೆಗೆ ಸಹಸ್ರಗುಣಮೆಂಬಿನೆಗಂ || ೨೨

ಭಲ್ಲದಿನೆಚ್ಚುರೆ ಖಂಡಿಸಿ
ಬಿಲ್ಲಂ ಪ್ರತ್ಯೇಕಮಂತೆ ಕುಂಡಲಕೋಟೀ |
ರೋಲ್ಲಸಿತರಥಿಶಿರಂಗಳ
ನೆಲ್ಲವನೊರ್ಮೊದಲೆ ಶಾರ್ಙ್ಗ ಪಱಿಪಿನಮೆಚ್ಚಂ || ೨೩

ವ|| ಆಗಳಾಚತುರಂಗಬಲಮೆೞ್ತಿವುದುಮೇಕಾಂಗದಿಂ ಮುರನಿಶಾಚರಂ ಪೊಣರೆ,

ಹರಿಯೆಚ್ಚಂ ಬ್ರಹ್ಮಾಸ್ತ್ರಾದಿ ‡
ನುರುಳೆ ಶಿರಂ ಶರಶಿಲೀಮುಖಾಕೀರ್ಣವಿಯ |
ತ್ತುರುವಂ ಗರ್ಜಿತವಿಜಿತ
ಸ್ವರುವಂ ಸಂಗ್ರಾಮಕೇಳಿಗುರುವಂ ಮುರುವಂ || ೨೪

* ಖ — ನಡುವಂಮೊಗಮಂಪೇೞಕದೆಡೆಯುಮನೊಂದೊಂದೆ.

† ಕ. ಗ. — ಸಹಸ್ರಮನಲ.

‡ ಖ. — ರೌದ್ರಾಸ್ತ್ರಾದಿ.

ಅಂತು ಗರುಡವಾಹನಂ ವಿಜಯೋತ್ಸವಮನಪ್ಪುಕೆಯ್ದಾ ಪ್ರದೇಶದಿಂ ತಳರ್ದು ದಕ್ಷಿಣದ್ವಾರಕ್ಕೆ ಪರಿಯಿಟ್ಟು,

ಅಪರಿಮಿತಸೈನ್ಯದಿಂದೊ
ಡ್ಡಿ ಪಳಂಚಿದ ದೈತ್ಯನಂ ವಿಮರ್ದಿಸಿದಂ ತ ।
ದ್ವಿಪುಳಬಲರಕ್ತಸಂಘಟ
ತಪಂಚಜನನಾಗಿ ಪಂಚಜನನಂ * ಕೃಷ್ಣಂ ॥ ೨೫

ವ॥ ಅಲ್ಲಿಂ ತಳರ್ದು ಪೂರ್ವದ್ವಾರಭಾಗೋಳಮನೆಯ್ದಿ,

ಸೇನಾದುರ್ಧರನಂ ತ
ತ್ಸೇನಾನ್ವಿತನಿಕ್ಕಿದಂ ಮುಕುಂದಂ ಶಾರ್ಙ್ಗ ।
ಧ್ವಾನಮುಹುರ್ಮುಹುರುದ್ಗತ
ಭಾನುಹಯಗ್ರೀವನಾಹಯಗ್ರೀವನುಮಂ ॥ ೨೬

ವ॥ ಆಮಹಾಹವರಂಗದಿನುತ್ತರದ್ವಾರದ ಸುರಾರಿಯುನಟ್ಟಿಮುಟ್ಟಿ,

ಅನಿವಾರ್ಯ ಚತುಸ್ಸೈನ್ಯನ
ನನನ್ಯಸಾಮಾನ್ಯನಂ ವಿಚಿತ್ರವಿಧಾಯೋ ।
ಧನಕೃತತತ್ಸೈನ್ಯನಿಶುಂ
ಭನಾಗಿಯೆ ನಿಶುಂಭನಂ ಮುಕುಂದಂ ಕೊಂದಂ ॥ ೨೭

ವ॥ ಅಂತು ಮುರಾಂತಕಂ ಪ್ರಾಗ್ಜ್ಯೋತಿಷಪುರ ಬಹಿರ್ಭಾಗರಕ್ಷಾನಿಯುಕ್ತಷೋಡಶಾಕ್ಷೌಹಿಣೀಬಲಮನಿಕ್ಕಿ ಕೋಟಾಟ್ಟಾಳಮಂ ಮುಟ್ಟವೆಂದು ಪಾಂಚಜನ್ಯಶಂಖಮಂ ಪೂರೈಸೆ,

ಹರಿಶಂಖಧ್ವಾನಮುಣ್ಮಿತ್ತೆಲೆಲೆ ಕರಿಗಳಂ ಪಣ್ಣವೇಡ ತೇರ್ಗಳಂ ಪೂ
ಡಿರವೇಡಶ್ವಂಗಳಂ ಪಲ್ಲಣಿಸಿ ಬರಲೆವೇಡ ವೀರರಂ ಕೈದುಗೊಂಡೆ ।
ಬ್ಬಿರವೇಡೆಂಬೊಂದು ಘೋಷಂ ನರಕನ ಪುರದೊಳ್ ಕೋರ್ವಿ ಪರ್ವಿತ್ತು ದೇವಾ
ಸುರದೋರ್ದಂಡಾಭಿಘಾತೋನ್ಮಥಿತಜಲಧಿನಿರ್ಘೋಷವೆಂಬಂದದಿಂದಂ ॥ ೨೮

---

* ಖ.—ರಕ್ತಸಂಘಟ್ಟಪಂಚನದನಾಗಿ ಪಂಚನದನಂ.

ವ॥ ಆಗಳಾಸಮರಸನ್ನಾಹಭೇರೀಶಂಖಕಾಹಳಾನಿನಾದಮಂ ಗೃಹದೇವತಾಕ್ರಂದನನಿನಾದಮಾಕ್ರಮಿಸೆಯುಂ ; ನಾನಾನಿಶಿತಸ್ಫುರಿತ ಹೇತಿ ಪ್ರಭೆಯ * ನುಳ್ಕಾಪಾತಪ್ರಭೆಗಳಭಿಭವಿಸೆಯುಂ , ವರೂಥಯೂಥ † ಕೇತುಗಳನುದ್ದಾಮ ಧೂಮಕೇತುಗಳ್ ಧಿಕ್ಕರಿಸೆಯುಂ , ಆಯೋಧನ ಕ್ರೋಧನಿಯುಕ್ತಯೋಧವೀರಸ್ಫುರನ್ನೇತ್ರ ‡ ರಶ್ಮಿರಾಗೋತ್ಕರ್ಷಮಂ ರುಧಿರವರ್ಷಮೊತ್ತರಿಸೆಯುಂ , ವಿಚಿತ್ರಾತಪತ್ರಪಿಂಛಪತ್ರ ¶ ಷಂಡಮನ ಕಾಂಡಸಂಭವಶಬಲವರ್ಣಾಂಬುಧಾರಾಡಂಬರಂ ವಿಡಂಬಿಸೆಯುಂ; ಕರಿಕರ್ಣತಾಲಪವನಪರಿಮೀಲಿತಲೋಲಚಾಮರಸ್ತೋಮಪವನನಂ ಪ್ರತಿಕೂಲಚಂಡಪವನನಂಡಲೆಯೆಯುಂ ; ದೈತ್ಯರಾಜರಾಜನ್ಮಕುಟಮಾಣಿಕ್ಯ ಶೋಣಮಣಿಕಿರಣಸಂದೋಹಮಂ ದಿಗ್ದಾಹಮಿೞಿಕೆಯ್ಯೆಯುಂ; ಪೌರನಾರೀನಿಕರಕರವಿಕೀರ್ಯಮಾಣನಿಸ್ತುಲಸ್ಥೂಲಮುಕ್ತಾಕ್ಷತಮ § ನಂತರಿಕ್ಷಪತಿತನಕ್ಷತ್ರಸಂಕುಲಂ ಮಾಂಕರಿಸೆಯುಂ ; ದುರ್ವಾರಚತುರ್ವರ್ಗಲಕ್ಷ್ಮೀಭವಿಶೇಷಜನಿತಾಶೇಷಶಿರಃಕಂಪಮಂ ಭೂಕಂಪಮಿೞಿಸೆಯುಂ, ಅಪಜಯಕ್ಕಾಗರಮಾಗಿ ದಾನವೇಶ್ವರಂ ಪೊೞಮಟ್ಟು ಪೊೞಪೊಱಲೊಳಗೊಡ್ಡಿ ನಿಲ್ವುದುಂ,

ತುಱುಗೆ ಸರಲ್ ಕಣೆ ಕಣೆಯುಂ
ಗಱಿ ಗಱಿಯುಂ ಪಿಳ್ಕು ಪಿಳ್ಕನಲಗಲಗಂ ತ ।
ಳ್ತುಱುಗುವಿನಮೆಚ್ಚು ಕೃಷ್ಣಂ
ಮೆಱೆದಂ ನಿಜಚಾಪವಿದ್ಯೆಯಂ ತತ್ಕ್ಷಣದೊಳ್ ॥ ೮೯

---

* ಖ.—ಆನಿಶಾಟಸ್ಫುರಿತಕೇಕರಪ್ರಭೆಯ

† ಖ.—ವರೂಥಮಾತಂಗಸಮಗ್ರೋದಗ್ರ

‡ ಖ.—ಕ್ರೋಧಯುಕ್ತಯೋಧನವಿಸ್ಫಾರನೇತ್ರ.

¶ ಕ. ಖ. ಗ.—ಪಿಂಛಚ್ಛತ್ರ. § ಖ.—ದೈತ್ಯಫಾಲಪಟ್ಟಸ್ಥಲಸ್ಥೂಲ ಮುಕ್ತಾಫಲಾಕ್ಷತಂಗಳ.

ಚತುರಂಗಾಕಾರವ್ಯ
ಕ್ತಿ ತಿರೋಹಿತವಾಗೆ ತುಱುಗಿ ಕೃಷ್ಣನ ಶರಸಂ ।
ತತಿ ನಾಂಟೆ ಶರದ್ವೀಪಾ
ಕೃತಿಯಂ ಪೋಲ್ತತ್ತು ದೈತ್ಯಸೇನಾಚಕ್ರಂ ॥ ೩೦

ಎನಿತೆನಿತು * ಬಾಣವರ್ಷದಿ
ನೆನಿತೆನಿತಂ † ಕೊಂದನಾಂತ ಚತುರಂಗಮನಂ ।
ತನಿತನಿತು ಸೈನ್ಯಮೊಡನೊಡ
ನೆ ನೆಱೆದು ನಿಲೆ ವೈಷ್ಣವಾಸ್ತ್ರಮಂ ನೆನೆದಾಗಳ್ ॥ ೩೧

ಪರಬಲಜೀವಮಂ ತೆಗೆವಿನಂ ತೆಗೆದಂ ದೊಣೆಯಿಂ ಮಹಾಸ್ತ್ರಮಂ
ತಿರಿವ ಕುಲಾಲಚಕ್ರಮೆನೆ ಭೂವಳಯಂ ತಿರಿವನ್ನಮಸ್ತ್ರಮಂ ।
ತಿರಿಪಿದನುಗ್ರವೈರಿಗೆ ಭಯಂ ತೊಡರ್ವನ್ನೆವರಂ ತೊಡರ್ಚಿದಂ
ತಿರುವಿನೊಳಸ್ತ್ರಮಂ ಜಯವಧೂಸದನಂ ರಣರಂಗಭೈರವಂ ॥ ೩೨

ವ॥ ಆ ಮಹಾಸ್ತ್ರಂ ಕಾರ್ಮುಕನಿರ್ಮುಕ್ತಮಾಗೆ,

ಪಿಂಗದೆ ಸೋರ್ದುವಸ್ತ್ರಮುಖದಿಂ ಕಣೆಯಂಗಳವೃಷ್ಟಿಮಂಡಲಾ
ಗ್ರಂಗಳ ವೃಷ್ಟಿ ಶಕ್ತಿಗಳ ವೃಷ್ಟಿ ಶರಂಗಳ ವೃಷ್ಟಿ ಭಿಂಡಿವಾ ।
ಳಂಗಳ ವೃಷ್ಟಿ ಶಂಕುಗಳ ವೃಷ್ಟಿ ಹಲಂಗಳ ‡ ವೃಷ್ಟಿ ವಜ್ರದಂ
ಡಂಗಳವೃಷ್ಟಿ ಯಿಟ್ಟಿಗಳ ವೃಷ್ಟಿ ವಿರೋಧಿಚತುರ್ಬಲಂಗಳೊಳ್ ॥ ೩೩

ಪರಿಘದ ಪಾಶದ ಚಕ್ರದ
ಪರಶುವ ಪಟ್ಟಿಸದ ಶೂಲದಸಿಧೇನುವ ಮು ।
ದ್ಗರದ ಮುಸುಂಡಿಯ ಮುಸಲದ
ಕರಪತ್ರದ ಮಳೆಯೆ ಸುರಿದುದಸ್ತ್ರದ ಮುಖದಿಂ ॥ ೩೪

ವ॥ ಅಂತು ವೈಷ್ಣವಾಸ್ತ್ರಮತಿನಿರ್ಭರದಿಂ ಚತುರ್ಬಲದೊಳ್ ಕಾದುತ್ತುಮಿರೆ ಮುಕುಂದಂ ದ್ವಂದ್ವಯುದ್ಧದಿಂ ಕಾದಲೆಂದಸುರನಾಯಕನಂ ಸಾಯಕಹಸ್ತದಿಂ ಸನ್ನಗೆಯ್ಯೆ,

---

* ಖ.—ಅನಿತನಿತು, † ಕ. ಖ. ಗ.—ನನಿತಸಿತಂ ‡ ಕ. ಗ.—ಹಯಂಗಳ.

ಆರೋಪಿತಚಾಪಂ ವಿ
ಸ್ಫಾರಿತಮೌರ್ವೀಲತಂ ಪ್ರವರ್ಷಿತಬಾಣಂ ।
ಸಾರಂ ಚೋದಿತರಥನಸು
ರಾರಿಗೆ ಮಾರಾಂತನಾಜಿಭೀಮಂ ಭೌಮಂ ॥ ೩೫

ಇಳೆಯುಂಬಾಣಾಂಧಕಾರಂಪುದಿಯೆನಭಮನಸ್ತ್ರೋತ್ಕರಂತೀವೆ ದಿಙ್ಮಂ
ಡಳಮಂ ಮೌರ್ವೀಲತಾಟಂಕೃತಿ ಬಳಸೆ ಶರಾದಾನಸಂಧಾನಮೋಕ್ಷಂ ।
ಗಳ ವೇಗಂ ಲೋಚನಾಗೋಚರಮೆನಿಸೆ ಝಣತ್ಕಂಕಣರ್ ಸಂಚಲತ್ಕುಂ
ಡಳರುದ್ಭಾಸಾಂಗದರ್ ಮಂಡಳಿತಧನುಗಳೆಚ್ಚಾಡಿದರ್ ಕೃಷ್ಣಭೌಮರ್ ॥

ಘನಘಟೆಯುಂ ತನುಗಳ್ ಗ
ರ್ಜನೆಯುಂ ಗಜ ನೆಗಳಿಂದ್ರಧನುವಂ ಧನುಗಳ್ ।
ನೆನೆಯಿಸೆ ಕಾರ್ಗಾಲದ ಮೞೆ
ಯೆನ ಸುರಿದರ್ ಕೃಷ್ಣಭೌಮರಂಬಿನ ಮೞೆಯುಂ ॥ ೩೭

ಅಡಿಗಡಿಗೆ ಶಾರ್ಙ್ಗ ಧನುವಂ
ಕಡಿದಿಕ್ಕಲ್ ಲಕ್ಷ್ಯವೇಧಿ ಪೞಿತಂ ಧನುಃಂ ।
ಪಿಡಿಪಿಡಿದು ಭೌಮದಾನವ
ನೊಡನೊಡನೆಚ್ಚೆಚ್ಚು ಮೆೞೆದನದ್ಭುತರಸಮಂ ॥ ೩೮

ನುನದಣ್ಮಂ ಮನದಣ್ಮು ಮಾಂಕರಿಸಲೇಸಿಂಗೇಸು ಮೇಲಾಗಲಂ
ಬಿನಗುರ್ವಂಬಿನಗುರ್ವನಾಟಲೆದುದರ್ಕೇಂದ್ರಾದಿಗಳ್ ಭಾಪು ಭಾ ।
ಪೆನುತಮ್ಮಮ್ಮನುತಕ್ಕುಮಕ್ಕುಮೆನುತಾದಂ ಮೆಚ್ಚೆಯುಂ ಬ್ರಹ್ಮನಂ
ದನನಾನಂದದಿನಾಡೆಯುಂ ನೆಗೞ್ದುದಂದಾಕೃಷ್ಣಭೌಮಾಹವಂ * ॥ ೩೯

ಭೌಮನೆ ಹರಿಯೊಳ್ ಪೋಣರ್ಗುಂ
ಭೌಮನೊಳೀಹರಿಯೆ ಪೋಣರ್ಗುಮೆನಲಸ್ತ್ರಕಳಾ ।
ಸಾಮರ್ಥ್ಯದೊಳಸ್ತ್ರಕಳಾ †
ಸಾಮರ್ಥ್ಯಂ ನೆಣಸೆ ‡ ಭೌಮಹರಿಗಳ್ ಪೋಣರ್ದರ್ ॥ ೪೦

---

* ಗ.—ಭೌಮಕೃಷ್ಣಾಹವಂ. † ಖ.—ಸಾಮರ್ಥ್ಯಂಶಸ್ತ್ರಕಲಾ.
‡ ಖ.—ನೆಗೞೆ.

ತೋಯರುಹನಾಭನೈಂದ್ರಾ
ಗ್ನೇಯಯಾಂತಕಕೌಣಪಾಸ್ತ್ರತತಿಯಿಂದಿಸೆ ದೈ ।
ತೇಯನುಮೆಚ್ಚಂ ವಾರುಣ
ವಾಯುವ್ಯಕುಬೇರರುದ್ರಮಾರ್ಗಣದಿಂದಂ ॥ ೪೧

ಜ್ವಾಲನಶಿಖಾಳಿಯನುಳ್ಕಾ
ವಳಿಯಂ ಕುಳಿಕಾಹಿಕುಳಮನಶನಿವ್ರಜಮಂ ।
ಗೆಲೆವಂದಿರದೊಂದೊಂದಂ
ಗೆಲೆವಂದುವು ಕೃಷ್ಣಭೌಮರಂಬಂಬರದೊಳ್ ॥ ೪೨

ಆವಾವಸ್ತ್ರದಿನೆಚ್ಚುಂ
ದೇವಾರಿ ಮುರಾರಿಯಂ ಗೆಲಲ್ ನೆಱೆಯದೆ ಘಂ ।
ಟಾವಳಿರವಾಟ್ಟಹಾಸ
ವ್ಯಾವೃತಘನರುತಿಗಳಾಗೆ * ಶಕ್ತಿಯೊಳಟ್ಟಂ ॥ ೪೩

ವ॥ ಅಂತಾ ಶಕ್ತಿ ಭುವನತ್ರಯಸಂಹರಣಶಕ್ತಿಯಿಂ ವಿಸ್ಫುಲಿಂಗ ಜ್ವಾಲಾಸಹಸ್ರಮನುಗುೞುತ್ತುಂ ಗಗನದಿನೆಟ್ಟಿರೆ,

ಜ್ವಾಲಾಸಟಾಳಿಗಳ್ಕಿ ನಿ
ಮೀಲಿಸಿದಿಂದ್ರನ † ಸಹಸ್ರಲೋಚನಮೆಸೆದು ।
ನ್ಮೀಲಿಸೆ ‡ ಮಹಾಸ್ತ್ರದಿಂ ವನ
ಮಾಲಾಧರನೆಚ್ಚು ಶಕ್ತಿಯಂ ಖಂಡಿಸಿದಂ ॥ ೪೪

ವ॥ ತದನಂತರಂ,

ಪುಟ್ಟುವ ಗಾಳಿಯು ಬೞಿಯನೆ
ಬಟ್ಟನೆ ಸುೞಿಗೊಳ ಮರುದ್ವಿಮಾನಪ್ರಕರಂ ।
ತಿಟ್ಟನೆ ತಿರುಪಿ ¶ ನಿಶಾಚರ
ನಿಟ್ಟನದೊಂದುಗ್ರಗದೆಯಿನಸುರಾಂತಕನಂ ॥ ೪೫

* ಖ.—ಘನವೀಥಿಯರಾಗೆ. † ಖ. ಸಟಾಳಿಗಳ್ಗನ್ಮೀಲಿತವಿಂದ್ರನ. ‡ ಕ, ಗ.—ಲೋಚನಮೊನಲುನ್ಮೀಲಿಸೆ. ¶ ಕ, ಗ.—ತಿರಿಯೆ.

ಕದಡುತ್ತುಂ ಘನಪಟಲಮ
ನುದಿರ್ಚುತುಂ ತಾರಕಂಗಳಂ ಬೆದಱಿಸುತುಂ ।
ತ್ರಿದಶೌಘಮನುಗ್ರಗ್ರಹ
ಮದೊಂದು ಬರ್ಪಂತೆ ಬಂದುದಾ ಗದೆ ನಭದಿಂ ॥ ೪೬

ಸುರಬೃಂದಕ್ಕಮರತ್ವಂ
ಸ್ಥಿರಾಹ್ವಯಂ ಧರೆಗೆ ಸಂದುದಿಂದೀಗದೆಯುಂ ।
ಮುರಮಥನಂ ಭೇದಿಸಲೆನೆ
ಮುರರಿಪು ನಾನಾಸ್ತ್ರದಿಂದದಂ ಭೇದಿಸಿದಂ ॥ ೪೭

ವ॥ ಅಂತು ಗದಾದಂಡಮುಮಂ ಪ್ರತಿಹತಮಾದುದಂ ಕಂಡು ಇನಿಸಾನುಮಂತರಂಗದೊಳ್ ಚಿಂತಿಸಿ ಮಹಾವರಾಹಸಂಸರ್ಗದಿಂ ಭೂಮಿದೇವತೆಗೆ ತಾನುದ್ಭವಿಸಿದಂದದುತ್ಥಿತಭುಜಾವಷ್ಟಂಭನಾಗಿರ್ದ ತನ್ನಂ ನೋಡಿ ಪುತ್ರಮೋಹದಿಂ ಭೂದೇವಿ ನಿಜನಾಥನಂ ಪ್ರಾರ್ಥಿಸಿ ವರಂ ಬೇಡೆ ಸಮಸ್ತದಿವ್ಯಾಸ್ತ್ರಸಮುದಯಮುಂ ಪ್ರತಿಹತಮಪ್ಪಂತುಟೊಂದು ಸಂಗ್ರಾಮಮಾದೊಡೆಲೆ ಭೌಮಾ ನೀನೀಮಂತ್ರದಿಂ ಶಸ್ತ್ರಾಸ್ತ್ರಮಂ ಪ್ರಯೋಗಿಸುವುದಂತದಂ ಹರಿಹರಹಿರಣ್ಯಗರ್ಭಾದಿಗಳುಂ ಪ್ರತಿಹತಂ ಮಾಡಲಸಮರ್ಥರೆಂದು ತನಗಂದಾದಿವರಾಹನುಪದೇಶಂಗೆಯ್ದ ಮಂತ್ರಮಂ ನೆನೆವುದರ್ಕಿದುವೆ ಪದನೆಂದು ಮಂತ್ರದಿಂ ತ್ರಿಶೂಲಮನಭಿಮಂತ್ರಿತಂಮಾಡಿ ಭೌಮಂ ಭೀಮನಾದದಿಂದಾರ್ದಿಡೆ,

ಮೃಡಭಾಳೇಕ್ಷಣವಹ್ನಿಯುಮಂ ಕೆದಱುತುಂ ಸೂಸುತ್ತುಮೌರ್ವಾಗ್ನಿಯುಮಂ
ಸಿಡಿಲಂ ಕಾಱುತುಮಂತು ಕೃಷ್ಣನಿಸುವಸ್ತ್ರಾಸಾರಮಂ ಪೀರುತುಂ ।
ಕಡುಪಿಂ ಬಂದುದು ತನ್ನ ಮೊಱಮೊನೆಯಿಂ ಮೂಲೋಕಮಂ ಕಾಯಲುಂ
ಪಡೆಯಲ್ಕುಂಗಲುಮಲ್ತೆ ಸಾಲ್ದಪುದಿದೆಂಬಂತಾತ್ರಿಶೂಲಾಯುಧಂ ॥ ೪೮

ವ॥ ಅಂತುತ್ರಿಶೂಲಮಾಭೀಲತೆಯಿನಪ್ರತಿಹತಮಾಗಿ ಮುಟ್ಟವರೆ ವಿದಿತವೃತ್ತಾಂತಮ ನಸುರಾಂತಕಂ ತನ್ನುಪದೇಶಂಗೆಯ್ದ ಮನ್ತ್ರದ

ಸಾಮರ್ಥ್ಯಮಂ ತಾಂ ನೋಡಲೆಂದು ಬರ್ಪ ತ್ರಿಶೂಲವಂ ವಿಶೀರ್ಣವು ಖವಾಗೆ ನುಂಗಿ ಕಾಲಕೂಟಮಂ ನುಂಗಿದ ನೀಲಲೋಹಿತನ ನನುಕರಿಸಿ ನಿಲ್ವುದುಂ ;

ಅಂಗುಳ್ಮುಟ್ಟದೆ ಜಗಮಂ
ನುಂಗುವ ಲಯಕಾಲಕಾಲನಾರಭಟೆಯುಮಿಾ ।
ಭಂಗಿಯೆನೆ ರಥಮನಿೞಿದು ಭ
ರಂಗೆಯ್ದುಳ್ ನಡುಗೆ ಭೌಮನೈದುವ ಪದದೊಳ್ ॥ ೪೯

ಮರುತಂ ಪಿಳ್ಕು ಖಗೇಶ್ವರಂ ಗಱಿ ಸುಪರ್ವರ್ ಪರ್ವಸಂಘಂ * ಫಣಾ
ಧರರಾಜಂ ಕಣೆ ಹವ್ಯವಾಹನಲಗಾದಿತ್ಯಂ ಪ್ರಕಾಶಂ ವಸುಂ ।
ಧರೆ ಬಿಣ್ಪಾದ ಸಮಸ್ತಶಕ್ತಿಮಯದಿಂ † ಬ್ರಹ್ಮಾಸ್ತ್ರದಿಂದಂಬುಜೋ
ದರನೆಚ್ಚಂ ಪಱಿವಂತು ಭೌಮಶಿರಮಂ ಮೌಳಿಪ್ರಭಾಸ್ಫಾರಮಂ ॥ ೫೦

ವ ॥ ಅಂತು ವಿಜಯೋತ್ಸವಮನಪ್ಪುಕೆಯ್ದು,

ಕುಸುಮಾಸಾರಂ ಸುರೋದ್ಯಾನದಿನೆಱಗೆ ವಿಯದ್ವಾಹಿನೀಶೀಕರಸ್ಯಂ
ದಿ ಸಮೀರಂ ತೀಡೆ ದೇವಾನಕಘನರವದಿಂದಾಕುಭೃತ್ಕೂಟದೊಳ್ ನ ।
ರ್ತಿಸೆ ವೀರಶ್ರೀಮಯೂರಾಂಗನೆ ಜಿತರಣದೊಳ್ ಭೂತವೇತಾಳಕೇಳೀ
ರಸತುಷ್ಟಂಕೃಷ್ಣನಿರ್ದಂನೆಲಸೆ ನಿಜಧನುಃಕೋಟಿಯೊಳ್ ವಾಮಹಸ್ತಂ॥

ವ ॥ ಅನ್ನೆಗಂ ಭೌಮಾನ್ವಯಾಗತಪ್ರಧಾನಪುರುಷಂ ಬಂದು ಪುರುಷೋತ್ತಮನಂ ಪ್ರಾಗ್ಜ್ಯೋತಿಷಪುರಕ್ಕೊಡಗೊಂಡು ಪೋಗಿ ದೇವಾಂಬಿಕೆಯ ದಿವ್ಯಕುಂಡಲಮಂ ಕೊಟ್ಟು ಮತ್ತಂ,

ಬಳವಿಧ್ವಂಸಿಗೆ ಕೊಟ್ಟನಾಹವರಸಪ್ರಸ್ಯಂದನಸ್ಯಂದನಂ
ಗಳನಂಗಚ್ಛವಿಸತ್ವರೂಪಶುಭಚೇಷ್ಟಾವಾಹವಾಹಂಗಳಂ ।
ಜಳದಶ್ಯಾಮಸದಾನಗಂಡರದನಿರ್ಭಿನ್ನಾಗನಾಗಂಗಳಂ
ವಿಳಸದ್ರತ್ನಗಣಪ್ರಭಾಪರಿಕರವ್ಯಾಕೋಶಕೋಶಂಗಳಂ ॥ ೫೨

* ಕ, ಗ.—ಪುಂಖವಂತಾ, † ಖ.—ಶಕ್ತಿಯುಮರ್ದ.

ವ ॥ ಆವಮನೋಹರಪದಾರ್ಥಸಾರ್ಥಂಗಳಂ ದ್ವಾರಾವತಿಗೆ ಕಳಿಪಿ ರೋಹಣಗಿರಿಗುಹಾಪವರಕಂಗಳೊಳ್ * ನರಕಂ ಸೆಱೆಗೆಯ್ದ ಷೋಡಶ ಸಹಸ್ರದಿವ್ಯಕನ್ಯೆಯರಿರ್ದಲ್ಲಿಗಾಸನ್ನವರ್ತಿಯಾಗಿ,

ಷೋಡಶಸಹಸ್ರಶಶಿಗಳ್
ಮೂಡಿದ ನಭವೆನೆ ಗುಹಾಗ್ರಗತಮುಖಶತಿಯಿಂ ।
ಕೂಡಿ ಮಣಿಶೈಲಮೆಸೆದಿರೆ
ನೋಡಿದರಚ್ಯುತನನಖಿಲಸುರಕನ್ಯಕೆಯರ್ ॥ ೫೩

ವ ॥ ಅಂತು ಗುಹಾಂತರ್ನಿಗೂಢಕೋಮಲಾಂಗಿಯರೇಕಾಂಗಸಾಹಸಖ್ಯಾತಿಗನುರೂಪಮಾದ ತನ್ನ ರೂಪಸೌಂದರ್ಯಮಂ ನೋಡಿ ಸಾಧ್ವಸಾವೇಗವೇಪಥು † ಸ್ವೇದಪುಳಕಿತೆಯರಾದುದಂ ತದೀಯವದನವಿಭ್ರಮದಿನಱಿದುಮದನಮೌಹೂರ್ತಿಕನಿತ್ತ ಲಗ್ನದೊಳ್ ಸುರಸಮಾಜಂ ಬಾಜಿಸುವ ಬದ್ದವಣಂಗಳೊಳಂ ಕಲ್ಪಪಾದಪದ ಪೂಮಳೆಯ ಸೇಸೆಯೊಳಂ ಮದುವೆನೆಱೆದು ರೋಹಣನಿವಾಸಿನಿಯರನೊಡಗೊಂಡು ಪೋಗಲುಜ್ಜುಗಂಗೆಯ್ದು,

ರೋಹಣಶೈಲಂಬೆರಸಾ
ರೋಹಣಮಂ ಮಾಡೆ ಗರುಡನಂ ಹರಿ ಗರುಡಂ ।
ವೈಹಾಯಸಗತಿಚತುರಂ
ವೈಹಾಯಸಪಥದಿನೈದಿದಂ ಸುರಪುರಮಂ ॥ ೫೪

ಶತಮುಖನಿನಚ್ಯುತಂ ಸ
ತ್ಕೃತಿಯಂ ತಳೆದದಿತಿಗಿತ್ತು ಕುಂಡಲಮಂ ಸ ।
ನ್ನುತನಾಗುತ್ತಿರಲೆಂದಳ್
ನತನಾಗದಿರೆಮಗೆ ನೀಂ ಜಗದ್ಗುರುವಲ್ತೇ ॥ ೫೫

ಅಱಿಪಿ ನಿಜಾದಿಮಧ್ಯನಿಧನೇತರವೃತ್ತಿಯನೊರ್ಮೆ ಮತ್ತದಂ
ಮಱೆಯಿಸಿ ದೇವಕೀತನಯನೆಂದೆನಿಸಿರ್ದ ವಯೋಧಿಕರ್ಗೆ ನೀ ।

* ಖ—ಗುಹಾಭ್ಯಂತರದೊಳ್. † ಕ, ಗ.—ಸಾಧ್ವಸವೇಗಪೃಥು,

ನೆಱಗಿ ಸಮಾನರೆಂದು ಕೆಲರೊಲ್ಲದರಂ ಶರವರ್ಷದಿಂದಮಂ *
ದೆಱಗಿಸಿ ಧರ್ಮಜಾದ್ಯರನೆ ಮೋಹಿಪುದೆಮ್ಮನದೇಕೆ ಮೋಹಿಪೈ ॥ ೫೬

ಪರಮಾಣುಸಮಂ ಸ್ಥೂಲಂ
ಪುರಾಣನಜರಂ ಸಮೀಪಗಂ ದೂರಸ್ಥಂ ।
ನಿರವಯವಂ ಸಾಕಾರಂ
ಹರಿ ನೀನೇಂ ಪೊಗೞ್ವರಳವೆ ನಿನ್ನ ಮಹತ್ತ್ವಂ ॥ ೫೭

ಮುಕ್ತಪದಗ್ರಹಣಚಕ್ರವಾಳಗದ್ಯಂ

ಜಯಸಕಳ ಕಳಂಕವಿಗತಪ್ರಭಾವ, ಭಾವೈಕಗಮ್ಯಮಾನ, ಮಾನಸಾದಿಪ್ರವರ್ತನಾಧಾರ, ಧಾರಣಾದಿಯೋಗಮಾರ್ಗಪ್ರತ್ಯಕ್ಷ, ಅಕ್ಷಯಾಕಾರ, ಕಾರಕಪದವೀಧುರಂಧರ, ಧರಾದಿಪ್ರಪಂಚನಿಲಯ, ಲಯೋತ್ಪತ್ತಿರಹಿತ, ಹಿತೋಪದೇಶಾರ್ಥಕೃತಚತುರ್ವೇದ, ವೇದನಾಪ್ರಮೋದಯಮೀಂದ್ರಹೃದಯಾವಾಸ, ವಾಸರೇಶಪ್ರಮುಖನಿಖಿಲಕಾಲಚಕ್ರ, ಚಕ್ರಪ್ರವರ್ತನಾನುಶಾಸನ, ಸನಕಸನಂದನಸನತ್ಕುಮಾರನಾರದಪ್ರಭೃತಿತತ್ತ್ವನಿಷ್ಠಾಪರವಿಬೋಧದೃಷ್ಟಿಗೋಚರ, ಚರಾಚರಪ್ರಕೃತಿಮಿಶ್ರಿತಗುಣತ್ರಯ, ತ್ರಯೀತರ್ಕಪ್ರವಚನಾತರ್ಕ್ಯಮಹಿಮ; ಹಿಮಾಹಿಮವ್ಯತಿರಿಕ್ತಪರಂಜ್ಯೋತಿಸ್ಸ್ವರೂಪ, ರೂಪರಸಗಂಧಸ್ಪರ್ಶಶಬ್ದಸ್ವಭಾವ, ಭಾವಸುಖಾನುಭವನಸಮರ್ಥ, ಅರ್ಥಪ್ರಕಾಶತತ್ಪರ, ಪರಾಪರಬ್ರಹ್ಮನಿಶ್ಚಿತಚಿದಾಕಾರ, ಕಾರಣಸ್ವೀಕೃತಲೀಲಾಸಂಹನನ, ಹನನಜನನಾವನಕರಣತ್ರಿಮೂರ್ತಿಸಂಧಾರಣ, ರಣಪರಾಜಿತಸರ್ವಗೀರ್ವಾಣರಕ್ಷಾರ್ಥಸಂಧಾರಿತದಶಾವತಾರ, ತಾರಾಧೀಶಮಂಡಲಾಭಿಮಾನಾಪಹ ಸಿತಪಾಂಚಜನ್ಯ, ಜನ್ಯವಿಜಯಭಾಮಿನೀಭ್ರೂಲತಾಯಿತಶಾರ್ಙ್ಗಚಾಪ, ಚಾಪಳನಿಶಾಟಚಪೇಟಕೋದ್ದಂಡಕಾಲದಂಡಾಯಮಾನಘನಗದಾದಂಡ, ದಂಡಧರದರ್ಪಿತದಿತಿತನುಜಸಂವರ್ತಸಮಯಮಾರ್ತಂಡಬಿಂಬಾಡಂಬರ ವಿಭಾಸಮಾನ ಸುದರ್ಶನಚಕ್ರ, ಚಕ್ರವರ್ತಿಪದವೀಮದಾತಿವರ್ತಿಕಾರ್ತವೀರ್ಯ

* ಕ, ಗ.—ಕೆಲರೊಳ್ ಸಮವರ್ಷಜನೆಂಬ ಭಾವದಿಂ.

ಭುಜಸಹಸ್ರವಲ್ಲೀವನಲವಿತ್ರ, ವಿತ್ರಾಸಿತತ್ರಿದಶಬಲಬಲೀಂದ್ರಬಂಧನಕರ,
ಕರನಖಮುಖವಿದಾರಿತಾಸುರವರೇಣ್ಯಹಿರಣ್ಯಕಶಿಪುವಿಪುಲವಕ್ಷೋರಂಗ,
ರಂಗತ್ತರಂಗಮಕರಾಕರಬೃಹಜ್ಜಲನಿಧಿನಿಮಜ್ಜದ್ವೇದಪುಸ್ತಕಸ್ತೇನ
ದುರ್ದಮತಮೋದೈತ್ಯಮದಭಂಜನ, ಜನಕ್ಷೋಭದಕ್ಷ ಹಿರಣ್ಯಾಕ್ಷ
ವಿನಾಶ, ನಾಶವಿದೂರಿತಾಮೃತಾಶ ನಾಶಕರ ಲಂಕೇಶ್ವರ ವಿನಾಶಪ್ರದಾನ,
ದಾನವವಿಪ್ರಾಕಾರ ಕೂಟಕೈಟಭ ಕಬಂಧ ನಟನಲೀಲಾವಲೋಕ,
ಲೋಕಾಶ್ಚರ್ಯಶೌರ್ಯ ಬಾಲಕೇಳೀಚಾಳಿತ ಕಾಳೀಯಮಹಾಪನ್ನಗ,
ನಗವೈರಿವರ್ಷಿತವಾರಿಧಾರಾನಿವಾರಣೋದ್ಧಾರಿತ ಗೋವರ್ಧನಾಭೀಲ
ಕುತ್ಕೀಲ, ಕೀಲಾಲಸಲಿಲಪೂರೋದ್ಗಾರಿತಕುವಲಯಾಪೀಡ, ಪೀಡನಾ
ಪಾತಿತ ಪೂತನಾಪಘನ, ಘನದೃಢೋರುಢೊಕ್ಕರಣಪಾತನೋನ್ಮೂಲಿತಸಿ
ಯುದ್ಧಪ್ರಸಿದ್ಧಚಾಣೂರಮುಷ್ಟಿಕಾಸುರ, ಸುರಸೈನ್ಯವೆಳಯ ಗಳಪಾಶ
ಕೇಶಿಧೇನುಕನಿಧನೋಚ್ಛೃಂಖಲ, ಖಲಕುಲೋತ್ತಂಸಕಂಸಾಸುರ
ಪ್ರಧ್ವಂಸಪ್ರವೀಣ, ವೀಣಾವೇಣುವಾದನ ಚತುರ, ಚತುರತಾಮಯ
ಗೋಪೀಜನಮನೋರಮಣ, ರಮಣೀಯಪೀತವಾಸ, ವಾಸವಾರ್ಚಿತ
ಚರಣಕಮಲ, ಕಮಲಾಂಗನಾವರ, ವರಕೌಸ್ತುಭಾಲಂಕೃತ, ಕೃತಜಗ
ತ್ತ್ರಯಾನಂದ, ನಂದಗೋಪಮನಃಕುಮುದಶರಚ್ಚಂದ್ರ, ಚಂದ್ರಕಾಪೀಡ
ರೂಢಗೋಪಾಲ ಶ್ರೀಭಗವದ್ವಾಸುದೇವ ನಮಸ್ತೇ ನಮಸ್ತೇ,

ವ॥ ಎಂದದಿತಿದೇವಿ ಸ್ತುತಿಗೆಯ್ದು ಕಳಿಪೆ ವಿಹಂಗಪತಿಪತಾಕ
ನಾಕಾಶದಿಂ ದ್ವಾರಾವತಿಗವತರಿಸಿದಾಗಳ್,

ಪ್ರತಿಗೃಹಕುಂಕುಮಚ್ಛಟೆಗಳಿಂ ಪ್ರತಿಮಂದಿರರಂಗವಲ್ಲಿಯಿಂ
ಪ್ರತಿನಿಲಯಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ ।
ಪ್ರತಿಭವನೋತ್ಸವಧ್ವಜದಿನಾಪ್ರೊಬಿಲೊಪ್ಪಿರೆ ಸೂಸುವಂಗನಾ
ತತಿಗಳ ಸೇಸೆಯಂ ತಳೆದು ಪೊಕ್ಕನುಪೇಂದ್ರನಿಳೇಂದ್ರಗೇಹಮಂ ॥ ೫೪

ಸುರಗಿರಿಕೂಟದೊಳಾಮಣಿ
ಗಿರಿಯಂ ನಿಲಿಸೆಂದು ಕಳಿಪಿ ಖಗವರನಂ ಶ್ರೀ ।

ವರನಿರ್ದನೊಸೆದು ಸಾಷ್ಟೋ
ತ್ತರಶತಷೋಡಶಸಹಸ್ರಕಾಂತಾಸಹಿತಂ ॥ ೫೯

ವ॥ ಅಂತು ಸುಖದಿನಿರ್ಪನ್ನೆಗಂ,

ಹರಿಗಂ ರುಕ್ಮಿಣಿಗಂ ತನೂಜನೊಗೆದಂ ಪ್ರದ್ಯುಮ್ನದೇವಂ ರತೀ
ಶ್ವರನುನ್ಮೂಲಿತಶಂಬರಂ ಸಕಲಲೋಕೋತ್ಪತ್ತಿಬೀಜಂ ಸುಧಾ ।
ಕರಮಿತ್ರಂ ಮಕರಾಂಕನಿಕ್ಷುಧನು ಪುಷ್ಪಾಸ್ತ್ರಂ ವಸಂತಪ್ರಿಯಂ
ವಿರಹಿವ್ರಾತಭಯಂಕರಂ ವಿಟವಿಟೀಶೃಂಗಾರಸಾರೋದಯಂ ॥ ೬೦

ವ॥ ಆಕುಮಾರನಗ್ರಜನ್ಮನಾಗೆ ಜನಿಸಿದನೇಕಕುಮಾರಸಹಸ್ರದಿಂ ಯದುರಾಜ್ಯವತಿಪ್ರಾಜ್ಯವಪ್ಪಿನಮದೊಂದು ಸಮಯದೊಳ್,

ಆವೃತಮಾಗೆ ತೂರ್ಯರವದಿಂ ನಭ ವಟ್ಟುವುಪಾಯನಕ್ಕೆ ದಿ
ಗ್ದೇವತೆ ಮೇರೆಯಾಗೆ ಕುಡುವಶ್ವಗಜಾಳಿಪದಾರ್ಥಮರ್ಥಿಸಾ ।
ರ್ಥಾವಧಿಯಾಗೆ ವಿಶ್ವವಿಭು ಕೃಷ್ಣನಿನಾದುದು ರುಕ್ಮಿಣೀಮಹಾ
ದೇವಿಗೆ ಪುಣ್ಯಕವ್ರತದ ನೋಂಪಿ ಧರಿತ್ರಿಗೆ ರಾಗವಪ್ಪಿನಂ ॥ ೬೧

ವ॥ ಆ ಮಹೋತ್ಸವದೊಳ್,

ಕೆದಱಿರ್ದುತ್ತಮಪುಷ್ಪಮೊಕ್ಕಘುಸೃಣಂ ಚೆಲ್ಲಿರ್ದ ಕಸ್ತೂರಿ ಸೂ
ಸಿದ ಪೋತಾಶ್ರಿಯ ಕರ್ಪುರಂ * ನೆಗೆವ ಧೂಪೋದ್ದಾಮಧೂಮಂ ವಧೂ ।
ವದನಾಂಭೋರುಹಗಂಧಮಂ ಕದಡುವುದ್ಯಚ್ಚಾಮರೌಘಾನಿಲಂ
ಮುದಮಂ ಮಾಡೆ ಸರಾಜಲೋಕಸಭೆ ಚೆಲ್ವಾಗಿರ್ದುದಬ್ಜಾಕ್ಷನಾ † ॥ ೬೨

ವ॥ ಅಂತೊಡ್ಡೋಲಗಂಗೊಟ್ಟು ರುಕ್ಮಿಣೀಮಹಾದೇವಿ ತನ್ನರ್ಧಾಸನದೊಳಿರೆ ವಿಲಾಸದಿಂದಿರ್ದ ಸಮಯದೊಳ್,

ಪಡಿನೋಡಲ್ ಹಂಸೆಗಂ ಬೆಳ್ಮುಗಿಲತಿಧವಳಂ ಹಂಸೆಗಂ ಬೆಳ್ಮುಗಿಲ್ಗಂ
ಮೃಡಹಾಸಂ ವಿಶ್ವಲೋಕಸ್ತುತಮತಿಧವಳಂ ಹಂಸೆಗಂ ಬೆಳ್ಮುಗಿಲ್ಗಂ ।

* ಕ. ಖ, ಗ.—ಪೋತಾಶ್ರಯಕರ್ಪುರಂ.

† ಕ.ಗ.—ಸರೋಜನಾಭಸಭೆ ಚೆಲ್ವಾಗಿರ್ದುದೊಡ್ಡೋಲಗಂ.

ಮೃಡಹಾಸಕ್ಕಂ ಸುಧಾವಾರಿಧಿಯತಿಧವಳಂ * ಹಂಸೆಗಂ ಬೆಳ್ಮುಗಿಲ್ಗಂ
ಮೃಡಹಾಸಕ್ಕಂ ಸುಧಾವಾರ್ಧಿಗಮತಿಧವಳಂ ತಾನೆನಲ್ ಯೋಗಿ ಬಂದಂ||

ವ|| ಅಂತು ನಾರದಂ ಬರೆ ಸಂಭ್ರಮದಿನಿದಿರೆೞ್ದು,

ಕಮಲಾಕ್ಷಂ ಮುನಿಪಂಗೆ ಮಾಡಿ ನಯದಿಂದಾತಿಥ್ಯಪೂಜಾವಿಧಾ
ನಮನುಚ್ಚಾಸನದಲ್ಲಿ ಕುಳ್ಳಿರಿಸಿ ತಾನುಂ ರುಕ್ಮಿಣೀಯುಕ್ತನಾ |
ಗಿ ಮೃಗೇಂದ್ರಾಸನದಲ್ಲಿ ಕುಳ್ಳಿರಲದೊಂದಂ ಪಾರಿಜಾತಪ್ರಸೂ
ನಮನಿತ್ತಂ ಧೃತದಿವ್ಯಗಂಧಮನಪೂರ್ವಾಕಾರಮಂ ನಾರದಂ || ೬೪

ವ|| ಅದಂ ಪಿಡಿದು,

ಬನದೊಳಗುಳ್ಳಪೂಗಳವೊಲಲ್ಲ † ಮಿದಚ್ಚರಿ ಬೇಱಿದೊಂದು ಕಂ
ಪಿನ ಕಣಿ ಬೇಱಿದೊಂದು ಮಕರಂದದಗುಂದಲೆ ಬೇಱಿದೊಂದು ಚೆ |
ಲ್ವಿನನಿಧಿಯೆಂದು ಕೃಷ್ಣನುಮಮಾನುಷಪುಷ್ಪಮನೊಲ್ದು ನೋಡಿ ತ
ನ್ನಿನಿಯಳನಿಪ್ಪ ರುಕ್ಮಿಣಿಯ ವಕ್ತ್ರಮುಮಂ ದಯೆಯಿಂದೆ ನೋಡಿದಂ||

ವ|| ಅಂತು ನೋಡಿ ನಿಜಾಗ್ರಮಹಿಷಿಗಾಪಾರಿಜಾತದ ಪುಷ್ಪಮಂ ದಯೆಗೆಯ್ಯೆ,

ಅಳವಡೆ ಪಾರಿಜಾತದಲರಂ ಮುಡಿಯೊಳ್ ತಳದಿರ್ದ ನಲ್ಲಳಾ
ಗಳಿನ ವಿಳಾಸಮಾಗಳಿನ ವಿಭ್ರಮಮಾಗಳನಂಗಭಾವಮಾ |
ಗಳಿನ ವಿಡಂಬಮಾಗಳಿನ ದೇಸೆ ಮುರಾರಿಗನಂಗರಾಗಮಂ
ಬಳೆಯಿಸೆ ಪೆಂಡಿರೊಳ್ ಬಳೆಯಿಸಿತ್ತಿನಸುಂಪ್ರಣಯಪ್ರಕೋಪಮಂ ||೬೬

ವ|| ಆಗಳಾಪ್ರಪಂಚಮಂ ಸೌಭಾಗ್ಯನಿಧಿಯೆನಿಸಿದ ಸತ್ಯಭಾಮೆಯುಂ ಕೆಳದಿಯೊರ್ವಳತಿವಿಸ್ಮಯಸ್ಮೇರಲೋಚನೆಯಾಗಿ ನೋಡುತ್ತಿರಲಾಕೆಯು ಮನದ ಮಾತ್ಸರ್ಯದ ಚೇಷ್ಟೆಯಂ ಕಲಹತೃಷ್ಣಕಂ ನಾರದನಱಿದು,

ಇದನೆ ತಲೆದೊಡವುಮಾಡಿಯೆ
ಪದಸದ್ಮಕ್ಕೆಱಗಿಸಳ್ ಶಚೀವಧುವೆಂತಾ |

---

* ಕ. ಖ ಗ.—ವಾರ್ಧಿಯುಮತಿಧವಳಂ.

† ಕ ಗ.—ಪೂವುಗಳೊಳಲ್ಲ. ಮೊ—ಅ—ಪೂಗಳೊಳಗೆಲ್ಲ.

ತ್ರಿದಶೇಂದ್ರನನೆನೆ ಭುವನದೊ
ಳಿದೆ ದಲ್ ಸೌಭಾಗ್ಯಕಾರಣಂ ಪೆಱತುಂಟೇ ॥ ೬೭

ಇದು ಕೃತಕಾದ್ರಿಯುಪ್ಪುದು ವನಾವಳಿಯುಪ್ಪುದು ಪದ್ಮಷಂಡವು
ಪ್ಪುದು ತಳಿರುಯ್ಯಲಪ್ಪುದು ಲತಾಗೃಹಮುಪ್ಪುದು ರತ್ನದೀಪವ ।
ಪ್ಪುದು ಮಧುಮಾಸವಪ್ಪುದು ನವೋಜ್ಜ್ವಲಚಂದ್ರಿಕೆಯುಪ್ಪುದಿಂತಿದಾ
ಗದ ತೆಱನಿಲ್ಲಿದೊಂದು ಕುಸುಮಂ ಕುಡುತಿರ್ಕುಮಭೀಷ್ಟಸಿದ್ಧಿಯಂ॥೬೮

ಪುಟ್ಟವಿಳಾಸಂ ಮುಡಿಗಳ
ವಟ್ಟತ್ತೀಕುಸುಮಮೀಕೆಯೊಳ್ ಸವತಿಯರಾರ್ ।
ಪಟ್ಟಾಂತರವೆನಲಿಂ * ಪೊಱ
ಮಟ್ಟುದು ಸೌಭಾಗ್ಯಜಯಯಶಂ ರುಕ್ಮಿಣಿಯಾ ॥ ೬೯

ತಲೆದೊಡವಾಯ್ತುಮುರದ್ರುಮ
ದಲರೀ ರುಕ್ಮಿಣಿಗೆ ಸತ್ಯಭಾಮೆಯ ಸೊಬಗಿಂ ।
ಸಲಲರಿಯದೆಂದು ಸಂತತ
ಮುಲಿಗುಂ ಸೌಭಾಗ್ಯಡಿಂಡಿಮಂ ರುಕ್ಮಿಣಿಯಾ ॥ ೭೦

ಅಬಲೆಯರೊಳ್ ಮುಯ್ಯಾಂಪಳ್
ಸೊಬಗಿಂಗಾಸತ್ಯಭಾಮೆ ಬೇಡಿಂ ತನಗಾ ॥
ಸೊಬಗೀಯಲರಂ † ಮುಡಿದಿರೆ
ಸೊಬಗೇಕಚ್ಛತ್ರಮಾಯ್ತು ಭೀಷ್ಮಕಸುತೆಯಾ ॥ ೭೧

ಬಳಿರಿಪುವಿನ್ನೀಕೆಯ ಪದ
ತಳಸಂಗದ ಸುಖಮನವಳ ಮುಖಸಂಗದೊಳಂ ‡ ।
ತಳೆಗುಮೆ ರುಕ್ಮಿಣಿಯುಂಗುಟ
ದೊಳುಳ್ಳ ಸೊಬಗುಂಟೆ ಸತ್ಯಭಾಮೆಯ ನೊಸಲೊಳ್ ॥ ೭೨

* ಖ.—ಪಟ್ಟಾಂತರವೆನಲೀಂ. † ಗ.—ಸೊಬಗೆಮರಲರಂ.
‡ ಕ.ಗ.—ಮುಖಸಂಗದೊಳೀಂ

ಅಭಿಭವವೆಯ್ದಿದ ತನಗಿಂ
ಸ್ವಭಾವಸೌಭಾಗ್ಯವೞಿಯೆ ಬೇಡಿದೊಡಂ ದು |
ರ್ಭಗಮಕ್ಕುಂ ಪಡೆಗುಮೆ ಸ
ತ್ಯಭಾಮೆ ಸೌಭಾಗ್ಯಭಿಕ್ಷೆಯಂ ರುಕ್ಮಿಣಿಯೊಳ್ ॥ ೩೩

ತಡವೇಂ ಪೂಣ್ಕೆಗೆ ದಿವ್ಯಂ
ಬಿಡಿವೆಂ ರುಕ್ಮಿಣಿಯೊಳಲ್ಲದಿಂ * ಹರಿ ಮೆಱೆದುಂ |
ಗಡ ಸತ್ಯಭಾಮೆಗೆಱಗಂ
ಮುಡಿಗಿಕ್ಕಿದ † ನಾರ್ಪರೆತ್ತಿಕೊಳ್ಳಂ ಸಭೆಯೊಳ್ ॥ ೩೪

ವ॥ ಎಂದು ನಾರದಂ ಪಾರಿಜಾತಪ್ರಸೂನಸಾಮರ್ಥ್ಯವರ್ಣನ ವ್ಯಾಜದಿಂ ಸಪತ್ನೀವ್ಯಾಕೋಪಜನನಯತ್ನತತ್ಪರನಾಗಿ ‡ ನುಡಿಯೆ ತದ್ವೃತ್ತಾಂತಮಂ ವಾರ್ತಾಪರಂಪರೆಯಿನಱಿದು,

ಬಗೆವಂದೀಸೊಬಗೀಮಹಾತ್ಮೆಗುಚಿತಂ ಪ್ರದ್ಯುಮ್ನನಂತಪ್ಪ ಪೆ
ರ್ಮಗನಂ ಪೆತ್ತ ಮಹತ್ವದಗ್ರಮಹಿಷೀಸಂಪತ್ತಿಯಂ ತಾಳ್ದಿದೀ |
ಕೆಗೆ ಲಕ್ಷ್ಮೀವನಿತಾವತಾರೆಗೆನುತುಂ ಮಿಕ್ಕಂಗನಾವೃಂದವೀ
ರ್ಷ್ಯೆಗಳಂ ಮಾಣ್ದಿರೆ ಸತ್ಯಭಾಮೆ ತಳೆದಳ್ ಸೌಭಾಗ್ಯಮಾತ್ಸರ್ಯಮಂ॥

ವ॥ ಅಂತತಿಪ್ರಣಯಪ್ರಕೋಪಮಂ ತಳೆದು,

ಸಾರಿಕೆಯ ಕೀರದಂಚೆಯ
ಪಾರಾವತದಿಂಚರಂಗಳಿಲ್ಲದ ಕೋಪಾ |
ಗಾರಮನಾವಧು ಪೊಕ್ಕಳ್
ತೋರಣಮಲ್ಲಾಡೆ ನಿಮಿರ್ವ ಸುಯ್ಯೆಲರಿಂದಂ ॥ ೩೫

ಪ್ರೀತಿಯನೀವ ಸೆಂದುರದ ವಸ್ತ್ರಮನೊಲ್ಲದದೊಂದು ವಸ್ತ್ರಮಂ
ಶ್ವೇತಮನುಟ್ಟಳುಟ್ಟಿರೆ ತದಂಬರದಿಂ ಪ್ರಿಯಕೋಪಚಿಹ್ನದಿಂ |

* ಕ.ಖ.ಗ.—ರುಕ್ಮಿಣಿಯೊಳಲ್ಲದೇಂ. † ಕ.ಖ.ಗ.—ಮುಡಿಗಿಕ್ಕಿದೆ.

‡ ಕ.ಗ.—ಸಪತ್ನೀವ್ಯಾಜ ತತ್ಪರನಾಗಿ. ಖ.—ಸಪತ್ನೀವ್ಯಾಜಯತ್ನ ತತ್ಪರನಾಗಿ.

ದಾತರಳಾಕ್ಷಿಗಾಗಳೆನಸುಂ ನಲವೋಡಿದುದಂತುಟಲ್ತೆ ಬಾ
ಲಾತಪದಿಂದಮಪ್ಪ ನಲವೆಬ್ಬಿನಿಗಪ್ಪುದೆ ಚಂದ್ರಕಾಂತಿಯಿಂ ॥ ೭೭

ತನಗೀರ್ಷ್ಯೆಯಿಂ ಶಿರೋವೇ
ದನ ಜನಿಯಿಸೆ ನಿಟಿಲಪಟ್ಟದೊಳ್ ತಿರ್ಯಕ್ಚಂ ।
ವನತಿಲಕಾಯಿತಮಂ ಮಾ
ನಿನಿ ರುಚಿರದುಕೂಲಪಟ್ಟಮಂ ನಿಯಮಿಸಿದಳ್ ॥ ೭೮

ಕಲುಷಕಷಾಯೇಕ್ಷಣರುಚಿ
ಲಲಾಟಪಟದೊಳ್ ಪೊರಳ್ದು ಪುದಿದತ್ತೆನೆ ಕೋ ।
ಮಲೆ ತದ್ದುಕೂಲಪಟ್ಟದ
ಕೆಲಗೆಲದೊಳ್ ತೊಡೆದಳರುಣಚಂದನರಸಮಂ ॥ ೭೯

ವ॥ ಅಂತು ಕೋಪಚಿಹ್ನಪ್ರಸಾಧನಮೆ ತನಗೆ ಬೇಱೊಂದು ಚೆಲ್ವನವಟ್ಟೈಸೆ ಚಿಂತಾರಸತರಂಗಿತಾಂತರಂಗೆಯಾಗಿರ್ಪಿನಮಿತ್ತಂ ಪುರುಷೋತ್ತಮಂ ತನ್ನೊಳ್ ವಿಚಾರಿಸಿ,

ಕೆಳದಿ ಪರಿದೆಯ್ದ ಪೋದಳ್
ತಿಳಿದೀವಾರ್ತೆಯನೆ ಪೇೞ್ವಳದನಂತಾಕೋ ।
ಮಳ ಸತ್ಯಭಾಮೆ ಕೇಳ್ದಂ
ತಳಗುಂ ಪ್ರಣಯಪ್ರಕೋಪಮಂ ನಿಶ್ಚಯದಿಂ ॥ ೮೦

ವ॥ ಎಂದು ರುಕ್ಮಿಣಿಯು ಸಭಾಸ್ಥಾನದಿಂದೇನಾನುಮೊಂದು ನೆವದಿಂ ತಳರ್ದು ನಾರದನ ಸಮೀಪದೊಳ್ ಸಂಭಾಷಣಾರ್ಥಂ ಪ್ರದ್ಯುಮ್ನನಂ ನಿಲಿಸಿ ತಾಂಬೂಲಕರಂಡಕವಾಹಿನೀವಾಮಪ್ರಕೋಷ್ಠಾವಲಂಬಿತಹಸ್ತನಾಗಿ ಚರಣಕಮಲನ್ಯಸನಲೀಲೆಯಿಂ ಬಂದು ಸತ್ಯಭಾಮಾದೇವಿಯರಮನೆಯ ಬಾಗಿಲೊಳ್ ನಿಂದು ಆಸುಭಗರೂಪೆ ಕೋಪಾಗಾರಮಂ ಪೊಕ್ಕಿರ್ದುದಂ ಕಂಡು ತತ್ಸಮೀಪಕ್ಕೆ ಬರಲಂಜಿ ಕಂಜನಾಭಂ ರೂಪುಗರೆದು ಕೋಪಕುಟಿಲೆಯಾಗಿರ್ದಳಂ ನೋೞ್ಪಲ್ಲಿ,

ಪರಮಕ್ರೋಧಾಧಿದೇವಾರ್ಚನಮೆನೆ ಪರಿದೊಟ್ಟುತ್ತಿ ಲೀಲಾಬ್ಜಪತ್ರೋ
ತ್ಕರಮಂ ಚಿಂತಾಲತಾವೃದ್ಧಿಯನೊಡರಿಸಲೋರಂತೆ ನೀರ್ವೊಯ್ವ
ಪಾಂಗಿಂ |
ಸುರಿಯುತ್ತುಂ ಬಾಷ್ಪಧಾರಾಜಲಪರಿಕರಮಂ ಸ್ನೇಹಶಾಸ್ತ್ರಕ್ಕೆ ಟೀಕಂ
ಬರೆಯುತ್ತಿರ್ಪಂದದಿಂದುಂಗುಟದೆ ಬರೆಯುತುಂ ಭೂಮಿಯಂ ಭಾಮೆ
ಯಿರ್ದಳ್ ॥ ೮೧

ವ॥ ಅಂತಳವಿಗಱಿದ ವೇದನೆಯನೊಳಕೊಂಡು ಸಖೀಜನದೊಳಂ ನುಡಿಯದೆ ನಿದಾಘಸಮಯಾತಪತಪ್ತಲತೆಯಂತೆ ಬಂಬಲಂಬಾಡಿರ್ದವಸರದೊಳೊರ್ವಪರಿಚಾರಿಕೆ ಚಂದ್ರಕಾಂತಚಷಕದೊಳ್ ತೀವಿದ ಚಂದನರಸಮಂ ನೀಡೆ,

ಸಿರಿಗಂಪನಬಲೆ ಹೃದಯದೊ
ಳೊರಸುತ್ತುಂ ನೋವನಿದುವೆ ಪಡೆದಪುದೆಂದಾ |
ಸಿರಿಕಂಡದ ಶುಕ್ತಿಕೆಯಂ
ಧರಣಿಯೊಳಪ್ಪಳಿಸಿ ಕಣ್ಣನೀರಂ ಸುರಿದಳ್ ॥ ೮೨

ವ॥ ಅಂತು ಕನಲ್ದೊನಲ್ದು ಶಯ್ಯಾತಳದೊಳ್ ಮೆಯ್ಯನೀಡಾಡಿ ಮೇಲುದಿನ ಸೆಱಗಂ ಮುಖಕ್ಕೆ ತೆಗೆದು ಕಾಲ್ಗಳಂ ಸಂಕೋಚಿಸಿ ನಿಱಿಯೊಳಡಂಗಿಸಿ ಪವಡಿಸಿರ್ಪುದುಂ ಪೊರ್ದಲವಸರಂಬಡೆದು,

ಬಂದು ಮೃದುಯಾನದಿಂದಾಂ
ಬಂದುದನೀದೇವಿಗರುಪ ಬೇಡೆಂದು ಸಖೀ |
ವೃಂದಕ್ಕೆ ಪೇೞ್ದು ಸಂಜ್ಞೆಯಿ
ನಂದು ಮನೋರಮೆಯ ಕೋಪಗೃಹಮಂ ಪೊಕ್ಕಂ ॥ ೮೩

ವ॥ ಅಲ್ಲಿ ಮೆಲ್ಲಡಿವಜ್ಜೆಯಿಂ ಸೊಪ್ಪುಳಾಗದಂತು ನಡೆತಂದು ತನ್ಮನೋಹರಿಯ ಪಿಂತೆ ಕುಳ್ಳಿರ್ದು ಬಿಜ್ಜಣಿಗೆಯಂ ಕಳದು ಕೊಂಡು ಪಂಕರುಹನಾಭಂ ಕಿಂಕರಭಾವದಿನೊಯ್ಯನೊಯ್ಯನೆ ಬೀಸುತ್ತುಮಿರೆ ವಾಸವ

ತರುಪ್ರಸೂನಾವಾಸಿತವಾದ ವಾಸವಾನುಜಕರಕಮಲಗಂಧಮಂತಳೆದು
ನಿದ್ರೆಯುಮನೆೞ್ಚಱಿಸೆ * ನಲ್ಲಳೆೞ್ದು,

ವನಪುಷ್ಪಗಂಧಮಲ್ತು
ಲ್ತನುಪಮ † ಮೀಗಂಧಮೆಂದು ಮುರಿದೀಕ್ಷಿಸಿ ಕೃ ।
ಷ್ಣನಮೇಲೆ ಕೋಪದಿಂ ಲೋ
ಚನಾಂಬುಗಳ್ ಸೂಸೆ ಸೂಸಿದಳ್ ಕೇಕರಮಂ ॥ ೮-೪

ಪ್ರಿಯೆ ಮುನಿದೀಕ್ಷಿಪುದುಂ ‡ ಭೀ
ತಿಯಿನಾಕೆಯ ಪಿಂತೆ ಪೊಕ್ಕಡಂಗುವ ನಿಜಚೇ ।
ಷ್ಟೆಯಿನಿರ್ಮಡಿಸಿದನಂತಾ
ಪ್ರಿಯೆಯ ಮಹಾಪ್ರಣಯಕೋಪಮಂ ಕಮಳಾಕ್ಷಂ ॥ ೮-೫

ಕೋಪೋನ್ಮೀಲಿತದೃಷ್ಟಿಯಿ
ನಾಪಂಕಜಪತ್ರನೇತ್ರೆ ಮುರಿದೀಕ್ಷಿಸುತಿ ॥
ರ್ದಪಾಂಗು ಪಡೆದುದೆನಸುಂ
ಶ್ರೀಪುರುಷೋತ್ತಮನೊಳತನುರಾಗೋದಯಮಂ ॥ ೮-೬

ಸಮಸಂದೊಲ್ಮೆಗೆ ಮುಂ ಪ್ರಸನ್ನವತಿಯಾಗಿರ್ದಂದಿನಾರೂಪವಿ
ಭ್ರಮಮಾಸಾಧ್ವಸಭಾವಮಾರತಿಕಳಾಚಾತುರ್ಯಮಾವಾಕ್ಯವ ।
ಕ್ರಿಮಮಾಹಾಸವಿಳಾಸಮನ್ನೆಗಮದಿಂ ¶ ಮೊಣ್ದರ್ಕೆ ಕೃಷ್ಣಂಗದೊಂ
ದು § ಮುಪಂಬೆತ್ತುದು ಸತ್ಯಭಾಮೆಯ ಮಹಾಕ್ಷೇಪಾಕ್ಷಿವಿಕ್ಷೇಪಣಂ ॥

ವ॥ ಆಗಳ್ ನಿಜಾಪರಾಧಭೀತಿಯಂ ರಾಗರಸಂ ಕರ್ಚಿ ಕಳೆಯೆ ┼ ಕಮಲಲೋಚನನಾಚಪಲಲೋಚನೆಯಂ ನೋಡಿ,

---

* ಕ. ಗ —ಗಂಧಮಂತಳೆಯೆ ನಿದ್ರೆಯಿಂದೆೞ್ಚಿತ್ತು.

† ಕ. ಗ.—ಗಂಧಮಲ್ತತ್ಯನುಪಮ. ‡ ಕ. ಗ.—ಮುರಿದೀಕ್ಷಿಪುದುಂ.

¶ ಖ.—ವಿಳಾಸದಿಂ ನೆಗೆೞ್ದುದಿಂ. § ಖ.—ಕೃಷ್ಣಂಗದೊರ್ಮೆ.

┼ ಕ.—ಭೀತಿಯಿಂ ರಾಗರಸಂ ಪೆರ್ಚಿ ಕಳೆಯೆ, ಗ —ಭೀತ್ರಿಯಿಂ ರಾಗರಸಂ ಪೆರ್ಚಿ ಕಳೆಯೋಱೆ.

ಪಾರಾವತವುಲಿಯದ ಶುಕ
ಶಾರಿಕೆಗಳ್ ಮಧುರವಿರುತಿವೀಱದ ಕೋಪಾ ।
ಗಾರಮನೊರ್ಮೆಯೆ ಪೊಕ್ಕೀ
ಕಾರಣವೇನೆನಗೆ ತಿಳಿಯೆ ಪೇೞಿಂದುಮುಖೀ । ೮೮

ಸಿಂದೂರವಸನಮಂ ಕಳೆ
ದೊಂದು ಸಿತಾಂಬರಮನುಟ್ಟು ನಿರ್ಮಳನಿರ್ಮೋಕೇ ।
ಕಂದಳೆದ ನಾಗಕನ್ಯಕೆ
ಯಂದಮನಭಿನಯಿಸಿದಂದಮೇಂ ಲಲಿತಾಂಗೀ ॥ ೮೯

ತರುಣಿ ಕಳಂಕಮನಂತಃ
ಕರಣದೊಳಾಂತಮಳವೃತ್ತಿಯಂ ಕೂಡೆಬಹಿ ।
ಷ್ಕರಿಪಂತೆ ಮಹಾರಜನಾಂ
ಬರಮಂ ಕಳೆದೇಕೆ ಧವಳಪಟಮಂ ಪೊದೆದಾ ॥ ೯೦

ಹೃದಯದ ತಾಪದಿನುರ್ಕುವ
ವದನದ ಲಾವಣ್ಯರಸದ ನೊರೆಯೆನೆ ನೊಸಲ ।
ಲ್ಲಿ ದುಕೂಲಪಟ್ಟಮಂ ಕ
ಟ್ಟಿದಭಿಪ್ರಾಯಮನಮೋಘಮಱಿಪುವುದಬಲೇ ॥ ೯೧

ಅಲೆವ ನಿಡುಸುಯ್ಗಳಿಂ ಮುಖ
ನಲಿನರಜಸ್ಸಂಕುಳಂ ತೆರಳ್ದುರ್ಬುಳಿಯಿಂ ।
ಕೆಲಸಾರ್ದಂತಿರಲೇಕೆಗೆ
ಲಲಾಟದೊಳ್ ತೊಡೆದೆ ರಕ್ತಚಂದನರಸಮಂ ॥ ೯೨

ವ॥ ಎಂದರವಿಂದಲೋಚನಂ ನುಡಿಯೆ,

ನೀನಱಿದುಮಱಿಯದಂತಿರ
ದೇನೆಂದಪೆ ಕೃಷ್ಣ ನಿನ್ನ ಮಾಯೆಯನಂತಾ ।

ದಾನವರ್ಗೆ ಮುಱಿವುದಲ್ಲದೆ
ಮಾನಿನಿಗೆನಗಿಂತು ಮುಱಿದು ಕೊಱಚಾಡುವುದೇ ॥ ೯೩

ವ॥ ಎಂದು,

ಕಾಂತೆ ಮನಃಖೇದದಿನೋ
ರಂತುಗೆ ಕಣ್ಬನಿಯುನಂತವಂ ಕುಡಿತೆಗಳಿಂ ।
ದಾಂತು ಸುಖಮೂರ್ತಿ* ತನ್ನುರ
ಮಂ ತೊಡೆದಂತೊಂದು † ಸುಖಮನಾಂತಂ ಕೃಷ್ಣಂ ॥ ೯೪

ವ॥ ಅದಂ ಕಂಡು,

ಉಪಚಾರದಿಂದಮೇವಂ
ದಪುದೆನಗೀಕೃತಕವೃತ್ತಿಯುಂ ನಚ್ಚು ಮರಾ ।
ರಪಚಾರಕುಪಿತೆಗೆನಗಿ ‡
ನ್ನುಪಚಾರಂ ವ್ಯಥೆಯನೀಗುಮಾಗುಮೆ ಸುಖಮಂ ॥ ೯೫

ಪೂತನೆಯುಂ ಕೊಂದಾಸ್ತ್ರೀ
ಘಾತುಕವೃತ್ತಿಯುಮನೆನ್ನೊಳೇಂ ¶ ತೋಱಿದಪೈ ।
ಪೂತನೆಯು ತೆಱದೆ ನಿನಗಾ
ನೇತಱ ಪೊಲ್ಲಮೆಯುನರಸ ಬಗೆದೆಂ ಬಗೆಯೊಳ್ ॥ ೯೬

ಮಾನನಿಧಿಯೆಂದು ಮನ್ನಿಪೆ
ನೀನೆನ್ನಂ ಮುನ್ನಮಾದುದಿಂದಪಮಾನಂ ।
ಮಾನಿನಿಗೆ ಮಾನಭಂಗಂ
ತಾನಿದು ಮರಣಕ್ಕಮಧಿಕವೆಂಬುದನಱಿಯಾ ॥ ೯೭

ವ॥ ಎಂದು ನುಡಿದ ನಲ್ಲಳ ನುಡಿಗಳಂ ಕೇಳ್ದು,

---

* ಖ.—ಶುಭಮೂರ್ತಿ, † ಗ.—ತೊಡೆದಂದೊಂದು.
‡ ಕ.—ಕುಪಿತೆಯಾಂನಿ. ಗ.—ಕುಪಿತೆಯಾಗಿ.
¶ ಕ, ಗ.—ವೃತ್ತಿಯನದೆನ್ನೊಳಂ.

ಪಂಕರುಹವದನೆ ಮನದಾ
ಶಂಕೆಯಿದೇಂ ಸ್ನೇಹವೆಂಬುದೆರಡಿಲ್ಲೆನ್ನೊಳ್ ।
ನೀಂ ಕೇಳ ಸತ್ಯಭಾಮೆಯ
ಕಿಂಕರನೀಕೃಷ್ಣನೆಂಬ ಲೋಕದ ನುಡಿಯಂ ॥ ೯೮

ನಿನ್ನೊಲವೆನಗರ್ಘ್ಯವದಱಿಂ
ದೆನ್ನ ಸುಖಂ ನೆಗಳ್ದುದದಱಿನಾತ್ಮಸುಖಾರ್ಥಂ ।
ನಿನ್ನನೆ ಮನ್ನಿಸುವೇ ನಾಂ *
ನಿನ್ನಿಂ ಪ್ರಿಯವಸ್ತುವೆನಗೆ ಪೆಱತೊಂದುಂಟೇ ॥ ೯೯

ವ॥ ಎಂದು ವನಜಲೋಚನಂ ತನ್ನ ಮನದೊಲವಂ ತೋಱಿ ನುಡಿಯೆಯುಮಾನುಡಿಗಳ್ ಕಿಡಿಕಿಡಿಯಾಗಿ,

ಪ್ರಿಯಮಪ್ಪ ವಸ್ತುವಂ ನೀಂ
ದಯೆಯಿಂ ಕುಡೆ ಪಡೆದಳಾವಳಾಕೆಯೆ ದಿಟದಿಂ ।
ಪ್ರಿಯೆ ನಿನಗಾಂ ವಾಙ್ಮಾತ್ರ
ಪ್ರಿಯೆಯಿನ್ನೀನೆನಗಿದೇಕೆ ಚದುರಂ ಮೆಱೆವೈ ॥ ೧೦೦

ನೆವದಿಂ ಸೋಂಕುವ ಮೆಲ್ಪುದೋಱುವ ಭವಚ್ಚಾತುರ್ಯದಿಂದೆನ್ನೊಳಾ
ನವಲಜ್ಜಾನತಿ ಪಿಂಗೆ ಪಿಂಗಿದುದು ಕನ್ಯಾಭಾವಮೆಂದಂದಿನಿಂ ।
ದುವರಂ ನೀಂ ದಯೆಗೆಯ್ಯೆ ದೇವ ಸಲೆ ಸಂದತ್ತೆನ್ನ ಸೌಭಾಗ್ಯಗ
ರ್ವವದಿಂದನ್ಯೆಯೊಳಾಗೆ ಸೈರಿಸುವೆನೆಂತಾಂ ಕಂಸವಿಧ್ವಂಸಕಾ ॥ ೧೦೧

ನೀನವಮಾನಿಸಿತಲ್ಲದೆ
ತಾನಾರುಕ್ಮಿಣಿಯ ಮುಂದೆ ನಾರದನೆನ್ನಂ ।
ನಾನಾವಿಧದಿಂ ಪಳಿದನ
ದೇನುಚಿತಮೆ ಮುನಿಗದೇಕೆ ರಾಗದ್ವೇಷಂ ॥ ೧೦೨

ನೆರೆದಾಸ್ಥಾನದೊಳಿರ್ದ ರುಕ್ಮಿಣಿಯ ಮುಂದೆನ್ನೊಂದು ಸೌಭಾಗ್ಯಮಂ
ಪರಿಹಾಸಂಗೆಯುತಿರ್ದ ನಾರದನ ಮಾತಂ ಪ್ರೀತಿಯಿಂ ಕೇಳ್ದಳಾ ।

---

* ಕ, ಗ,— ನಿನ್ನಂ ಮನ್ನಿಸುವವನೆಂ.

ವರ ನೀಂ ಸೋವಡಿಯುಂತಿರೀಗನುಡಿವೆಯೆಮಿಥ್ಯೋಕ್ತಿಯುಂ ಕೂರ್ಪನ
ಲ್ಲರದೇಂ ಪೆಂಡಿರನಲ್ಲಿ ಲೋಗರಪಹಾಸ್ಯಂಗೆಯ್ವುದಂ ಕೇಳ್ವರೇ ॥ ೧೦೩

ಪರಿಭವಮಂ ಕಾಣದಳೆಂ *
ಪರಿಭವಮಂ ಕಂಡೆನೀಶರೀರದೊಳಸು ತಾ ।
ನಿರೆಯುಂ ದ್ವಿತೀಯಜನ್ಮಂ
ದೊರೆಕೊಂಡುದು ಪುಣ್ಯಹೀನೆಗೆನಗಿದು ಪಿರಿದೇ ॥ ೧೦೪

ಅಱಿಯೆಂ ಮುಗ್ಧೆಯೆನಾನೆಡ
ವೆಱಿಯುದು ನಿನ್ನೊಲ್ಮೆಯೆಂದು ನೆಚ್ಚುವೆನಿದನಿಂ ।
ದಱಿದೆಂ ಪ್ರಿಯ ನಿನ್ನಯ ಮನ
ದೆಱಕಂ ಸ್ಥಿರಮಲ್ಲಮೆಂಬುದಂ ಕಮಲಾಕ್ಷಾ ॥ ೧೦೫

ಪ್ರಿಯೆ ಸತ್ಯಂ ಸತ್ಯಭಾಮಾಸತಿ ಸತಿಯರೊಳೀಯುಚ್ಚ್ಯುತಂಗೆಂದು ನಿಚ್ಚಂ
ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆ ವಿರ್ ದೇವಕೀದೇ ।
ವಿಯರಿನ್ನುಂ ನಾಡೆ † ಕೊಂಡಾಡುವುದು ಪರಿಜನಂಧಾತ್ರಿಕೈಕೊಳ್ವುದಿಂದ
ಪ್ರಿಯೆಯಾಗಿರ್ದೆನ್ನ ನಿನ್ನಾರ್ ಬಗೆದಪರೆನಗಿನ್ನೇಕೆ ಸಂಸಾರಬಂಧಂ ॥೧೦೬

ವನಜಲಕೇಳಿಮುಖ್ಯಜನ ‡ ಕೇಳಿಯೊಳಗ್ಗದ ನಿನ್ನ ರುಕ್ಮಿಣೀ
ವನಿತೆ ಸುವರ್ಣಪೀಠಗತೆಯಾಗಿರೆ ನಿನ್ನ ಸಮಂಕಪೀಠದೊಳ್ ।
ಮನವೊಸೆದಿರ್ದು ನೋಟ್ಪವೆಳನಿನ್ನಪಮಾನದೆ ಪಿಂಗಿ ನೋಡಲಾ
ರ್ಪೆನೆ ನಿಲಲಾರ್ಪೆನುಗ್ರತಪದೊಳ್ ಬಿಡಲಾರ್ಪೆನಧೀಶ ಜೀವಮಂ ॥೧೦೭

ಅಭಿನವವಸ್ತುವಂ ಪ್ರಿಯೆಗೆ ರುಕ್ಮಿಣಿಗಿತ್ತು ವೃಥೋಕ್ತಿಯಿಂದಲೀ
ವಿಭು ತಿಳಿಪಲ್ಕೆ ಬೇಡ ಪೆಱಸಾರೆನಗೀಭವವಿಂತು ¶ ಪೋದುದೀ ।
ಯುಭಿಭವದಿಂದಮಿನ್ನೆನಗೆ ಬಾಳ್ಕೆಯೆ ಪೇೞ ಭವಾಂತರಕ್ಕೆ ವ
ಲ್ಲಭೆ ನಿನಗಪ್ಪೆನಕ್ಕೆನಗೆ § ನೀಂ ದಯೆಗೆಯ್ಯ ತಪಕ್ಕನುಜ್ಞೆಯಂ ॥೧೦೮

---

* ಖ.—ಕಾಣದಳಾಂ. † ಮೊ-ಅ.-ಕೊಂಡು. ‡ ಕ. ಖ. ಗ —ಮುಖ್ಯ ನಿಜ. ¶ .ಕ. ಗ.—ಭವವಿಂತೆ. § ಕ. ಗ.—ನಿನಗಪ್ಪೆನಕ್ಕೆಮಗೆ.

ವ॥ ಎಂದು ನುಡಿದು ಬಾಷ್ಪಜಲವಿಲುಳಿತಲೋಚನೆಯುಮುಷ್ಣ ಶ್ವಾಸಪವನಶೋಷಿತ ಪಲ್ಲವಾಧರೆಯುಮತಿಶಯಸ್ವಾಂತಖೇದಸಂತಪ್ತ ಗಾತ್ರೆಯುಮಾಗಿರ್ದ ಸತ್ರಾಜಿತೀದೇವಿಯಂ ದೇವಕೀನಂದನಂ ಕಾರುಣ್ಯ ದೃಷ್ಟಿಯಿಂ ನಿರೀಕ್ಷಿಸಿ,

ರಮಣೀ ನೀಂ ಮುನಿದಂದಮಂ ತಿಳಿದೆನೀಗಳ್ ಪಾರಿಜಾತ ಪ್ರಸೂ
ನಮನಾರುಕ್ಮಿಣಿಗಿತ್ತೆನೆಂಬುದೊಲವೆಂತಾ * ಪುಷ್ಪವೊಂದೇನಪೂ।
ರ್ವಮೆ ದೇವೇಂದ್ರನ ನಂದನಕ್ಕೆ ಪರಿಯಿಟ್ಟಾನಾವಗಂ ಪಾರಿಜಾ
ತಮಹೀಜಾತಮನೀಟ್ಟು ತಂದು ನಿನಗೀವೆಂ ಕೇಳ್ ಪ್ರತಿಜ್ಞೋಕ್ತಿಯಂ॥

ಎನೆ ಕೇಳ್ದಾ ಸತ್ಯಭಾಮಾಸತಿ ತೊಲಗಿಸಿ ಹೃತ್ಕೋಪಮಂ ಸುಪ್ರಸನ್ನಾ
ನನೆಯಾಗಿರ್ದಲ್ಲಿ ತುಳ್ಕಾಡುವ ನಗೆ ನೆಗೞುತ್ತಿರ್ಪ ರಾಗಂ ಪುದುಂಗೊ।
ಳ್ವನಯಂ ಕೈಕೊಳ್ವಬಿಂಕಂ ಪಸರಿಸುವಬೆಡಂಗಪ್ಪುಕೆಯ್ವೊಂದುಕೆಯ್ತುಂ
ತನಗಂತೊಂದಚ್ಚರಿಯಂ ಪುಟ್ಟಿಸುವಿನವೆಸೆದಂ ಶ್ರೀಜಗನ್ನಾಥದೇವಂ ॥೧೧೦

ಇದು ಸಮಸ್ತ ಕಮಲಭವಾಂಡಮಂಡಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀ
ಪಾದಭಕ್ತಿಯುಕ್ತ ಸುಕವೀಂದ್ರರುದ್ರಪ್ರಣೀತ ಶ್ರೀಜಗನ್ನಾಥವಿಜಯ
ಮಹಾಪ್ರಬಂಧದೊಳ್ ನರಕಾಸುರವಧ ಷೋಡಶಸಹಸ್ರದಿವ್ಯ
ಕಾಂತಾಸ್ವೀಕರಣ ವಿಬುಧಜನನೀಕುಂಡಲಪ್ರದಾನ
ರುಕ್ಮಿಣೀಪ್ರಣಯೈಕವ್ರತ ಪ್ರದ್ಯುಮ್ನಾದಿ ಸಹಸ್ರ
ಕುಮಾರೋತ್ಪತ್ತಿ ನಾರದದತ್ತಪಾರಿಜಾತ
ಪುಷ್ಪನಿಮಿತ್ತಸತ್ಯಭಾಮಾ
ಪ್ರಣಯಕಲಹವರ್ಣನಂ
ದ್ವಾದಶಾಶ್ವಾಸಂ
ಸಂಪೂರ್ಣಂ.

---

* ಕ, ಗ,—ನಿಂದೆ ಬಲವಿಂದಾ, ಮೊ–ಅ,—ನೆಂದೆ ಬಲವಿಂದಾ.

# ತ್ರಯೋದಶಾಶ್ವಾಸಂ

ಶ್ರೀರಮಣನಿಂತು ತಿಳಿಪಿ ಮ
ನೋರಮೆಯುಂ ಸತ್ಯಭಾಮೆಯುಂ ತತ್ಕೋಪಾ ।
ಗಾರದೆ ತಳರ್ದುದ್ ವಿನೋದಾ
ಗಾರಮನಾರಮಣಿವೆರಸು ಮುದದಿಂ ಪೊಕ್ಕಂ ॥ ೧

ವ॥ ಆಗಳಾವಿನೋದನಿಳಯದಿಂ ನೈಪಥ್ಯಸದನಕ್ಕೆ ಪಸದನಂ ಗೆಯ್ಯಲೆಂದು ಸತ್ಯಭಾಮೆ ಪೋಗೆ * ಪಂಕರುಹನಾಭಂ,

ಮುನಿದಿರ್ದೊರ್ಪಳ ಕೆಯ್ತಮಂ ತಿಳಿಪಿದೀವೃತ್ತಾಂತಮಂ ಬ್ರಹ್ಮಪು
ತ್ರನನಾಮಂತ್ರಿಸಿ ಪೇಳ್ವೆನೆಂಬ ಪದದೊಳ್ ಚಿತ್ತಜ್ಞನಾನಾರದಂ ।
ಮುನಿಪಂ ಬಂದು ವಿಶಿಷ್ಟವಿಷ್ಟರದೊಳಿಂಬಿಂ ಕುಳ್ಳಿರಲ್ಕಂಚೆವಾ
ಸನವಷ್ಟಂಭಿಸಿ ತಾಂ ಪ್ರಿಯಾಗಮನಮಂ ಪಾರುತ್ತುಮಿರ್ಪನ್ನೆಗಂ ॥ ೨

ಕುಡುವುರ್ವಿಂಕಬರ್ಬುವಿಲ್ಲಂಪರಪುವಕಡೆಗಣ್ಣಿಂಮನೋಜಾಸ್ತ್ರಮಂಸಾ
ಲಿಡುವುದ್ಯನ್ಮೇಖಲಾಕೂಜಿತದಿನತನುಕೋದಂಡಟಂಕಾರಮಂ ಕ ।
ನ್ನಡಿಪಂಘ್ರಿನ್ಯಾಸದಿಂ ತಾವರೆಗೆದಱುವ ಮಂದಸ್ಮಿತೋದ್ಯೋತದಿಂದಿಂ
ಗಡಲಂ ಬೇಱೊಂದನುತ್ಪಾದಿಸುವ ತೆಱದಿನಾನಂದದಿಂ ದೇವಿ ಬಂದಳ್ ॥ ೩

ವ॥ ಅಂತು ಕೈಗೆಯ್ದು ಬರುತ್ತುಂ ಪುರುಷೋತ್ತಮನ ಕೆಲದೊಳಿರ್ದ ನಾರದನಂ ಕಂಡು,

ಮುನಿಯಿಸುವಂ ಸಪತ್ನಿಯುರನೆಂದಮರದ್ರುಮದೊಂದುಪುಷ್ಪಮಂ
ಮುನಿ ಹರಿಗಿತ್ತನಂತದುವೆ † ರುಕ್ಮಿಣಿಗಾಗಿರೆ ಮನ್ಯುಯುಕ್ತೆಯಾ ।

* ಖ.—ಸತ್ಯಭಾಮೆಯಂಕಳಿಪಿ. † ಕ. ಗ.— ಹರಿಗಿತ್ತೊಡಂತದುವೆ.

ದೆನಗೆ ಮುರಾರಿ ತತ್ಕುಜಮನಾವಗಮಿತ್ತಪೆನೆಂದು ಪೂರ್ಣ್ದನಂ
ತೆನಗೆ ಮನೋರಥಂ ಸಮನಿಪಲ್ಲಿಗೆ ನಾರದನಲ್ತೆ ಕಾರಣಂ ‖ ೪

ವ‖ ಎಂಬ ಮನದುಕ್ತಿಯಿಂ ನಿರತಿಶಯಭಕ್ತಿ ನೆಗಟೆ ಪೊಡೆವಟ್ಟ ಮುನಿಯ ಪರಕೆಯುಂ ಕೈಕೊಂಡು ಪಂಕರುಹಾಕ್ಷನಂಕಮಂ ಸೋಂಕಿ ತತ್ಪರ್ಯಂಕದೊಳ್ ಕುಳ್ಳಿರ್ದುಂ ಮುನೀಂದ್ರನುಪೇಂದ್ರನ ಮುಖಾರವಿಂದಮಂ ನೋಡಿ,

ಪ್ರತಿಮಾಸಂ ಹರಪೂಜೆಯುಂ ದಿವಿಜರಾಜಂ ಮಾಳ್ಪನಾ ಪೂಜೆಯುಂ
ಶಿತಿಕಂಠಂ ಮನವೊಲ್ದು ಕೈಕೊಳುತುಮಿರ್ಪಂ ತನ್ಮಹೋತ್ಸಾಹಮಿಂ ।
ದೆ * ತದುತ್ಸಾಹಮನೀಕ್ಷಿಸಲ್ಕೆ ಮಿಗೆ ನೀಮುಂ ಬರ್ಪುದೆಂದಾಶಚೀ
ಪತಿ ಕೊಟ್ಟೊಂದು ನಿಮಂತ್ರಣಪ್ರಸವಮಿಂದಾಂ ತಂದ ಪುಷ್ಪಂ ವಿಭೂ ‖

ವ‖ ಅದುಕಾರಣದಿನಿಂದಿನಿರುಳೊಳಾ ಮಹೇಶ್ವರಪೂಜಾಮಹೋತ್ಸವಮಂ ನೋಡಲ್ವೇಳ್ಕುಮೆಂದು ಪೋಗಿವೆಂದಪೆನೆನಗನುಜ್ಞೆಯುಂ ಕುಡಿಮೆಂಬನೆವದೆಮಾತುದೆಗೆಯೆ,† ಪೀತಾಂಬರಧರಂ—ಕೇಳ್ಲೆಮುನೀಂದ್ರನೀವಿಂದೆಮಗೆ ತಂದುಕೊಟ್ಟಮಂತ್ರಣಪಾರಿಜಾತಕುಸುಮಮಂ ರುಕ್ಮಿಣೀದೇವಿಗಿತ್ತೊಡಾದೇವಿ ತತ್ಕುಸುಮಮಂ ಶಿರಶ್ಶೇಖರಮಂ ಮಾಡಿರ್ದ ಸಮಯದೊಳ್ ನೀವೇನೆಂದು ನುಡಿದಿರ್, ಆಮಾತುಗಳೊಳಗಾಗಿ ತತ್ಪ್ರಪಂಚಮಂ ನಿಜಪ್ರಿಯಸಖಿಯ ಪೇಳ್ಕೆಯಿಂ ಕೇಳ್ದೀಸತ್ಯಭಾಮೆ ನಿಕಾಮಪ್ರಣಯಕುಪಿತೆಯಾಗಿರ್ದುದನಱಿದು ಬಂದೀದೇವಿಯುಂ ತಿಳಿಪಿದೆನೆಂದಾವೃತ್ತಾಂತಮಂ ಪೇಳ್ವ ಬಗೆಯುಂ ತಂದು,

ಪುರುಡಿಸಿ ನಲ್ಲಳಿರ್ದಿರವನಾಸತಿ ಕೋಪಗೃಹಕ್ಕೆವಂದು ಸಂ
ದುರದ ಸುವಸ್ತ್ರಮಂ ಕಳೆದು ಪಾಂಡುರವಸ್ತ್ರಮನುಟ್ಟುದಂ ತದಂ ।
ಬುರುಹದಳಾಯತೇಕ್ಷಣೆ ದುಕೂಲದ ಪಟ್ಟಮನಾತ್ಮಭಾಳದೊಳ್
ಧರಿಯಿಸಿ ರಕ್ತಚಂದನಮನಿರ್ಕೆಲದೊಳ್ ತೊಡೆದಿರ್ದಕೆಯ್ತಮಂ ‖ ೬

* ಖ.—ತನ್ಮಹೋತ್ಸಾಹದಿಂದೆ. † ಖ.—ಕುಡುವುದೆನಲದೇಮಾತಂತೆಗೆಯ್ವುದೆಂದು.

ಕೆಳದಿಮುರಲ್ಕೆಱಿಂ ನುಡಿಸೆ ಮೌನದೊಳಿರ್ದಪದನಂಗತಾಪದಿಂ
ಮೞಯಜಪಂಕಮಂ ಹೃದಯದೊಳ್ ತೊಡೆಯುತ್ತಿರೆ ನೋಡಿ ನೋ
ವದ * ।
ಗ್ಗಳಿಸಿದುದೆಂದು ಚಂದನದ ಶುಕ್ತಿಕೆಯಂ ನೆಲದಲ್ಲಿ ಥೊಪ್ಪನ
ಪ್ಪಳಿಸಿದುದಂ ವಿನೋದದ † ಕರಾಂಬುಜಮಂ ಪಱಿದೊಟ್ಟುತಿರ್ದಪದಂ॥

ಆನಪರಾಧಿಯುಮಾಗಿ ‡
ರ್ದೇನೆಂದೀಪ್ರಿಯೆಯ ಪೊರೆಗೆ ಪೋದಪೆನೆನುತುಂ ।
ನಾನಾವಿಧದುಬ್ಬೆಗದಿಂ
ತಾನಿನಿಸಂಜಿರ್ದಪ ದೂರದಿಂ ನೋಡಿದುದಂ ¶ ॥ ೮

ಯುವತಿ ದುಕೂಲದಂಚಲಮನಾನನದೊಳ್ § ಮೆಱೆಮಾಡಿ ಪಾಸಿನೊಳ್
ಪವಡಿಸಿದಂದಮಂ ಮುದದೆ ತಾನದನೀಕ್ಷಿಸಿ ಪೊರ್ದಲಿಂತಿದೊಂ ।
ದವಸರಮೆಂದು ಮೆಲ್ಲನಿನಿಸಂ ನಡೆತಂದು ಸಖೀಜನಕ್ಕೆ ಬಿ
ನ್ನವಿಸದಿರಸ್ಮದಾಗಮಮನೀಕೆಗೆನುತ್ತುಮೆ + ಸನ್ನೆಗೆಯ್ದುದಂ ॥ ೯

ಬಟಕಮಡಿವಜ್ಜೆಯಿಂ ಸೊ
ಪ್ಪುಳಾಗದಂತೊಯ್ಯನೊಯ್ಯನೆಟ್ಟಿಂದಾಕೋ ।
ಮೞೆಯ ನಿಜಕೋಪಮಂದಿರ
ದೊಳವೊಕ್ಕಾಪ್ರಿಯೆಯ ಪಿಂದೆ ತನ್ನಿರ್ದಿರವಂ ॥ ೧೦

---

* ಕ. ಗ.—ತೊಡೆಯುತ್ತಿರೆ ನೋವದಾಗಳ್.

† ಕ. ಖ. ಗ.—ವಿನೋದದೆ.

‡ ಕ ಗ.—ಆನಪರಾಧಿಯೆನಾಗಿ.

¶ ಕ. ಗ.—ಉಬ್ಬೆಗಮಂ ತಾನಿನಿಸಂ ಬಿರ್ದಪ ದೂರದಿಂದೀಕ್ಷಿಪುದಂ.

§ ಮೊ—ಬಿ.—ದುಕೂಲದಂಚೆಲದಿನಾನನಮಂ.

+ ಖ.—ಅಸ್ಮದಾಗಮಮಕಾರ್ಯಮೆನುತ್ತುಮೆ.

ಮೊದದಿನದೊಂದು ಬಿಜ್ಜಣಿಗೆಯುಂ* ಪ್ರಿಯೆಗೊಯ್ಯನೆ ತಾನೆ ಬೀಸುತಿ
ರ್ದುದನಮರದ್ರುಮಪ್ರಸವಸಂಗದೆ ವಾಸಿತವಾದ ತನ್ನಹ ।
ಸ್ತದ ನವಗಂಧಮಂಡಲೆಯೆ ಮಾನಿನಿ ನಿದ್ರೆಯಿನೆಚ್ಚಿದೊಂದು ತೀ
ಡಿದಪುದಪೂರ್ವಗಂಧಮೆನುತುಂ ತರಳೀಕೃತನೇತ್ರೆಯಾದುದಂ ॥ ೧೧

ಇನಿಯಳ್ ಮುರಿದೀಕ್ಷಿಸಿ ಭೋಂ
ಕನೆ ತನ್ನಂ ಕಂಡುದಂ ಭಯಂ ಮಿಗೆ ತಾನಾ ।
ಘನಕುಚಕೆಯು ಪಿಂದಡಂಗಿದ
ಬಿನದದೆ ತತ್ಸತಿಗೆ ಕೋಪಮಂ ಪೆರ್ಚಿಸಿತಂ † ॥ ೧೨

ಮುನಿಸಿಂದುನ್ಮೀಲಿತಲೋ
ಚನೆ ನೋೞ್ಪುದುಮಾಕೆ ‡ ನೋೞ್ಪಪಾಂಗದ ಪಾಂಗಿಂ ।
ತನಗಗ್ಗಳಿಸಿದ ರಾಗದೆ
ಮನದಂಜಿಕೆ ಪೋಗಿ ನುಡಿದ ಚತುರೋಕ್ತಿಗಳಂ ॥ ೧೩

ಇಂತಿಂತು ನುಡಿದೆನಾಂ ಪ್ರಿಯೆ
ಗಿಂತಿಂತೀದೇವಿ ನುಡಿದಳೆನಗೆಂಬುದನಿಂ ।
ತಿಂತುಮುನಿಗೊಂದುಗುಂದದೆ ¶
ಸಂತಸದಿಂ ಪೇೞ್ದು ಶೌರಿ ಮತ್ತಿಂತೆಂದಂ ॥ ೧೪

ಸವತಿಗೆ ಕೊಟ್ಟಪೂರ್ವಮನಿಪುತ್ತುಮವಸ್ತುವೆನೆನ್ನನೇಕೆ ಮಾ
ಧವ ಬೞಿಮಾತಿನಿಂ ತಿಳಿಪುವೈ ಕುಡೆ ತೀಱದ ವಸ್ತುವಿರ್ಕೆ ನೀ ।
ನೆವಗೆ ತಪಕ್ಕನುಜ್ಞೆಗುಡಿಮೊಂದ ಲತಾಂಗಿಗೆ ತಂದು ಪಾರಿಜಾ
ತವನದನಾವಗಂ ಕುಡುವೆನೆಂದಿದನಾಂ ನುಡಿದೆಂ ಪ್ರತಿಜ್ಞೆಯಂ ॥ ೧೫

---

* ಖ — ಬಿಜ್ಜಣಿಗೆಯಿಂ † ಖ. — ತತ್ಪ್ರಿಯೆಗೆತಾಪಮದುಪೆರ್ಚಿದುದಂ.

‡ ಕ ಗ — ನೋೞ್ಪುದನಾಕೆ.

¶ ಕ. — ನುಡಿದಳೆಂಬುದನಂದೆಂತಾತುಂಗುಂದದೆ ಮುನಿಯೊಳ್, ಗ. — ನುಡಿದ ಳೆಂಬುದನಂದಂತಂತುಂಗುಂದದೆ ಮುನಿಯೊಳ್.

ವ॥ ಎನೆ ಮುನೀಶ್ವರಂ ಕೇಳ್ದು,

ಕಲಹಂ ಪುಟ್ಟಿತಲೇ ಮಹೇಂದ್ರನೊಳುಪೇಂದ್ರಂಗೆನ್ನ ಮಾತಿಂ * ಮಧೂ
ಕಲಹಂ ಸಾರ್ಥಕಮಾಯ್ತು ಭಾವಿ ಕಲಹಾಲೋಕಾರ್ಥಿ ಯೆಂದಿಂತು ತ।
ನ್ನೊಳ್ ತನ್ನಂ ಪೊಗಳ್ದಚ್ಯುತಂಗೆ ಚಲಮುಪ್ಪಂತೆಂದನೇಂ ದೇವ ಪೂ
ಣ್ದಿಳವಂತಕ್ಕುಮೆ † ಪಾರಿಜಾತಹರಣಂ ನೋಳ್ಪಂದು ಸಾಮಾನ್ಯಮೇ ॥

ವ॥ ಅದೆಂತೆನೆ,

ಸುರರುಂ ದಾನವರುಂ ಪಯೋಧಿಮಥನಂಗೆಯ್ವಂದು ತದ್ದಿವ್ಯಭೂ
ಮಿರುಹಂ ಪುಟ್ಟಿದುದಂತದರ್ಕಧಿಪನಾದಂ ಶಕ್ರನಾಶಕ್ರನಾ।
ತರುವಂ ಪ್ರೀತಿವಿಶೇಷದಿಂ ಶಚಿಗೆ ಕೊಟ್ಟಂ ಭಾವಿಸಲ್ ಪೆಂಡಿರಾ
ದರಿಸುತ್ತಿರ್ಪ ಪದಾರ್ಥಮಂ ಸುಭಟರನ್ಯರ್ಗೀಯಲೇಂ ಬಲ್ಲರೇ ॥ ೧೭

ವ॥ ಎಂದು ಮುನೀಂದ್ರಬೃಂದಾರಕಂ ನುಡಿಯಲಿಂದ್ರಾವರಜಂ ಕೇಳ್ದು

ತಾನಿಂದ್ರಂ ನಿಜನಾಮದೊ
ಳಾನಿಂದ್ರಾವರಜನೆಂದೊಡಗ್ರಜನಿಂದ್ರಂ।
ತಾನೆನಗನುಜಂಗಭಿಮತ
ದಾನವನಿತ್ತೆನ್ನ ಪೂಣ್ಕೆಯಂ ಸಲಿಸದಿರಂ ॥ ೧೮

ನೀವೀಮಾತಂ ಪೇಚ್ದೊಡೆ
ದೇವೇಂದ್ರಂ ಪಾರಿಜಾತಮಂ ಸಂತಸದಿಂ।
ದೀವಲ್ಲಿಗೆ ಸಂದೆಯುಮೇ
ನಾವನುಮಿಷ್ಟತೆಗೆ ತುಷ್ಟಿವಡದವನೊಳನೇ ॥ ೧೯

ವ॥ ಎನೆ ವನರುಹಾಸನತನಯನಿಂತೆಂದಂ,

ದೇವಿಯರಿತ್ತಿಯುಂ ಸಲಿಸಲಿಲ್ಲದ ವಸ್ತುವನಾಗುಮಾಡಿ ನೀ
ವೀವೊಲವಿಂದೆ ಪೂಣ್ದಿರೆನೆ ಮುಂ ತನಗುಳ್ಳ ಪದಾರಮಂ ಶಚೀ।

---

* ಖ.—ಎನ್ನಗೆಯ್ದಿ. † ಖ.—ಚಲಮುಪ್ಪಂತೆಂದನಿಂ ನೀನೆ ಪೊಣ್ಮಲದೇಂತಕ್ಕುಮೆ.

ದೇವಿಗೆ ನಿಚ್ಚ ವೆಚ್ಚೆತ್ತಿಯನೊಡರ್ಚುವುದಂ ನಗವೈರಿ ಪಾರಿಜಾ
ತಾವನಿಜಾತಮಂ ನಿಮಗೆ ಕೊಟ್ಟಪನೆಂಬುದಿದಲ್ತೆ ವಿಸ್ಮಯಂ ॥ ೨೦

ವ॥ ಅಂತುಮಲ್ಲದೆಯುದೊಂದುಸಮಯದೊಳ್ ಇಂದುಲೇಖಾ ಶೇಖರಂ ಗಿರೀಂದ್ರಕನ್ಯಾಸಮನ್ವಿತನಾಗಿ ಸುಚಿವಲ್ಲಿ ಸಂಕ್ರಂದನನಂದನವನ ಮಧ್ಯದೊಳನೇಕನಾಕಿಭಟರ ಕಾಪಿನಿಂ ಪೆಂಪುವೆತ್ತ ನಿಜಸಾರಭದೊಳ ಪೂರ್ವಾಕಾರದೊಳತಿಮನೋಹರವಾದ ಪಾರಿಜಾತಮನಗಜಾತೆ ಕಂಡು, ಕೌತುಕಂಬಟ್ಟು ಎಲೆ ದೇವಾ ಜಗತ್ತ್ರಯವಲ್ಲಭಾ ನಿಮಗೆ ವಲ್ಲಭೆಯಾಗಿರ್ದೆನಗಮಿಲ್ಲದಭೂತಪೂರ್ವಮಪ್ಪ ಪಾರಿಜಾತಮೆಂತಾಶಚಿಗೆ ದೊರೆಕೊಂಡುದು ಎನಗೀಮಹೀರುಹಮನಿತ್ತು ಮನದಚ್ಚೆಯಂ ಸಲಿಸ ವೇಳ್ಕುಂದೆಂದಾಗ್ರಹಂಮಾಡಲಾಚಂಡಿಯ ಮನಂಗೊಂಡಾಗ್ರಹಮನೆಂ ತಾನುಂ ಸಂತೈಸಿ ಕಳೆದಂ. ಅಂತುಮಾತ್ರಿಪುರಹರಂ ಮೊದಲಾಗಿ ಶಚೀ ಪತಿಯು ಪಾರಿಜಾತಮಂ ಕಳೆದುಕೊಂಡನಿಲ್ಲೆಂದು ಪೇಳ್ವುದುಮದಂ ಪುರುಷತ್ರಯಾತ್ಮಕಂ ಕೇಳ್ದು,

ಅಗಜೇಶಂಗೆ ಜಗತ್ತ್ರಯಪ್ರಭುಗದೇಗಾನಂ ಸುರೋರ್ವೀಜಮಂ
ನಗಜಾವಲ್ಲಭೆಗೀಯೆನಂದು ಮೊದಲೊಳ್ ಶಕ್ರಂಗೆ ತಾಂ ಕೊಟ್ಟುದಂ ।
ಮಗುಳ್ದಂ ಕೊಳ್ವುದು ಪೆರ್ಮೆಗಾವುಚಿತಮೆಂಬೀಮಾಟ್ಕೆಯಿಂದಂ *
ಮನಂ
ದೆಗೆದಂ ಪೋ ಪೆಱತಲ್ತು ನೀನುಮಱಿಯೈ ಕೇಳ್ದೀಶಸಾಮರ್ಥ್ಯಮಂ ॥ ೨೧

ವ॥ ಎಂದು ತತ್ಕಥಾಪ್ರಪಂಚಮಂ ಮಾಣ್ದು ಸಮನಂತರಂ ವಿರಿಂಚ ಸಂಭವಂಗಂಭೋಜನಯನನಿಂತೆಂದಂ:—

ಕೊಂದಾಭೌಮನನದಿತಿಗೆ
ತಂದಾಕುಂಡಲಮನಿತ್ತುದರ್ಕೆನಗೊಲವಿಂ ।
ದಂದೀವ ಮೆಚ್ಚ ನಗರಿಪು
ವಿಂದೀಗುಂ ಪಾರಿಜಾತಕುಜಮನವೋಘಂ ॥ ೨೨

* ಕ. ಗ,—ಪೆರ್ಮೆಯಿಂದಂ,

ವ॥ ಎಂದು ದೇವಕೀನಂದನಂ ನುಡಿಯೆ ವಿರಿಂಚನಂದನಂ ಕೇಳ್ದು ದೇವ ನೀವೆಪ್ಪುದುಚಿತವಚನಮಂ ನುಡಿದಿರ್; ಈಮಾತಂ ಪುರುಹೂತಂಗೆ ಪೇಲ್ದೊಡೆ,

ಎನ್ನಾಜ್ಞೆಗೆನ್ನಪದವಿಗ
ಮೆನ್ನ ರ್ಬಸಕೆಯ್ಯೆರಿಂತಿದೇವಿರಿದೆನಗಂ ।
ದೆನ್ನದೆ ನೀಂ ಗೆಯ್ದೊಳ್ಪಂ
ಮನ್ನಿಸಿ ಸುರಚಕ್ರಿ ಮೆಚ್ಚುಗುಡಲಱಿದಪನೇ ॥ ೨೩

ಮನುಜಂ ಕೃಷ್ಣಂ ದೇವೇಂ
ದ್ರನೆನಾನಂತರಮದಾವುದೆನ್ನೊಳ್ ತನಗಂ ।
ದನವಧಿಗರ್ವದೆ ಕುಡಲಱಿ
ವನೆ ನಿಮಗಾವಜ್ರಿ ಪಾರಿಜಾತದ್ರುಮಮಂ ॥ ೨೪

ಅನಲನ ತೇಜದಿಂ ಯಮನ ಸಾಹಸದಿಂ ದನುಪುತ್ರನಣ್ಮಿನಿಂ
ವನನಿಧಿನಾಥನುದ್ಧತಿಕೆಯಿಂ ಪವಮಾನನ ಶಕ್ತಿಯಿಂ ಕುಬೇ ।
ರನ ಬಲದಿಂ ಮಹೇಶನ ಮಹತ್ತ್ವದಿನಾರ್ಗಮಸಾಧ್ಯಮೆಂಬ ಬ
ಲ್ಪಿನೊಳಗಪ್ಪೆರಿ ನಿಮ್ಮ ವಿನಯೋಕ್ತಿಗೆ ತಾಂ ನಗದೇಕೆ ಮಾಣ್ಬನೈ * ॥

ಪಿಡಿವಂ ವಜ್ರಮನೆಂಬುದಗ್ರದಿವಿಜೇಭಾರೂಢನಾಗಿರ್ಪನೆಂ
ಬೆಡವಂಕಂ ಬಲವಂಕಮೆಂಬೆಡೆಗಳೊಳ್ ನಾಕಿವ್ರಜಂ † ಬರ್ಪುದೆಂ।
ಬೊಡನೇಕಾದಶರುದ್ರರಷ್ಟವಸುಗಳ್ ಪನ್ನಿರ್ವರಾದಿತ್ಯರುಂ
ನಡೆವರ್ ಸಂಗರಕೇಳಿಗೆಂಬೆಸಕದಿಂದುದ್ವೃತ್ತನಾವೃತ್ರಹಂ ॥ ೨೬

ವ॥ ಅದುಕಾರಣದಿಂ,

ಕುಡಲಱಿಯಂ ನಿಮಗೆಂತುಂ
ಬಿಡೌಜನಾಪಾರಿಜಾತಕುಜಮಂ ನೀವಿಂ ।
ತೆಡವಱಿಯದೆ ಪೂಣ್ದಿರ್ ಗಡ
ಬಿಡಿಮಿನ್ನಬ್ಜಾಕ್ಷ ನಿಮ್ಮ ಮನದಾಗ್ರಹಮಂ ॥ ೨೭

---

* ಗ—ಕುಡದೇಕೆ ಮಾಣ್ಬನೊ. † ಖ.—ಎಡವಕ್ಕಂ ಬಲವಕ್ಕಮೆಂಬೆಡೆಗಳೊಳ್ ನಾರೀವ್ರಜಂ.

ವ॥ ಎಂದು ನಾರದಂ ನುಡಿಯೆ,

ಪರಶೌರ್ಯೋತ್ಕರ್ಷಮಂ ಮೂಜ್ಜೀಣಕದ ನುಡಿಗಳ್ ಕರ್ಣಮಂ ತಾಗೆ ಕೋಪ
ಸ್ಫುರಿತಭ್ರೂಕೋಟಿಯುಂ ಕಂಪಿಸುವಧರಮುಮುತ್ಫುಲ್ಲನಾಸಾಗ್ರಮುಂ ನಿ।
ರ್ಝರಘರ್ಮಕ್ಲಿನ್ನಗಂಡಸ್ಥಳಮುಮರುಣನೇತ್ರಾಬ್ಜಮುಂ ಕಣ್ಗೆ ಗುರ್ವಾ
ಗಿರೆ ದೈತೇಯಾಂತಕಂ ಸಂಹೃತಿಸಮಯಮಹೋಗ್ರಾಂತಕಾಕಾರನಾದಂ॥

ವ॥ ಅಂತು ಶೌರಿ ವೀರಾವೇಶದಿಂದತಿಕ್ಷೋಭಮಂ ತಳೆದು, ಎಲೆ ನಾರದ ಕೇಳಮಗೆ ದೇವತೆಗಳೊಳ್ ಕಲಹಮನುಚಿತಮೆಂದು ಸದ್ಭಾವದಿಂ ನುಡಿದೆವಂತಲ್ಲದೊಡೆ, *

ಕುಡದಂದು ಪಾರಿಜಾತಮ
ನಡೆಗುಡದಿನ್ನಾಶಚೀಕುಚಕ್ರೀಡೆಗೆ ತಾ।
ನೆಡೆಗೊಳ್ಗುಂ ಕೌಮೋದಕಿ
ಬಿಡೌಜನತಿವಿಪುಳಮೆನಿಪವಕ್ಷಸ್ಸ್ಥಳಮಂ॥ ೨೯

ಈಯದೊಡೆ ಪಾರಿಜಾತಮ
ನೀಯದಮೋಘಂ ಸಿತಾತಪತ್ರಪ್ರಕರ।
ಚ್ಛಾಯೆಯನಸ್ತ್ರಪ್ರಕರ
ಚ್ಛಾಯೆಯನೀಗುಂ ನಿಳಿಂಪಚಕ್ರಿಗೆ ಶಾರ್ಙ್ಗಂ॥ ೩೦

ತ್ರಿದಶಪತಿ ಪಾರಿಜಾತ
ಪ್ರದನಾಗದೊಡಾಧಿಪತ್ಯಸವನಮದಿನ್ನಾ।
ಗದು ತನ್ನಗಾರಿಗಾಗಿ
ಪ್ಪುದು ಧಾರಾಖಡ್ಗಸವನಮಂ † ಮತ್ಖಡ್ಗಂ॥ ೩೧

* ಕ.–ಗ. ಅಂತುಮಲ್ಲದೆಯುಂ. † ಖ–ಗಾಗಿಪ್ಪುದಿದು ಧಾರಾರಕ್ತಸವನಮಂ

ಭೂರುಹಮಿದು ದಿವ್ಯಂ ಬಿಡ
ಬಾರದೆನಲ್ ದೇವರಾಜ್ಯಕಂಠಿಕೆ ತನಗಿಂ ।
ಬಾರದು ಬರ್ಕುಂ ತನ್ನಗ
ವೈರಿಯ ಕಂಠಕ್ಕೆ ಮತ್ಸುದರ್ಶನಚಕ್ರಂ ॥ ೩೨

ವ॥ ಎಂದು ನುಡಿದು, ಆದೇವಚಕ್ರವರ್ತಿ ವಿಕ್ರಮಾಕ್ರಾಂತಬಳ ನಮುಚಿ ಪಾಕ ಜಂಭ ಶಂಬರಾದಿನಿಳಿಂಪಾರಿಜಾತನೆಂಬಖರ್ವಗರ್ವದಿಂ ಪಾರಿಜಾತಮಂ ತರಲೀಯನೆಂಬುದುಮುಬ್ಬೆಗದಿಂ ಸತ್ಯಭಾಮೆಗಾಂ ಮಾಡಿದಪ್ರತಿಜ್ಞೆಯಂ ಮಾಣ್ದೆನಪ್ಪೊಡೆ, ಈಮಹೀಮಂಡಲಂ ರಸಾತಳಕ್ಕಿೞಿಯದೆಯುಂ ಕುಲಶಿಖರಿಗಳ್ ನೆಲೆಯಿಂ ತಳರದೆಯುಂ ಸಮುದ್ರಂಗಳ್ ಸೀಮೋಲ್ಲಂಘನಂಗೆಯ್ಯದೆಯುಂ ದಿಗ್ಗಜಂಗಳ್ ನಿಜಸ್ಥಾನಮಂ ಬಿಟ್ಟೋಡದೆಯುಂ ಚಂದ್ರಸೂರ್ಯ ಮಂಡಲಂಗಳ್ ಕಾಲಚಕ್ರನಿರ್ವರ್ತನದೊಳ್ ಅಪವರ್ತಿಸದೆಯುಂ ಎಂತು ಪ್ರಯುಕ್ತಂಗಳಾಗಿರ್ಪುವು ? ಎನ್ನ ವಚನವವ್ಯವಸ್ಥಿತಮಾದಂದೀಲೋಕವ್ಯವಸ್ಥೆಯುಂ ಕೆಟ್ಟುಪೋಕುಂ ಅದು ಕಾರಣದಿಂ ಮದೀಯ ಪಾರಿಜಾತ ಹರಣಪ್ರತಿಜ್ಞೆಯನೆಂತಾದೊಡಂ ಸಲ್ವಂತೆಮಾಡಿದಪ್ಪೆಂ ಈವೃತ್ತಾಂತಮಂ ನೀಮೆ ಪೋಗಿ ಪೇೞ್ದು ನೆಗೞ್ತೆವಡೆದೇಕಾದಶರುದ್ರರುಂ ದ್ವಾದಶಾದಿತ್ಯರುಂ ಅಷ್ಟವಸುಗಳುಂ ಅಷ್ಟಲೋಕಪಾಲಕರುಂ ಗರುಡ ಗಂಧರ್ವ ಸಿದ್ಧ ವಿದ್ಯಾಧರೋರಗ ಯಕ್ಷ ರಾಕ್ಷಸಕಿನ್ನರ ಕಿಂಪುರುಷಾದಿಸಮಸ್ತ ಮರುದ್ಗಣಂ ಬೆರಸೈರಾವತ ಗಜಸ್ಕಂಧಾರೂಢನುಂ ವಜ್ರಾಯುಧಕಲಿತಕರತಳನುಮಾಗಿ ನಾಳಿನದಿವಸಂ ದಿವಸೇಂದ್ರೋದಯಸಮಯದೊಳ್ ಆ ಮಹೇಂದ್ರನಂ ಸಂಗ್ರಾಮಕ್ಕೆ ಬರವೇೞ್ಕುಂ ಆವೆಮ್ಮ ಗರುಡನನೇಱಿಕೊಂಡೇಕಾಂಗದಿಂ ಬಂದಪೆವೆಂದಾನಾರದನನೆದಿವಿಜರಾಜಂಗೆ ದೂದಟ್ಟಿ,

ಸಮರೋತ್ಸವಲಬ್ಧಿಯಿನುಪ
ಶಮಿಸೆ ನಿಜಕ್ರೋಧಮತುಳಲೀಲೆಯಿನಿರ್ದಂ ।
ಕಮಲಾಕ್ಷಂ ಕಲದೊಳ್ ತ
ನ್ನ ಮನೋರಮೆ ಸತ್ಯಭಾಮೆಯಿರ್ಪಿನಮಾಗಳ್ ॥ ೩೩

ನೆಗೞುತ್ತಿರ್ದುದನಾಕುಳಂ ಮದನರಾಗಂ ಚಕ್ರಿಗಂ ಸತ್ಯಭಾ
ಮೆಗಮೀವಲ್ಲಭರಿಂಪಿನುತ್ಸವದೊಳತ್ಯುತ್ಸಾಹದಿಂ ಕೂಡುಗಾಂ ॥
ಪಗಲಂ ತೀರ್ಚುವನೆಂದತಿತ್ವರಿತದಿಂ ಪೋಪಂತೆ ಮಾರ್ತಂಡನ
ಸ್ತಗಿರೀಂದ್ರಕ್ಕಿೞಿದಂ ಮುಕುಂದವಸನದ್ಯೋತಾಪಹೃತಾತ್ಮಪ್ರಭಂ ॥ ೩೪

ವ॥ ಅನಂತರಂ,

ಮೃಗಮದಲಲಾಮದಿಂದಂ
ಬಗೆಗೊಳಿಸುತ್ತಿರ್ಪ ಸತ್ಯಭಾಮೆಯ ವದನೇಂ ।
ದುಗೆ ದೊರೆಯೆಂಬಿನಮುದಯಿಸಿ
ಮೃಗಧರಬಿಂಬಂ ವಿರಾಜಿಸಿತ್ತಂಬರದೊಳ್ ॥ ೩೫

ವ॥ ಆವಿಮಲಕುಮುದಿನೀಮಿತ್ರ ಮರೀಚಿ ಸುಧಾಧವಳಿತಮಾದ ರಾತ್ರಿಯೊಳ್ ಮಧುಸೂದನಂ ಸತ್ಯಭಾಮೆಯ ಸೂಳ್ಗೆವಂದು ಸುರತಾಮೃತಾರ್ಣವದೊಳೋಲಾಡಿ ಸುಖಸುಪ್ತಿಯಿಂದಿರ್ಪಿನಂ,

ಸುರರ್ಗೆ ಹಿತಾರ್ಥಮೆಂದಸುರರೊಳ್ ಹರಿ ಕಾದುವುದಲ್ತು ವಿಸ್ಮಯಂ
ಸುರರೊಳ್ ಕಾದುವಂದ * ಮಿದು ವಿಸ್ಮಯಮಾನಿದನಿಂದು ನೋೞ್ಪೆನಂ ।
ದಿರದನುರಾಗದಿಂದುದಯಿಪಂತುದಯಾದ್ರಿಯ ನೆಯ್ತಿಲೇರಿದಂ
ಸರಸಿಜಬಂಧುವೇೞ್ ವಿಜಯಾಂಗನೆ ಕೃಷ್ಣನ ಬಾಹುಪೀಠಮಂ ॥ ೩೬

ವ॥ ಆಸಮಯದೊಳಗಣ್ಯಪುಣ್ಯ ಪಾಠಕರ ಮಂಗಳಸ್ತವನಕಳಕಳಮನಾಲಿಸುತ್ತುಪ್ಪವಡಿಸಿ ನಿರ್ವರ್ತಿತನಿತ್ಯನಿಯಮನುಮಂಗೀಕೃತಮಂಗಳಾಭರಣನುಂ ವಿತರಣವಿಶೇಷತೋಷಿತವಂದಿವೃಂದನುಮಾಗಿ ಪುಂಡರೀಕಾಕ್ಷಂ ತಾರ್ಕ್ಷ್ಯನಂ ಸ್ಮರಿಸೆ,

ನಿಜಪಕ್ಷಾನಿಳನಿಂ ತೆರೆಳ್ದುಱೆ ಮೇಘಾನೀಕಮಾಕಾಶಸಿಂ
ಧುಜಳಂ ತುಳ್ಕೆ ರವೀಂದುಗಳ್ ಬೆದಱೆ ಪಾರಾವಾರದೊಳ್ ವೀಚಿಕಾ ।
ವ್ರಜಮುಜ್ಜೃಂಭಿಸೆ ಭೂತಳಂ ನಡುಗೆ ಶೈಲಶ್ರೇಣಿ ಬೇೞೇಪೆ † ವಿ
ಶ್ವಜಗತ್ ‡ ಕ್ಷೋಭಕರಸ್ವಭಾವಗತಿಯಿಂಬಂದಂ ವಿಹಂಗಾಧಿಪಂ ॥ ೩೭

* ಕ. ಗ.—ಸುರರೊಡಗಾದುವಂದ. † ಕ. ಖ. ಗ.—ಜೀಱೋಱೆ.

‡ ಖ.—ವಿಶ್ವಜನ.

ವ|| ಅಂತು ಬಂದು ದೇವಕೀನಂದನಂಗೆ ವಿನತಾನಂದನಂ ವಿನಯ ವಿನಮಿತೋತ್ತಮಾಂಗನಾಗಿ ಕೈಗಳಂ ಮುಗಿದು,

ತವೆ ದಿಕ್ಕುಂಡಾಲಮಂ ತುತ್ತುವೆ ದಶದಿಶೆಯಂ ಸುತ್ತುವಾಕಾಶಮಂ ಮು
ತ್ತುವ ಚಂದ್ರಾದಿತ್ಯರಂ ಮಿಾಂಟುವ ಕಡಲನಳುರ್ತೀರ್ಂಟುವಿಂದ್ರಾದ್ಯರಂ
ನೀಂ।
ಟುವ ಯಕ್ಷಾಧೀಶನಂಕಟ್ಟುವಜವನೆರ್ದೆಯಂಮೆಟ್ಟುವೀಶಂಗೆಬೂತ *
ಟ್ಟುವೆಗುರ್ವಂತೋಱಿದಪ್ಪಿಂಬೆಸಸುಬೆಸಸಿದೇನೆಂಬುದುಂಕೃಷ್ಣನೆಂದಂ||

ಅನುಪಮಮಮತರ್ಕ್ಯಮಗಣಿತ
ಮನಿವಾರಿತಮಲ್ತೆ ನಿನ್ನ ಸಾಹಸಗರ್ವಂ।
ವಿನತಾಪ್ರಿಯನಂದನ ನೀಂ
ಮುನಿದಂದಾವುದುಮಸಾಧ್ಯಮಲ್ತಿದನಱಿವೆಂ || ೩೯

ಸೆಱೆಯಿರ್ದ ನಿನ್ನ ಜನನಿಯ
ಸೆಱೆಯಂ ಬಿಡಿಸಲ್ ಮಹೇಂದ್ರನೊಳ್ ನೀಂ ಮುಂ ತ।
ಳ್ತಱಿದಮರ್ದಂ ತಂದೆಯೆನಲ್
ನೆಱೆ ಬಣ್ಣಿಪರಾರೊ ನಿನ್ನ ವಿಕ್ರಮಗುಣಮಂ || ೪೦

ವ|| ಎಂದಸುರಸೂದನಂ ಸಪ್ರಸಾದವಚನದಿಂ ನುಡಿಯೆ ಗರುಡಂ ಕೇಳ್ದು,

ದೇವರ ಸಾಮರ್ಥ್ಯದಿನೆ
ನ್ನೀವಿಕ್ರಮಮೆಸೆವುದರ್ಕತೇಜದಿನರ್ಕ।
ಗ್ರಾವದ ಕಾಯ್ಪೆಸೆವಂತಿರೆ †
ಭಾವಿಪೊಡೇನುಂಟೆ ಬೇಱೆ ವಿಕ್ರಮಮೆನ್ನೊಳ್ || ೪೧

ವ|| ಎನೆ ವೈನತೇಯನ ವಿನಯಭಾಷಿತಕ್ಕೆ ಮೆಚ್ಚಿ ಸಂತಸಮ ನಪ್ಪುಕೆಯ್ದು,

---

* ಖ.—ದೂತ † ಕ, ಗ.—ಕಾಯ್ಪೇಱುವವೊಲ್.

ಹರಿದರ್ಪಮನಪಹರಿಸಲ್
ಹರಿಪೀರದೆ ಹರಿಶತಪ್ರಭಂ ತಳರ್ದು ಮನೋ ।
ಹರಿಪರಸು ಹರಿ ಹರಿನ್ಮುಖ
ಭರಿತಾನಕನಿನದನೇಱಿದಂ ಖಗಪತಿಯಂ ॥ ೪೨

ಈದೇವಿಯು ಭೂಷಣರ
ತ್ನೋದಿತರುಚಿ ಬಳಸೆ ಪಂಚರತ್ನ ಪ್ರಭನಿಂ ।
ದಾದಂ ಗರುಡನನಲ್ ಪ
ದ್ಮೋದರನೊಡನೇಱಿ ದೇವಿ ಗರುಡನೊಳೆಸೆವಳ್ ॥ ೪೩

ಪ್ರಭವಿಸಿದುದು ಭಾನುಗೆ ಚಿ
ತ್ರಭಾನುವೆಸರೀಗಳನಿಸಿ ಪೀತಾಂಬರಕಾ ।
ಸ್ತುಭಶಂಖಚಕ್ರದೇಹ *
ಪ್ರಭೆಗಳ್ ತಳ್ಪೊಯ್ಯೆ ನಭದೊಳೆಸೆದಂ ಕೃಷ್ಣಂ ॥ ೪೪

ಆನಕಪೀಚಿರವಂ ಧ್ವಜ
ಮೀನಂ ಶೇಷಾಕ್ಷತಾಂಬುಕಣಮೆಸೆವ ಧರಾಂ ।
ಭೋನಿಧಿಯಿಂ † ಖಗರಾಜಂ
ವೈನಾಕಂ ನಾಕದತ್ತಲೊಗೆದಂತೊಗೆದಂ ॥ ೪೫

ವ॥ ಅಂತು ಖಗನಾಥಂ ಗಗನವೀಧಿಯೊಳತಿಕ್ರಮಿತ ‡ ಪವನ ಸ್ಕಂಧನಾಗಿ ಪೋಪಲ್ಲಿ,

ಅಡಕಿಲೊಂಡೂರ್ಧ್ವಲೋಕಪ್ರತತಿ ವಿಪುಲದೇವಾಲಯಂ ಚಂದ್ರ ಸೂರ್ಯರ್
ಸೊಡಗರ್ಗಳ್ ತಾರಾಳಿ ಪುಷ್ಪಂ ಸುರನದಿ ವಸುಧಾರಾಪ್ಲವಂ ದ್ವೀಪ ವೇಱಿಂ ।

---

* ಖ—ಚಕ್ರಗದಮ. † ಕ, ಗ.—ಮೊಗೆವಪರಾಂಭೋನಿಧಿಯಿಂ. ಖ.—ನೊಗೆವಸುಧಾಂಭೋನಿಧಿಯೆನೆ ಮೊ—ಅ.—ನೊಗೆವಸುಧಾಂಭೋನಿಧಿಯಿಂ.

‡ ಕ. ಗ.—ವೀಧಿಯಿಂದತಿಕ್ರಮಿತ.

ಕದಳೀಜಿಂ ವೃತ್ತಪೀಠಂ ಕನಕಗಿರಿ ಮಹಾಲಿಂಗಮೆಂಬಂತು ಚೆಲ್ವಂ
ಪಡೆದತ್ತೀವಿಶ್ವವಿಸ್ಮಾಪ್ಯರರಕಮಲಭೂಕಲ್ಪಿತಂ ಸತ್ಯಭಾಮೇ ॥ ೪೬

ವ॥ ಎಂದು ಪೇಳುತ್ತುಮತಿಬೇಗದಿಂ ಪೋಗಿ ವಸುದೇವನಂದನಂ ದೇವೇಂದ್ರನ ನಂದನಮನೆಯ್ದಿ ಪೊಕ್ಕು,

ತ್ರಿದಶಕುಜಾತಮೈದಱೊಳಮಿಂತಿದೆ ಪಲ್ಲವದಿಂ ಬೆಡಂಗಿನಿಂ
ತಿದೆ ನವಪುಷ್ಪದಿಂ ಸೊಬಗಿನಿಂತಿದೆ * ಸೌರಭದಿಂ ಮನೋಜ್ಞಮಾ ।
ಯ್ತಿದಱ ವಿಲಾಸಮೀತರುಚತುಷ್ಕದೊಳಾವುದೊ † ಪಾರಿಜಾತಮಿಂ
ತಿದೆ ಪೆಱತಲ್ಲಮೆಂದಱಿಪಿ ತೋಱಿ ದನಾ ‡ ಪ್ರಿಯೆಗಾಮಹೀಜಮಂ ॥ ೪೭

ವ॥ ಅಂತು ತೋಱಿ ಸಂತಮಿರದೆ ¶

ಕೆಲರಂ ಚಕ್ರವಿಘಾತದಿಂ ಕೆಲರನುತ್ಕೌಮೋದಕೀಘಾತದಿಂ
ಕೆಲರಂ ಶಾರ್ಙ್ಗವಿಮುಕ್ತ ಬಾಣಹತಿಯಿಂ ಕೊಂದಿಕ್ಕಿ ಕಾದಿರ್ದದೋ ।
ರ್ಬಲಗರ್ವೋದ್ಧತರಂ ಮುರಾರಿ ವಿಜಯಶ್ರೀ ನೋಟ್ಪವೋಲ್ ಸತ್ಯಭಾ
ಮೆ ಲತಾಕೋಮಳೆ ನೋಟ್ಪಿನಂ ಕಳೆದುಕೊಂಡಂ ಪಾರಿಜಾತದ್ರುಮಂ॥೪೮

ವ॥ ಅಂತು ಪಾರಿಜಾತದ್ರುಮಮಂ ಕಳೆದುಕೊಂಡುಮಾಖಂಡಲಂಗೆ ಭಂಗಮಂ ಕುಡದೆ ಪೋಗಲೊಲ್ಲೆನೆಂದು ಸಮರಾಮಂತ್ರಣಾರ್ಥಂ ಪಾಂಚಜನ್ಯಶಂಖಮಂ ಪೂರೈಸೆ,

ನೆರವಂ ಪೇಳುರಗೇಂದ್ರ ನಿನ್ನಿರಗರಂ ದಿಕ್ಪಾಲಕಶ್ರೇಣಿ ನೀಂ
ನೆರವಾಗೇಂ ಪಡಿವಾತೆಲೇ ರವಿಯೆಲೇ ಮಾದೇವಲೇ ಬೊಮ್ಮ ಕೇ ।
ಳ್ದಿರೆ ನೀಮುಂ ನೆರವಾಗಿಮಾಕುಲಿಶಿಗೆಂತುಂ ಗೆಲ್ವನೇಕಾಂಗದಿಂ
ಮುರವಿಧ್ವಂಸಕನೆಂದು ಸಾಱುವವೊಲಾಯ್ತಾ ಪಾಂಚಜನ್ಯಸ್ವನಂ ॥ ೪೯

ವ॥ ಅನ್ನೆಗಂ ಪನ್ನಗಾರಿವಾಹನ ಬಾಹು ನಿಹತಶೇಷಾನಿಮಿಷವನ ಪಾಲಕರ್ ಪೌಲೋಮಿಯ ಸಮೀಪಕ್ಕೆ ಪೋಗಿ

---

* ಕ. ಗ.—ಸುಭಗಮಿಂತಿದೆ.

† ಕ. ಗ.—ಲಕ್ಷಿಸ. ‡ ಕ. ಗ.—ತೋಱಿ ನಿಜ.

¶ ಕ. ಗ.—ಮತ್ತಮಿರದೆ.

ತನಗೇಕಗ್ಗದ ಪಾರಿಜಾತಮಹಿಜಂ ಪೌಲೋಮಿಗಾಂ ವೀರಕಾ
ಮಿನಿಯೆಂ ರೂಪಿನೊಳಗ್ಗಳಂ ಸೊಬಗಿನಿಂ ಮೇಲೀಕುಜಂ ಯೋಗ್ಯವಿ।
ನ್ನೆನಗೆಂಬಂದದೆ ಸತ್ಯಭಾಮೆ ಪತಿಯಂ ದೈತ್ಯಾರಿಯಂ ತಂದು ದೇ
ವಿ ನಿಜೋದ್ಯಾನದ ಪಾರಿಜಾತತರುವಂ ಕೈಕೊಂಡಳುತ್ಸಾಹದಿಂ ॥ ೫೦

ವ॥ ಎಂದು ಬಿನ್ನವಿಸಲತಿಕುತೂಹಲಾಕುಲಿತೆಯಾಗಿ,

ಸ್ತನಕಂಪತ್ರುಟ್ಯದೇಕಾವಳಿ ಗತಿಜವನಿರ್ಮುಕ್ತಮಂಜೀರಮಾಂದೋ
ಲನಭಾರವ್ಯಸ್ತ * ಕರ್ಣೋತ್ಪಲಮವಿರಳಘರ್ಮಾಂಬುಧೌತಾಂಗರಾಗಂ।
ಘನಸೋಷ್ಣಶ್ವಾಸಲೋಲಾಳಕಮದ್ಲಥಕಚಸ್ರಸ್ತಮಾಲ್ಯಂ ಭಯಂಮಾ
ೞ್ಪನೆಗಂ ಪೌಲೋಮಿ ಬಂದಳ್ ಕುಲಿಶಿಗಪಜಯಶ್ರೀಯೆ ಬರ್ಪಂದದಿಂದಂ ॥

ವ॥ ಅಂತು ಬಂದು ಸಭಾಂತರಾಳದೊಳರ್ದ ನಿಜಕಾಂತನಂತಿಕಮಂ ಪೊರ್ದಿ,

ಎನಗತಿಖೇದವಪ್ಪಿನೆಗಮಿಂದು ಪದಾರ್ಥವಿಹೀನವಾಯ್ತು ನಂ
ದನಮುಮರೌಘವಿಂದಫಲವಾಂಛಿತವಾದುದಸಾರವಾದುದಿಂ।
ದನಿಮಿಷಲೋಕಮಿಂದು ನಿಜಕೀರ್ತಿಮಲೀಮಸವಾಯ್ತಲೇ ಸುಧಾ
ಶನಪತಿ ಪಾರಿಜಾತಹರಣಂ ಮುರವೈರಿಯಿನಾದ ದೂಸಱಿಂ ॥ ೫೧

ವ॥ ಎಂಬುದುಂ ಶಚೀನಾಥನಾತ್ಮಗತದೊಳ್ ಬಗೆದು ನೋಡಿ ನಾರದಂಕದನದೂತನಾಗಿ ಬಂದಱಿಪಿದ ಕಾರ್ಯಪ್ರಪಂಚವೀಳ್ಗ ಪಾಂಚಜನ್ಯರವದೊಳಂ ಶಚಿಯ ಪುಯ್ಯಲೊಳಂ ವಿದಿತಮಾದುದೆಂದು ಕದನೋದ್ಯೋಗದಿಂ ಕುಪಿತಚಿತ್ತನಾಗಿ ಬೃಹಸ್ಪತಿಯ ಮೊಗಮಂ ನೋಡೆ,

ಕಲಹಕ್ರೀಡೆಗೆ ಬಂದನಾವನಱಿವೈ ತ್ರೈಲೋಕ್ಯಸೃಷ್ಟಿಸ್ಥಿತಿ
ಪ್ರಲಯೈಕಕ್ಷಮನಾಮಹಾವಿಭುಗೆ ಲೀಲಾಮಾತ್ರಮೀದೇವಮುಂ।

* ಕ.ಗ.—ಭಾರಧ್ವಸ್ತ.

ಡಲವೆಂ ಗೆಲ್ವುದಿದರ್ಕೆ ದೇವ ಕಲಹಂ ಬೇಡುತ್ತಮಾಂಗಸ್ಥಿತಾಂ
ಜಲಿಯಾಗೀಗಳ ಪೋಗಿ ನೀನ ಕುಡು ಕೃಷ್ಣಂಗಾಮರುದ್ಭೂಜಮಂ ॥೫೩

ವ॥ ಎಂದು ಸುರಪುರೋಹಿತನಾಗಾಮಿಕಾರ್ಯಮಂ ಪೇೞಲಾ
ಯೋಧನಪುನಸ್ಸಂಧಾನವಿಶಾರದಂ ನಾರದನಿಂತೆಂದಂ —

ದಿವಿಜಾಧೀಶನನೊಂದೆ ಮೆಯ್ಯೊಳ್ ಮುಕುಂದಂ ಗೆಲ್ವನೆಂಬುಕ್ತಿಯು
ಕ್ತಮೆ ವಾಚಸ್ಪತಿ ನೀಂ ಬಳಾಬಳವಿಚಾರಂಗೆಯ್ಯದೇನೆಂಬೆವಾ ।
ಸವನೊಳ್ ಬೆಂಬಲವಪ್ಪ ವೀರರಮರರ್ ತಾಮಲ್ಲರೇ * ಶಕ್ರನೇ
ಅುವುದೈರಾವತಮಲ್ಲವೇ ಕುಲಿಶಿಗಸ್ತ್ರಂ ವಜ್ರಮೇನಲ್ಲವೇ ॥ ೫೪

ವ॥ ಅಂತುಮಲ್ಲದೆ,

ತ್ರಿದಶಾಧೀಶ್ವರಸಂಪದಂ ಸಫಲಮಾಪೌಲೋಮಿಯಿಂ ಪಾರಿಜಾ
ತದಿನೀದಿವ್ಯಪದಾರ್ಥಯುಗ್ಮದೊಳಗಿಂದೊಂದಂ ಮುಕುಂದಂಗೆ ಬ ।
ಲ್ಲಿದನೆಂದೀವುದೆ ಪಾರಿಜಾತಮನಿದೇಂ ಪೌಲೋಮಿಯುಂ ನಾಳೆ ಬ
ಲ್ಲಿದರಾರಾನುಮಪೇಕ್ಷೆಗೆಯ್ಯಲವರ್ಗೀಯಲ್ವೇೞ್ಕುಮೆಂಬಂದಮೇ ॥೫೫

ವ॥ ಎಂದು ನುಡಿದ ನಾರದನ ನುಡಿಗನುಗುಣಮಾಗಿ ವಿಬುಧ
ಮಂತ್ರಿಯುಂ ಮಾರ್ಕೊಂಡು,

ಬಗೆದಂದೀ † ಪೆಂದೆಗಜ್ಜಂಗಳನಱಿಪುವ ನಿನ್ನುಕ್ತಿಯಂತಿರ್ಕೆ ದೈತ್ಯಾ
ರಿ ಗಡಂ ಮಾಱಾಂತು ಬಂದಂ ‡ ಗಡ ಸುರಕುಜಮಂ ಸತ್ಯೆಗಿತ್ತಂ
ಗಡಂ ಕಾ ।
ದಿ ಗಡಂ ಗೆಲ್ವಂ [1] ಗಡೆಮ್ಮಂ ಗಡವೆಮಗೆ ಗಡಂನೀಂಗಡಂ ಬುದ್ಧಿ ವೇೞ್ದ
ಪ್ಪೆ ಗಡಂ ದೇವೇಜ್ಯ [2] ನಲ್ಲಿಂ ¶ ಯದುಕುಲಕುಟಿಲಂಗಾನಲಾವಾವೆ
ಸಾಲ್ವಂ § ॥ ೫೬

---

* ಖ.—ತಾಮಲ್ಲವೇ.
† ಕ. ಗ.—ಬಗೆಗೆಂದುಂ. ‡ ಖ.—ಪೂಣ್ದಂ.
¶ ಕ. ಗ. 1 ಗಡಂನೀಂಗಡಮನಗಗಡೀಗಳ್‌ಗಡಂ. 2 ನಿಲ್ಲೀ.
§ ಕ. ಗ ಸಾಲ್ವೆಂ, ಖ —ಸೋಲ್ವೆಂ.

ವ॥ ಎಂದು ನುಡಿದು,

ನೆರೆದಾಶಾಧೀಶರಲ್ಲಲ್ಲಿಗೆ ಕೆಳದುರ್ ಸಿಡಿಲ್ದೇಱುತಿರ್ಪಲ್ಲಿ ತತ್ಸಂ
ಗರಕೇಳೀಲೋಲದಿಕ್ಪಾಲಕರ ಕಟಕಕೋಟೀರಕೇಯೂರಹಾರೋ ।
ತ್ಕರದಿಂದನ್ಯೋನ್ಯಸಂಘಟ್ಟದೊಳ್ ಸಿಡಿವ ಮಾಣಿಕ್ಯಸಂದೋಹಮಾವೀ
ರರ ಕೋಪೋಗ್ರಾನಲಜ್ವಾಲೆಯ ಕಿಡಿಯೆ ಸಿಡಿಲ್ವಂತೆಗುರ್ವಾದು
ದೆತ್ತಂ ॥ ೫೩

ಆಳ್ಱ್ದು ಗರ್ಜಿಪಾಶಾ
ಪಾಳರ ಕಣ್ಮಲರ ಕೆಂಪು ಪರ್ವಿದುದಾದಿ ।
ಕ್ಪಾಳರ ವೀರರಸಾಬ್ಧಿಯ
ವೇಳಾವಿದ್ರುಮದ ಕೆಂಪಿದೆನೆ ತತ್ಸಭೆಯುಂ * ॥ ೫೪

ವ॥ ಆಸಭಾಕ್ಷೋಭಸಮಯದೊಳಾಹವಕ್ಷುಭಿತನಾಗಿ † ಸುರಪತಿ ಗುರೂಕ್ತಿಯಿಂ ಸಂದಿಗ್ಧಸಮರೋದ್ಯೋಗನಾಗಿರ್ದುದನಱಿದು ನಾರದಂ ಶಚೀವದನಮಂ ನೋಡಿ,

ಪ್ರಾಕೃತಮರ್ತ್ಯನಾದ ಹರಿ ಪೂಣ್ದು ಗಡಂ ನಿಜಕಾಂತೆಗಿತ್ತನೀ
ನಾಕಮಹೀಜಮಂ ಪಿಱಿದುಮಾತನ ಶೌರ್ಯಮಿದಲ್ತು ವೈಮವೆ ।
ತ್ತಾಕೆಯ ತೋಳ್ ಸೋಂಕಿನ ಗುಣಂ ಗತಭಾಗ್ಯೆಯ ನಿನ್ನ ತೋಳ್ ಸೋಂ
ಕೀಕುಲಿಶಾಸ್ತ್ರನಿಂ ತೊಲಗಿಸಿತ್ತು ನಿಸರ್ಗದ ಶೌರ್ಯಮಂ ಶಚೀ ॥ ೫೫

ವ॥ ಎಂದು ಮುಟ್ಟೆ ‡ ಮೂದಲಿಸೆ ಕಟ್ಟೇವದಿಂ ಶಚೀದೇವಿ ದೇವರಾಜ ನಿದಿರೊಳ್ ನಿಂದು,

ಅನಿಮೇಷಾನೋಕಹಂ ಪೋದುದನಱಿದು ಗಡಿನ್ನುಂ ನಿಳಿಂಪೇಭಪೂರ್ವಾ
ಸನದೊಳ್ ಕಾಲ್ಗೆಯ್ಯದಿನ್ನುಂ ¶ ನಿಜಕುಲಿಶಮಹಾಸ್ತ್ರಕ್ಕೆ ಕೈನೀಡ
ದಿನ್ನುಂ ।

---

* ಖ.—ತತ್ಸಭೆಯೊಳ್. † ಖ.—ಸಮಯದೊಳವಕ್ಷೋಭಿತನಾಗಿ.
‡ ಖ.—ಮುಟ್ಟ ¶ ಕ.—ಕಾಲ್ಗೆಯದಿನ್ನುಂ. ಖ—ಕಾಲ್ಗೊಯ್ಯದಿನ್ನುಂ, ಮೊ—ಅ.—ಕಾಲ್ಗೊಯ್ಯದಿನ್ನುಂ.

ಮುನಿಸಿಂ ಮೇಲೆತ್ತಿದನ್ನಂದನುಜರಿಪುವಿನೊಳ್ ಕಾದದೇಕಿರ್ಪೆ ಸಂಕ್ರಂ
ದನ ನೀಂ ಪೌಲೋಮಿಯುಪ್ಪಿನ್ನಧಿಪನೆನಿಸಿ ಬನ್ನಕ್ಕೆ ಮುಯ್ಯಾಂತು
ನಿಲ್ವೈ ‖೬೦

ವ॥ ಎನೆ ಕುಲಿಶಧರನಾಂಗಿರಸನತ್ತಲವಲೋಕನಂಗೆಯ್ದು, *

ದಿವಿಜಮಹೀಜಮಂ ಮನುಜನುಯ್ದೊಡೆ ಸೈರಿಸೆ ಪುಟ್ಟುಗುಂ ಪರಾ
ಭವವೆಮಗಱಿಂದಮಿಾಮುನಿಪನೀಸುರರೀಶಚಿದೇವಿಯೆಂದ ಕ ।
ಜ್ಜವೆ ಬಗೆವೊಕ್ಕುದಿನ್ನೆಮಗೆ ಸಾಮದ ಭೇದದುಪಪ್ರದಾನದೊಂ
ದವಸರಮಲ್ತು ದಂಡಮೆ ದಲುದ್ಯಮಮಿಂಪೆಱಪಿಂಗಿರಂಗಿರಾ † ‖ ೬೧

ವ॥ ಎಂದು ರಣರಸಾಡಂಬರಮನಳವಡಿಸಿದಾಗಳ್,

ಅಸಮ ಕ್ರೋಧಕ್ಕೃಶಾನು ಪೆರ್ಚೆ ಮನದಿಂ ಸರ್ವಾಂಗಮಂ ಕೂಡೆ ಭೇ
ದಿಸಿ ಪೊಣ್ಮಿರ್ದುದು ತಚ್ಛಿಖಾಶಕಲದುರ್ಬೆಂಬಂತೆ ಕೆಂಪೇಱಿದ ।
ಕ್ಷಿಸಹಸ್ರಂ ರುಧಿರೋಕ್ಷಿತಾಕ್ಷತ ‡ ಸಹಸ್ರಾಕಾರದಿಂ ತನ್ನೊಳು
ರ್ವಿಸೆ ಯುದ್ಧಾಪಜಯಕ್ಕೆ ಪಕ್ಕುಗುಡುವಂತಿರ್ದಂ ಸಹಸ್ರಾಂಬಕಂ‖೬೨

ವ॥ ಆಪ್ರಸ್ತಾವದೊಳ್,

ವಿಲುಠದ್ಘಂಟಾಪಟಿಷ್ಠಧ್ವನಿಬಧಿರಿತದಿಙ್ಮಂಡಲಂ ಕರ್ಣತಾಳಾ
ನಿಲಲೋಲದ್ವೀಚಿಮಾಲಾಂಬರಸರಿದುದಕಂಪುಷ್ಕರೋಚ್ಚಾಟನವ್ಯಾ।
ಕುಲಿತಬ್ರಹ್ಮಾಸನಾಂಭೋರುಹಮತಿವಿತತಾಯೋಗರತ್ನಪ್ರಭಾಪಿಂ
ಗಲಿತಸ್ವರ್ಗಾಂತರಾಳಂ ಹಿಮಗಿರಿಧವಳಂ ಬಂದುದಿಂದ್ರದ್ವಿಪೇಂದ್ರಂ‖೬೩

ವ॥ ಅನಂತರಂ,

ದ್ವಿರದಮನಿಂದ್ರನೇಱೆ ಶಿಖಿ ಮೇಷಮನೇಱಿದನೇಱಿದಂ ಯಮಂ
ಪುರುಷಲುಲಾಯಮಂ ನಿಋತಿ ಮರ್ತ್ಯನನೇಱಿದನೇಱಿದಂ ಜಲಾ ।

* ಕ. ಗ.—ಆಂಗೀರಸನತ್ತಲಾಲೋಚನಂಗೆಯ್ದು.

† ಖ.—ಪೆಱತಿಲ್ಲನಿಶ್ಚಯಂ. ‡ ಕ.—ರುಧಿರಾಕ್ಷತಕ್ಷಕ.
ಖ.—ಸಮರಕ್ಷತಾಕ್ಷತ. ಗ.—ರುಧಿರಾಚ್ಛ್ಯತಕ್ಷಕ.

ಕರಪತಿ ನಕ್ರಮಂ ಪವನನೇಱನನೇಱಿದನೇಱಿದಂ ಸುಧಾ
ಕರಧರಬಂಧು ಪುಷ್ಪಕಮನೇಱಿದನಿಂದುಧರಂ ವೃಷೇಂದ್ರನಂ ॥ ೬೪

ದೊರೆಯಾದರ್ ಭೋಗದಿಂದಿಂದ್ರನೊಳನೆ ಕೃತಕೃತ್ಯರ್ ವಿರಿಂಚಾದಿ ದೇವರ್
ಚರಿತಾರ್ಥರ್ ಕಾರ್ತವೀರ್ಯಪ್ರಭೃತಿನೃಪರೆನಲ್ ಪೊಗ್ಗೆ ಸಾಕ್ಷಾತ್ಸುರಾಧೀ।
ಶ್ವರಭೋಗಂ ನೋಡೆನಲ್ ಘೂರ್ಣಿಸೆ ಬಹುಕಹಳಾಶಂಖಭೇರೀರವಂ ತ
ಳ್ತಿರೆ ನಾನಾಚ್ಛತ್ರಷಂಡಂ ಬಳಸಿ ಬರೆ ಮರುತ್ಸೇನೆ ಬಂದಂ ಮಹೇಂದ್ರಂ॥

ವ॥ ಅಂತು ಬಂದು ಸಂಗ್ರಾಮರಂಗದೊಳೊಡ್ಡಿ ದೊಡ್ಡಣದ ಸುರಸೈನ್ಯನಿಕರಮಂ ಬೇಱವೇಱ ಪೆಸರ್ವೆಸರೊಳ್ ಸತ್ಯಭಾಮೆಗೆ ತೋಱಲೆಂದು ಸರೋಜನಾಭನಿಂತೆಂದಂ :—

ವಿಶದಶ್ವೇತಾತಪತ್ರಾವಳಿವಿಳಸಿತನಾಗಿರ್ಪ ಕೋಟೀರರತ್ನಾಂ
ಶುಶಿಖಾಕಿರ್ಮ್ಮೀರಿತೋದ್ಯಚ್ಚಮರಜಪವನಾಂದೋಲತಾಟಂಕ * ನಾಗಿ।
ರ್ಪ ಶಚೀಸಂಯುಕ್ತನಾಗಿರ್ಪಿಭಮನಣೆದು ಬಿಟ್ಟಕ್ಕಲೆಂದಿರ್ಪ ವಜ್ರಾಂ
ಕುಶಮಂ ನಾನಾಪ್ರಕಾರಂ ಪೊಳೆಯೆ ಪೊಳೆಯಿಸುತ್ತಿರ್ಪವಂ ದೇವ ರಾಜಂ ॥ ೬೫

ಜಗಮೀರೇೞುಮದೊಂದುಪುಲ್ಗಡಿಸಿಲಂತಳ್ಕಾಡೆ † ಕಲ್ಪಾಂತದೊಳ್
ನೆಗೆವೊಂದಗ್ನಿಯೊಳಿಂತಿದೊಂದೆಸಕಮಿಲ್ಲೆಂಬನ್ನೆಗಂ ಹೇಮವಾ।
ಳಿಗಭಸ್ತ್ರಿಚ್ಛಲದಿಂ ದೃಢಭ್ರುಕುಟಿರೇಖಾವ್ಯಾಜದಿಂ ಜ್ವಾಲೆಯುಂ
ಪೊಗೆಯುಂ ತಳ್ತೊಗೆವೀಶಿಖಾಸ್ತ್ರಕರನೀಮೇಷಸ್ಥಿತಂ ಪಾವಕಂ ॥ ೬೬

ಭ್ರುಕುಟೀಬದ್ಧಾಂಧಕಾರಂ ನಿಜತನುರುಚಿಯುಂ ಗೆಲ್ವನೇತ್ರಾರುಣಾಂಶು
ಪ್ರಕರಂ ಮಾಣಿಕ್ಯಮಾಳಿದ್ಯುತಿಗೆ ಮಲೆವ ದಂಷ್ಟ್ರಾಸ್ಫುಲಿಂಗೋತ್ಕರಂ ಕೋ।

---

* ಖ—ಮಾಲಾಂಕ. † ಖ—ಮನೊಂದೆಪುಲ್ಗಿಡಿ ಸಿಡಿಲ್ದಳ್ಕಾಡೆ.

ಪಕೃಶಾನೂಳ್ಕಾಳಿಯುಂ ತೂಳ್ದುವ ಮಹಿಷಮನೇಱಿರ್ದ ದಂಡಾಯುಧಂಗೊಂ
ಡಕರಾಳಸ್ವಾಂತನುಜ್ಜೃಂಭಿತರಣರಭಸಭ್ರಾಂತನೀತಂ ಕೃತಾಂತಂ ॥೬೮

ಕುಡುಮಿಂಚೆಂಬಂತು ದಂಷ್ಟ್ರಾವಳಿ ಪೊಳೆಯೆ ಸಿಡಿಲ್ಗೆಂಡವೆಂಬಂತು ಕಣ್ಗಳ್
ಕಡುಗೆಂಪಂ ತಾಳ್ದೆ ಸಂವರ್ತನಜಲಧರವೆಂಬಂತು ರೂಪ್ಪೊಂದಗುರ್ವಂ ।
ಕುಡೆರೌದ್ರಂಬೆತ್ತು ಕಾಯ್ಪೇಱುವ ಸಮರರಸೋದ್ರೇಕದಿಂ ಮುದ್ಗರಾಸ್ತ್ರಂ
ಬಿಡಿದುಗ್ರಾಟೋಪಮಂ ಬೀಱುವ ನರರಥದೊಳ್ ತೋಱುವೀತಂ ನಿಶಾಟಂ ॥ ೬೯

ವಿಪುಳಕ್ರೋಧಾನಳೌರ್ವಂ ಭ್ರುಕುಟಿತಿಮಿರವೇಳಾತಮಾಲಂ ಲಲಾಟ
ತ್ರಿಪತಾಕಾವೀಚಿ ರಕ್ತೇಕ್ಷಣರುಚಿಪಟಳೀವಿದ್ರುಮಂ ನಿರ್ಗಳತ್ಸ್ವೇ ।
ದಪಯಃಪೂರಂ ವಿಭೂಷಾಮಲಮಣಿಗಣನಾಗಿರ್ದ ತನ್ನೊಳ್ ಸಮುದ್ರಾ
ಧಿಪತಿತ್ವಂ ಸಂದ ಪಾಶಾನ್ವಿತನುರುಮಕರಾರೂಢನೀತಂ ಪ್ರಚೇತಂ ॥೭೦

ಗಿರಿಕುಲಮಂ ತೆರಳ್ದುಱೆ ಪಾರಿಸುವಬ್ಧಿಯನೊಂದನೊಂದಱೊಳ್
ಬೆರಸುವ ಧಾರಿಣೀವಲಯಮಂ ಕವಿದಿಕ್ಕುವ ತನ್ನ ಲೋಕಸಂ ।
ಹರಣದ ವೇಗದಿಂದೆಸೆಯೆ ಚಿತ್ರ*ವಿಭೂಷಣನೇತ್ರರಾಗದಿಂ
ಕರತರುವೆತ್ತಿ ಪಲ್ಲವಿಸುವೀ †ಮೃಗವಾಹನಿವಂ ಪ್ರಭಂಜನಂ ॥ ೭೧

ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀ
ಕ್ಷಣದಿನೆನಲ್ ರಣಪ್ರತಿಘದಿಂ ಕದಪಿಂದೊಗೆತರ್ಪ ಘರ್ಮವಾಃ ।
ಕಣತತಿ ನೇತ್ರದಿಂ ನಗೆಪ ರಾಗಮಗುರ್ವಿಸುವೀವಿಳಾಸಭೂ
ಷಣ ‡ ಮೆನಿಸಿರ್ದ ಪುಷ್ಪಕವಿಮಾನಮನೇಱಿದವಂ ಧನೇಶ್ವರಂ ॥ ೭೨

---

* ಕ. ಗ.—ರತ್ನ. † ಕ. ಗ.—ಕರತಲಹೇತಿಪಲ್ಲವಕುಜಂ.
‡ ಕ.—ಗಳಾವಿಭೂಷಣ. ಗ.—ಗಳಾವಿಭೀಷಣಂ.

ದೀಪ್ರತರಂ ತೃತೀಯನಯನಾರ್ಚಿ ಕಿರೀಟಭುಜಂಗಭೋಗರ
ತ್ನಪ್ರಕರಾರ್ಚಿಯಂತೆ ನಿಟಿಲತ್ರಿಪತಾಕೆ ಕರತ್ರಿಶೂಲಹೇ ।
ತಿಪ್ರತಿಬಿಂಬದಂತೆ ತನುದೀಧಿತಿ ರೌದ್ರರಸಾಂಬುರಾಶಿಫೇ
ನಪ್ರಭೆಯಂತಗುರ್ವಿಸುವ ಶಾಕ್ವರವಾಹನನೀತನೀಶ್ವರಂ ॥ ೨೩

ಇವರಾಶಾಧಿಪರೀ ದಿಶಾಧಿಪರೆ ಸೇನಾನಾಯಕರ್ ದೇವದಾ
ನವವಿದ್ಯಾಧರಸಿದ್ಧ ಸಾಧ್ಯಫಣಭೃದ್ಗಂಧರ್ವಯಕ್ಷಾದಿವೀ ।
ರವರರ್ ನೋಡಿವರಿತ್ತಲೀನರೆದು ನಿಂದರ್ ದ್ವಾದಶಾದಿತ್ಯರಿಂ
ತಿವರೇಕಾದಶರುದ್ರರಷ್ಟವಸುಗಳ್ ಮತ್ತಿತ್ತಲೀತೋರ್ಪವರ್ ॥ ೨೪

ವ॥ ಎಂದು ತೋಱಿ ನಿಜಭುಜಾವಷ್ಟಂಭಮಂ ತೋಱಲೆಂದು ಶಾರ್ಙ್ಗ ಶರಾಸನಮನೇಱಿಸಿ ನೀವಿ ಜೇವೊಡೆಯೆ,

ಪವಿನಿರ್ಘೋಷೋಪಮಾನಂ * ಪ್ರಳಯಘನಘಟಾಗರ್ಜನಾಭಂ ಮಹಾಭೈ
ರವದುರ್ವಾರಾಟ್ಟಹಾಸಪ್ರತಿನಿಧಿ ಯಮಬಾಹಾಪರಿಸ್ಫಾಲನಪ್ರ ।
ಖ್ಯವೆನಲ್ ಧೂತಾಹಿಲೋಕಂ ಭ್ರಮದವನಿತಲಂ ಪ್ರೋಚ್ಚಲದ್ವಾರ್ಧಿನಿರ್ಭಿ
ನ್ನವಿರಿಂಚಾಂಡಂ ಪೊದಱ್ದತ್ತಸುರರಿಪುಧನುರ್ದಂಡಚಂಡಪ್ರಣಾದಂ ॥ ೨೫

ವ॥ ತದನಂತರಂ

ಬಲರಿಪು ಬಾಣಾವಳಿಯಂ
ಬಲವೈರಿಯ ಬಲದ ಮೇಲೆ ಕಱೆದಂ ಗಗನ ।
ಸ್ಥಲಿ ಮಸೆವಿಸಿಲಿಂ ಕಣೆಗ
ಟ್ಟಲೆಯಿಂ ಕೆಂಗರಿಯ ಸಂಜೆಯಿಂ ತೀವುವಿನಂ ॥ ೨೬

ಮಾಲೆಗೊಳುತ್ತು ಮೊತ್ತರಿಸಿ ಪಾಯ್ವ ಸರಲ್ಗಳಿನುಣ್ಮಿ ವಿಸ್ಫುಲಿಂ
ಗಾಲಿ ಬರಲ್ † ಸರಲ್ಮಳೆ ಸಿಡಿಲ್ಮಳೆಯಂ ಗೆಲೆವೆಂದುದೆಂಬಿನಂ ।

---

* ಖ—ನಿಶ್ಶೇಷೋಪಮಾನಂ. † ಕ.ಗ.—ವಿಸ್ಫುಲಿಂಗಾಳಿಸರಲ್. ಖ.—ವಿಸ್ಫುಲಿಂಗಾವಳಿಯಿಂ.

ಶೈಲಧರಂ ಕಱುತ್ತು ಕಱೆಯುತ್ತಿರೆ ಮಾರ್ಗಣವೃಷ್ಟಿಯಂ ಲಯ
ಜ್ವಾಲಶಿಖಾಳಿಯಂತೆ ವಿಶಿಖಾಳಿಗಳುರ್ಚಿದುವಿಂದ್ರಸೇನೆಯಂ ॥ ೭೭

ವ॥ ಅಂತು ದಾನವಾಂತಕನಿಸುವಮೋಘನಿಶಿತಸಾಯಕಸಂಪತಿಯ ಸಂಪ್ರತಿತ್ರಾಸದಿಂ ವಾಸವಂ ನಿಜಜನನೀಗರ್ಭಾವಾಸವಂ ಪುಗುವ ನೆಂಬಂತೆ ಸುಗಿಯೆಯುಂ, ಜಾತವೇದನಪಜಯಜಾತವೇದನನಾಗಿ ಮಯ್ದೆಗಯೆಯುಂ, ಕೀನಾಶಂ ತ್ರಿಲೋಕೀನಾಶವಿಂದಕ್ಕುಮೆಂದು * ಶಂಕಿಸೆಯುಂ, ದಾನವನದಟನುೞಿದಾನವನತನಾಗಿ ಬರ್ದುಂಕುವೆನೆಂದು ಚಿಂತಿಸೆಯುಂ, ಪ್ರಚೇತಂ ನಿರತಿಶಯಾಕಂಪ್ರಚೇತನಾಗಿ † ಸರಿಯೆಯುಂ, ಪವಮಾನ ನಿಂತಪ್ಪವಮಾನಮಾದುದೆಂದು ಮೊಗಂಮುಱಿಯೆಯುಂ, ಧನದನೀಮಹಾಯೋಧನದಬಾಧೆಗೊಳಗಾದೆನೆಂದೋಡಿ ಪೋಗೆಯುಂ, ಭವನಿಂತಪ್ಪ ಪರಿಭವಂ ದೊರೆಕೊಂಡುದೆಂದು ಬೆಱಗಾಗೆಯುಂ ‡ ಅಷ್ಟ ವಸುಗಳ್ಸೋಲವತಿಕಷ್ಟವಸುಗಳಂ ಬಿಡುವೆವೆಂದೊಳಸಾರೆಯುಂ, ದ್ವಾದಶಭಾನುಗಳ್ ವಿಗತಭಾನುಗಳಾಗಿ ಪೆಱಸಾರೆಯುಂ, ಏಕಾದಶ ಸ್ಥಾಣುಗಳ್ ನಿಂದ ನಲೆಯಿಂ ಸ್ಥಾಣುಗಳಂತೆ ಮಿಡುಕದಿರೆಯುಂ, ವಿದ್ಯಾ ಧರರಶಸ್ತ್ರವಿದ್ಯಾಧರರಾಗಿ ¶ ಶರಣ್ಬುಗಲ್ಬಗೆದಿರೆಯುಂ, ಸಿದ್ಧರ್ ಸಮರ ಕೇಳಿಗಪ್ರಸಿದ್ಧರೆನಿಸಿ ಮನಂದೆಗೆಯೆಯುಂ, ಸಾಧ್ಯರ್ ಹೇಲಾಸಾಧ್ಯರೆನಿಸಿ ಬೆಂಗೊಟ್ಟೋಡೆಯುಂ, ಯಕ್ಷರ್ ಭಗ್ನದಂಷ್ಟ್ರಹರ್ಯಕ್ಷರೆನಿಸಿ ಪೊಡಪುಡುಗೆಯುಂ, ಪನ್ನಗರ್ ವಿಧೃತವಿಪನ್ನಗರೆನಿಸಿ ನಡುಗೆಯುಂ, ಗಂಧರ್ವರಸಮರಕೇಳಿಗಂಧರ್ ವಗೆಗಿಡುವತೆಱದಿನುಮ್ಮಳಿಸೆಯುಂ, ವಿಯಚ್ಚರರ್ ನೋಱ್ಪ ನೆರವಿಯುಚ್ಚರಿಯಿಂ ಮಿಗೆ ನಗುವಂತು ತಲ್ಲಣಿಸೆಯುಂ, ಕಿಂಪುರುಷರಾವ ಭುಜಬಲದ ಸೊರ್ಕಿಂ § ಪುರುಷ

---

* ಕ.ಗ.—ಮಿದಕ್ಕುಮೆಂದು.

† ಕ.ಗ —ಪ್ರಚೇತನಂನಿರತಿಶಯಾಕಂಪಪ್ರಚೇತನನಾಗಿ.

‡ ಖ —ಶೂಲಧರನೀಕಾಳಗದಲೀಲೆಗವಲೀಲೆಯೆಂತು ಬೆಱಗುವಡಯೆಯುಂ,

¶ ಗ.—ಅಸ್ತ್ರವಿದ್ಯಾಧರರಾಗಿ.

§ ಕ. ಖ.—ಸೊರ್ಕಿಂ.

ಸಿಂಹನೊಳ್ ಪೊಣರ್ವೆವೆಂದು ಬಟ್ಟಿಕ್ಕಿಱಿಯುಂ, ಕಿನ್ನರರೇ ಕಿನ್ನರಕಾಂತಕನೊಳ್ ಸೆಣಸಲೆಂದಟ್ಟಿಕ್ಕಱಿಯುಂ, ಅನೇಕಪರಾಜಿಗಳನೇಕಪರಾಜಯಮನೊಳಕೊಂಡು ಸುರುಳಿಯುಂ, ವಾಹಸಮಿತಿ ಸಂಸಕ್ತರಕ್ತ ಪ್ರವಾಹ ಸಮಿತಿಯಾಗಿ ಪೊರಳೆಯುಂ, ಸ್ಯಂದನಂಗಳ್ ಭಯ ರಸ ಪ್ರಸ್ಯಂದನಂಗಳಾಗಿಸಾಲಿಡೆಯುಂ, ಪದಾತಂ ಮಹಾಪದಾತಂಕಮನಾಂತು ಪಡಲಿಡೆಯುಂ, ಅದಂ ನಾರದಂ ಕಂಡು ನೀರದಮಾರ್ಗಮಂಡಲದಿ ನಾಖಂಡಲನಭಿಮುಖಕ್ಕೆ ಬಂದು,

ವಿಭವಾರ್ಥಂ ಸ್ವೈನ್ಯಮಂ ಪಾಲಿಸುವುದು ಸಮರಕ್ಕೀಂ ನೆರಂಬಾರ್ಪುದೇವೀ
ರಭಟಂ ನೀಂ ಸೇನೆ ಬೆಂಗೊಟ್ಟೊಡೆ ಪೞದೆಗೆಯಲ್ ನಿನ್ನ ಶೌರ್ಯ ಪ್ರಭಾವ ।
ಕ್ಕಭಿಭಾವಂ ಪೊರ್ದುಗುಂ ನಿಷ್ಟುಯಮೆದನಱಿದೀನಿನ್ನ ವೇದಂಡಕೋದಂ
ಡಭುಜಾವಂಡಂಗಳಿಂದೊರ್ವನೆ ಗಿರಿಧರನೊಳ್ ಕಾದು ನೀಂ ವಜ್ರಪಾಣೀ॥

ವ॥ ಎಂಬುದುಂ ದ್ವಂದ್ವಯುದ್ಧಕ್ಕೆ ಬಗೆದಂದು ನಮುಚಿವಿದ್ರಾವಣಂ ರಾವಣಾಂತಕನ ಮೇಲೈರಾವಣಮಂ ಸಾರ್ಚಿ ನಿಂದ ಪದದೊಳ್ ಸತ್ಯಭಾಮೆ ಸೋಪಹಾಸವಚನದಿಂ ಶಚಿಗಿಂತೆಂದಳ್,

ಕುಲಗೋತ್ರವೈರಿಯುಂ ಬಲ
ದಲನನುಮೆಂದಮರಪತಿಯ ನೊಲ್ಲದೆ ಪೋದರ್ ।
ಕುಲಗೋತ್ರವೀರಭಟರುಂ
ಬಲನಾಥರುಮುಂತುಮೆಮರರೇನೋಡುವರೇ ॥ ೭೯

ನಿನಗುಳ್ಳುದಂ ನಿಳಿಂಪಾ
ವನಿಜಮನನಗಿತ್ತೆ ನೀನಿದಲ್ತು ವಿಚಿತ್ರಂ ।
ತನಗಿಲ್ಲದ ಪರಿಭವಮಂ
ವನುಜಾರಿ ಬಲಾರಿಗಿತ್ತನನಗಿದು ಚಿತ್ರಂ ॥ ೮೦

ವ॥ ಎನೆ ಕೇಳ್ದು ಕಟ್ಟೇವಮುಂ ನೋವುಮುಳವಿಗ್ತಿಯೆ ಶಚಿ ಯಿಂತೆಂದಳ್:—

ರಥಚರಣಪಾಣಿ ಬಲಮಂ
ಮಧಿಯಿಸೆ ಜಂಭಾರಿಗಾಯ್ತು ಗೀರ್ವಾಣಹತಿ ।
ವ್ಯಥೆ ನೀಂ ಗೀರ್ವಾಣಹತಿ *
ವ್ಯಥೆಯಂ ಮತ್ತೇಕೆ ತಂಗಿ ಪಡೆದಪೆಯೆನಗಂ ॥ ೮೧

ದಿವಿಜರ್ ಸೋಲೆ ಸುರದ್ರುಮಂ ನಿನಗೆ ಸಾರ್ದತ್ತೆಂದು ಬೇಱೊಂದು ರೂ
ಪವಿಲಾಸಂ ಪೆಱತೊಂದು ದೇಸಿ ಪೊಸತೊಂದುನ್ಮಾದಮಾಗಿರ್ಪ ದ ।
ರ್ಪವಿದೇಂ ಪಿಂಗಿತೆ ಯುದ್ಧವಿಂದ್ರತರು ಕೈಸಾರ್ದತ್ತೆ † ಮೇಣ್ ಕಾಣಲ
ಕ್ಕುಮುಪೇಂದ್ರೇಂದ್ರರೊಳೀಗಳಕ್ಕತುಳದಿಂದಂ ಗೆಲ್ಲಸೋಲಂಗಳಂ ॥೮೨

ವ॥ ಎನಲತಿಚತುರೆ ಸತ್ಯಭಾಮೆಯಿಂತೆಂದಳ್,

ಭಂಗವೊಡರ್ಚೆ ‡ ನಿನ್ನ ವಚನಂ ನಿನಗಕ್ಕ ವಿರೋಧಿಯಾದುದೇ
ಕಾಂಗದೆ ಕಾದೆ ನೋಡುವೆವುಪೇಂದ್ರಮಹೇಂದ್ರರೊಳಪ್ಪ ಗೆಲ್ಲಸೋ ।
ಲಂಗಳನೆಂಬೆಯೋಜೆಯಿ ¶ ನುಪೇಂದ್ರನೊಳಾದುದು ಗೆಲ್ಲವಿಂದ್ರನೊಳ್
ಸಂಗಳಿಸಿತ್ತು ಸೋಲವೆಱಿದಂತುಟೆ § ಕಾಳಗವೀಮಹೇಂದ್ರನಾ ॥ ೮೩

ವ॥ ಎನೆ ತದೀಯ ಚತುರೋಕ್ತಿಗತಿಕುಪಿತೆಯಾಗಿ,

ಸಿಡಿಲೆನ್ನೀಪಂಗೆ ಶಸ್ತ್ರಂ ಮರದಗದೆ ಗಡಂ ನಿನ್ನ ಕಾಂತಂಗೆ ಕಾಯ್ಪಿಂ
ಗೆಡೆಗೊಂಡೈರಾವತೇಭಂ ಮದಧಿಪತಿಗೆ ವಾಹಂ ತ್ವದೀಶಂಗೆ ಗೃಧ್ರಂ ।
ಗಡ ದೇವೇಂದ್ರತ್ವವೀಮತ್ಪತಿಗೆ + ಪದವಿ ಗೋಪಾಲಕತ್ವಂ ಗಡಂ ನಿ
ನ್ನೊಡೆಯಂಗಿನ್ನೇತಱೊಳ್ ಮತ್ಪತಿಗೆ ದೊರೆ ಭವದ್ವಲ್ಲಭಂ ಸತ್ಯಭಾಮೇ॥

---

* ಕ ಗ.—ಯೀಗೀರ್ವಾಣಾದಿ † ಖ —ಕೈಸಾರ್ದಲ್ಲಿ.
‡ ಕ. ಗ —ಭಂಗವೊಡರ್ಚಿ. ¶ ಕ. ಗ.—ನೆಂಬಯಾದಿಯಿ,
§ ಕ ಗ.—ಸೋಲದರಿವಂತುಟೆ, + ಮೊ—ಅ—ವಸ್ಮತ್ಪತಿಗೆ.

ವ॥ ಎಂದು ಪೌಲೋಮಿ ನುಡಿಯಲಾನುಡಿಯನನುಕ್ರಮದಿಂ ನಿರಾಕರಿಸಲೆಂದು,

ಅಸುರಯುಮದಂಡವೆನಲು
ರ್ವಿಸುವ ಮಹಾಗದೆಯನಿಱಿಸಿ ವಜ್ರಮನಭವ ।
ರ್ಣಿಸಿದಪೆ ಕೇವಣದೊಳ್ ಕೀ
ಲಿಸಲಲ್ಲದೆ ವಜ್ರವೆಂತದೇನಾಯುಧಮೋ ॥ ೮೫

ನಾಗಾಂತಕನೀಗರುಡಂ
ನಾಗನದೈರಾವತಂ ಪರಾಜಿತವೆಂತಾ ।
ನಾಗೇಂದ್ರನದಂ ಬಣ್ಣಿಸಿ *
ನಾಗಾರಿಯನಕಟ ಗೃಧ್ರನೆಂದೇೞಿಪುದೇ ॥ ೮೬

ನುಡಿದಿರ್ ನಿಂದಿಸಿ ಗೋಪನೆಂದು ಹರಿಯಂ ಗೋಪತ್ವಮುಂಟೆಂತದೆಂ
ದೊಡೆ ಗೋವಾಚಕಮಪ್ಪ ನಾಕಮಹಿಮುಖ್ಯಾನೇಕವಸ್ತೂತ್ಕರ ।
ಕ್ಕೊಡೆಯಂಮತ್ಪ್ರಿಯನಿಂತುನಿಮ್ಮನುಡಿನಿಂದಾಸ್ತೋತ್ರಮಾಯ್ತಕ್ಕ ಕೇ
ಳ್ದೊಡೆ ಮತ್ಕಾಂತಕೃತಪ್ರಸಾದಮೆ ವಲಂ ತ್ವತ್ಕಾಂತನಿಂದ್ರತ್ವಮುಂ ॥

ವ॥ ಎಂದು ಸತ್ರಾಜಿತ್ತನೂಜೆ ನುಡಿಯೆ ಪೌಲೋಮಿ ಕನಲ್ದು,

ಬಂದು ನಿಟಲಾಕ್ಷ ಮಿಗಿಲುಂ
ಟೆಂದು ಹರಂ ತಾಳ್ದಿದಂ ಸ್ವಯಂಪ್ರಭುತೆಯನೆಂ ।
ದಂದು ಸಹಸ್ರವಿಲೋಚನ
ದಿಂದೆಸೆವಿಂದ್ರಂ ಹರಿ † ಪ್ರಸಾದಸ್ಪೃಹನೇ ॥ ೮೭

ವ॥ ಎನೆ ಸತ್ರಾಜಿತಿ ಮುಗುಳ್ನಗೆನಕ್ಕು,

ಉಸಿರಲ್ಬೇಡಿದನಕ್ಕ ಕೇಳ್ದಱಿವೆನಿಂದ್ರಂಗೆಮ್ಮ ಭಾವಂಗೆ ನೇ
ತ್ರಸಹಸ್ರಂ ದೊರೆಕೊಂಡ ದುಸ್ಸ್ಥಿತಿಯನಾಹಾಸ್ಯೋಕ್ತಿಯಂತಿರ್ಕೆ ರಂ ।

* ಕ.—ಬಣ್ಣಿಸೆ.
† ಖ.—ಪರ.

ಜಿಸುಗುಂ ಕಣ್ ಪಲವೆಂಬೊಡೀಯುವೆಯುವಂ ಹೀನಾಧಿಕಂ ಲೇಸೆ ಮಾ
ಣಿಸದಾಳಾಪಮನಣ್ಮಿ ಕಾದುಗೆ ಸಹಸ್ರಾಕ್ಷಂ ಸರೋಜಾಕ್ಷನೊಳ್ ॥೭೯

ವ॥ ಎಂದು ನುಡಿಯೆ ತತ್ಸಂವಾದದೊಳ್ ಸತ್ಯಭಾಮೆಯಿಂ ಶಚೀ
ದೇವಿಗಾದ ವಾಕ್ಪರಾಜಯಮುಂ ವಸುದೇವಸುತನಿಂ ತನಗಾದ ರಣಪರಾ
ಜಯಮುಂ ತನಗತಿಕ್ಷೋಭಮಂಪಡೆಯೆ, *

ಗುಣಟಂಕಾರನಿನಾದವಾತ್ಮಗಳಹೂಂಕಾರಸ್ವನಂ ಲೋಲಕಂ
ಕಣಝುಂಕಾರರವಂ ವಿಮುಕ್ತತರಭೀಂಕಾರಸ್ವರಂ ಕೇಳಲಾ |
ಯ್ತುಣಕಂ ನೋಡಿರೆ ಕಾಣಬಾರದಿವನಸ್ತ್ರಾದಾನಸಂಧಾನಮೋ
ಕ್ಷಣವೇಗಂಗಳನಲ್ ಬಲಾರಿ ಕಱಿದಂ ಬಾಣೋತ್ಕರಾಸಾರಮಂ ॥ ೯೦

ಪೀತಾಂಬರಧರನಂ ಪುರು
ಹೂತಶಿಲೀಮುಖನಿಕಾಯಮೆಱಗಿದುದಿನಿಸುಂ |
ಪೂತ ನವಕರ್ಣಿಕಾರಕು
ಜಾತದೊಳೆಱಗುವ ಶಿಲೀಮುಖಾಳಿಯ ತೆಱದಿಂ ॥ ೯೧

ಹರಿಯಂ ಪ್ರತಾಪನಿಧಿಯಂ
ಶರಸಂಕುಲವೆಱಗಿಯುಂ ನಿರರ್ಥಕವಾದ |
ತ್ತುರಿವರಿವ ದಾವಶಿಖಿಯೊಳ್
ಪರಿತಂದೆಱಗುವ ಪತಂಗವಿತತಿಯ ತೆಱದಿಂ ॥ ೯೨

ವ॥ ಆ ಸಮಯದೊಳ್,

ಪೊಣಗಿಡೆ ಸಹಸ್ರನೇತ್ರಂ
ಸಲೆ ನಿಲೆ ಕಣೆ ಕಣೆಯನೊರಸಿ ಗರಿ ಗರಿಯಂ ತ |
ಳ್ತಲಗಲಗನೊರಸಿ ಪಾಯ್ತರೆ
ಜಲಜಾಕ್ಷಂ ಲಕ್ಕಲೆಕ್ಕದಿಷುಗಳನೆಚ್ಚಂ ॥ ೯೩

ವ॥ ಅಂತು ವಿಷ್ಣುಜಿಷ್ಣುಗಳ್ ಪರಸ್ಪರಂ ಶರವರ್ಷಮಂ ಕಱೆಯೆ,

* ಕ. ಗ.—ಕ್ಷೋಭಮಾಗೆ.

ಬಂದೊಂದಂ ಮಾರ್ತಾಗಿದು
ಪೊಂದೊಂದಂ ಮೊನೆಯ ಕಿಚ್ಚಿನಿಂದುರುಪಿದುವೊಂ ।
ದೊಂದಂ ಕಡಿದಿಕ್ಕಿದುವೊಂ
ದೊಂದಂ ಪಿಳ್ಕಿಂದೆ * ಸೀಳ್ದುವಂಬಂಬರದೊಳ್ ॥ ೯೪

ನರನೀವಜ್ರಿಯ ಸೂನುವಾದನಿತಱಿಂ † ಬಿಲ್ಬಲ್ಮೆಯಿಂ ಲೋಕದೊಳ್
ಪಿರಿಯಂ ತಾನೆನ ವಜ್ರಿಗಾವನೂ ಸಮಂ ಬಿಲ್ಬಲ್ಮೆಯಿಂದೆಂಬಿನಂ ।
ಶರದಿಂದಂ ಶರಮಂ ನಿವಾರಿಸಿ ಮಹಾಸ್ತ್ರಕ್ಕೆಚ್ಚು ದಿವ್ಯಾಸ್ತ್ರಮಂ
ಹರಿಶೌರ್ಯಂ ಹರಿ ತೋಱಿದಂ ಹರಿಯ ಸಾಮರ್ಥ್ಯಕ್ಕೆ ಸಾಮ
ರ್ಥ್ಯಮಂ ॥ ೯೫

ಅರಿದಲ್ತಂದಿನ ರಾವಣಪ್ರಮುಖದೈತ್ಯಾಧೀಶರಂ ಗೆಲ್ದುದೀ
ಸುರಚಕ್ರೇಶನನಾಂತು ಗಲ್ವುದರಿದೆಂದಾಗಳ್ ಜಯಪ್ರಾಪ್ತಿಯೊಳ್ ।
ಹರಿಗಂ ಸಂಶಯಬುದ್ಧಿಯಾದುದೆನೆ ಬೇಱುತ್ಪ್ರೇಕ್ಷಿಸಲ್ ಬೇಱೆ ಬಿ
ತ್ತರಿಸಲ್ ಬೇಱಭಿವರ್ಣಿಸಲ್ ಪವಣೆ ಬಾಹಾವಿಕ್ರಮಂ ಶಕ್ರನಾ ॥ ೯೬

ವ॥ ಆಗಳಾಸುಪರ್ವರಾಜಂ ಸುಪರ್ವಮೆನಿಸಿದ ಪರ್ವತಾಸ್ತ್ರಮಂ ತೊಟ್ಟು ತೊಟ್ಟನಿಸೆ,

ತಂಡದಿನಲಗಿನ ಮೊನೆಯೊಳ್
ಖಂಡಿತಮದ್ರಿಗಳನುಗುೞ್ವ ಪರ್ವತಶರಮಂ ।
ಖಂಡಿಸಿದನಕಾಂಡತಟ
ತ್ಕಾಂಡಾಭಪವಿಪ್ರಕಾಂಡಕಾಂಡದೆ ಕೃಷ್ಣಂ ॥ ೯೭

ವ॥ ತದನಂತರಂ,

ಶಿಖಿಯುಂ ಧೂಮಮುಮಲಗಿನ
ಮುಖದೊಳ್ ಪೊಱಮಡುವಿನಂ ಶತಕ್ರತು ತೊಟ್ಟಂ ।

---

* ಖ.—ಪಿಳ್ಕಿಂಗೆ. † ಖ.—ನಿದಱಿಂ.

ಶಿಖಿಬರ್ಹವಸನಯುತನಂ
ಶಿಖಿನಾಮಗ್ರಹಸಮಗ್ರಮಂ * ಶಿಖಿಶರಮಂ ॥ ೯೮

ವ॥ ಆಮಹಾಮಾರ್ಗಣಕ್ಕೆ,

ಶರಧಿಯನುಗುಟ್ಟಿ ಶರಮಂ
ಶರಧಿಯಿನಸುರಾರಿ ತೆಗೆದು ತೊಟ್ಟೆಚ್ಚಂ ಜ್ಯಾ ।
ಸ್ವರವೆಸೆಯೆ ಪುಂಖಕಾರ್ತ
ಸ್ವರವಿಭವಾರುಣಸಮಗ್ರಮಂ ವಾರುಣಮಂ ॥ ೯೯

ವ॥ ಆವಾರುಣಾಸ್ತ್ರದಿಂದಾಗ್ನೇಯಾಸ್ತ್ರಂ ಪ್ರತಿಹತಮಾಗೆ,

ಪಗೆ ಕೌಶಿಕಂಗೆ ಪಗಲೀ
ಪಗಲಂ ಕಿಡಿಸಿದನದರ್ಕೆ ಕೌಶಿಕನೆನುತುಂ ।
ನಗೆ ಸತ್ಯಭಾಮೆ ಕೌಶಿಕ
ನಗೆಯೆತ್ತಿದ † ನಂಧಕಾರಶರದಿಂ ಪಗಲಂ ॥ ೧೦೦

ವ॥ ಅದಂ ಕಂಡು,

ಮಣಿಪುಂಖಚಿತ್ರಭಾನು
ಪ್ರಣಿಚಿತಮಂ ಚಿತ್ರಭಾನುಶರಮಂ ವಿಲಯೋ ।
ಲ್ಬಣಚಿತ್ರಭಾನುಶಿಖಿಯೊಳ್
ತೊಣೆಯೆನಿಪುದನಸುರವೈರಿ ತೊಟ್ಟಾರ್ದೆಚ್ಚಂ ॥ ೧೦೧

ವ॥ ಆ ಮಾರ್ತಂಡಕಾಂಡಂ ತಿಮಿರಶರಾತಿರೇಕಮಂ ತೂಳ್ದು,

ನಿಜಮುಖವಿಷಾಗ್ನಿದಗ್ಧ
ತ್ರಿಜಗಂ ಶರಮಿಂತಿದೆಂದು ಸಕಲಗ್ರಹಮಂ ।

---

* ಕ.ಗ.—ಗ್ರಸನನೋಗ್ರಮಂ. ಮೊ—ಅ—ಗ್ರಸನಸೋಗ್ರಮಂ.
† ಖ.—ನಗೆಯೊಡ್ಡಿದ.

ದು * ಜನಿಸೆ ಶಚೀಭುಜಂಗಂ
ಭುಜಂಗಬಾಣದೆ ಭುಜಂಗತಲ್ಪನನೆಚ್ಚಂ ॥ ೧೦೨

ಅಗಸೂದನನೆಚ್ಚ ಮಹೋ
ರಗಶರಮಂ ಸಿದ್ಧಸಾಧ್ಯಯಕ್ಷಪ್ರಮುಖರ್।
ಖಗರ † ಚ್ಚರಿವಡೆ ತಱಿದಂ
ಖಗಪತಿಖಗದಿಂ ಖಗೇಂದ್ರವಾಹನನೆಡೆಯೊಳ್ ॥ ೧೦೩

ವ॥ ಅದರ್ಕೆ ಬೆಕ್ಕಸಂಬಟ್ಟು ಮಘವನಮೋಘ ಮೇಘಬಾಣದಿಂ ದಿಸೆ,

ಪರುಷಸ್ತನಿತಮನಚಿರಾಂ
ಶುರುದ್ಧಮಂ ಮೇಘಚಯಮನುಗುಱುತ್ತುಂ ಪು।
ಷ್ಕರದಿಂ ಬರ್ಪಾ ಪುಷ್ಕರ
ಧರಶರಮಂ ‡ ಪುಷ್ಕರಾಕ್ಷನೀಕ್ಷಿಸಿ ಕಂಡಂ ॥ ೧೦೪

ವ॥ ಅಂತು ಕಂಡು ಕಾಂಡಧಿಯಿನೇಣವಾಹನಬಾಣಮಂ ತೆಗೆದು ತೊಡರ್ಚೆ,

ಅಭಿಭವಿಸಿದನಿನ್ನಮರ
ಪ್ರಭುಮಂ ಮುನಿದೀಪ್ರಭಂಜನಂತಾನೆಂದೆಂ ¶ ।
ಬಭಿನುತಿ ನೆಗಱೆ ನಿಶಾಟ
ಪ್ರಭಂಜನಂ ತತ್ಪ್ರಭಂಜನಾಸ್ತ್ರದಿನೆಚ್ಚಂ ॥ ೧೦೫

ವ॥ ಆ ಪ್ರಭಂಜನಪ್ರಹರಣಂ § ಮೇಘಮಾರ್ಗದೊಳ್ ಮೇಘಬಾಣಮಂ ಪ್ರತಿಹತಂ ಮಾಡೆ ನಾಡೆಯುಂ ಮುಳಿದು,

---

* ಕ.—ಸಕಲಾಗ್ರಹಮಂದು ಖ. ಗ.—ಸಕಲಗ್ರಹಮಂದ.
† ಖ.—ಬಗೆವ, ‡ ಕ —ಪುಷ್ಕರಶರಮಂ. ಗ.—ಪುಷ್ಕರ ಶರಮಂಸಲೆ. ¶ ಕ ಗ.—ಮಹಾಪ್ರಭಂಜನನುತನೆಂ.
§ ಕ. ಗ.—ಪ್ರಭಂಜನಪ್ರದರಂ ಖ.—ಪ್ರಭಂಜನಶರದಿಂ.

ಹರನೇತ್ರವಹ್ನಿಯುಂ ಸಂ
ಹರಣಾಗ್ನಿಯುಮಿದಱ ಕಾಯ್ಪಿನೊಳ್ ದೊರೆಯಕ್ಕುಂ ।
ದೊರೆಯಲ್ತು ಗರ್ಜನಾಡಂ
ಬರದೊಳಿದರ್ಕೆನಿಪ ವಜ್ರದಿಂ ವೃಷನಿಟ್ಟಂ ॥ ೧೦೬

ಪೊಳೆಪಿಂ ಸಿಡಿಲ್ದು ಕೆಂಡದ
ಮೞೆಯಂ ಕಱೆವೆಸಕದಿಂದೆ ಬಪ್ಪುದನಾಗಳ್ ।
ಘೞಿಲನೆ ಪಿಡಿದಂ ಮಿಂಚುಂ
ಬುೞುವಂ ಪಿಡಿಸಂತೆ ವಜ್ರಮಂ ದನುಜಹರಂ ॥ ೧೦೭

ಕುಳಿಶಂ ಪ್ರತಿಹತಮಾದೊಡ
ಮೊಳಸಾರದೆ * ಸೋರ್ವ ಮದದಿಭೇಂದ್ರಮನಾಱಂ ।
ಡಳನಣೆದು ನೂಂಕಿದಂ ಮಾ
ರ್ಪೊಳವಿನಮಂಕುಶದ ಪೊಳಪುದಗ್ಭಿತ್ತಿಗಳೊಳ್ ॥ ೧೦೮

ವಾರಣರಣದೆ ಮದೀಯಾ
ಧೋರಣ † ರಣವಿದ್ಯೆ ಮೆಱೆಗುಮಂದಿಂದ್ರನಸಾ ।
ಧಾರಣರಣಾರಭಸೋದ್ಯಮ
ಕಾರಣರಣಪಟಹಲಟಹ ‡ ನೆಯ್ದಿದನಿಭದಿಂ ॥ ೧೦೯

ತಾರಾಚಳನಂ ಜನಿಯಿಸೆ
ತಾರಾಚಳದೊಡನ ರೋಹಣಂ ಪೋರ್ದುದೆನಲ್ ।
ವಾರಣದೊಡನ ಖಗಪ್ರಭು
ವಾರಣದೊಳ್ ಪೋರ್ದು ಚಿತ್ರವಿಧದಿಂ ಪೊಣರ್ದಂ ॥ ೧೧೦

ಅತಿವಾತಾಘಾತದಿಂ ಜೆಳ್ಳುಗಿಲೆ ನೆಲಕ್ಕೆ ಬಿೞ್ದತ್ತೆನಲ್ ತಾರ್ಕ್ಷ್ಯಪಕ್ಷಾ
ಹತಿಯಿಂದೈರಾವತಂ ತೊಟ್ಟನೆ ತೊಳ್ದಿವದು ¶ ಪಾರಿಯಾತ್ರಾದ್ರಿಯೊಳ್ ಬೀ

---

* ಕ ಗ __ ಸೋರದೆ  † ಖ. __ ಧಾರಣ  ‡ ಕ.ಗ. __ ಲಟಹ
ಲಟಹ, ಖ. __ ಲಟಹಪಟಹ.  ¶ ಕ.ಗ __ ಕೊಱೆದಿವದಂ.

ಱಿ ತದೀಯಾನುಪ್ರಯಾತಂ ಗರುಡನಱಿಗಲಂತಲ್ಲಿ ಸಂಗ್ರಾಮಭಂಗಾ
ನ್ವಿತನಾಗಿರ್ದಿಂದ್ರನಂನೋಡುತೆರಣದೊಳುಪೇಂದ್ರಂಸಕಾರುಣ್ಯನಾದಂ॥

ಇದು ಸಮಸ್ತಕಮಳಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪ ನಿರೂಪಣಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗನ್ನಾಥ
ವಿಜಯಮಹಾಪ್ರಬಂಧದೊಳ್ಪಾರಿಜಾತಾಹರಣ ಸತ್ಯ
ಭಾಮಾಮೌಲೋವಿಾಸೋಪಹಾಸವಚನ
ಸುರೇಶ್ವರಾಪಜಯವರ್ಣನಂ.
ತ್ರಯೋದಶಾಶ್ವಾಸಂ.

---

## ಚತುರ್ದಶಾಶ್ವಾಸಂ

ಶ್ರೀದಸಖಂ ಪುರರಿಪು ಬಿ
ಲ್ವೋದಕಪತಿನಾಮನಲ್ಲಿ ಸನ್ನಿದನಾಗಿ ।
ರ್ದಾದೇವೇಂದ್ರನ ಪರಿಭವ
ಖೇದವನಾಱಿಸಿ ಬಱಿಕ್ಕುಪೇಂದ್ರಂಗೆಂದಂ ॥ ೧

ನೆಱಿಪಲ್ಪೂಣ್ಕೆಯನಮರರೊ
ಳಱಿವುದಿದೇಗಣಿದಮಮರಹಿತನಚ್ಯುತ ನೀ ।
ನಿಱಿವುದನುಚಿತವದರ್ಕಾ
ನಱಿವುವೆನೊಂದಮರಹಿತಮನೆನ್ನಭಿಮತಮಂ ॥ ೨

ವ॥ ಅಂತದಾವುದೆನೆ, ಕೃತಯುಗಾಂತರಾಳದೊಳ್ ಮಯ
ವಿದ್ಯುನ್ಮಾಲಿತಾರಕಾಕ್ಷದಾನವರ್ ದುರಾಸದಮುಮಂತರಿಕ್ಷಚಾರಿಯುಂ
ಸಂಚಾರವೇಗದುರ್ಲಕ್ಷ್ಯಮುಮೆನಿಸಿದಾತ್ರಿಪುರಮಂ ಜಗನ್ಮಯರಥಾ

ರೂಢನಾಗಿ ನಾಗರಾಜಜ್ಯಾಲಶಾರೋಪಿತನೇರುಚಾಪದಿಂ ಪಾಶು ಪತಾಸ್ತ್ರಮಂ ಪ್ರಯೋಗಿಸಿ ನಿಟಲೇಕ್ಷಣಾಶುಶುಕ್ಷಣಿಯಿಂದಮಂದಾ ನುರುಪೆ * ದಗ್ಧಶೇಷದಾನವರ್ ಬಟುಕ್ಕೆ ನಿರ್ಬಂಧದಿಂ ದಿವ್ಯಸಹಸ್ರವರ್ಷ ಮುಗ್ರೋಗ್ರತಪಮಂ ಮಾಡಿ ತಾವೆನಗಶಾಧ್ಯರುಂ ಮುನ್ನಿನಿಂ ದ್ವಿಗುಣ ಸಾಹಸರುಂ ದ್ವಿಗುಣಸೈನ್ಯರುಂ ದ್ವಿಗುಣದೋರ್ವಳಚತುರ್ವಳರು ಮಪ್ಪಂತು ಪಿತಾಮಹನಿಂಮಹಾವರಂಗಳಂ ಪಡೆದು ಮುನ್ನಂತರಿಕ್ಷಚರ ತ್ರಿಪುರವಾಸಿಗಳೀಗಳ್ ಭೂವಿವರಗತಷಟ್ಪುರನಿವಾಸಿಗಳಾಗಿರ್ದರ್. ಅವಂ ದಿರಂ ನಿಕುಂಭದಾನವೇಶ್ವರಪುರಸ್ಸರಂ ಕ್ಷಯಮನೈದಿಸಿ ಯಮಪುರಮಂ ಪುಗುವಂತೆಮಾಡಿ ಷಟ್ಪುರವನವೋಘಬಾಣೌಘವಹ್ನಿಯಿಂದುರುಪಿ ನಿನ್ನದೊಂದಭಿನವವಿಜಯಕೀರ್ತಿಯಂ ಕೈಕೊಳ್ವುದೆಂದು ಕಾಳಕೂಟ ಧರಂ ಪೇಟೆ ಮಾನವಜನ್ಮನಾಟಕಧರಂ ಕೈಟಭಾಂತಕನಂತೆಗೆಯ್ವೆನೆಂದಾ ಬಿಲ್ವೋದಕೇಶ್ವರಂಗೆ ಪೊಡವಟ್ಟು ಪ್ರದೇಶದಿಂ ತಳರ್ದು ಗರುಡವಾಹನಂ ಶರದಂಬುವಾಹಸುಭಗನಭೋವೀಧಿಯಿಂ ದ್ವಾರಾವತಿಗೆಟ್ಟಿಂದು,

ತಳೆಯುತ್ತುಂ ಪೌರನಾರೀಜನದ ವಿಮಲ † ಶೇಷಾಕ್ಷತಾನೀಕಮಂ ಕೈ
ಕೊಳುತುಂ ಬಂಧುಪ್ರಜಾಶೀರ್ವಚನನಿಚಯಮಂ ಕೇಳುತುಂ ತೂರ್ಯ
ಘೋಷಂ ।
ಗಳನೊಲ್ದಾಲೋಕಿಸುತ್ತುಂ ಪುರದ ಸಿರಿಯನಂತಃಪುರಸ್ತ್ರೀಯರಂ ಮಂ
ಗಳವಸ್ತುಸ್ತೋಮದಿಂರಂಜಿಸುವರಮನೆಯಂಪೊಕ್ಕನುತ್ಸಾಹದಿಂದಂ॥೩

ವ॥ ಅಂತು ಪೊಕ್ಕು ಸುಖಸಂಕಥಾವಿನೋದದಿಂದಿರೆ ಶರತ್ಸಮಯಾ ನಂತರಂ,

ಅಣಿಯರವಾಡಿ ಮೂಡಗಡಲೊಳ್ ‡ ತೆರೆಮಾಲೆಯನೆತ್ತಿ ದೇವವಾ
ರಣಕರಶೀಕರೋತ್ಕರಮನಾಂತು ಶಚೀರಮಣಾಭಿಷೇಕವಾಃ ।

* ಖ.ಗ.—ಅನುರುಪಿದ. † ಖ.—ವಾರನಾರೀಜನದತಳಿವ.
‡ ಖ.—ಅಣಿಯರವಾಗಿಮೂಡಗಡಲಿಂ.

ಕಣನಿಕುರುಂಬಮಂ ತಳೆದು ಬಂದೆಸೆಗಿತ್ತತಿಶೈತ್ಯಕಾರಣಂ
ಪ್ರಣಯವಿಮುಕ್ತ * ವಲ್ಲಭವಿದಾರಣವಿಂದ್ರದಿಶಾಸಮೀರಣಂ ॥ ೪

ಹಿಮಮೆನಲರ್ಚಿ ತೀಡೆ ಪವನಂ ವನವಾಳಿಗೆ ಪೋದುದು ವಿಭ್ರಮಂ
ಭ್ರಮರನಿಷೇವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಕ್ವ ಕ ।
ರ್ಬಮ್ರೃತರಸಾವಿಳಂ ವಿಳಯಮೆಯ್ದಿದುದಬ್ಜವನಾಳಿ ನಾಳಿಕೇ
ರಮನವಳಂಬಿಸಿರ್ದುವು ಫಲಂ † ರಸಪೂರಿತಮಾಗಿ ಮಾಗಿಯೊಳ್ ॥ ೫

ಬಿಟ್ಟು ಸರೋಜಮಂ ಕುವಲಯಕ್ಕಡಿಯಿಟ್ಟುದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷನದೀನದನಿರ್ಝರಾಂಬು ರಾ ।
ಪಿಟ್ಟುದು ಚಂದ್ರಕಾಂತಹಿಮವಾರಿಗೆ ಚಿಂತಿಸಿ ಜಕ್ಕವಕ್ಕಿ ಸಾ
ಲಿಟ್ಟುದು ಕಣ್ಣನೀರನೆನೆ ಮಾಗಿ ಬರಲ್ಮೊದಲಿಟ್ಟುದೆಂಬಿನಂ ॥ ೬

ಜಲಜಲನೊಟ್ಟುತಿರ್ದುದು ‡ ನದೀತತಿ ಲೋಧ್ರಲತಾಂತಸೌರಭ
ಕ್ಕಲವರಿಸಿತ್ತು ಮತ್ತಮಧುಪಾಳಿ ರತಿಪ್ರಿಯನಂ ಪ್ರಿಯಂಗು ತ ।
ನ್ನಲರ್ಗಣೆಯಿಂ ಜಗತ್ತ್ರಯಮುಮಂ ಗೆಲಿಸಿತ್ತೆಳವೆಣ್ಣ ಮೆಯ್ಯ ಕೋ
ಮಲನಖರೇಖೆಯಂತಿರರೆಗೆಯ್ದುಳೊಳಾದುವು ಕೂಡೆ ಬೀಡೆಗಳ್ ॥ ೭

ಹಿಮವರ್ಷಬಿಂದುಗಳ್ ಸಂ
ಕ್ರಮಿಸಿರೆ ವನತರುನಿಕಾಯದೊಳ್ ನವಮುಕುಳಾ ।
ಘಮನಾಂತ ಸುರಭಿಜಾತಂ ¶
ಭ್ರಮರಾಳಿಗೆ ಪರಿಮಳಾನುಮಿತಮಾಯ್ತೆತ್ತಂ ॥ ೮

ತಳೆದ ಸುವರ್ಣಭೂಷಣದ ಪೂಸಿದ ಕುಂಕುಮದಿಟ್ಟ § ರೋಚನಾ
ತಿಳಕದ ರಾಗದಿಂ ಮದನರಾಗಮೆ ಮೂರ್ತಿಯನಾಂತವೋಲ್ ಮನಂ ।

---

* ಖ—ವಿಯುಕ್ತ. † ಗ.—ರಸಂ. ‡ ಕ. ಖ.ಗ. ಜಲಜಲನು
ಕ್ಕುತಿರ್ದುದು. ¶ ಕ ಗ.—ಸುರಭಿವಾತಂ, ಖ.—ಸುರಭಿವ್ರಾತಂ
§ ಕ.—ಸೂಸಿದ ಕುಂಕುಮವಿಟ್ಟ, ಖ.ಗ.—ಪೂಸಿದಕುಂಕುಮವಿಟ್ಟ,

ಗೊಳಪೆಳವೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ದೆಳವಿಸಿಲಂ ಮನೆಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ॥ ೯

ತಳರ್ದು ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯುಂ ತೆರಳ್ದತು
ಪ್ಪಳನೊನೆದಂಟೆ ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ ।
ಣ್ಗಳನರೆಮುಚ್ಚಿ ತೋದ ಗರಿಯಂ ನಸುಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವುಮುಂಬಗಲ್ವರಲ್*॥೧೦

ಪಲ್ಗಿರಿದು ಪುರ್ಬನುರ್ಬಿಬಿ
ರಲ್ಗೊನೆಯಿಂ ತುರಿಸಿ ಬರಿಯ ಸೀರ್ದುಪ್ಪುೞ ಬಂ ।
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ॥ ೧೧

ಪೊಱಮಟ್ಟು ತೊರೆಯ ನಡುವಣ
ಕುಱುವೆಂಗಳ ಕೆಲದೊಳಿರ್ದು ಕಾದುವು ಬಿಸಿಲಂ ।
ಮುಱಿಗಳ್ ಪಕ್ಕಂಬಿಡದೆಡೆ
ಗಿಱಿದಿರೆ ಕುಂಭೀರಕಮಕರಕರ್ಕಟಕಂಗಳ್ ॥ ೧೨

ಎಸೆವಿಂದ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತಶೀತ
ಪ್ರಸರಕ್ಕಳ್ಕಿ ಮೇಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು ।
ಟ್ಟಿಸುತುಂ ತೆಂಕಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೊಳ್ ತಣ್ಪನಾಳ್ದಲ್
ಬಿಸಿಲಂಬೆಳ್ದಿಂಗಳೆಂದೀಕ್ಷಿಸುವುದುತರಳೋತ್ತಾನತಾರಂಚಕೋರಂ॥೧೩

ಇದಿರೊಳ್ ನಿಂದೆಡೆಗಾಲೊಳಟ್ಟು ಮುಱಿಯಂ ನಿಶ್ಚೇಷ್ಟೆಯಿಂ ಮೇಪುಗೊ
ಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾಪುಲ್ಲೆಯಂ ಕಂಡಿಸಲ್ ।
ಪದನೆಂದೇಱಲೊಡರ್ಚಿಯುಂ ನಿಜವೃಸ್ಸಂಕೋಚಕದಿಂ ಬಿರ್ಚಲಾ
ಱದೆ ಪಟ್ಟಿರ್ದುದು ಕೂಡೆ ಜೇಡವಡೆ ದೇಹಸ್ತಂಭವಾದಂದದಿಂ ॥ ೧೪

ಮುಱಿಗಳನಿಱುಂಕಿ ಮೋಹದಿ
ನೆಱೆಂಕೆಯಿಂ ಗೂಡುಗೊಂಡು ಗೂಡಿನೊಳಿರದೇ ।

---

* ಮುಂಬಗಲ್ವರಂ.

ನೊಱಗಿರ್ದುದೊ ಕೂಗದೆ ಕ
ಣ್ದೆಱೆಯದೆ ಕುಕ್ಕುಟಕುಟುಂಬಿನೀನಿಕುರುಂಬಂ ॥ ೧೫

ಬೆಳೆದುದು ಹಿಮವರ್ಷದೆ ರಾ
ತ್ರಿಳತೆಯನಲ್ * ಬಳೆದುವಿರುಳ್ಗಳೊಳ್ ಸುರತಂಗಳ್ ।
ಬಳೆದುವು ದಂಪತಿಶತದೊಳ್
ಬಳೆವಿನೆಗಂ ಮದನನಾಜ್ಞೆಯುಂ ಭುಜಬಲಮುಂ ॥ ೧೬

ಒದವೆ ರಸಂ ವನಾಮಳಕಸಂತತಿ ಕೋಮಳವಾದುದೆತ್ತಲುಂ
ಬದರಫಲಾಳಿ ಪಣ್ತುಧರವಾದುದು † ಕಂಜವನಾಳಿ ನಂಜು ಮು ।
ಟ್ಟಿದ ತೆಱನಾದುದುತ್ಪಲಕದಂಬಕವಂಬಕ ಹರ್ಷ ‡ ಕಾರಿಯಾ
ದುದು ಹಿಮಕಾಲವಿಗ ಶಿಶಿರಾಗಮವಾದ ಬೆಡಂಗಿದೆಂಬಿನಂ ॥ ೧೭

ರವಿರುಚಿಯುಂ ಹಿಮಾಂಶುರುಚಿಯೆಂದು ಚಕೋರಚಯಂಗಳೀಂಟುತಿ
ರ್ಪುವು ಬಡಬಾಗ್ನಿಯುಂ ಪವಳಮೆಂದಿರದಂಬುಚರಂಗಳೊಂದಿ ನಿ ।
ಲ್ವುವು ಹರಭಾಳಲೋಚನಮನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮವೆಂದಿಟಿಪನೇವೊಗಟ್ವೆಂ ಶಿಶಿರಪ್ರಭಾವಮಂ ॥ ೧೮

ಇನಿಸುಗುರ್ವೆಚ್ಚನಪ್ಪುಣಿಸು ಕುಂಕುಮದಣ್ಕೆ ಕದಂಬದಂಬುಲಂ
ಕನಕವಿಭೂಷಣಾಳಿ ಪೊಸಜಾದಿಯ ಪೂ ದವಳಾರವೆಟ್ಟಿಱಂ ।
ಜನಿಯಿಸಲಂಚೆವಾಸುಗಳೊಳೋಪಳ ಪೆರ್ಮೊಲೆವೆಂಕೆಯಿಂದದೇಂ
ತನತನಗಿಕ್ಕಿ ಮುಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮಂ ॥ ೧೯

ವ॥ ಅಂತು ಶಿಶಿರದೆಸಕಂ ಮಸುಳ್ಕೆ,

ಧೃತಮಾದ್ಯದ್ವಾಮನಾಂಕ ¶ ದ್ವಿರದಮದಜಲಾಮೋದಭಾರಂ ತ್ರಿಕೂಟಾ
ದ್ರಿತಟಾಬ್ಧಿಸ್ವೈರಚಾರಂ ಮಳಯಗಿರಿವಿಹಾರಂ ಚಳತ್ಸಿಂಹಳಸ್ತ್ರೀ ।
ಶ್ರುತಿಪೂರಂ ತಾಮ್ರಪರ್ಣೀನಿಕಟವನರಟದ್ಭೃಂಗಝೇಂಕಾರವಾಂದೋ
ಳಿತಚಕೋಳೀತಾರಹಾರಂ ಸುಟಿದುದಭಿನವಂ ದಕ್ಷಿಣಾಶಾಸಮೀರಂ ॥ ೨೦

---

* ಖ — ಧಾತ್ರಿಲತೆಗಿನೆ † ಮೊ ಅ — ಪಣ್ತುದರೆಯಾದುದು
‡ ಖ — ವಂತದುಹರ್ಷ. ¶ ಖ ಗ — ಧೃತಮಾಧ್ಯತ್ಪುಷ್ಪದಂತೆ.

ಅಂತು ಬೆಡಂಗನಾಂತ ಕಳಿಕಾನಿವಹಂ ಮೊನೆದೋಱದನ್ನಮ
ಬ್ಜಂ ತಲೆದೋಱದನ್ನ ಮೊಸೆದನ್ಯಭೃತಂ ದನಿದೋಱದನ್ನ ಮೋ ।
ರಂತೆ ವಸಂತದೆಚ್ಚರಮೆತೋಱುವವೋಲ್ ತಲೆದೋಱಿದತ್ತು ವಾ
ಸಂತಿ ವಸಂತದೂತಿವೆಸರಿಂತಿದು * ಸಾರ್ಥಕವಾಗಿ ತೋರ್ಪಿನಂ ॥ ೨೧

ತೆಂಕಣ ಗಾಳಿ ಬೀಸುತಿರೆ ಪಣ್ಣೆಲೆ ಪಣ್ಣನೆ ಬೀೞೆ ನೀರಸ
ತ್ವಂ ಕಿಡೆ ನುಣ್ಪಿನಿಂ ಮೊನಸಿ † ನಿಂದೆಲೆಗಂಟೊಡೆದೊತ್ತಿದತ್ತು ಚೂ ।
ತಾಂಕುರಮೋತಗಲ್ದ ವಧುಗಳ್ಗೆ ವಿಷಾಂಕುರಮಂಗಜಂಗೆ ರಾ
ಗಾಂಕುರವೃತ್ತ ‡ ಕೋಕಿಲಕುಲಕ್ಕಮೃತಾಂಕುರಮಿಂತಿದೆಂಬಿನಂ ॥ ೨೨

ಕಲಿಕೆಗಳೆಂಬ ಹರ್ಷಪುಳಕಾವಳಿಯಂ ತಳೆದಿರ್ಪಳಾಮ್ರಕೋ
ಮಲೆ ಮಧುಪಾವಳೀನಿನದಮೆಂಬ ಕಳಧ್ವನಿಯಿಂದೆ ಮಲ್ಲಿಕಾ ।
ಲಲಿತೆ ಕಡಂಗಿ ಪಾಡಿದಪಳಬ್ಜಿನಿ ತನ್ನ ಪರಾಗಮೆಂಬ ತಂ
ಬುಲಮುಗೆ ನಕ್ಕಪಳ್ ವಿಕೃತಿಯಂ ಮಧುಸಂಗತಿಮಾಡದಿರ್ಕುಮೇ ॥ ೨೩

ಸುಮನೋಬಾಣೇಭಕುಂಭಸ್ಥಳಕಳಿತಕನತ್ಸಾಂದ್ರಸಿಂದೂರಮುದ್ಯಾ
ನಮಹಾಂಭೋಧಿಪ್ರವಾಳಂ ಮಧುವಿಟಪರಿರಂಭೋತ್ಥಪೃಧ್ವೀಮನೋರಾ।
ಗಮಿದೆಂಬೊಂದಂದದಿಂ ರಂಜಿಸಿದುದೆಸೆವ ಪೂಗೆಂಪಿನಿಂ ದಕ್ಷಿಣಾಯಾ
ತಮರುನ್ನ್ಯಸ್ತೋತ್ಪಲಾಶಂ ಪ್ರಸವಕೃತಘನಾಳೀಪಲಾಶಂ ಪಲಾಶಂ ॥ ೨೪

ತೆಂಬೆಲರೆಂಬ ಸುಯ್ ನಿಮಿರೆ ಮಲ್ಲಿಗೆಯೆಂಬಲರ್ಗಣ್ಗಳೊಳ್ ಕರಂ
ತುಂಬಿಗಳೆಂಬ ಕಾಡಿಗೆಯ ಕಣ್ಬನಿ ಪೊಣ್ಮೆ ಬೆಡಂಗುವೆತ್ತು ಮಾ ।
ವೆಂಬ ಲತಾಗೃಹಕ್ಕೆ ವನಲಕ್ಷ್ಮಿ ವಸಂತಕನಂ ಪಿಕಸ್ವನಾ
ಡಂಬರೆ ತಾನದೇಂ ಪಿಡಿದು ತಂದಳೊ ಸಪ್ರಣಯಪ್ರಕೋಪದಿಂ ॥ ೨೫

ತೀವಿದ ನುಣ್ಪೊನರ್ ಕಿಱುಗೊನರ್ ನಸುಬಲ್ಗೊನರೆಂಬಿವೀಱ್ಗೆವೆ
ತ್ತಾವಗಪೊಳ್ದಳಿರ್ ಪೊಸದಳಿರ್ ನಸುಕೆಂದಳಿರಾಗಿ ತಳ್ತು ನಾ ।

---

* ಕ. ಗ — ನನೆದೋಱಿದತ್ತು ವಾಸಂತಿವಸಂತದೂತಿವೆಸಱೆಂಬುದು.

† ಮೊ ಅ. ಸೊಗಸಿ ‡ ಮೊ. ಅ. ರಾಗಾಂಕುರವೃದ್ಧ.

ನಾವಿಧದಳ್ಗೊಂಬು ಸೆಳಗೊಂಬೆಳಗೊಂಬುಗಳಿಂದಮೊಪ್ಪುವಿ
ಮ್ಮಾವಿನ ಬಳ್ಳಿವೆಣ್ಮಾವಿನೆಳಮಾವಿನ ಸೊಂಪೆಸೆಗುಂ ವನಾಂತದೊಳ್ *॥ ೬೬

ಕಳಿಕೆ ಕೊನರ್ ತಳಿರ್ ಮುಗುಳಲರ್ ಮಿಡಿ ಕಾಯ್ ನಸುದೋಱೆ
ದೋಱೆ ಪಣ್
ಬಳಸಿರಲಾಗಳಂಪಱಿಯಿಂ ನಡೆ ನೋೞ್ಪೊಡಮಂತೆ ತಾನ ಕ ।
ಣ್ಗೞ್ ಸಿರಿ ತಾನೆ ರಮ್ಯಮೆನಿಸಿರ್ದ್ದ ವಿಯೋಗಿಜನಕ್ಕೆ ವಲ್ಲಭಾ
ವಳಿಗಿದು ಡಾಮರಂ ಮದನತೋಮರಮಾದುದು ಬಂದ ಮಾಮರಂ ॥ ೬೭

ನವರತ್ನೋಜ್ವಲನೂಪುರಕ್ವಣಿತವಾಮಾವಾಮಪಾದಾಂಘ್ರಿಪ
ಲ್ಲವಸಂಘಟ್ಟನದಿಂ ತಳಿರ್ತಲರ್ದ್ದು ತನ್ನೊಳ್ ತತ್ಪದಾಲಕ್ತಕಾಂ ।
ಶುವ ಕೆಂಪುಂ ತಳಿರ್ಗೆಂಪುಮುಳ್ಳಲರ ಕಂಪುಂ ನಾಡೆಯುಂ ಚೆಲ್ವಿನೀ
ಱುವಿನಂ ಮೂವಡಿಗೆಂಪುವೀಱಿದುದಶೋಕಾನೋಕಹಂ ಚೈತ್ರದೊಳ್ ॥

ಲಲನೆಯುನ್ನತಸ್ತನದ ಸೋಂಕಿನೊಳೀತರುವೀ ಪ್ರಮೋದದಿಂ
ಪುಳಕಿತಮಾಯ್ತು ಕಾಂತೆಯರ ಪೆರ್ಮೊಲೆಸೋಂಕಿನೊಳಾವಮಾನವರ್ ॥
ಪುಳಕಿತರಾಗದಿರ್ಪರೆನೆ ತನ್ವಿಯುರುದ್ಘಕುಚಂಗಳೊತ್ತಿನಿಂ
ಬೆಳೆದು ನವಾಂಕುರಂ ಕುರವಕೋತ್ಕರದೊಳ್ † ಕರಮೊಪ್ಪಿ ತೋ
ಱುಗುಂ ॥

ಹಸಿತಾಂಭೋಜಾಸ್ಯೆಯರ್ ಮುಕ್ಕುಳಿಸಿಯುಗುಳ್ವನಂ ಸೀದುವಂ ಸೀ
ದುವಂ ಸೇ
ವಿಸಿ ಸೊರ್ಕಿಂದೀಮಹೀಜಂ ತಳೆದು ಪುಳಕಘರ್ಮಾಂಬುಸಂದೋಹ
ಮಂ ಸಂ ।
ತಸದಿಂ ಪಾಡುತ್ತುಮಿರ್ದತ್ತೆನಿಸಿ ಮುಗುಳ್ಗಳಂ ಪೂಗಳಂ ತಾಳ್ದಿ ಭೃಂಗೀ
ರಸವದ್ಗೇಯಪ್ರಣಾದಾಕುಳವಕುಳಕುಳಂ ಚೆಲ್ವನೆತ್ತಿರ್ದುದೆತ್ತಂ ॥ ೭೦

* ಖ—ವಸಂತದೊಳ್. † ಕ ಗ—ಕುರವಕೋತ್ಕರದಿಂ

ಸುದತಿಯರ ನಯನ ಕಾಂತಿಯೆ
ಪುದಿದಿದಱೊಳ್ ಬೞಿಕ ಪೋಗದಿರ್ದತ್ತೆನೆ ಪೂ ।
ತುದು ಪಕ್ಷ್ಮಳೇಕ್ಷಣಾಲೋ
ಕದಿನುದ್ಯಾನದ್ರುಮೈಕತಿಲಕಂ ತಿಲಕಂ ॥ ೩೧

ಮನಸಿಜತೇಜದಂಕುರವನಂಗಸ್ಪೃಹಾಂಗನೆ ತೊಟ್ಟ ಚಿನ್ನಪೂ *
ವನವಧು ಚೈತ್ರನಂ ನಿವಳಿಪುಜ್ವಲ † ದೀಪವೆನಲ್ ಕವಲ್ತು ಕಂ ।
ಪಿನೊಳನಿತುಂ ವನಾಂತರದ ಪೂಗಳ ಕಂಪನದಿರ್ಪ ತನ್ನ ಕಂ
ಪನ ಪೆಂಜಿಯುತ್ತುಮಿರ್ಪಲರ ಜೊಂಪದಿನಂದೆಸೆದತ್ತು ‡ ಚಂಪಕಂ ॥

ಅನುನಯದಿಂದೆ ಮೂಡಿದ ಪಸುರ್ಗನೆ ಬೆಳ್ನನೆಯುಪ್ಪ ಪೊಂಗಿ ಬೆ
ಳ್ನನೆ ಮುಗುಳಪ್ಪ ಬೆಳ್ಮುಗುಳುಮೊಯ್ಯನ ¶ ಬಲ್ಮುಗುಳಪ್ಪನುಕ್ರಮಂ ।
ತನಗೆಸೆಯಲ್ ತೊಡಂಬೆ ಕೆಳಗಾಗೆ ಸಿಡಿಲ್ದು ಮರಲ್ದುರುಳ್ವ § ಕಂ
ಪಿನ ಕಣಿ ತುಂಬಿಯಂ ನೆರೆಪುತಿರ್ದುದು ಮಲ್ಲಿಗೆ ಚೈತ್ರಮಾಸದೊಳ್॥ ೩೩

ಎಲೆಯೆಂಬ ಚೀನದುಳ್ಪುಡೆ
ತೊಲಗಿರೆ ಮಧು ಸರೆಯೆ ತನ್ನೊಳೂಲವಿಂದೀಪಾ ।
ಟಲಿಗಾಯ್ತುದರದ ಕಱಿಯೆನೆ
ಮಲರ್ಗೆಱಗಿರ್ದಳಿ ವಿರಾಜಿಕುಂ ಪಾಟಲಿಯೊಳ್ ॥ ೩೪

ಚಿರಗಂಧ + ವಲ್ಲದಿರೆಯುರೆ
ಕೊರಗುವುವೀಕ್ಷಣಿಕಭೋಗಕುಸುಮಂಗಳವೇ ।
ದೊರೆ ಮಿಕ್ಕುವೆಂದು ನಗುವಂ
ತಿರೆ ಬಿರಿದುವು ಸುರಯಿ ಬಿರಯಿಯೆರ್ದೆ ಬಿರಿವಿನಗಂ ॥ ೩೫

---

* ಕ ಖ — ಚೆನ್ನಪೂ. † ಕ ಗ — ನವಳಿಪುಜ್ವಲ
‡ ಖ — ಜಂಪಕದಿಂದೆಸೆದತ್ತು ¶ ಖ — ಬೀಗಿಮುಗುಳೊಯ್ಯನೆ
§ ಕ — ಸಾರಲ್ದರಲ್ದು. ಖ. — ಮರಲ್ದರಲ್ದ + ಕ ಗ — ಸಿರಿಗಂಧ

ಸೊವಡಿಂಗೆ ಮುಸುಱಿದಳಿ ಮು
ದ್ರೆವೊಲಿರೆ ಮದನನ ಸುಗಂದಬಂಡಾರದವೊಲ್ |
ನವಸೌರಭಮಂ ತಾಳಿ
ರ್ದುವು * ಸೇವಂತಿಗೆ ವಸಂತಸಮಯೋತ್ಸವದೊಳ್ || ೩೬

ಚಿತ್ತಭವನಂಗರಾಗದ
ಕತ್ತುರಿ ತೀವಿರ್ದ ಪೊನ್ನ ಬಟ್ಟಲ್ಗಳನಲ್ |
ಮತ್ತಾಳಿ ಮುಸುಱಿ ನಿಲಲೆಸೆ
ಯುತ್ತಿರ್ದುವು ಕರ್ಣಿಕಾರಕುಸುಮಚಯಂಗಳ್ || ೩೭

ಸೊನವನಿ ಚಂಚುವಿಂ ಪನಿಯೆ † ಮಾಂಗೊನರಂ ನಸುಗರ್ಚಿಸೊರ್ಕಿನಿಂ
ತನು ದಳವೇಱಿ ಕಂಠವಿವರಂ ತೊವರೇಱಿ ಪಟುತ್ವವೇಱಿ ಕಾ |
ಮನ ನನೆಯಂಬುಗಳ್ ವಿರಹಿವೃಂದದ ಮೆಲ್ಲೆರ್ದೆಯಂ ಪುಗಲ್ ನಿಜ
ಧ್ವನಿ ಬಗೆಯಂ ಪುಗಲ್ ಬಿಡೆ ಪುಗಲ್ಪುಗಲೆಂದುದು ‡ ಕೋಕಿಲವ್ರಜಂ ||

ತಳಿರಂ ಚಿವುಂಟಿ ಪೂವಿಡಿ
ಗಳನಿಱಿದೆಂಜಲಿಸಿ ಕಾಯ್ಗಳಂ ಪಣ್ಣ ರಸಂ |
ಗಳನೀಂಟಿ ತಂಡತಂಡದೆ
ಗಿಳಿ ಗೆಡೆವರೆ ¶ ಗಿಳಿಗಳಸೆದುವೆಳಮಾವುಗಳೊಳ್ || ೩೯

ಸುರಸಪಲಾಶಪುಷ್ಪ § ಚಯದೊಳ್ ವನಲಕ್ಷ್ಮಿಯ ರತ್ನನೂಪುರ
ಸ್ವರಮೆನೆ ಹೇಮತಾಮರಸದೊಳ್ ಜಳದೇವಿಯ ವಕ್ತ್ರ + ಕೂಜಿತ |
ಸ್ವರಮೆನೆ ಮಲ್ಲಿಕಾಮುಕುಳದೊಳ್ ರತಿಕಾಂತನ ಬಾಣಝೇಂಕೃತ
ಸ್ವರಮೆನೆ ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವರಂ || ೪೦

---

* ಕ ಗ — ಕುಡುತಿರ್ದುವು  † ಖ — ಪರಿಯೆ. ‡ ಕ. ಖ. ಗ. — ಪುಗಿಲ್ಪುಗಿಲೆಂದುದು  ¶ ಖ — ಗಿಜಿಪಡೆವರೆ  § ಕ — ಸರಸವಿಕಾಸಪುಷ್ಪ ಗ — ಸರಸವಿಲಾಸಪುಷ್ಪ  + ಕ. ಗ. ರತ್ನ

ಬೆಳಪೀಚಂದ್ರಾಂಶು ಪ್ರತೀವಿಚಕಿಲಮಲೆವೀತಂಬೆಲರ್ ಬಗ್ಗಿಪೀಕೋ
ಕಿಳವೆನ್ನೊಳ್ ತಾವೆ ಮಾಱ್ಕಂ ಭುವನಜಯಮನಾಂ ಕೈದುಗೆಯ್ವನ್ನಮೋನಂ * ।
ದೆಳಪಾವಂ ನೆಮ್ಮಿ ತನ್ನೋಪಳ ಮೊಲೆಗೆಲನಂ ನೋಡುತುಂ ತುಂಬಿಯಿಂದಂ
ಗಿಳಿಯಿಂದಂಬೀರಮಂ ಪಾಡಿಸಿಪ್ರೊಗಱುಸುವಂ ಚೈತ್ರದೊಳ್ ಚೈತ್ರಮಿತ್ರಂ ॥ ೪೧

ಕಲಿಕಾಸಂವೀತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿಕಂಕೆ
ಲ್ಲಿಲತಾಂತಾಕ್ರಾಂತವಾಸಂತಿಕವೆಸೆದುದು ಯೋಗಿವ್ರಜಸ್ವಾಂತಕುಂತಂ।
ವಿಲಸನ್ಮಲ್ಲೀಲತಾಂತಂ ರಟದಳಿಪಟಲಾಕ್ರಾಂತಮಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಂತುಕಾಂತಂ ವಸಂತಂ ॥೪೨

ವ॥ ಆ ವಸಂತದೊಳ್ ವನವಿಲಾಸಮನಱಿಪಲೆಂದು ಸುಪ್ರಸ್ತಾವದೊಳಾಸ್ಥಾಯಿಕೆಯುಂ ಪೊಕ್ಕು,

ಸುರುಚಿರಚಂಪಕಪ್ರಸವಕಾಂಚನಪುಷ್ಪಚಯಂಗಳಂ ಮನೋ
ಹರವನಮಲ್ಲಿಕಾಮುಕುಳಸಂಕುಳನಿರ್ಮಳಮೌಕ್ತಿಕಾಕ್ಷತೋ।
ತ್ಕರಮನುಪೇಂದ್ರಪಾದದುಪಭೂಮಿಗೆಸೂಸಿದನುತ್ಸಹಂ † ಪೊದ
ಱ್ದರೆ ವನಪಾಲಕಂ ನತಿಚಳಾಳಕ ‡ ನುದ್ಗತರೋಮಜಾಳಕಂ ॥ ೪೩

ವ॥ ತದನಂತರಂ,

ಕುರವಕದಂಕುರಂ ತಿಲಕದುಜ್ಜ್ವಲಪುಷ್ಪಮಶೋಕದೊಳ್ದಳಿರ್
ಮರುಗದ ¶ ನುಣ್ಗೊನರ್ ದವನದೊಳ್ಗಡಿ ಮಾವಿನ ಕೆಂದಳಿರ್ ನವಾಂ।
ಬುರುಹದ ಮೊಗ್ಗೆ ಸಂಪಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ
ಮುರರಿಪುಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ॥೪೪

* ಖ—ಕೈದುಗೊಳ್ವನ್ನಮೋಕಂ   † ಕ. ಖ.—ಸೂಸಿದನುತ್ಸವಂ.
‡ ಖ.—ವಿನತಜಾಲಕ.   ¶ ಕ. ಗ.—ಮರುವದ.

ವನಲಕ್ಷ್ಮಿಗೆ ಮಧುವಿಂ ಯೌ
ವನಲಕ್ಷ್ಮಿ ಪೊದಟ್ದು ರಂಜಿಸಿರ್ದಪುದಾನಂ ।
ದನಲಕ್ಷ್ಮಿಗೆ ಭೋಗಾನಂ
ದನಲಕ್ಷ್ಮಿಯನುಂಟುಮಾಡು * ನಿಜಸಂಗತಿಯಿಂ ॥ ೪೫

ತರಳಾಪಾಂಗದ ಬೆಳ್ಪು ಕೆಂದಳದ † ಕೆಂಪೋರೊರ್ವೞ ಪೊಣ್ಮಲ್ ತಳ
ರ್ಪರನುಂ ಪೂವೆರನಾಗೆ ಪೂಮರನುಮಂತಾಬೇಗದಿಂದಂ ತಳ ।
ರ್ಪರನಾಗುತ್ತಿರೆ ಭಿನ್ನಸೃಷ್ಟಿವಡೆಯುತ್ತುಂ ಯಾನವಾಚಾಳಿತಾ
ಭರಣಂ ನಿನ್ನಬಲಾಳಿ ಪೂವಿಡುವುದಂ ನೋಡಿಂ ವನಕ್ರೀಡೆಯೊಳ್ ॥ ೪೬

ವ॥ ಎಂದು ಬಿನ್ನವಿಸಲದಂ ಮನದೆ ಕೊಂಡು,

ತೆಗೆಯುತ್ತುಂ ಮೇಲುದಂ ಪೆರ್ಮೊಲೆಗೆ ಪರಿಜೆಯಂ ಹಸ್ತದಿಂದೊತ್ತುತುಂಸಾ
ವಗಿಸುತ್ತುಂ ಜೋಲ್ದ ಧಮ್ಮಿಲ್ಲಮನಳವಡಿಸುತ್ತುಂ ಕುರುಳ್ದೂಂಗಲಂನೀ ।
ವಿಗ ಕಾಂಚೀದಾಮಮಂ ಸಾರ್ಚುತುಮಬಲೆಯರೋರೊರ್ವರೊಂದೊಂದುಪಾಂಗಿಂ
ಬಗೆಗೊಂಡೇೞ್ವನ್ನೆಗಂ ತನ್ನೊಡನೆ ಹರಿ ವನಕ್ರೀಡೆಗೆಂದಟ್ಟಿನಾಗಳ್॥ ೪೭

ಪಣ್ಣುಗೆಮ ರತ್ನಚಯದಿಂ
ಕಣ್ಣೊಳ್ಕ ಜಗಂ ತಟಿಲ್ಲತಾಪ್ರಭೆಯಿಂದಂ ‡ ।
ಪಣ್ಣಿ ಗೃಹಾಂಗಣತಟದೊಳ್
ಪಣ್ಣಿರ್ದುದು ಪಟ್ಟವರ್ಧನಂ ಭದ್ರಗಜಂ ॥ ೪೮

ವ॥ ಆ ದ್ವಿಪೇಂದ್ರಮನುಪೇಂದ್ರನೇಱಿ,

---

* ಕ, ಗ — ವಾಡಿ. † ಕ, ಗ, — ಕೆಂದಳಿರ.
‡ ಖ, — ಭ್ರಮೆಯಿಂದಂ.

ವನಕೇಳಿಗೆ ದಿಗ್ವನಿತಾ
ಜನಮುಮನಾಮಂತ್ರಿಸಂತೆ ಘೋರೆನೆ ತೂರ್ಯಂ ।
ಸ್ವನಮಖಿಲಾಂತಃಪುರಕಾ
ಮಿನೀಕುಮಾರಕಸಹಸ್ರಸಹಿತಂ ತಳರ್ದಂ ॥ ೪೯

ಎರಲಲೆಪಿಂ ತೆಱಂಬೊಳದು ಪೂಂಬಳೆದೊಂಗಲನಾಂತ * ಕೌಂಗುಗಳ್
ಗಿರಿವನದಲ್ಲಿ ಪೂಮರಗಳೊಳ್ ನಸುದೋರ್ಪವೊಲಿರ್ಕೆಲಂಗಳೊಳ್ ।
ಕರಿಣಿಯನೇಱ ಕೈಟಭವಿರೋಧಿಗೆ ಚಾಮರವಿಕ್ಕುತಿರ್ಪ ತಾ
ಮರಸದಳಾಕ್ಷಿಯರ್ ಪಿಡಿದ ಬೆಳ್ಗೊಡೆ ಚಂದ್ರಮನಂತೆ ತೋಱು
ಗುಂ † ॥ ೫೦

ಕದಳಿಕೆಯು ಪೊಯ್ಲೊಳಂಬರ
ನದಿಯಿಂ ನೊರೆವಿಂಡು ಬಂದು ಮಂಡಳಿಸಿತ್ತೀ ।
ರದನಿಯು ಮೇಲೆನೆ ಹರಿಗೊ
ಪ್ಪಿದುದಾನಯ ಮೇಲೆ ಪಿಡಿದ ಧವಳಚ್ಛತ್ರಂ ॥ ೫೧

ಎತ್ತಿದ ಪೀಲಿಯ ಸತ್ತಿಗೆ
ಮುತ್ತಿನ ಕೊಡೆ ಮೇಘಡಂಬರಂಗೆಲೆ ಬನಮಂ ‡ ।
ಮುತ್ತುವ ನಡೆಬನವೆನಿಸಿ ಬ
ರುತ್ತಿರ್ದುದು ಬನಕೆ ಪೆಂಡವಾಸದ ತಂಡಂ ॥ ೫೨

ವ॥ ಅಂತೆಯ್ದಿವರ್ಪಲ್ಲಿ,

ನಳಿಸೀರೇಣುಗಳಂ ಕಳಲ್ದಲರ್ಗಳಂ ಕೀರಾಳಿನಾದಂಗಳಂ
ತಳದೆತ್ತಂ ಪಟವಾಸಮಂ ಕದಱುತಂ ಶೇಷಾಕ್ಷತಾನೀಕಮಂ ।
ತಳಿಯುತ್ತುಂ ಪರಸುತ್ತು ¶ ಮೊಯ್ಯನಿದಿರ್ಗೊಳ್ವಂದದಿಂ ನಂದನಾ
ವಳಿಯಿಂದಂ ವಸುದೇವಸೂನುಗಿದಿರ್ವಂದತ್ತೊಂದು § ಮಂದಾನಿಳಂ ॥

* ಖ. __ ಪೂಮುಡಿದೊಂಗಲನಾಂತ.
† ಖ. ದೆಕ್ಕೆಯೊಳೊಪ್ಪಿತೋಱಿದರ್. ‡ ಖ.—ತಳದಬನಂ.
¶ ಕ. ಗ.—ಪರಪುತ್ತು. § ಖ —ಸೂನುಗಿದಿರಂಬಂದತ್ತು

ವ|| ಅಂತುಬಂದಗಂಧವಹನಂ ಮನದೆಕೊಂಡು ವನೋಪಕಂಠ
ದೊಳ್ ವೈಕುಂಠನಿಭೇಂದ್ರಸ್ಕಂಧದಿಂದವನಿತಳಕ್ಕವತರಿಸಿದಾಗಳ್,

ತುಡುಗೆಯ ಬಂಬಲ್ವೆಳಗಿಂ
ಬೆಡಂಗುವಡೆದಂಗಕಾಂತಿಯುಂ ತುಡುಕುವಿನಂ * |
ಪಿಡಿಯಿಂದಿೞಿದಳ್ ಕಾರ್ಮುಗಿ
ಲೆಡೆಯಿಂ ಕುಡುಮಿಂಚು ಘಟಿಲನಿೞಿವವೊಲೊಪ್ಪಾಳ್ || ೫೪

ವ|| ಮತ್ತೊರ್ವಳ್,

ಕೆಂದಳಿರ್ವೆಱೆದ ನವಮಾ
ಕಂದದಿನೆಳಗೊಂಬು † ನೆಲಕೆ ಫಳಭರದಿಂ ಜೋ |
ಲ್ವಂದದಿನಿೞಿದಳ್ ಕುಚಭರ
ದಿಂದಂ ನಡು ಬಳ್ಕೆ ಪೊನ್ನ ಸೆಣ್ಣುಗೆವಿಡಿಯಿಂ || ೫೫

ತೆಂಗಾಳಿಯಿನಂಶುಕದ ಸೆ
ಱಂಗು ತೆಱಂಬೊಳೆಯೆ ಪಿಡಿಯನಿೞಿದಳದೊರ್ವಳ್ |
ತುಂಗಪುಳಿನಾಗ್ರದಿಂ ಧರೆ
ಗಂಗಜನಿೞಿಪುವ ಸಚೀನಕೇತುಶ್ರೀವೋಲ್ || ೫೬

ಪಿಡಿಯಿಂದಿೞಿದಳ್ ಪೆಱಳೊ
ರ್ಪಿಡಿಯಿಂ ನಡು ಸಣ್ಣಮೆನಿಪ ವಧು ಮದನನ ಕೈ |
ಪಿಡಿಯುಂತೆಸೆದೀಕ್ಷಿಪರಂ
ಪಿಡಿಯುಂಬಿಂ ಕಾಮನಾರ್ದು ಸಾರ್ದಿಸುವಿನೆಗಂ || ೫೭

ಸ್ಮರರಕ್ತಕಾಚಲಶಿಖರಾಂ
ತರಲತೆವೋಲ್ವಾಯ್ದುದೊಂದು ಸೋಗೆಯಬಿಣ್ಪಿಂ |

---

* ಖ.— ಬಂಬಲ್ವೆಳಗಿಂಬಡಂಗುವಡೆದಂಗಕಾಂತಿಯಿಂತುಳ್ಕುವಿನಂ
† ಕ, ಗ.— ಮಾಕಂದದಸೆಳೆಗೊಂಬು

ಧರೆಗೆಱಗುವಂತದೊರ್ವಳ್
ಪರಾಂಗಿ ಬಿಡುಮುಡಿಯಿನೆಸೆದು ಪಿಡಿಯಿಂದಿೞಿದಳ್ ॥ ೫೮

ವ॥ ಅಂತು ನಿಜಾಂತಃಪುರತರುಣಿಯರ್ ಕರಿಣಿಗಳನಿೞಿಯೆ,

ಅಂಗದರತ್ನಕೌಸ್ತುಭಮಣಿದ್ಯುತಿಪಲ್ಲವಿತಂ ಮುರಾರಿ ಬಂ
ದಂ ಗಮನಶ್ರಮಾಂಬುಕಣಭೂಷಣಮೌಕ್ತಿಕಕುಟ್ಮಳಪ್ರರೂ ।
ಢಾಂಗವಧೂಜನಂ ಬರೆ ವಿಳಾಸದೆ ಜಂಗಮಕಲ್ಪಭೂರುಹಂ
ಜಂಗಮಕಲ್ಪವಲ್ಲರಿಗಳಿಂ ಪರಿವೇಷ್ಟಿತಮಾಗಿ ಬರ್ಪವೋಲ್ ॥ ೫೯

ವ॥ ಅಂತು ನಡೆತಂದು,

ಸಮದಪಿಕಸ್ವನವಾದ್ಯಂ
ಭ್ರಮರೀರವಗೀತಮನಿಲಲುಳಿತಲತಾನೃ ।
ತ್ಯಮೊಡರ್ಚುವಿನಂ ಸಂಗೀ
ತಮನುಪವನರಂಗಮಂ ಮುಕುಂದಂ ಪೊಕ್ಕಂ ॥ ೬೦

ಸಲ್ಲಲಿತಾಂಗಿಯರ್ ಮಣಿವಿಭೂಷಣಕಾಂತಿಯಿನೀಕ್ಷಣಾಂಶುವಿಂ
ಪಲ್ಲವಪುಷ್ಪಜಾಳಮನಪೂರ್ವಮನೆಯ್ದೆ ಕುಜಾಳಿಗೀವನಿ ।
ತ್ತಲ್ಲದೆ * ಕೋಮಲಾಂಘ್ರಿರುಚಿಯಿಂ ನಖರೋಚಿಯಿನಧ್ವವಲ್ಲಿಗಂ †
ಪಲ್ಲವಪುಷ್ಪಮಂಜರಿಯನಾಗಿಸುತುಂ ನಡೆದರ್ ವನೋರ್ವಿಯೊಳ್ ॥ ೬೧

ವನಮಾಲೆಯೊಳ್ ವಿಹಾರಿಸಿ
ವನಮಾಲೆಯೊಳೆಸಗುವಬ್ಜನೀಮಾರುತನಿಂ ।
ವನಮಾಲೆ ಪೊಳೆಯೆ ಕೃಷ್ಣಂ
ವನಮಾಲಯಮಾಯ್ತು ಲೀಲೆಗೆಂದೆನೆ ಸುೞಿದಂ ॥ ೬೨

ವ॥ ಅಂತು ಸುೞಿವಲ್ಲಿ,

* ಖ — ಕುಜಾಳಿಗಿತ್ತನಿತ್ತಲ್ಲದೆ † ಖ. — ಅಧ್ವರೋಚಿಗಂ.

ಮೊದಲೊಳ್ ತಂಬೆಲರ್ಗಾನ ಬೋದಣಿಗೆಗಂಪಂ ಬೀಱಿದಂ ಸುಗ್ಗಿ ಬ
ರ್ಪುದನೀನಂದನಕಾನನೆ ಮುಂದುದೆಗೆದಂ ಪುಷ್ಪೇಷುಗಂ ಪುಷ್ಪಬಾ।
ಣದ ಮುಂಗಾಣಿಕೆಗೊಟ್ಟನಾನೆ ಪೆಱತೆನ್ನಂತಾದುದೇ ಮೈಮೆಗಾ
ಸ್ಪದಮಂಬಂತೆವೊಲಾಯ್ತು * ಮಾಧವಿ ಮದಾಳಿಧ್ವಾನಸಂತಾನದಿಂ ॥೬೩

ವ॥ ಅದಂ ನೋಡಿ ತತ್ಸಮೀಪದೊಳೊಂದು ತುಱುಗಿ ಬಂದ ಮಂದಪವನಪರಿಧೂತಚೂತಮಂ ಕಂಡು,

ಸೊನೆಯಿಂ ದಾನಜಲೌಘಮಂ ತೊನೆಪದಿಂ ಕೊಂಬಾಟಮಂ ಕೋಕಿಲ
ಸ್ವನದಿಂ ಬೃಂಹಿತನಾದಮಂ ಮಿಸುಪ ಕೊಂಬಿಂ ಕೊಂಬನಾಟಂದು ಕಾ।
ಯ್ಪಿನ ಸೊಂಪಿಂ ಪೊಳೆವಗ್ರ † ಪಲ್ಲವಮುಮೊಪ್ಪಲ್ಮಾವಿನೊಳ್ ಪೇಱಿಕೈ
ಯುನನಂಗದ್ವಿಪದಂತೆದಿರ್ಪಿದಪುದೀಚೂತಂ ವಿಟವ್ರಾತಮಂ ॥ ೬೪

ಪೆಳದಿಂದಂ ಪನಸಾದಿಸತ್ಫಲಮಹೀಜಂ ಪುಷ್ಪದಿಂ ಚಂಪಕಾ
ದಿಳಸತ್ಪುಷ್ಪಕುಜಂ ಪ್ರವಾಳದಿನಶೋಕಾದಿಪ್ರವಾಳಾಂಘ್ರಿಪಂ।
ತಳೆಗುಂ ಚೆಲ್ವನದಲ್ಲದಂತು ಫಲದಿಂ ಪುಷ್ಪೌಘದಿಂ ಪಲ್ಲವಾ
ವಳಿಯಿಂ ಕೂಡೆ ವಿಳಾಸಮಂ ತಳೆಗುಮೇ ಚೂತಂಬೊಲನ್ಯದ್ರುಮಂ ॥

ವ॥ ಎಂದು ಪೊಗೞೆ ಕೆಲದೊಳಿರ್ದಶೋಕದ್ರುಮಮನದೊ ರ್ವಂ ‡ ಪಾರ್ಶ್ವವರ್ತಿ ನೋಡಿ,

ಸುದತಿಯರಂಘ್ರಿಪಾತದೊಳೆ ಪಲ್ಲವಿಸಿರ್ದನುರಕ್ತವೃತ್ತಿಪೆ
ರ್ಚಿದ ಸುಮನಶ್ಶಿಳೀಮುಖವಿಕಾರಮೆ ಈತರುರಾಜನೆಮ್ಮೊಳಿಂ।
ತಿದು ಸಮಮಾಗಲಾಂ ಸಲೆ ಸಶೋಕನೆನಾದೆನಶೋಕನಾದುದಿಂ
ತಿದು ವಿಪರೀತಮೆಂದು ಪೊಗೞ್ದಂ ಪರಿಹಾಸಕನಂದಶೋಕಮಂ ॥ ೬೬

* ಖ.— ಪೆಱತೆನ್ನಿಂದಾದುದಾಂಮೆಯ್ಮೆಗಾಸ್ಪದಮಾಯ್ತೆಂಬವೊಲಾಯ್ತು
† ಖ.—ಪೊಸವಗ್ರ. ‡ ಖ.—ಕೆಲದೊಳಿರ್ದಶೋಕವನದುರ್ಬಂ.

ವ॥ ಆಮಾತಿಂಗೆ ಪೀತಾಂಬರಧರಂ ಸಸ್ಮಿತವದನಾರವಿಂದನಾಗಿ, *

ಆಸವಗಂಧದ † ಬಲಮುಖ
ವಾಸನೆಯೊಳ್ ದೊರೆಯಿದೆಂದು ನೋಡಿದನೊಲವಿಂ ।
ಕೇಸರಮಂ ಕುಸುಮರಜೋ
ಧೂಸರಮಂ ವನಮಹೀರುಹಾಗ್ರೇಸರಮಂ ॥ ೬೭

ವ॥ ತದನಂತರಂ,

ತರುಣೀಸ್ತನಸಂಗದಿನಂ
ಕುರಿಸಿದ ಕುರವಕವನಚ್ಯುತಂ ವೀಕ್ಷಿಸಿ ಪೋ ।
ದಿರುಳೊಗೆದ ರುಕ್ಮಿಣೀಸ್ತನ
ಪರಿರಂಭವನಲ್ಲಿ ನೆನದು ಪುಳಕಿತನಾದಂ ॥ ೬೮

ಬಿಸರುಹನೇತ್ರೆಯರವಲೋ
ಕಸಾಂದ್ರ ‡ ಚಂದ್ರಿಕೆಯನೀಂಟಿ ಮತ್ತದನುದ್ಗಾ ।
ರಿಸುವಂತೆಸೆದಪುದೆಂದೀ
ಕ್ಷಿಸಿದಂ ಪೂತೆಸೆವ ತಿಲಕಮಂ ಯದುತಿಲಕಂ ॥ ೬೯

ಬನದ ವಿಭೂತಿ ತಂಬೆಲರ ಮೆಯ್ಸಿರಿ ತುಂಬಿಯ ಗೀತಶಾಲಿ ಚೈ
ತ್ರನ ತೊಡವೋತಗಲ್ದ ರೆರ್ದೆದಲ್ಲಣಮೋಪರ ಸೈಪು ಕಾಮನಂ ।
ಬಿನ ಕಣಿ ಪುಷ್ಪಸಾಯಕನ ಕೀರ್ತಿಯ ಬಿತ್ತುಮೊದಲ್ ಮೃಡಾರಿವೀ
ರನ ಜಯಶಕ್ತಿಯೆಂದಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ ॥೭೦

ಕಾದಲರಿಷ್ಟಸಿದ್ಧಿಗವಕಾಶಮನೀಯೆ ವಿಕಾಸಮಂಧಕಾ
ರೋದಯಮಂ ವನಾವಳಿಗೆ ಪಿಂಗಿಸೆ ಪಿಂಗಮರೀಚಿ ಬಂಧುರಾ ।
ಮೋದವತಿಪ್ರಮೋದಮನೊಡರ್ಚೆ ಧರಿತ್ರಿಗೆ ಪೊನ್ನ ಪೂಗೆ ಕಂ
ಪಾದಪೊಲಿದರ್ದದೆಂದು ಪೊಸಸಂಪಗೆಯಂ ಪೊಗೞ್ದಂ ಜನಾರ್ದನಂ ॥೭೧

* ಖ.—ವಿಸ್ಮಿತಸ್ವಾಂತನಾಗಿ.

† ಖ.—ಆಸವಗಂಧದೆ. ‡ ಖ.—ಲೋಕಸುಧಾ.

ನನೆಕೊನೆವೋಯ್ತು ತನ್ನ ನನೆಯಿಂ ಮದನಮುರ್ವಿಗೆ * ತನ್ನ ಪುಷ್ಪದಿಂ
ಮನಸಿಜಮಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು ತನ್ನ ಪೂ।
ವಿನ ಮಧುವಿಂ ಮದಾಳಿ ಮಧುಪಾಂಕಮನಾಂತುದು ತನ್ನ ಗಂಧದಿಂ
ದನಿಲನೊಳಾಯ್ತು ಗಂಧವಹನತ್ವವದೇಂ ಸುರಹೊನ್ನೆ ಚೆನ್ನನೋ॥ ೨೦

ವ॥ ಎಂದು ಮೆಚ್ಚಿ ಬಿಚ್ಚಳಿಸಿ ಮತ್ತಮನೇಕತರುಗುಲ್ಮಜಾತಿಗಳನತಿಪ್ರೀತಿಯಿಂದಲ್ಲಲ್ಲಿಗೆ ನಿರೀಕ್ಷಿಸುತ್ತುಂ ನಡೆತಂದು ವಸಂತರಾಜನೋಲಗದ ಚಿತ್ರಶಾಲೆಯಂತಿರ್ದ ಬಳ್ಳಿಮಾವಿನೊಳುಪೇಂದ್ರನಿಂದ್ರಲೀಲೆಯಿಂ ಕುಳ್ಳಿರ್ದನಂ ಪುಷ್ಪಾಪಚಯವಿನೋದಮಂ ನೆಗಱಲೆಂದು,

ಪುಳಿನದ ಬಾಲಪಲ್ಲವದ † ಕೋವೆಳಶಾಖೆಯ ಚೆಲ್ವನೆಯ್ದೆ ಗೆ
ಲ್ವಳಘಕಟೀತಟಂಗಳರುಣಾಂಘ್ರಿತಳಂಗಳ ದೋರ್ಲತಾಯುಗಂ।
ಗಳ ಜಯತೂರ್ಯನಾದಮೆನೆ ಕಾಂಚಿಯ ಮೆಲ್ಲುಲಿ ಗೆಜ್ಜೆಯಿಂಚರಂ
ಬೆಳಯದ ನುಣ್ಚುರುವೆಗಱೆ ನಂದನದೊಳ್ ಸುಱಿದರ್ ಲತಾಂಗಿಯರ್॥ ೨೩

ದರಹಾಸರುಚಿಶ್ರೀಯೊಳ್
ಬೆರಸಿದ ತನ್ನಧರಕಾಂತಿಯಂತೊಪ್ಪುವುದಂ ‡।
ತರಳಾಕ್ಷಿ ಕೊಯ್ದಳಲರೊಳ್
ಬೆರಸಿದ ಮೂಂದಳಿರ ತೋಱದೊಂಗಲನೂರ್ವಳ್॥ ೨೪

ಉಂಗುಟಮಂ ಮಹೀತಳದೊಳೂಱ ಮಡಂ ನಿಮಿರಲ್ಕೆ ನಿಱ್ಕಿನಿಂ
ದಂಗದ ಭಂಗಿ ಕಣ್ಗೊಳಿಸೆ ವಾಮಕರಾಂಚಿತಶಾಖೆ ಶೇಖರ।
ಕ್ಕಂಗನೆ ಕೊಯ್ದಳಂದಸುಕೆಯೊಳ್ದಳಿರಂ ನಖರಾವಳೀಮಯೂ
ಖಂಗಳೊಡರ್ಚೆ ಕೆಂಪೆಸೆವಶೋಕದೊಳಂ ಸಿತಪುಷ್ಪಜಾಳಮಂ ¶॥ ೨೫

ವಳಯಝಣತ್ಕೃತಿ ಪಸರಿಸೆ
ನಳಿತೋಳ್ಗಳಂ ನೀಡಿ ನಯನರುಚಿಘನರಕ್ತೋ।

---

* ಖ—ಮದಮುರ್ವಿಗೆ. † ಕ. ಖ ಗ—ಪುಳಿನತರಾಲಪಲ್ಲವದ.
‡ ಖ.—ಕಾಂತಿಯಿಂದೊಪ್ಪುವುದಂ. ¶ ಕ. ಗ.—ಸಿತಬುಷ್ಪಜಾಲಮಂ, ಖ.—ಸ್ಮಿತಪುಷ್ಪಜಾಲಮಂ.

ಜ್ಜ್ವಳತಿಲಕದೊಳ್ ವರಸ್ತ್ರೀ
ತಿಳಕಂ ತಿಳಕಕ್ಕೆ ಕೊಯ್ದಳಲರನದೊರ್ವಳ್ ॥ ೭೬

ವಲ್ಲಭನ ತೋಳ ಸೋಂಕುಂ *
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ ।
ನೊಲ್ಲೆಂ ಪೆಱತನೆನುತ್ತುಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದಳದೊರ್ವಳ್ ॥ ೭೭

ಪರಿಮಳಮೆಂಬುದು ಕುಸುಮೋ
ಪರಿಮಳಮೆನಿಪಳಿಗಳಂಜಲಿತರಪ್ರಸವೋ ।
ತ್ಕರದೊಳನುತಬಲೆ † ಕೊಂಬಂ
ಕರದೊಳ್ ತೆಗೆದಾಯ್ದಳೆಸಳ ‡ ಸಂಪಗೆಯಲರಂ ॥ ೭೮

ಇರೆ ಕಂದುವೊಣಗೆ ಸೌರಭ
ಮಿರದಸ್ಥಿರವರ್ಣದಸ್ಥಿರಾಮೋದದ ಮಿ ।
ಕ್ಕುರಲೇಭಂಡಮೆನುತ್ತುಂ
ಸುರಯಿಯ ಬಿಱಿಮುಗುಳನಾಯ್ದಳೊರ್ವಳಲಂಪಿಂ ॥ ೭೯

ಈತರುವಿಂಗೆ ಮುಂ ನಿಜದೊಳಿಲ್ಲದ ಪಲ್ಲವಮಾದುದೀಕೆಯಿಂ
ಕೌತುಕಮೆಂಬಿನಂ ತುಱುಗಿ ಪೂತೆಲೆಯಿಕ್ಕಿದ ಪಾಟಲಾವನೀ ।
ಜಾತದೊಳಂ ನಿಜಾರುಣಕರದ್ಯುತಿ ಪಲ್ಲವಮಂ ನೆಗೞ್ಚಿಲೇಂ
ಪ್ರೀತಿಯಿನೊರ್ವಳಾಯ್ದಳೊತನೂದರಿ ಪಾದರಿಯೊಳ್ ಲತಾಂತಮಂ॥ ೮೦

ಪಾಸಿನೊಳೆಸಳುದಿರ್ದೊಡದುಂ
ದೇಸೆಗೆನಲ್ ¶ ಮುಡಿಗಮಂತೆ ತಾಮುಳವಡುಗುಂ ।
ವಾಸನೆಯನೀವುವೆಂದು § ವಿ
ಳಾಸಿನಿ ಪೆಱಳಾಯ್ದಳಲರ್ದ ಸೇವಂತಿಗೆಯಂ ॥ ೮೧

---

* ಕ.__ಸೋಂಕೇಂ ಗ.__ಸೋಂಕಿಂ.

† ಖ.__ ಪ್ರಸವೋತ್ಕರಗಳನುತಬಲೆ. ‡ ಖ.__ ತೆಗೆದಾಯ್ದಳೆಸೆವ

¶ ಕ.__ಪಾಸಿನೊಳೆಸಳುದಿರ್ದೊಡದುಂ ದೇಸೆಗೆನೆಲೆ. ಖ.__ಪಾಸಿನೊಳೆಸಳುದಿರ್ದಡದುಂದೇಸೆಗೆನೆಲೆ. § ಖ.__ ವಾಸನೆಯಿನಿನಿಯಾವೆಂದು.

ವ|| ಮತ್ತಮಾ ಸರ್ವರ್ತುಕೋದ್ಯಾನದೊಳೂರ್ವಳ್,

ಜಾತಿಗೆ ಪುಷ್ಪಜಾತಿಗಳ ಜಾತಿಯದೇಂ ಸಮಜಾತಿಯುಪ್ಪುದೇ
ಜಾತಿಯೆ ಜಾತಿ ಮಿಕ್ಕಲರ ಜಾತಿಯದೇತಱ ಜಾತಿಯೆಂದು ತಾಂ |
ಜಾತಿಯು ಜಾತಿಯಂ ಪೊಗೞ್ದು ಜಾತಿವಿಚಾರವಿದಗ್ಧೆ ಕೊಯ್ದಳಾ
ಜಾತಿಯನಾವಿಟೀವಿಟವಿಭೂತಿಯನಾರತಿರಾಗದೂತಿಯಂ || ೯೨

ಗಱಿ ಮೂಡದಿದೊರ್ಡಱಿಯೆಂ
ಗಱಿ ಮೂಡಿದೊಡಾಗಳಂತೆ ತಲೆಗೇಱಿ * ಕರಂ |
ಮೆಱೆವೀಪೊಂಗೇದಗೆಯೊ
ಳ್ಗಱಿಗಳ್ † ಗಱಿಗಟ್ಟ ಮಾಱವೇ ಮಿಕ್ಕಲರಂ || ೯೩

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂದಿದಂ ಸೂಡನೆ ಶಂ |
ಕರನೆಂದು ಕೊಯ್ದಳೂರ್ವಳ್
ಪರಿಮಳಮಂ ಬೀಱುತಿರ್ಪ ಪೊಂಗೇದಗೆಯಂ || ೯೪

ಕಚಬಂಧಂ ಬಿಡುತಂದು ನೀವಿ ಶಿಥಿಲತ್ವಂಬೆತ್ತು ನೀಲಾಲಕ
ಪ್ರಚಯಂ ಸೂಸಿ ಲತಾಂಗಲೇಖೆ ಬೆಮರಂ ತಾಳ್ದಿರ್ದು ಚೀನಾಂಚಲಂ |
ಕುಚದೊತ್ತಿಂ ನಸುಜೋಲ್ದು ಕಣ್ಗೆ ಸೆಯೆ ಬಂದರ್ ಮೂರ್ತಿಶೋಭಾಭರೋ
ಪಚಯಶ್ರಾಂತೆಯರಾದವೋಲ್ ‡ ವನವಿಹಾರಶ್ರಾಂತೆಯರ್ ಕಾಂತೆಯರ್||

ವ|| ಅಂತು ನಿರ್ವರ್ತಿತಪುಷ್ಪಾಪಚಯವಿನೋದೆಯರಾಗಿ,

ಮೃದುಕಂಕೆಲ್ಲಿದಳಾದಿಪಲ್ಲವದೊಳಂ ಮಲ್ಲೀಲತಾಂತಾದಿಪು
ಷ್ಪದೊಳಂ ಚೂತಲತಾಲಯಸ್ಥಿತೆಯರಿಂಬಿಂ ಮಾಡಿ ಮಂಜೀರಹಾ |
ರದ ಕೇಯೂರದ ಕರ್ಣಪೂರದುಡೆನೂಲುತ್ತಂಸದೊಳ್ವಾಚ್ಛಮಂ
ಮದನಂ ಮೋಹನಬಾಣಮಂ ತುಡುವಿನಂ ತೊಟ್ಟರ್ ಲತಾತನ್ವಿಯರ್ ||

---

* ಕ. ಗ — ತಲೆಗೆದಱಿ. † ಕ. ಗ.— ಗಱಿಯೊಳ್.
‡ ಗ.— ಕ್ರಾಂತೆಯರಾದವೊಲ್.

ಗುರುವೆನಿಪತಿಕರ್ಕಶವೆನಿ
ಪ ರತ್ನಭೂಷಣವೆ ಲಘುತೆಯುಂ ಮಾರ್ದವಮುಂ ।
ಧರಿಯಿಸಿ ಕಂಪಂ ಕುಡುವಂ
ತಿರೆ ದೇಸೆಯುನಾಂತುದಲರ ತೊಡವಬಲೆಯರೊಳ್ ॥ ೮೭

ವ॥ ಅಂತು ಪುಷ್ಪಮಂಡನಮನಾಂತು ಬಂದ ಪೆಂಡವಾಸದೆಳ ವೆಂಡಿರ್ವೆರಸು ವನವಿನೋದಮಂ ತೀರ್ಚಿ ಜಲಕ್ರೀಡೆಯುನಾಡಲೆಂದಿರ್ಪಿನಂ,

ತನಗತ್ಯಂತಪ್ರಿಯರ್ ಪಾಂಡವರವರೊಳವಿರಾತಂ ಪ್ರಿಯಂ ಚಕ್ರಿಗೆಂಬ
ರ್ಜುನನಂತಾದೇವಕೀನಂದನನ ಬಲದ ಕಣ್ಣುಮಿಯ್ಯು ಕೆತ್ತುತ್ತಿರಲ್ ಭೋಂ
ಕನೆ ಬಂದಂ ದರ್ಶನಂ ನಿರ್ಮಲಶಶಿಕಿರಣಂ ಕಣ್ಗೆ ಸಂಸ್ಪರ್ಶನಂ ಚಂ
ದನತೋಯಂ ಮೆಯ್ಗೆ ಸಂಭಾಷಣಮಮೃತರಸಂ ಜಿಹ್ವೆಗಪ್ಪನ್ನಮಾಗಳ್ ॥ ೮೮

ವ॥ ಅನಂತರಂ ಉದ್ಯಾನವನಮಧ್ಯದಿಂ ತನ್ಮಧ್ಯಮಪಾಂಡವಪ್ರಕೋಷ್ಠಾವಲಂಬಿಕರಾಂಬುರುಹನಾಗಿ * ತಳರ್ದಷ್ಟೋತ್ತರಶತಾಧಿಕ ಷೋಡಶ ಸಹಸ್ರಾಂತಃಪುರಪುರಂಧ್ರೀಜನಕ್ಕಂ ಸಾಶೀತಿದಶಶತಷಷ್ಟಿ ಸಹಸ್ರಾಧಿಕಲಕ್ಷಕುಮಾರರ್ಗಂ ಆಕುಮಾರರ್ಕಳ ಪೆಂಡವಾಸಕ್ಕಂ ಸಾಷ್ಟಶತ ಷೋಡಶಸಹಸ್ರ ಪುತ್ರಿಯರ್ಗಂ ಆ ರಾಜತನೂಜೆಯರ ವಲ್ಲಭರ್ಗಂ ಮತ್ತಮಸಂಖ್ಯಾತಯಾದವವಿಟಪಟೀಜನಕ್ಕಂ ನೀರಾಡುವೊಡೆ ಸರೋವರಂ ನಡುಯುವದುಕಾರಣದಿಂ ಸಮುದ್ರಮೆ ಸರೋವರ ಮಾಗಲೆವೇಳ್ಕುಮೆಂದು ಮನದೊಳಾಜ್ಞಾಪನಂಗೆಯ್ದು,

ಕರಿಣೀಗಣಾನ್ವಿತಂ ವನ
ಕರಿಪತಿ ನೀರಾಟಮಾಡಲೊಯ್ಯನೆ ಬರ್ಪಂ ।
ತಿರೆ ಗಜಗಮನದ † ಸತಿಯರ್
ಬರೆ ಬಂದಂ ಜಲಧಿಗಲಸಗತಿಯಿಂ ಕೃಷ್ಣಂ ॥ ೮೯

* ಕ. ಖ ಗ.— ಪ್ರಕೋಷ್ಠಾವಲಂಬಿತಕರಾಂಬುರುಹನಾಗಿ.
† ಖ.— ಗಜಗಮನದೆ.

ವ॥ ಅನ್ನೆಗಮಾಸರಿನ್ನಾಥನ ತಟಂಬಿಡಿದು ಸಾರ್ದ ತೆರೆಮಾಲೆಗಳೆ ಪಳುಕಿನ ಸೋಪಾನಪಙ್ಕ್ತಿಗಳಾಗೆಯುಂ, ಅತಳಸ್ಪರ್ಶತೋಯಮೆ ಯಥಾಕಾಮಪ್ರಮಾಣತೋಯಮಾಗೆಯುಂ, ಲವಣಭಾವಮೆ ವಿಮಲಾಮೃತಸ್ವಾದುತ್ವಮನಪ್ಪುಕೆಯ್ಯೆಯುಂ, ಪ್ರೇಂಖಿತಶಂಖಸಮುದಯಮೆ ಬಳ್ದಾವರೆಗಳಾಗೆಯುಂ, ಬಾಡವಾನಲಶಿಖಾಶಕಲವೃಂದಮು ಕೆಂದಾವರೆಗಳಾಗೆಯುಂ, ತದುದ್ಧಾಮಧೂಮಸ್ತೋಮಮು ನೀಲೋತ್ಪಲಂಗಳಾಗೆಯುಂ, ವ್ಯಕ್ತಮುಕ್ತಾಫಲಾಳಿಯೆ ಮೃಣಾಳಂಗಳಾಗೆಯುಂ, ನೀಳರತ್ನಚಯಮೆ ಚಂಚರೀಕಂಗಳಾಗೆಯುಂ, ಸಂಸಕ್ತಶುಕ್ತಿಪುಟಸಂಘಾತಮೆ ರಥಾಂಗಮಿಥುನಂಗಳಾಗೆಯುಂ, ಡಿಂಡೀರಪಿಂಡಪಟಲಮೆ ಹಂಸೆಗಳಾಗೆಯುಂ, ಪಾನೀಯದ್ವಿಪಸಿಕಾಯಮೆ ಪುಳಿನಂಗಳಾಗೆಯುಂ, ಮಹಾಮತ್ಸ್ಯಕಚ್ಛಪಕುಳೀರಕುಂಭೀರಕಮಕರನಕ್ರಚಕ್ರಮೆ ವಿವಿಧಸುಗಂಧವಾರಿಪೂರಣಯೋಗ್ಯನಾನಾದ್ರೋಣೀಕಟಾಹಪರಿಕರಂಗಳಾಗೆಯುಂ, ಇಂತಾ ಸರಿತ್ಪತಿಯೆ ಸರಸಿಯಾದಲ್ಲಿ,

ಸರಸಿಯ ನೀರಜಂಗಳ ರಜಂಗಳ ಪೊಂಪುಳಿಯಿತ್ತು ಕಂಪಿನೊಳ್
ಬೆರಸಿ ತದಂತರಂಗರ ತರಂಗದ ನಿರ್ಮಲಬಿಂದುವೃಂದಮಂ ।
ಧರಿಯಿಸಿ ತೀರಪಾಗರದ ಸಾರಸದಾಗರಮಂ ತೆರಳ್ಚಿ ಸಂ
ಚರಿಸಿದುದೊಪ್ಪುವಂತುಪವನಂ * ಪವನಂ ನಿಜಮಂದಚಾರದಿಂ † ॥ ೯೦

ವ॥ ಆಸರೋವರಸವಿಹಾರನಂ ಸರೋಜಲೋಚನನಂ ಮನದೆಗೊಂಡು ಬರ್ಪಲ್ಲಿ,

ತಾವರೆ ವಕ್ತ್ರಮೊರ್ಮಿ ನಳಿತೋಳ್ ಪೊಣರ್ವಕ್ಕಿ ಪಯೋಧರದ್ವಯಂ
ಸೇವಳರೇಕೆ ಬಾಸೆ ಪುಳಿನಂ ಜಘನಂ ಜಲಶೀಕರಾಳಿ ಮೈ ।

* ಖ.— ತೀರಸಾರಸದಸಾರಸದಾಸರವಂತೆರಳ್ಚಿ ಸಂಚರಿಸೆವಿರಾಜಿಸಿತ್ತುಪವನಂ.
† ಕ, ಗ.— ನಿಜಮನಾಂದಿರಮಂದಚಾರದಿಂ, ಎಂದು ಪಾಠಾಂತರವೂ ಇರುವುದು.

ಕ್ತಾವಳಿ ಬಾಳ್ವಿರ್ಣ ನಯನಪಾಗಿರೆ ಜಂಗಮಪದ್ಮಿನೀಕುಲಂ
ಸ್ಥಾವರಪದ್ಮಿನೀಸ್ಥಳಿಗೆ ಬರ್ಪವೊಲೊಪ್ಪಿದುದಂಗನಾಜನಂ ॥ ೯೧

ಅಂಬರದರ್ಪಣದೊಳ್ ತೋ
ರ್ಪಂಬುಜನಾಭಾಂಗನಾಜನಪ್ರತಿಬಿಂಬಾ ।
ಡಂಬರಮೆನೆ ಕೃಷ್ಣಾಜ್ಞೆಯಿ
ನಂಬರದಿಂದಮರಿಯರ್ ಕೆೞಕ್ಕಿೞಿತಂದರ್ ॥ ೯೨

ವ॥ ಆದೇವಗಣಿಕೆಯರ್ ಪೆಂಡವಾಸದೆಳವೆಂಡಿರೊಳ್ ತಂಡಂಗಲಸಿ ನಿಲೆ,

ಜಲಧಿತಟವನಲತಾಸಂ
ಕುಲಮಂ ಶೃಂಗಾರಜಲಧಿತಟವನಲತೆಗಳ್ ।
ಗೆಲೆವಂದು ನಿಂದುವೆಂದೆನೆ *
ಜಲಧಿಸರೋವೇಲೆಯಲ್ಲಿ † ಬಾಲೆಯರೆಸೆದರ್ ॥ ೯೩

ಪೊಳೆವನ್ನಂ ತಾರಹಾರಂ ನೆಲೆವೊಲೆ ಪೊಡರ್ಪನ್ನಂ ಕುರುಳ್ ಸೂಸುವನ್ನಂ
ಸೆಳೆವನ್ನಂ ತಳ್ವಸಿರ್ ಮೇಲುದು ಮಿಳಿರ್ದೆಸೆವನ್ನಂ ಭುಜಾಂದೋಳಗಂಜ ।
ದ್ವಾಳಯಂ ವಿಕ್ಷೇಪಲೀಲಾಲಸಚರಣರಣನ್ನೂಪುರಂ ಯಾನಕೂಜ
ತ್ಕಳಕಾಂಚೀಭಾಜನಂ ಸ್ತ್ರೀಜನವಿೞಿದುದು ತತ್ತೀರಸೋಪಾನದಿಂದಂ ॥ ೯೪

ಬಿದವಿದ ನಿಜಲಾವಣ್ಯಾದಿ
ನುದಕಂಸ್ಪರ್ಶನುಮಿತಮೆನಲ್ ಪೆಣ್ಬಡೆ ನಿಂ ।
ದುದು ಪೊಕ್ಕು ಜಾನುದಘ್ನೋ
ರುದಘ್ನ ಕಟಿದಘ್ನ ನಾಭಿದಘ್ನ ಸ್ಥಳದೊಳ್ ॥ ೯೫

---

* ಕ, ಗ.— ನಿಂದುವಿಂದೆನೆ.    † ಖ.— ಸರೋವಲಯದಲ್ಲಿ.

ಅಂಗನೆಯರ್ ಜಲದೊಳ್ ಪುಗೆ
ಮೀಂಗಳಡಂಗುವುದುಮವರ ನಯನಪ್ರತಿಬಿಂ।
ಬಂಗಳ ಪೊಳೆವೆಳಮೀಂಗಳ
ಭಂಗಿಯನನುಕರಿಸಿ ಪೊಳೆದುವಾತಿಳಿಗೊಳದೊಳ್ ॥ ೯೬

ವ॥ ತದನಂತರಂ,

ಮಳಯಾಯಾತಸಮೀರಸಂಚಳಲತಾಸಂತಾನಕಂ ತಮ್ಮರ
ಲ್ಗಳನೊಂದೊಂದಱ ಮೇಲೆ ಕೆಂದಳಿರ್ಗಳಿಂ ಸೂಸಿತ್ತನಲ್ ಕೇಳಿಸಂ।
ಚಳೆಯರ್ ತುಳ್ಕಿದರೊರ್ವರೊರ್ವರೊಳತಿಸ್ವಚ್ಛಾಂಬುವಂ ಕೆಂದಳಂ
ಗಳನೀಯಲ್ ವಳಯಸ್ವನಂ ಪಿಪರಣಪ್ರಸ್ತಾವನಾತೂರ್ಯಮಂ ॥ ೯೭

ಕರತಳವಾರಿ ತಳ್ತು ನುಖರದ್ಯುತಿವಾರಿಯೊಳೊಂದಿ ಹಾರಬಂ
ಧುರರುಚಿನಾರಿಯೊಳ್ ಜಸಸಿ ಸುಸ್ಮಿತದೀಧಿತಿವಾರಿಯೊಳ್ ತನೂ।
ದರಿಯುರಲಂಪಿನಿಂ ತುಳುಕೆ ಕೃಷ್ಣನ ಮೇಲೆ ಪೊದಱ್ದುದಂದು ಕ
ಪ್ಪುರವಣಿಯಂತಿರಾಲಿವಣಿಯಂತಿರಲರ್ವಣಿಯಂತಿರೆತ್ತಲುಂ ॥ ೯೮

ವನರುಹಲೋಚನಂ ನಿಜಕರಾಂಜಲಿವಾರಿಯಿನೊರ್ವೆ ಪಾರ್ಶ್ವವ
ರ್ತಿನಿಯ ಸಮುನ್ನತಸ್ತನಯುಗಕ್ಕಭಿಷೇಕಮನೀಯೆ ಕಂಡು ಮಾ।
ನಿನಿ ತನಗೀರ್ಷ್ಯೆ ಪುಟ್ಟೆ ಮನದೊಳ್ ನಯನಾಂಜಲಿವಾರಿಯಿಂ ಪುನಃ
ಪುನರಭಿಷೇಕಮಂ ನಿಜಸುವೃತ್ತಕುಚಕ್ಕೆ ಪೆಱಳ್ ನೆಗೞ್ದಳ್ ॥ ೯೯

ಸವತಿಯ ಮೇಲೆ ಮುಂ ತುಳುಕಿ ತನ್ನಯ ಮೇಲಧಿಪಂ ಬೞಿಕ್ಕೆ ತು
ಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆಯ್ದೆ ಕೋ।
ಪವನೊಳಕೊಂಡು ತನ್ವಿ ಬಸಮಲ್ಲದ ಕೃಷ್ಣನ ಮೇಲೆ ತಾಂ ತುಳುಂ
ಕುವ ಸಲಿಲಕ್ಕೆ ಕುಂಕುಮದ ರಾಗಮನಿತ್ತಳಪಾಂಗರಾಗದಿಂ ॥ ೧೦೦

ಮುತ್ತೊರ್ವಳ್ ಮೇಳದ ಮಧು
ವಿತ್ತಳ್ ಪರಿಹಾಸಕಾಂತಿಯಿಂ ಕೃಷ್ಣನ ಮೇ।

ಲೊತ್ತುವ ನಿಜಕರಯಂತ್ರದ
ಕತ್ತುರಿನೀರ್ಗಮಲವಿಲಯುಜದ್ರವೆರುಚಿಯಿಂ ॥ ೧೦೧

ತನು ಲಾವಣ್ಯರಸಂಗಳಂ ಪಸರಿಸುತ್ತಿರ್ಪನ್ನಗಂ ಕಣ್ಣುಮಂ
ಮನಮಂ ಪಂಕರುಹಾಕ್ಷನೊಳ್ ಪಸರಿಸುತ್ತುಂ ತೋಯಮಂ ತನ್ನ
ಕುಂ ।
ದನ ಮೇಲಟ್ಟಿಯುರ್ಕೆಯಿಂ ಪಸರಿಸುತ್ತಿರ್ದಳ್ ಪೆಱಳ್ ತನ್ನ ಮೇ
ಲೆನಿತಾನುಂ ನನೆಯಂಬುಗಳ್ ಪಸರಿಪನ್ನಂ ಕಾಮಕೋದಂಡದಿಂ ॥೧೦೨

ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ
ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ ಲತಾಂತಲೇಖೆಯಿಂ ।
ತುಳ್ಕೆ ವಿಳಾಸವಂಗಜನ ಬಾಳ ಪೊಗರ್ ನಿಜಬಾಹುಮೂಲದಿಂ
ತುಳ್ಕೆ ತುಳುಂಕಿದಳ್ ಹರಿಯಮೇಲೆ ಪೆಱಳ್ ತರಳಾಕ್ಷಿ ತೋಯಮಂ॥೧೦೩

ಸ್ಫುರಿತಾಂಗಂ ಸೂಸೆ ಲಾವಣ್ಯಮನೆಸೆವಲರ್ಗಣ್ ಚೆಲ್ವಮಂ ಸೂಸೆ ಲೀಲಾ
ದರಹಾಸಂ ಸೂಸೆ ಬೆಳ್ದಿಂಗಳನಲಘುಕುಚಕಂ ಮೇಲುದಂ ಸೂಸೆ ಚಾಮೀ।
ಕರಕಾಂಚೀಮಂಜುಗುಂಜದ್ಧ್ವನಿ ಕಿವಿಗಮರ್ದಂ ಸೂಸೆ ತಳ್ತಾಯ್ದ
ಸುಯ್ ಕ
ತ್ತುರಿಗಂಪಂ ಸೂಸೆ ಲಕ್ಷ್ಮೀಪತಿಯತನುವಿನೊಳ್ ಸೂಸಿದಳ್ ನೀರನೊ
ರ್ವಳ್ ॥ ೧೦೪

ಸ್ತನಲಕ್ಷ್ಯಾಲೋಕನಂ ಸಿಂಪಿಸೆ ಮುರರಿಪು ತನ್ವಂಗಿ ಕಾರುಣ್ಯಭಾರಾ
ತಿನಿರೋಧಾಲಸ್ಯದಿಂ ಪೆಯ್ಯುಮಿವಳನ ಪೆಱಳ್ ಸಾಚಿಯಿಂ ನಿಂದು ಪೀನ ।
ಸ್ತನಪಾರ್ಶ್ವೋದ್ಭಿನ್ನವಸ್ತ್ರಾಂಚಲೆ ಹರಿಕರಿಯಂತ್ರಾಂಬುಧಾರಾಪ
ಅೀಸ್ಪ
ರ್ಶನಸೌಖ್ಯಾಪೇಕ್ಷೆಯಿಂ ಛೋಂಕೆನೆ ಪೊಲೆದೆರ್ದಪಂ ಪೆತ್ತವೋಲ್
ಪೋಭವೆತ್ತಳ್ ॥ ೧೦೫

ಮುರಮಥನಂ ಸಿಂಪಿಸೆ ಕ
ತ್ತುರಿನೀರಂ ತನ್ಮೃಗೋದ್ಭವಾಸಿತಧಾರಾ * ।

* ಮೊ, ಅ — ತನ್ಮೃಗೋತ್ಥವಾಸಿತಧಾರಾ,

ಪರಿಕಲಿತಪರಾವೃತಮುಖಿ
ಹರಿಹಸ್ತಾಗ್ರಸ್ಪೃಷ್ಟಕೇಶಹಸ್ತೆವೊಲೆಸೆದಳ್ ॥ ೧೦೬

ಉದಯನಗೇಂದ್ರದಂತಿರೆ ಬೃಹದ್ಭುಜಕೂಟಯುಗಂ ಮುಕುಂದನ
ಭ್ಯುದಿತದಿನೇಶನಂ ಪೞಿಯೆ ಹಸ್ತದ ಕಾಂಚನವಾರಿಯಂತ್ರಮಂ ।
ತದಱ ನಿಮಿರ್ಕೆವೆತ್ತಘುಸೃಣೋದಕಧಾರೆ ನವಾರುಣಾಂಶುವೋಲ್
ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜಿನೀಕದಂಬಮಂ ॥ ೧೦೭

ಸಕಲಾಂತಃಪುರಕಾಮಿನೀನಿಕರನಿರ್ಯದ್ಯಂತ್ರಧಾರಾಕರಂ
ಬಕಮಂ ತಾಳ್ದುಳಿವಿಂಗೆ ಮೇಗೊಗೆದ ಪೂರ್ಣಾಳಂಗಳಂದಂಚೆವಿಂ ।
ಡು ಕಲಧ್ವಾನಮನೆತ್ತಲುಂ ಪಸರಿಸುತ್ತೋರಂತವಂ ಪಾಱಿ ಪಾ
ಱಿಕರ್ದುಂಕಲ್ ಮೊದಲಿಟ್ಟುವೇಂ ಪಿರಿದೊವಾರಿಕ್ರೀಡನಾಡಂಬರಂ॥೧೦೮

ಮುಡಿಯೊಳ್ ಜೋಲ್ದಿರ್ದುದಂ ಮಲ್ಲಿಗೆಯ ಕಿಱುಮುಗುಳ್ಮಾಲೆಯಂ ಸನ್ಮೃಣಾಳಂ
ತೊಡರ್ದತ್ತೆಂದಂತದರ್ಕವ್ವಳಿಸಿ ಮುಡಿಗೆ ಪಾಯ್ವಂಚೆಗಂ ಬೆರ್ಚಿ * ಸಾಸಿ ।
ರ್ಪುಡಿವೆರ್ಚಲ್ † ಭೊಂಕೆನಲ್ ವ್ಯೈಮುಱಿದು ಪಿಡಿದ ಲೀಲಾಬ್ಜದಿಂ ಪೊಯ್ವ ಪಾಂಗಿಂ
ಕಡೆಗಣ್ಣಿಂ ಪಿಂದೆ ‡ ಸೂಸುತ್ತಬಲೆ ಹರಿಯೊಳಾನಂದಮಂ ತಂದಳೊರ್ವಳ್ ॥ ೧೦೯

ಸವನದಿನಂಗರಾಗಮುಮಲಕ್ತಕರಾಗಮುಮೆಯ್ದೆ ಪೋಗಲಂ
ತವೆಯುವೆದಲ್ಲಿ ತೋಱುವುಗುರ್ವಾಯ್ಗಳವಟ್ಟಪ್ರಣಂಗಳುಂ ವಧೂ ।
ನಿವಹದೊಳಾವ ಮಂಡನಮುಮಂ ಗೆಲೆವೆಂದುವು ಮಿಕ್ಕ ಮಂಡನಂ
ಯುವತಿಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ ॥೧೧೦

---

* ಕ. ಗ.— ಪಾಯ್ವಂಚೆಯಿಂಬೆರ್ಚು. † ಕ. ಗ.— ಪೆರ್ಚಲ್.
‡ ಕ. ಗ.— ಕಡಗಣ್ಣಿಂಪೀಡೆ. ಪೊ. ಅ.— ಕಡೆಗಣ್ಗಿಂಪಿಂದೆ.

ಶ್ರುತಿಕುಮುದಂಗಳ್ ಕೇಳೀ
ಪತಿತಂಗಳ್ ಕೊಳನ ತಡಿಗೆ ಸಾರ್ದುವುತೆರೆಯಿಂ ।
ಶ್ರುತಿಮಂಡನವಾದೊಡಮೇಂ
ಪತಿತರ್ ನಿರ್ಮಳರ ನಡುವೆ ಯೋಗ್ಯರೆ † ಸುಳಿಯಲ್ ॥ ೧೧೧

ಲಲನಾಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕ
ಣ್ಮಲರ್ವೆಳ್ಪಂ ನಿಜಪಲ್ಲವಾಧರಕೆ ಕೊಟ್ಟಂದೀಗ ಮಾಱೊಡ್ಡಿತೀ ‡ ।
ಸಲಿಲಕ್ರೀಡೆಯೊಳಂಬಿನಂ ವನಿತೆಯರ್ ನೀರಾಟದಿಂದಾದ ಕ
ಣ್ಮಲರ್ಗೆಂಪಿಂದಧರೋಷ್ಠಪಲ್ಲವದ ಬೆಳ್ಪಂ ನಾಡೆ ಕಣ್ಗೊಪ್ಪಿದರ್ ॥ ೧೧೨

ವ॥ ಅಂತು ಸಾಗರಕ್ರೀಡೆಯಂಮಾಡಿ ಪುರುಷೋತ್ತಮಂ ತತ್ತೀರಭೂರಂಗಮನಲಂಕರಿಸಿ ನಿಲ್ವುದುಂ,

ಪರೆದಾನೀಳಾಳಕಂ ಜೋಲ್ದಲೆವ ಕಚಭರಂ ಕೆಂಪುವೆತ್ತಿರ್ದ ಕಣ್ಗಾ
ವರೆ ಬೆಳ್ಪೇಱಿರ್ದಬಿಂಬಾಧರಮೆಣೆ ತನುವಂ ನಾಂದು ಪತ್ತಿರ್ದಚೇಲಾಂ।
ಬರವಿಂಬಾಗಿರ್ಪಿನಂ ಬಂದುದು ಮೃದುತರಲೀಲಾಪದನ್ಯಾಸಮುದ್ಯ
ದ್ದರಹಾಸಂ ಪೆಂಡವಾಸಂ ವಿಜಿತರತಿವಿಳಾಸಂ ಸುಖಶ್ರೀನಿವಾಸಂ ॥ ೧೧೩

ವ॥ ಅನಂತರಂ ದಿವ್ಯಾಭರಣಭೂಷಣಂಗಳಿಂ ಪಸದನಂಗೆಯ್ದಲ್ಲಿ,

ಸಲಿಲವಿನೋದದೊಳ್ ಹರಿ ತುಳುಂಕಿದ ಕುಂಕುಮವಾಃಕಣೋತ್ಕರಂ
ಮಲಯಜವಾಃಕಣಾವಳಿ ಮೃಗೋದ್ಭವವಾಃಕಣವೃಂದಮಿಾಲತಾ ।
ಲಲಿತೆಯುರಂಗದೊಳ್ ¶ ತೊಡರ್ದು ಪೋಗದೆ ನಿಂದುಪೆನಲ್ ವರಾಂಗನಾ
ವಲಿಗೆಸೆದತ್ತು ಮಾಣಿಕದ ಮುತ್ತಿನ ನೀಲದನರ್ಘ್ಯಮಂಡನಂ ॥ ೧೧೪

ವ॥ ಆಗಳ್,

---

* ಕ.— ಸಾರ್ದಾತೆರೆಯಿಂ. † ಖ.— ಯೋಗ್ಯಮೆ.

‡ ಕ.— ಕೊಟ್ಟಂದೀಗವಾಪಾಡಿತೀ. ಖ.— ಕೊಟ್ಟೊಂದೀಗ ಮಾಱೊಡ್ಡಿತೀ ¶ ಖ.— ವೃಂದಮಿಾಗಳೀಲಲನೆಯುರಂಗದೊಳ್.

ಕಡಲಿಂತಂಬುಜಷಂಡವಾಯ್ತುಮಿರಿಯರ್ ಕ್ರೀಡಾರ್ಥದಿಂದೊರ್ವೊರ್ದಲ್*
ನಡೆತಂದರ್ ಧರೆಗಿಂತಿದರ್ಕೆ ಸಕಲದ್ವೀಪಾಧಿಪಕ್ರೀಡೆಯುಂ † |
ಪಡಿಯಾಯ್ತಿಲ್ಲಿದಮಾನುಷಂ ವಿಭುನಿಜಾಂಬುಕ್ರೀಡೆಯಿಂದರ್ಜುನಂ
ನುಡಿಯಲ್ ಸಸ್ಮಿತವಕ್ತ್ರನಾಲಿಸುತುಮಿರ್ದಂ ದೇವಕೀನಂದನಂ ‡ ||೧೧೫||

ಇದು ಸಮಸ್ತಕಮಳಭವಾಂಡಮಾಂಡಾಘಟೀಘಟಿತಾಂಘ್ರಿಘಟನಾ
ಸ್ವತಂತ್ರನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ
ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತಸುಕವೀಂದ್ರ
ರುದ್ರಪ್ರಣೀತಶ್ರೀಜಗನ್ನಾಥವಿಜಯಮಹಾ
ಪ್ರಬಂಧದೊಳ್ ತ್ರಿಪುರಾಂತಕದರ್ಶನ
ಹೇಮಂತಶಿಶಿರವಸಂತವನಜಲ
ಕ್ರೀಡಾವರ್ಣನಂ
ಚತುರ್ದಶಾಶ್ವಾಸಂ

---

* ಕ. ಗ.—ಕ್ರೀಡಾರ್ಥವೊಂದೂರ್ವೊರ್ದಲ್. † ಖ.—ಧರೆಗಿಂತಿದುಂ ಸಕಲದೇವದ್ವೀಪಸತ್ಕ್ರೀಡೆಯುಂ. ಖ.—ರುಕ್ಮಿಣೀವಲ್ಲಭಂ.

# ಪಂಚದಶಾಶ್ವಾಸಂ.

ಶ್ರೀತನಗೆ ನಲ್ಲಳಪ್ಪಂ
ದಾ * ತೋಯಧಿತಟದೊಳಿರ್ಪವೊಲ್ ಹರಿ ವೀರ ।
ಶ್ರೀತನಗದೊಂದುಕಾರ್ಯದ
ಕೌತುಕದಿಂ ಪೊರ್ದೆ ವಾರ್ಧಿತೀರದೊಳಿರ್ದಂ ॥ ೧

ವ॥ ಅನ್ನೆಗಂ ಷಟ್ಪುರದೈತ್ಯನಾಯಕಂ ನಿಕುಂಭನಂಭೋದಮಾರ್ಗಾಂತರ ದಿಂದಂತರ್ಹಿತಸ್ವರೂಪನಾಗಿ ಬರುತ್ತುಂ ವಸುದೇವಸುತನ ಸಾಗರಕ್ರೀಡಾವಿಳಾಸಮಂ † ಕಂಡು ಕೌತುಕಂಬಟ್ಟು ನೋಡಿ ಲತೆಯೆ ಸತಿಯುಮಾದಂತೆಯುಂ ಸೌದಾಮಿನಿಯೆ ಭಾಮಿನಿಯುಮಾದಂತೆಯುಂ ವಿಧುಕಳೆಯೆ ವಧುಗಳಾದಂತೆಯುಂ ಮೃಣಾಳಿಕೆಯೆ ಬಾಳಿಕೆಯುಮಾದಂತೆಯುಂ ನನೆಯಂಬೆ ನಿತಂಬಿನಿಯುಮಾದಂತೆಯುಂ ಕಂತುಶಕ್ತಿಯೆ ಕಾಂತೆಯುಮಾದಂತೆಯುಂ ಸೊಗಯಿಸುವನಂತಕೋಟಿಕಾಂತೆಯರೊಳ್ ರೂಪವಿಳಾಸದಿಂ ದೇಸೆವೆತ್ತ ಯಾದವಕನ್ಯೆಯಪ್ಪ ಕಳಕಂಠರುತಿಯುಂ ಮರಾಳಗತಿಯುಂ ಶೃಂಗಾರವತಿಯುಂ ಭಾನುಮತಿಯುಂ ಕಂಡು ಕಣ್ಸೋಲ್ತು ಕನ್ನೆಯಂ ತಳೆದುಕೊಂಡು

ವಿಲಸನ್ಮಾಣಿಕ್ಯಭೂಷಾರುಚಿರಚನೆ ‡ ಘನಶ್ಯಾಮದೇಹಪ್ರಭಾವಂ
ಡಲಿ ವಿಸ್ಪಷ್ಟಾಟ್ಟಹಾಸದ್ಯುತಿ ವಿತತನಭಶ್ಚಕ್ರದೊಳ್ ಸಂಜೆಯುಂ ಕ ।
ತ್ತಲೆಯುಂ ಬೆಳ್ದಿಂಗಳುಂ ತೀವಿದುದು ಪಗಲಿದೆಂಬಂತಗುರ್ವಾಗೆದಕ್ಷಂ
ಬಲನಾಕಾಶಕ್ಕೆ ¶ ತೊಟ್ಟಿಂದೊಗೆದನೊಗೆವಿನಂ ಯಾದವಾಕ್ರೋಶ
ನಾದಂ ॥ ೨

* ಖ.—ನಲ್ಲಳಪ್ಪಂತಾ    † ಖ.—ಕ್ರೀಡಾಭಿರಾಮವಿಭೂತಿಯುಂ.

‡ ಕ ಗ.—ಚೂಡಾಮಣಿರುಚಿರ.

¶ ಕ.—ರಕ್ತೇಕ್ಷಂಬಲನಾಕಾಶಕ್ಕೆ. ಗ.—ರಕ್ತೇಕ್ಷಣನಾಕಾಶಕ್ಕೆ.

ವ॥ ಆಗಳ್,

ಗಾಂಡಿವಮಂ ಪಿಡಿದಕ್ಷಯ
ಕಾಂಡಧಿಯಂ ಬಿಗಿದು ಕನ್ಯಕಾಚೋರನನಾ ।
ಖಂಡಲಸುತನಯಿ ನಭೋ
ಮಂಡಲಮಂ ಪುದಿದನಯ್ದೆ ಶರಪಂಜರದಿಂ ॥ ೩

ಅಮರೇಂದ್ರಾತ್ಮಜನಚ್ಚು ವಾಯುಪಥದೊಳ್ ಕೇರ್ಗಟ್ಟಿದೊಂದಸ್ತ್ರಜಾ
ಲಮನೊಟ್ಟೈಸಲದೆಂತುಮಾರದೆ ಖಳಂ ಸ್ತ್ರೀರತ್ನದಿಂ ವೀರರ ।
ಕ್ಷಮನರ್ಘ್ಯಂ ಪಿಡಿದುಯ್ವೆಸೀತನನೆನುತ್ತುಂ ಕನ್ನೆಯಂ ಬಿಟ್ಟು ದು
ರ್ದಮದೋರ್ದರ್ಪದಿನೆತ್ತಿಕೊಂಡು ನೆಗೆದಂ ವ್ಯೋಮಕ್ಕೆ ಗಾಂಡೀವಿಯಂ॥

ವ॥ ಅಸ್ಯತಿರೇಕದೊಳತಿಕುಪಿತನಾಗಿ ಶಂಬರಸೂದನಂ ಬೆರೆಸು ನಡೆತಂದು, *

ಧನುವಿನ ಟಂಕೃತಂ ವಿಶಿಖಭೀಂಕೃತಮುತ್ಕಟಕೋಪಹೂಂಕೃತಂ
ವನಜಭವಾಂಡಮಂ ಪುದಿಯೆ ದೈತ್ಯಹರಂ ಶರಭಿನ್ನಪಾಕಶಾ ।
ಸನಗಜಕುಂಭನಂ ನಯನರಾಗವಿನಿರ್ಜಿತತಪ್ತಶಾತಕುಂ
ಭನನಸಮಾನರೌದ್ರರಸಕುಂಭನನಯ್ದಿದನಾನಿಕುಂಭನಂ ॥ ೫

ವ॥ಅಂತೆಯ್ದಿ ಕೌಂತೇಯನಂ ಕವುಂಕುಳಳವುಂಕಿ ಪೋತರ್ಪ† ಯಾತುಧಾನಪ್ರಧಾನನಂ ನೋಡಿ ಬಲಭದ್ರಭೀಮಸೇನಜರಾಸಂಧಶಲ್ಯಪ್ರಭೃತಿ ನಾಗಾಯುತಬಲಪ್ರಖ್ಯಾತರಾತತಜ್ಯಂಮಾಡಲಾರದಾದಿವ್ಯಧನುವನೇಱಿಸಿ ಯಂತ್ರಮತ್ಸ್ಯಮನೆಚ್ಚು ಪಾಂಚಾಲರಾಜತನೂಜೆಯಂ ಕೈಕೊಂಡು ಸ್ವಯಂವರಕ್ಕೆ ನೆರೆದನೇಕನರಪಾಲಕರಂ ಬೆಂಕೊಂಡ ಮಹಾಪ್ರಚಂಡನಂ, ಪಾಕಶಾಸನಪ್ರೇಷಿತಪುಷ್ಕರಾವರ್ತಘನಧಾರಾವರ್ತದುರ್ಭೇದನಿರ್ಭರಕಾಂಡಪಂಜರದಿಂ ಖಾಂಡವವನಮಂ ನಾಶುಶುಕ್ಷಣಿಯ ನೂಡಿ ರೂಢಿವೆತ್ತ ವಾಯರ್ಭುಜಬಲವೀರ್ಯನಂ, ಯುಧಿಷ್ಠಿರರಾಜಸೂಯ

* ಖ.—ಬೆರಸಂಬುಜನಾಭಂನಡೆದು. † ಖ.—ಅವುಂಕಿ ಕೊಂಡು ಪೋಗುತ್ತಿರ್ಪ.

ಯಾಗವ್ಯಯಧನಾಗಮನಿಮಿತ್ತಮುತ್ತರದಿಗ್ವಿಜಯದೊಳ್ ಉತ್ತರ ದಿಕ್ಪಾಲಕನಪ್ಪ ಕುಬೇರನನದಿರ್ಪಿ ಕಪ್ಪಂಗೊಂಡು ಬಂದಪ್ರತಿಮಪ್ರತಾಪನೆನಿಸಿದನಂ, ಅನಿತಲ್ಲದಿನ್ನಾಗಾಮಿಕಾರ್ಯದೊಳಿಂದ್ರಕೀಲಕುತ್ಕೀಲದಲ್ಲಿ ಮೂಕದಾನವಸೂಕರವ್ಯಾಜದಿಂ ರಾಜಮೌಳಿಯುಂ ಮಲ್ಲಯುದ್ಧದಿಂ ಗೆಲ್ಲಂಗೊಂಡು ಪಾಶುಪತಾಸ್ತ್ರಮಂ ಪಡೆದಪ್ರತಿಮಲ್ಲನೆನಿಸಲುಂ, ಏಕಾದಶರುದ್ರ ದ್ವಾದಶಾದಿತ್ಯಪ್ರಮುಖನಿಖಿಲಾಮರಗ್ರಾಮಣಿ ಚಕ್ರವರ್ತಿಯೆಂಬಾ ಮಹೇಂದ್ರಂಗಮಸಾಧ್ಯರುಮಾದ ಹಿರಣ್ಯಪುರಸ್ಥಿತಾಖಿಲಕಾಲಕೇಯರ * ನಸಂಖ್ಯಾತನಿವಾತಕವಚರಂ, ಧುರಂಧರೋದ್ವೃತ್ತಾಳತಳತ್ತಾಳನಿಕಾಯಮಂ † ಸಾಯಕಸಂಘಾತದಿಂ ಯಮಪುರಕ್ಕೆ ಕಳುಪಿ ವಿಕ್ರಮಖ್ಯಾತಿಯನಪ್ಪುಕೆಯ್ಯಲುಂ, ಘೋಷಯಾತ್ರಾಮಿಷದಿಂದೈಶ್ವರ್ಯಮಂ ಮೆಱೆಯಲೆಂದು ಬಂದ ದುರ್ಯೋಧನನನಾಯೋಧನಚ್ಛಲದಿಂ ಕಟ್ಟಿಕೊಂಡುಪೋಪ ಚಿತ್ರಾಂಗದನೆಂಬ ಗಂಧರ್ವರಾಜನಂ ಮಾರ್ಗಣೌಘದಿಂ ಮೋಘಮಾರ್ಗಮಂ ಕೆತ್ತು ಪೋಗಲೀಯದೆ ತಂದು ಧರ್ಮನಂದನಂಗೊಪ್ಪಿಸಿ ಧೀರೋದಾತ್ತವೃತ್ತಿಯಿಂದೆಸೆಯಲುಂ, ಗೋಗ್ರಹಣಕಾರಣಮೇಕಾದಶಾಕ್ಷೌಹಿಣೀವಾಹಿನಿವೆರಸು ಬಂದ ಕುರುವೃಂದಮೆಲ್ಲಮನೊಂದೆ ತೇಱೊಳ್ ಕಾಲಚಕ್ರಂ ‡ ಸುತ್ತುವಂತೆ ಸುತ್ತಿ ಕರ್ಣವಿಕರ್ಣಕೃಪಕೃತವರ್ಮದ್ರೋಣಾಶ್ವತ್ಥಾಮಭೀಷ್ಮಧಾರ್ತರಾಷ್ಟ್ರಾದಿಗಳಂ ಚಿತ್ರಯೋಧಿತ್ವದಿಂ ಪ್ರತ್ಯೇಕಂ ಗೆಲ್ದುದಲ್ಲದೆ ಸಂಕುಲದೊಳಂಕೆಗೊಂಡೆಲ್ಲರುಮನೊಂದಸಮ್ಮೋಹನಾಸ್ತ್ರದಿಂ ಮೋಹಿಸಿ ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟಿಗಳನುಗಿಪಟಂಗೊಂಡು ತಲೆಗಾದು ಕಳಿಪಿ ನಿಜಾಗ್ರಜನ ಮರ್ಯಾದೆಯಂ ನಿಲಿಸಿ ನಿಸ್ಸಹಾಯಸಾಹಸಮಂ ತೋಱಲುಂ, ಬೞಿಕಂ ಕುರುಕ್ಷೇತ್ರದೊಳೇಕಾದಶಾಕ್ಷೌಹಿಣೀಸನಾಥಂ ಕುರುನಾಥನೊಡ್ಡಿ ಕಾದುವ ಪದಿನೆಂಟು ದಿನದ ಸಮರದಲ್ಲಿ ಮುನ್ನಂ ಸಮಸ್ತಭೂಮೀಶ್ವರವಿರಾಮನಂ ಪರಶುರಾಮನಂ ಗೆಲ್ದ ಕೌರವಜ್ಯಾಯನಂ ಗಾಂಗೇಯನಂ ಶರಶಯ್ಯೆಯೊಳೊಱಗಿಸಿ ಭುಜ

---

* ಖ. ಹಿರಣ್ಯಕಶಿಪುಪುಲಸ್ತಿತಾಳಬಳ ಕಾಲಕೇಯರ.

† ಕ. ಧುರಧರೆಯೊಳ್ ತಳತಾಳುಕನಿಕಾಯಮಂ. ಮೊ.—ಅ. ಧುರಧುರದೊಳ್ ತಳತಾಳುಕ ನಿಕಾಯಮಂ. ‡ ಕ.—ಕಾಲಚಕ್ರಮಂ.

ಗರ್ವಮನಖರ್ವಂ ಮೆಱೆಯಲುಂ, ಮಹಾರಥಾತಿರಥರುಮನತಿಕ್ರಮಿಸಿ ಶಕಟವ್ಯೂಹವಿರೂಪಿಸದ್ರಥನಂ * ಜಯದ್ರಥನನನಸ್ತಮಿತಮಸ್ತಕಚ್ಛೇದ ನಂಗೆಯ್ದು ಸತ್ಯಪ್ರತಿಜ್ಞನಾಗಲುಂ, ಚಾಪಾಗಮಾಚಾರ್ಯನಂ ಕ್ಷತ್ರಿಯ ಕುಲವೈಧವ್ಯದೀಕ್ಷಾಗುರುವಂ † ಕುರುವಂಶಕುಲಿಶತ್ರಾಣನಂ ದ್ರೋಣ ನನಮೋಘಬಾಣರಾಜಿಯಿಂ ಪರಾಜಯಮನಯ್ದಿಸಿ ವಿಜಯೋನ್ನತಿಯ ನೆಯ್ದಲುಂ, ಲಲಾಟಲೋಚನರುದ್ರನಂ ರುದ್ರಾವತಾರನಂ ದಿವ್ಯಾಸ್ತ್ರ ಪ್ರಬ ಭುಜಬಲೋದ್ದಾಮನ ನಶ್ವತ್ಥಾಮನಂ ಸಂಗ್ರಾಮಮಂ ತೊಱೆದು ಪೋಪಂತು ತವದ ದೊಣೆಯಿಂ ತವದ ಮಂತ್ರಾಸ್ತ್ರಪ್ರಯೋಗದಿಂ ಕೈಮಿಕ್ಕು ಮೈಮೆದೞೆಯಲುಂ, ಕೃತವರ್ಮಕಾರ್ಮುಕಕೌಶಲಾಸ್ಖಲಿತ ಸಂಖ್ಯರನಕ್ಷೌಹಿಣೀದ್ವಿತಯಪರಿಸಂಖ್ಯರಂ ಬಾಹುಬಲಾವಲಿಪ್ತಕರಂ ಸಂಶಪ್ತಕರನಕ್ಷೂಣಬಾಣವರ್ಷದಿಂ ‡ ಗೀರ್ವಾಣಪಥಕ್ಕೆಸಲಿಪ ಶೌರ್ಯಾ ಡಂಬರವನವಲಂಬಿಸಲುಂ, ಸುಪ್ರತೀಕಸಾಮಜದಿಂ ಭೀಮಸೇನನ ನೊತ್ತಿಸುವ ಸಾಹಸೋನ್ಮತ್ತನಂ ಭಗದತ್ತನಂ ತತ್ಕರಟಿಕರಟಂ ಬೆರಸು ವಿಕೃತಕಂಠನಪ್ಪಂತು ¶ ಒಂದೇ ಭಲ್ಲದಿಂದೆಚ್ಚು ಬಲ್ಲಾಳ್ತ ನಮಂ ನೆಗೞ್ಚಲುಂ, ಭಾರ್ಗವಪ್ರಸಾದಾಸಾದಿತಚಾಪವಿದ್ಯನಂ ನಾನಾ ಸ್ತ್ರಪ್ರಯೋಗನಿರವದ್ಯನಂ ಜಗನ್ನೇತ್ರಪುತ್ರನಂ ದುರ್ಯೋಧನ ಪ್ರಿಯಮಿತ್ರನಂ ಕಾಕಪತಾಕನಂ ಕಾಲಪೃಷ್ಠಕಾರ್ಮುಕನಂ ಸಹ ಜಾತದಿವ್ಯಕುಂಡಲಕಿರಣಮಂಡಲಾಕೀರ್ಣನಂ ಕರ್ಣನಂ ದ್ವಂದ್ವ ಕಲಹದಿಂ ದೇವಾಂಗನಾರತಿಕಲಹದೊಳ್ ತೊಡರ್ಚಿ ಸಂಪೂರ್ಣಮನೋ ರಥನಾಗಲ್ವೇಡಿದ ಭಾರತಮಲ್ಲನಂ ಬಿಡುಬಿಡೆಂದು ಗಜಱಿ ಗರ್ಜಿಸೆ,

ಪ್ರತ್ಯೇಕಂ ಪಾರ್ಥನಿರಲ್
ದೈತ್ಯನಸಂಖ್ಯಾತಕೋಟಿಮೂರ್ತಿಯನಾಂತೊಂ ।

---

* ಕ.—ವ್ಯೂಹನಿರೂಪಿತ ಲಸದ್ರಥನಂ.

† ಖ.—ಕ್ಷತ್ರಿಯ ಕಳತ್ರ ವೈಧವ್ಯದೀಕ್ಷಾಗುರುವಂ ‡ ಖ.—ಸಮ ಸಪ್ತಕರನಕ್ಷೌಹಿಣೀಬಾಣವರ್ಷದಿಂ. ¶ ಕ.—ತತ್ಕರಟಮುಂ ಕಂಠಂಬೆರಸು ನಿಕೃತ್ತಕಂಠನಪ್ಪಂತು

ದತ್ತ್ಯಾರಭಟೆಯಿನಿರ್ದಂ
ಪ್ರತ್ಯಗ್ರಭ್ರಾಂತಿ ಕೃಷ್ಣನೊಳ್ ನಗಜ್ವನಗಂ ॥ ೬

ಆವಿವಿಧಮೂರ್ತಿಯೊಳ್ ಮಾ
ಯಾವಿಯು ನಿಜಮೂರ್ತಿಯಿಂತುಟಂದಱಿದಚ್ಯುತಂ ।
ಜ್ಯಾವಿಪುಲವಿರುತಿ ಜಗಮಂ
ತೀವಿರೆ ರೌದ್ರಾಸ್ತ್ರದಿಂ ಜನಾರ್ದನನಾಗಳ್ ॥ ೭

ಸಿಡಿಲಿದಱುಣ್ಮುವುರ್ಕ್ಕಿಡಿಯೊಳಂ ಪಡಿಯಿಲ್ಲನಲೆಯಿದ್ದ ಸಾಯಕಂ
ನಡೆ ಖಳನದ್ರಿಭೇದಿಕುಲಿಶಂ ನಡದೆನ್ನಸಿಪೊಂದು ನಟ್ಟುದಾಂ ।
ಪಡೆದೆನಿಷುಪ್ರಹಾರಮನಪೂರ್ವಮನಂದತಿಹರ್ಷಮತ್ತನಾ
ದೆಡೆಯೊಳ ತನ್ನಿಶಾಟಭುಜದಿಂದೆ ನುಸುಳ್ದುಚಿತಂದನರ್ಜುನಂ ॥ ೮

ವ॥ ಆ ವಿಜಯನ ಪರಾಜಯದೀನವದನಮಂ ಹಿರಣ್ಯಾಕ್ಷರಿಪು ನಿರೀಕ್ಷಿಸಿ,

ನೆರೆದೆಂಟುಂ ದಿಗ್ಗಜಂಗಳ್ ದಿಗಧಿಪತಿಭಟಪ್ರೇರಿತಂಗಳ್ † ಧೃತಾಡಂ
ಬರಶಂಬಸ್ಪರ್ಧಿದಂತಾಗ್ರದೊಳುರಮನವಷ್ಟಂಭದಿಂದೊತ್ತೆ ತನ್ನಿ ।
ಷ್ಠುರದಂತಸ್ಪರ್ಶಹರ್ಷೋದ್ಗತಪುಳಕದ ಮಾಜೂರ್ತಿದೈತ್ಯೇಶನಾಭೂ
ಧರಧುರ್ಯೋಭಂಗಳಂತೊಟ್ಟನೆ ಕೆಡಪುವನಾಶ್ಚರ್ಯಮಾದೈತ್ಯವೀರ್ಯಂ॥೯

ಮಾದೇವಂಗಂ ಬಲ್ಲದ
ನೀದೈತ್ಯಂ ಬ್ರಹ್ಮವರದಿನಿವನಿಂದೆನಗಿಂ ।
ದಾದುದು ಪರಿಭವಮೆಂಬೀ
ಖೇದಮಿದೇಂ ಬ್ರಹ್ಮವರಮಿದಾರ್ಗಮಲಂಘ್ಯಂ ॥ ೧೦

ವ॥ ಎಂದು ಪಾಡುನಂದನನ ಮನದ ಹೇವಮಂ ‡ ವಸುದೇವ ನಂದನಂ ಕಳೆದು ಪಾಂಡವಾಸತಂಡಮಂ ನಿಜಪುರಕ್ಕೆ ಕಳಿಪಿ ಕಲಹ

* ಕ. ಗ — ವ॥ ನಮಂ ಕಾರುಣ್ಯದಿಂ ಹಿರಣ್ಯಾಕರಿಪು ನೋಡಿ

† ಖ.—ಭಟಾಕೀಲಿತಂಗಳ್.

‡ ಕ. ಗ.—ಪಾಂಡುಸುತನ ಮನಃಖೇದಮಂ.

ಕೇಳೀನಿಮಿತ್ತಂ ಬರುತ್ತುಮಿರ್ಪಿನಂ ನಿಕುಂಭನಂಬರಗತಿಯಿನತಿ ವೇಗದಿಂ ಪೋಗಿ ಷಟ್ಪುರಬಹಿದ್ವಾರ್ರಕ್ಕನತಿದೂರದೊಳಿರ್ಪುದೊಂದಗ್ರ ಹಾರದೊಳೂರ್ವರಂ ಮಹಾದ್ವಿಜನ್ಮನಧ್ವರಪೂಜೆಗೆಂದು ನೆರೆಪಿದ ಸಮಸ್ತರಾಜನ್ಯಕಮುಂ ಸೌಜನ್ಯಕದಿನೊಡಗೊಂಡುಯ್ದು ದುರ್ಜಯ ಭುಜಾರ್ಜಿತಂಗಳಪ್ಪ ಚತುರ್ದಶಭುವನ್ಯಕಸಾರವಸ್ತುವಾಹನ ಸಮೂಹಂಗಳನೌಚಿತ್ಯಮುಂ ಮಾಡಿ ಲಬ್ಧಸಾಂಪರಾಯಸಹಾಯನಾಗಿ ನಿಜನಿಧನಸೂಚಕೋತ್ಪಾತಕೌತುಕರಸಮನಾತ್ಮೋದಾರವೀರ ರಸದಿ ನೊತ್ತಂಬರಿಸುತ್ತುಮಂದಿನಿರುಳಂ ಕಳದಾದಿತ್ಯೋದಯದೊಳಾಹ ವೋತ್ಸಾಹದಿಂದಿರೆ,

ಭಾರತಮಲ್ಲನರ್ಜುನನ ಶಂಬರವೈರಿಯ ಚಂಡಚಾಪಮೌ
ರ್ವೀರವಮೇಕದೇಶದೊಳಡಂಗಿದುದಲ್ಲದೆ ಕೂಡಡಂಗೆ ದಿ ।
ಗ್ವಾರಣವಾರ್ದ್ದಡಂಗೆ * ಚತುರಂತಧರಿತ್ರಿ ಪೊದಬ್ದು † ಷಟ್ಪುರ
ದ್ವಾರದೊಳಂದುಕೇಳಲಣಮಾದುದು ಕೃಷ್ಣನ ಶಾರ್ಙ್ಗಘೋಷಣಂ ‖ ೧೧

ಆರವಮಿಕ್ಕಿ ಡೊಕ್ಕರಿಸೆ ಬಾಯ್ದೆರೆದುರ್ವರೆ ಘೀಳಿಡುತ್ತುಮು
ದ್ಗಾರಿಸಿದತ್ತು ಗರ್ಭಗತಷಟ್ಪುರಸೇನೆಯನೆಂಬಿನಂ ಮಹೀ ।
ದ್ವಾರದಿನಂದು ‡ ಶಾರ್ಙ್ಗರುತಿಗೇಳ್ದು ಸಸಂಭ್ರಮಘೋಷಷಟ್ಪುರೀ
ಭೂರಿಬಲಂ ಸಹಾಯನೃಪಕೋಟಿಯುತಂ ಪೊಱಮಟ್ಟುದಾವಗಂ ‖ ೧೨

ಪೊಱಮಟ್ಟು ಬಲಂ ಕಿಕ್ಕಿಱಿ
ಗಿಱಿದೆತ್ತಂ ನಡೆಯೆ ತನ್ಮಹಾಸೈನ್ಯಮನ ।
ಬ್ಬಿಕ್ಕಱೆ ಕಾಳರಾತ್ರಿ ನುಂಗಿದ
ತೆಱನಾಯ್ತು ಪದೋತ್ಥ ಸಾಂದ್ರಧೂಳೀತಿಮಿರಂ ‖ ೧೩

ಬಳಭಾರಂ ಭೂಮಿಯುಂಬಾಯ್ದೆಱಿಸೆನೆಗೆದ ಪಾತಾಳಮೂಲಾಂಧಕಾರಂ
ಬಳವತ್ಸೈನ್ಯೇಭಕರ್ಣಾನಿಳನುದಧಿಗಳಂ ತುಳ್ಕಿನೀಳ್ದೌರ್ವಧೂಮಾ !
ವಳಿಸೇನಾಕೇತುಚಕ್ರಂಪೊಡೆಯೆ ¶ ಪೊಡರ್ದರಾಹುಸ್ಫುಟಾಟೋಪ
ಮೆಂಬಂ
ತಿಳೆಗುಂ ತಳ್ತುರ್ವಿ ಪರ್ವಿತ್ತುಮರಪಥಮನಾಸೈನ್ಯಧೂಳೀತಮಿಸ್ರಂ ‖ ೧೪

* ಕ.—ಕೂಡಡಂಗೆ ದಿಗ್ವಾರಣವೆಬ್ಬಿಡಂಗ. † ಕ. ಗ.—ಪೊರಳ್ದು.
‡ ಕ. ಗ—ಬಹಿದ್ವಾರದಿನಂದು ¶ ಕ. ಗ.—ಪೊಡರೆ.

ವ॥ ಅಂತು ಚತುರಂಗಬಲಂ ಕ್ಷಿತಿಕ್ಷೋಭವಾಗೆ ನಡೆದು ಜಗತ್ತ್ರಯದರ್ಪೋದ್ರೇಹಂ ವ್ಯೂಹತ್ರಯದಿನೊಡ್ಡಿ ನಿಲೆ,

ಧೃತರಜನನಿಲಂ ದಿತಿಜ *
ಪ್ರತಿಕೂಲಂ ಬಗೆ ಸೈನ್ಯದರ್ಶನದನುಕೂ ।
ಲತೆಯಂ ಮೆಱೆದ † ನದುಚಿತಂ
ದಿತಿಜಪ್ರತಿಕೂಲನಚ್ಯುತಂಗನುಕೂಲಂ ॥ ೧೩॥

ವ॥ ಆಗಳಗುರ್ವಂ ಬೀಱೆ ಬೇಱೊಂದುದೆಸೆಯೊಳೊಡ್ಡಿ ನಿಂದ ರಾಜನ್ಯಸೈನ್ಯಮಂ ನೋಡಿ ಚೋಳನಾಭೀಳತೆಯಂ ಮಾಳವನಾಳಾಪಮಂ ಗೂರ್ಜರನ ದೌರ್ಜನ್ಯಮಂ ಗುಜ್ಜಳನ ಬಿಜ್ಜೆಯಂ ಕರಹಾಟನ ಕೌಟಿಲ್ಯಮಂ ವರಾಟನಾಟೋಪಮಂ ಪಾರಿಯಾತ್ರನ ವೀರವೃತ್ತಿಯಂ ಪಾರಶೀಕನ ಪೌರುಷಮಂ ಕೇರಳನಾರಭಟೆಯಂ ಹಮ್ಮೀರನಣ್ಮಂ ಹೂಣನಕ್ಷೋಣಬಲಮಂ ಪಾಂಡ್ಯನಗಂಡಗುಣಮಂ ಪಲ್ಲವನ ಬಿಲ್ಲಾಳ್ತನಮಂ ಕೊಸಳನ ಸಾಹಸಮಂ ಕೌಶಲನ ಆದೇಶಮಂ ಡಹಳನ ಹಂಮಿಕೆಯಂ ಸಿಂಹಳನ ಸಂರಂಭಮಂ ಡೊಕ್ಕಾರನುರ್ಕಂ ತುರುಷ್ಕನಟುರ್ಕೆಯಂ ಬರ್ಬರನ ಗರ್ಬಮಂ ಮಂದರನದಂದುಗದವ್ಯವಸಾಯಮಂ ‡ ಮಾದ್ರನುದ್ರೇಕಮಂ ಮರುವಿನುರವಣೆಯಂ ವಂಗನ ತುಂಗವಿಕ್ರಮಮಂ ಅಂಗನ ಸಂಗರೋತ್ಸಾಹಮಂ ಸೈಂಧವನವಂಧ್ಯಕೋಪಮಂ ಶಂಬರನವಷ್ಟಂಭಮಂ ಮಗಧನ ಮೊಗದ ಮುಳಿಸಂ ಸಗರನ ಬಗೆಯ ಕಲುಷಮಂ ಸೌರಾಷ್ಟ್ರನ ಧಾರ್ಷ್ಟ್ಯಮಂ ಖಸಕನ ಮಸಕಮಂ ನಿವಾರಿಸಿ ಜಯಂಗೆಯ್ವುದೆಂದು ವಿಜಯಂಗೆ ಪೇೞ್ದು ಮತ್ತೊಂದೆಡೆಯೊಳೊಡ್ಡಿ ನಿಂದ ಕೂಟಯೋಧಿನಿಶಾಟಬಲಮಂ ನೋಡಿ ಬರಸಿಡಿಲ ಬಳಗದಂತೆ ಕುಳಿಕಾಹಿಯ ಕಡುಪಿನಂತೆ ನೆಲಮುಕ್ಕನ ತೆಕ್ಕೆಯಂತೆ ಮಿತ್ತುವಿನವೊತ್ತಿದಂತಿರ್ದಸಂಖ್ಯಾತದೈತ್ಯನಾಯಕರ ಮಾಯಾಪ್ರಯೋಗಮಂ

* ಖ.— ಹೃತರಜನೀಲಂ ದಿವಿಜ. † ಕ. ಗ.— ಮೆಱೆವ.
‡ ಕ. ಗ.— ಧುರವ್ಯವಸಾಯಮಂ.

ಪ್ರತಿಹತಂಮಾಡಿ ಗೆಲ್ವುದೆಂದು ಶಂಬರಧ್ವಂಸಿಗೆ ಪೇೞ್ದು ಮಧ್ಯಪ್ರದೇಶದೊಳೊಡ್ಡಿನಿಂದನಂ ಚಾತುರ್ದಂತವರೂಧಿನೀಸನಾಥನಂ ಷಟ್ಪುರನಾಥನಂ ಕಂಡಾನೀತನವ್ಯಾಹತದಿವ್ಯಾಯುಧಮನಪ್ರತ್ಯೂಹಸಾಹಸಮನಖಂಡಿತೋಚ್ಚಂಡತೇಜಮನವಿಶ್ರಾಂತವಿಕ್ರಾಂತಮನಪ್ರಮೇಯಮಾಯಾವಿತ್ವಮನನಿವಾರ್ಯಧೈರ್ಯಮನಸಾಮಾನ್ಯಸಾಮರ್ಥ್ಯಮನವಕ್ಲಿಷ್ಟಭುಜಾವಷ್ಟಂಭಮಂ ಭಂಗಿಸಿ ಸಂಗರಜೈತ್ರಮಂ ಕ್ಷಣಮಾತ್ರದಿಂ ಕೈಕೊಳ್ವೆನೆಂದರವಿಂದನಾಭನಕ್ಷೋಭದಿ * ನದಿರದಿದಿರಂ ನಡೆಯೆ ಕದನೋದ್ಯೋಗಶಂಖಕಾಹಳ ಭಂಭಾದಿಗಂಭೀರನಾದಮಂಭೋರುಹಭವಾಂಡಮಂ ತೀವಿದಾಗಳ್,

ಎಲೆ ಪೊಣ್ಮಿತ್ತು ಮುರಾರಿಗಾಂತರಿಕಮೂಭಂಭಾರವಂಭಾರವಂ
ನೆಲಕಂ ಪಿಂಗಿಸಿ ಕೀರ್ತಿಯಿಂದಿೞಿಸಿ ನೀಹಾರಾಗಮಂ ರಾಗಮಂ ।
ಸಲೆ ಮಾೞ್ಕುಂ ನಮಗಚ್ಯುತಂ ತೊಲಗಿಮಿಂ ಸಂದೇಹದಿಂ ದೇಹದಿಂ
ಪುಲಕಂ ಪೊಣ್ಮಿರೆ ನೋಡುವಂ ಪರಿಮಿಳದ್ರಾಜನ್ಯಮಂ ಜನ್ಯಮಂ ॥೧೭

ವ॥ ಎಂದಖಿಳವೃಂದಾರಕವೃಂದಮೆೞ್ತಂದು ನಭದೊಳಭಿರಾಮಮೆತ್ತಿಯಿನಿರೆ,

ಶಾರದಘನರುಚಿ ಸಮರವಿ
ಶಾರದಮೀರಾವಲೋಕಸಮ್ಮದನಿರ್ದಂ ।
ನಾರದನಾತನ ವಿಕೃತಿಯು
ನಾರದನಂದೊಸೆದು ನೋಡಿ ವಿಸ್ಮಿತರಾಗರ್ ॥ ೧೭

ವ॥ ಅನ್ನೆಗಂ,

ಮಸಕಂಗೊಂಡತ್ತಮಿತ್ತಂ ಮುಸುಱಿ ನಿಜನಿಜಾಕ್ಷೌಹಿಣೀಸೈನ್ಯಯುಕ್ತರ್
ವಸುಧೇಶರ್ ಘೋರನೋರಂತಿಸುವುದುಮಿಱಿಮೊಂದಸ್ತ್ರಶಸ್ತ್ರಂಗಳಂ
ಛೇ ।

* ಖ — ನಾಭನತಿಕ್ಷೋಭದಿ.

ದಿಸುತುಂ ತದ್ಭೂಪರಂಗಂಗಳನವರವೆರಕ್ಷೌಹಿಣೀಸೈನ್ಯಮಂ ತೆ
ತ್ತಿಸುತುಂ ಪ್ರತ್ಯೇಕವಂಬಿಂ ಪೊಣರ್ದನತಿರಥಂ ಪಾರ್ಥನಸ್ತ್ರಾರಿ
ಸಾರ್ಥಂ ॥ ೧೮

ನರನಿಸುವೀಕ್ರಮಂ ನಗಟ್ಟ ಖಾಂಡವದಾಹದೊಳಿಲ್ಲವದ್ಭುತಂ
ನರನಿಪನೂರ್ವನಲ್ಲ ಶತಕೋಟಿನರರ್ ನೆರೆದೆಚ್ಚರಂಬಿನಂ ।
ಶರವ್ರಯುಮಂಬರಂ ಪೊಣಮಯುಂ ಸಮರಕ್ಷಿತಿ ಚಾಪಟಂಕೃತ
ಸ್ವರಮಯುಮಷ್ಟದಿಗ್ವಳಯಮಪ್ಪಿನಮಂದಿಸುತಿರ್ದನರ್ಜುನಂ ॥ ೧೯

ವ॥ ಅದಲ್ಲದೆಯುಮಿತ್ತಲ್,

ಇದಿರೊಳ್ ನಿಂದು ನಿಜಸ್ವರೂಪದಿನದೆಂತುಂ ದಾನವರ್ ಕಾದಲಾ
ರದದೃಶ್ಯಾಕೃತಿಯಿಂದಿಸುತ್ತಿರಲದೃಶ್ಯಾಕಾರರಂ ದಿವ್ಯಮಂ ।
ತ್ರದೆ † ತನ್ನೆಚ್ಚುರಗೇಷುಗಳ್ ನಡೆ ಬಟ್ಟಕ್ಕಂ ಭೀಕರಾನೇಕರೂ
ಪದ ಮಾಯಾಪಿಗಳೆಯ್ದುವಂತೆ ನಗಟ್ದಂ ಪಾರಂ ‡ ಪ್ರತೀಕಾರಮಂ ॥

ವ॥ ಅದೆಂತೆನೆ,

ವಾರಣವಾಗಿ ಪೋರ್ವ ಪುಲಿಯಾಗಿ ತಗುಳ್ವಹಿಯಾಗಿ ಕೊಲ್ವ ಕಂ
ಠೀರವವಾಗಿ ಪಾಯ್ವ ತಗರಾಗಿ ಪಳಂಚುವ ಪಂದಿಯಾಗಿ ನಿ ।
ರ್ದಾರಿಪ ಭೂತವಾಗಿ ಬೆದರಟ್ಟುವ ಚಂಡಿಕೆಯಾಗಿ ಪೀರ್ವ ಮಾ
ಭೈರವನಾಗಿ ನುಂಗುವ ಮಹಾಸ್ತ್ರದಿನೆಚ್ಚು ಮೃಡಾರಿ ಕಾದಿದಂ ॥ ೨೦

ವ॥ ಮತ್ತಂ,

ದವಶಿಖಿಯಾಗಿ ಪಳ್ಳಿಸುವ ಸಂಹರಣೋಗ್ರಸಮೀರನಾಗಿ ಬೀ
ಸುವ ಸಿಡಿಲಾಗಿ ಪೊಯ್ವ ತಮವಾಗಿ ಕರಂಗುವ ಮೇಘವಾಗಿ ಪೆ ।

* ಕ.— ಪಾರ್ಥನುತ್ತಾರಿತಾರ್ಥಂ ಗ — ಪಾರ್ಥನಿತ್ತಾರಿತಾರ್ಥಂ

† ಕ. ಗ.— ದಿವ್ಯಮಂತ್ರದ. ‡ ಕ. ಗ.— ರೂಪದಮಾಯಾವಿಗಳೆಯ್ದೆ ಮತ್ತೆನೆಗಟ್ದಂಮಾಯಾ

ರ್ಜುವ ಕಡಲಾಗಿ ಘೂರ್ಣಿಸುವ ನಂಜಿನ ಪೆರ್ಮೆಟಿಯಾಗಿ ಕೊಲ್ವಗ
ಪ್ರವಿತತಿಯಾಗಿ ಬೀಡ್ವೆಸಕವದ್ಭುತವಾದುದು ವೈಷ್ಣವಾಸ್ತ್ರದಿಂ ॥ ೬೦

ವ॥ ಆಸಮಯದೊಳ್,

ಭೈರವವಿದು ಸಂವರ್ತನ
ಭೈರವದೀರ್ಣಾಸ್ಯಮೆನಿಸಲೇಱುಸಿ ಬಿಲ್ಲಂ ।
ನಾರಿಯೊಳೊಗೆದ ರವಂ ಮದ
ನಾರಿಯೊಳತಿಮುದಮನೀಯೆ ಹರಿ ಜೇವೊಡೆದಂ ॥ ೬೩

ವೈರೀಭವ್ರಾತಕಂಠೀರವರವಮರಿಹಂಸಪ್ರಜಪ್ರಾವೃಡಂಭೋ
ದಾರಾವಂ ಶತ್ರುಗೋತ್ರಾಚಲಕುಲಬಲಭಿದ್ವಜ್ರಘೋಷಂ ವಿಪಕ್ಷ ।
ಕ್ರೂರಾಹಿವ್ಯೂಹತಾರ್ಕ್ಷ್ಯಧ್ವನಿಯೆನೆ ಜಗಮಂ ಕೊರ್ವಿ ಪರ್ವಿತ್ತುದಾರಂ
ಧೀರಂ ಸ್ಫಾರಂ ಗಭೀರಂ ದನುಜರಿಪುಧನುರ್ದಂಡಟಂಕಾರನಾದಂ ॥ ೬೪

ವ॥ ಆಗಳಾಬಿಲ್ವೋದಕೇಶ್ವರಾದಿಷಟ್ಕದನಪಿಂದೆಂದಾ ಮದನಾರಿಯುಂಮನದೊಳ್ ನೆನೆದು,

ವಿವಿಧಾಸ್ತ್ರಂ ವ್ಯೋಮಮಂ ಟಂಕೃತಿರುತಿ ದೆಸೆಯಂ ದ್ವಿಟ್ಕಬಂಧಾಳಿಭೂಚ
ಕ್ರವನೆತ್ತಂ ತೀವ್ರವನ್ನಂ ಮುರಹರನಿಸುತಿರ್ದಂ ಶರಾವಾನಸಂಧಾ ।
ನವಿಮೋಕ್ಷಾಲಕ್ಷ್ಯವೇಗಂ ಸ್ಫುರಿತಮಕುಟನುತ್ತಾರಹಾರಂ ಚಳತ್ಕ
ರ್ಣವಿಭೂಷಂ ಚಂಚಲತ್ಕಂಕಣನನವರತಂಮಂಡಲೀಭೂತಚಾಪಂ ॥

ಬಾಣಾಂತಗತಂ * ಜಗಮೆನೆ
ಬಾಣಾಳಿಯನಸುರಸೈನ್ಯದೊಳ್ ಕಜೆದೊಡೆ ಗೀ ।
ರ್ಬಾಣಪದವಾದುದಸುರ
ಶ್ರೇಣಿಗೆ ಬಿಸವಂದಮೆಸುರಹರನಿಸುವೆಂದಂ ॥ ೬೬

* ಖ.— ಬಾಣವ್ರಾತಂ.

ವ॥ ಅನಂತರಂ,

ಚಲದಿಂದೆಯ್ದಿ ಧನುರ್ವಲಂ ಕವಿದುದಂತಶ್ವೀಯಮೆಂತಾಧನು
ರ್ವಲಮಶ್ವೀಯಮಿದಿರ್ಕೆ ನೂಂಕಿದುದುದಗ್ರೇಭಾಳಿಯಂತಾಧನು ।
ರ್ವಲಮಶ್ವೀಯಮಿಭಾಳಿ ಸಂಗಳಿಸೆ ತೇರ್ಗಳ್ ಸಾರ್ದುವಂತಾಧನು
ರ್ವಲಮಶ್ವೀಯಮಿಭಾಳಿ ತೇರ್ಗಳನಿತುಂ ಬಂದಾಂತುವಬ್ಜಾಕ್ಷನಂ॥ ೬೩

ನವಮೇಘಾಳಿವೊಲಂಬುವಂ ಕಱಿವ ಧನ್ವಿವ್ರಾತಮಂ ಘೂರ್ಣಿತಾ
ರ್ಣವಭಂಗಾಳಿವೊಲೆಯ್ದುವಶ್ವಚಯಮಂ ಸಂಚಾರಿಶೈಲಾಳಿವೊಲ್ ।
ಜವದಿಂ ಬರ್ಪಿಭಕೋಟಿಯಂ ರಣಮಹೋದನ್ವದ್ವಹಿತ್ರಾಳಿಯಿಂ
ತೆವೊಲೆಟ್ಟಿರ್ಪ ರಥೌಘಮಂ ತವಿಸಿದಂ ದೈತ್ಯಾರಿ ನಾನಾಸ್ತ್ರದಿಂ ॥ ೬೪

ವ॥ ಅನಂತರಂ,

ಭುಜಗರ್ವಂ ಭುಜಗರ್ವದೊಳ್ ಸೆಣಸೆ ಧೈರ್ಯಂಧೈರ್ಯಮಂಬೀಱೆ ಬಾ
ಣಜವಂ ಬಾಣಜವಕ್ಕೆ ಮತ್ಸರಿಸೆ ಕೋಪಂ ಕೋಪದಿಂ ತಿಣ್ಣಮಾ ।
ಗೆ ಜಗನ್ನಾಥನ ಷಟ್ಪುರೇಶನ ರಣಾನ್ಯೋನ್ಯಪ್ರತಾಪೋದಯಂ
ತ್ರಿಜಗದ್ವಿಸ್ಮಯಮಾದುದೇವೊಗೞ್ದಪೆಂ ತದ್ದ್ವಂದ್ವಸಂಗ್ರಾಮಮಂ ॥

ಸಲಿಲಾಸ್ತ್ರಂ ಜ್ವಲನಾಸ್ತ್ರಮಂ ಗೆಲೆ ಸಮೀರಾಸ್ತ್ರಂ ಪಯೋದಾಸ್ತ್ರಮಂ
ಗೆಲೆ ಮೇಘಾಸ್ತ್ರಮಿನಾಸ್ತ್ರಮಂ ಗೆಲೆ ಪತಂಗಾಸ್ತ್ರಂ ತಮಿಸ್ರಾಸ್ತ್ರಮಂ ।
ಗೆಲೆ ವಜ್ರಾಸ್ತ್ರಮಗಾಸ್ತ್ರಮಂ ಗೆಲೆ ಖಗೇಂದ್ರಾಸ್ತ್ರಂ ಭುಜಂಗಾಸ್ತ್ರಮಂ
ಗೆಲೆ ಗೆಲ್ವಾಸೆಯಿನಂದು ಕೇಶವನಿಕುಂಭರ್ ತಮ್ಮೊಳೆಚ್ಚಾಡಿದರ್ ॥ ೩೦

ವ॥ ಅಂತು ಕಾದುವಲ್ಲಿ,

ಬಾಣಾದಿಶಸ್ತ್ರಯುದ್ಧಧು
ರೀಣತೆಯಂತಿರ್ಕೆ ಕೃಷ್ಣಕಾಮಾರ್ಜುನರಿಂ ।

ಪ್ರಾಣಾಹುತಿಗೊಂಡು ಜಗ
ಕ್ಷೇಣಿಯನಾಂ ಬಿಟಿಕೆ ತುತ್ತಿದಪೆನಶ್ರಮದಿಂ ॥ ೩೧

ವ॥ ಎಂದು ಬಗೆದಂದು,

ಪ್ರೌಡಮುಖ್ಯಾಮರ್ರುಂ ಭಯಂಬಡುವಿನಂ ಬ್ರಹ್ಮಾಂಡಪಾಭಾಂಡಮಂ
ದೊಡೆವಂತದ್ಭುತ * ರೂಪಮಾಯ್ತನೆ ದಿಶಾವ್ಯೋಮಾವಧಿಸ್ಥಮೆ ।
ಪ್ರೌಡಲಿಂ ವರ್ಧಿಸಿವಕ್ತ್ರಕೋಟಿಬಹುಬಾಹಾವ್ಯೂಹವಾಸ್ತ್ರರ್ಯಮಂ
ಕುಡಲಾಭೀಳವಿಭೀಷಣಾರಭಟೆಯಿಂದಿರ್ದಂ ನಿಕುಂಭಾಸುರಂ ॥ ೩೨

ವಿಕಕ್ಷಣಮಿವನಿದಿರ್ದೊಡೆ
ಲೋಕಕ್ಷಯಮಪ್ಪುದೆಂದು ಚಕ್ರದಿನಿಟ್ಟು † ।
ವೈಕುಂಠಂ ಭೂತಾವಳಿ
ಗಾಕಲ್ಪಗ್ರಾಸಮಾಗೆ ಮಡಿಪಿದನವನಂ ‡ ॥ ೩೩

ವ॥ ಅನ್ನೆಗಂ,

ಜೃಂಭಾಸ್ತ್ರದಿಂದೆ ಬಲಮಂ
ಸ್ತಂಭಿಸಿ ¶ ನೃಪವೀರಜನಮನಪ್ರತಿಮಲ್ಲಂ ।
ಜಂಭಾರಿಸೂನು ವಿಜಯಮಿ
ಜೃಂಭಣಮಂತೆಸೆಯೆ ತೂಱಿ ತೀರ್ದಂ § ಸರಲಂ ॥ ೩೪

ವ॥ ಅಲ್ಲಿಂ ಬಿಟಿಯಿಂ,

ಶಂಬರವಧಹರ್ಷಮುಮಂ
ಶಂಬರವೊಗೆದಂತಿರೊಗೆಯೆ + ಹರ್ಷಂ ಮಾಯಾ ।

* ಕ — ಬ್ರಹ್ಮಾಂಡಮುಚ್ಚಂಡದಿಂಪೊಡೆವಂದದ್ಭುತ ಗ — ಬ್ರ...
ಮುಚ್ಚಂಡದಿಂಪೊಡದಂದದ್ಭುತ. † ಕ. ಗ — ಕ್ಷಯಮೆಂದುಚಕ್ರದಿಂದಿಟ್ಟಗಳ್
‡ ಕ ಗ — ಕೆಡಪಿದನವನಂ ¶ ಕ ಗ — ಜೃಂಭಾಸ್ತ್ರಗಿನಿಸೆ
ಸೈನ್ಯಾಸ್ತಂಭಿಸೆ § ಕ. ಗ — ವಿಜೃಂಭಣದಿಂದೆಸಯೆ ತೂಗುತಿರ್ದಂ.
+ ಕ. ಗ — ಹರ್ಷಮುದಾಶಾಂಬರವೊಗವಂತಿರೊಗೆಯೆ.

ಲಂಬನದನುಜರನಂದು ವಿ
ಲಂಬನಮಿಸಿಸಿಲ್ಲದಿಕ್ಕಿ ಗೆಲ್ದಂ ಮದನಂ ‖ ೩೫

ಭೂಸುರಮೌನ ನೆಗಪ ನಿಕಂ
ಭೂಸುರವಧಕೀರ್ತಿ ಕಟಿಯು ಪೂವಿನ ಸುಟೆಯುಂ ।
ವಾಸವನಾನಿಜಿತರಣಾ
ವಾಸವನೂಸದೀಕ್ಷಿಸುತ್ತೆ ತಳರ್ದ ಬಟಿಯುಂ ‖ ೩೬

ಕ್ಷಿತಿಚಕ್ರೋದರಸನ್ನಿವಿಷ್ಟಮುನನಂತಾಕ್ಷೋಹಿಣೀದೈತ್ಯರ
ಕ್ಷಿತಮಂ ಷಟ್ಪುರಮಂ ನಿಮಿರ್ದಿಸಿ ಮಹಾಸತ್ತ್ರೀಕದು ರುಕ್ಮಿಣೀ ।
ಪತಿ ಬಂದೊಪ್ಪಿರ ಪೊಕ್ಕನಾತ್ಮಪುರಮಂ ಕಾಂತಾಕಟಾಕ್ಷಚ್ಛಟಾ
ತತಿಯೊಳ್ ಸೂಸುವ ಸೇಸೆಗಳ್ ಪಡೆಸಿನಂ ಸ್ವರ್ಗಾನುಮೇಯತ್ವಮಂ ‖

ಪಾರ್ಥಂ ಯುಮಣಾಧ್ವಗೋ
ಪಾರ್ಥಂ ಬೀಳ್ಕೊಂಡು ಪೋಗೆ ಪರಿವೃತನಾರೀ ।
ಸಾರ್ಥಂ ವಿಶ್ರುತತರಕವಿ
ಸಾರ್ಥಂ † ನಿಜರಾಜಗೃಹದೊಳಿರ್ದಂ ಕೃಷ್ಣಂ ‖ ೩೮

ವ‖ ಅಂತು ನಿತ್ಯೋತ್ಸವದಿನಿರ್ಪನಮದೊಂದುದಿವಸಂ ಶಿಶುಪಾಲ ನಟ್ಟಿದ ಭಟ್ಟಪುತ್ರಂ ಬಂದು ನೃಪಮಂದಿರಾಂಗಣದೊಳ್ ನಿಂದಿರ್ದ ಕಾಂಡಚಂಡಾಶನಿಪಟಿಷ್ಠ ‡ ನಿರ್ಘೋಷಧ್ವನಿಯುಮುತ್ತಂಭಿತಭುಜ ಸ್ತಂಭನುಮುತ್ತಾನಿತಾಸ್ಯನುಮುಚ್ಚಂಬಲವಚನವಾಚಾಲನುಮಾಗಿ,

ಇದವರೋಧಂ ನಿಟಿಲೇಕ್ಷಣಾಧಿಕಭುಜಂಗಳ್ ಪೋದವೆಂತಂತು ಸಾ
ವರ್ದಮ ಭಂಗಂ ಗರುಡಚ್ಛದಾನಿಳನಿಂತಂತಂದವೆಂಗೀಯೆ ಪೋ ।
ರ್ದವಳಂತೆಂತು ಪಳಿಂಗೆ ರುಕ್ಮಿಣಿಯುಮಂತಂತುರ್ದಿತಂತಂತೆ ಪ
ರ್ದಿದುದಂತೆಂತೆ ಪೊಮಟ್ಟುದಾದನುಜನೀಗ್ರಟೋಪಕೋಲಾನಲಂ ‖ ೩೯

† ಕ ಗ — ನೆಗಪ್ಟಿ ‖ ಕ. ಗ — ಸಂಸ್ತುತಸುಕವಿರಸಾರ್ಥಂ.
‡ ಕ. ಗ — ಪದಿಷ್ಠ

ಎತ್ತಿ ಪರಿ ಬರ್ಕ್ಕವೊಣ್ಮಿರೆ
ಪೆತ್ತುವಿನಾಂ * ಸೈನ್ಯಭರದೆ ಶೇಷನ ತಿರಗೊಳ್ ।
ಪೊತ್ತುವ ಕದಿ ಪೆತೆನಣಿಗಳ
ನಾತ್ತರಿಪಿಸವೆಂದು ಚೈದ್ಯನಟ್ಟಿದನೆನ್ನಂ ॥ ೪೫

ವ॥ ಎಂದು ನಿರ್ಘಾತಾಸ್ಫೋಟನಂಗೆಯ್ದು ನಿಬ್ಬದುವಾಪ್ರಸ್ತಾವ ದೊಳ್ ಯುಧಿಷ್ಠಿರರಾಜಂ ರಾಜಸೂಯಯಜ್ಞಪೂಜೆಗೆಂದು ಬಟಿಯಟ್ಟಿದ ಮುಖ್ಯಪುರುಷನುಪಾಯನಪುರಸ್ಸರಂ ಬಂದು ಪೊಡವಟ್ಟು ಬಿನ್ನಪಂ ಗೆಯ್ಯೆ ಕಾರ್ಯಪರ್ಯಾಲೋಚನತತ್ಪರನಾಗಿ,

ಪರಿಹೃತ † ಶಾರಿಕಾಶುಕಶಿಶುವ್ರಜಮುಜ್ಝಿತ ‡ ಸಾಳಭಂಜಿಕೋ
ತ್ಕರಮವಿನಿರ್ಮಿತಾಸವರಕೌಘವಪಾಸ್ತ ¶ ಗವಾಕ್ಷರಾಜಿ ಸಿ ।
ರ್ವಿರಚಿತಚಿತ್ರವೆಂದೆನಿಪ ಮಂತಣಸಾಲೆಗೆ ಬಂದನಿಂದ್ರಸಿಂ
ಧುರಗತಿ ರೇವತೀಧವನುಮುದ್ಧವನುಂ ಬರೆ ರುಕ್ಮಿಣೀಧವಂ ॥ ೪೬

ವ॥ ಅಂತು ಬಂದು ತನ್ಮಂದಿರನಿವಿಷ್ಟರಮಣೀಯಮಣಿವಿಷ್ಟರಂ ಗಳನಲಂಕರಿಸಿ,

ಕಲಧೌತಸಿತಂ ರಾಮಂ
ಕಲಧೌತಪಿಶಂಗನುದ್ಧವಂ ಕೆಲದೊಳ್ಕ ।
ಣ್ಗೊಳ ರಜತಮಹಾರಜತಾ
ಚಲಮಧ್ಯದ ನೀಲಗಿರಿವೊಲೆಸೆದಂ ಕೃಷ್ಣಂ § ॥ ೪೭

ಮುಸುಕೆ ಹರಿಕಾಂತಿ ನೀಲೀ
ವಸನಂ ಸ್ಪರ್ಶಾನುಮೇಯಮಾದುದು ರಾಮಂ ।

* ಕ. ಗ.— ನೀಮ್ಮೆಣೆತ್ತುವೆನಾಂ.

† ಕ. ಗ. ಖ. † ಕ. ಗ.— ವ್ರಜಮೂರ್ಜಿತ

¶ ಕ—ವರಕೌಘವಪಾರ್ಥ, ವರಕೌಘದಪಾರ್ಥ. ಗ.—ವರಕೌಘವಹರ್ಧ

§ ಖ.— ನೀಲಗಿರಿಯೆನಲ್‌ಹರಿಯೆಸೆದಂ

ಗಸಿತಾಂಬರಮಂ ಮೆಱೆವಿಡಿ
ದ ಸುವರ್ಣದ ವಿದ್ಧದಂತಿಶುದ್ಧವನೆಸೆದಂ ॥ ೪೮

ವ॥ ಆಗಳಲ್ಲಿ ರಾಮಂ ಸಾಮಜವಿರೋಧಿಯಂತೆ ಸಾಮ
ಜೋದ್ಯಮಕ ಮನದೊಳ್ ಮುಳಿದು ದಂಡಧರನಂತೆ ದಂಡಧರನಾಗಿ,

ಭವನಂ ಗೆಲೆ ಮೂರ್ತಿ ಸ್ವಭಾ
ಭವನಂ ಘೂರ್ಣಿಸೆ ಗಭೀರನಾದದಿಂ ಉಳಿತ ।
ಶ್ರವಣಾಲಂಕರಣಂ ವೈ
ಶ್ರವಣಾದಿದಿಗೀಶರಳ್ಕೆ ಹಲಿ ಗರ್ಜಿಸಿದಂ ॥ ೪೯

ಇರಿಸಿ ತಮೋಗುಣಮಂ ಪಿ
ಕ್ಕ ರಜಸ್ಸತ್ವಂಗಳಂ ಬಹಿಷ್ಕರಿಸುವವೋಲ್ ।
ಅರುಣಾಧರಪಾಂಡುರದಶ
ನರುಚಿಗಳಾನನದಿನೊಗೆಯೆ ಲಾಂಗಲಿ ನುಡಿದಂ ॥ ೫೦

ಜಾತರೂಪರಕ್ತನಯನನುದಧಿಗರ್ಜನಂ ಮನೋ
ಜಾತರೂಪಮಥನಕೋಪನೆಂದನಮ್ಮ ಕಾರ್ಮುಕೀ ।
ಜಾತರೂಪವಿಂತುಟೇಂ † ವಿರೋಧಿಕಾಂತೆಯಾಗೆ ಗಂ
ಜಾತರೂಪಪಲ್ಲವಂಗಳಕ್ಕೆ ಪಚ್ಚವದ್ರಿಯೊಳ್ ॥ ೫೧

ಸಂಗರವೆಮ್ಮ ಮತಂ ನಮ
ಸಂಗರಮೆತಮಿರ್ಕೆ ತಱಿಪುವೆಂ ಮುಸಲಮನೀ ।
ಲಾಂಗಲಮಂ ರಿಪುಬಲದಬ
ಲಾಂಗಲವಂ ಭೂತಕೋಟಿಗಿಲ್ಲೆನೆ ‡ ಧರೆಯೊಳ್ ॥ ೫೨

* ಕ. ಗ.— ಹರಿ.  † ಮೊ — ೨ — ರೂಪವಿಂತುಟೇ

‡ ಕ — ರಿಪುಬಲದಬಲಾಂಗಲವಂಭೂತಕೋಟಿನಿಲ್ಲೆನೆ. ಖ — ರಿಪು
ಬಲದ ಬಲಾಂಗಲವಂ ಭೂತಕೋಟಿ ನಿಲ್ಲೆನೆ.

ಕಾಂಡನಿಪಾತಂ ವೈರಿಗ
ಕಾಂಡನಿಪಾತಮೆನೊಡರ್ಜುನಂತಿರೆ ನೆಗೞಲ್ |
ಪಾಂಡುರಕೀರ್ತಿಯೆ ನೆಗೞ್ಗುಂ
ಪಾಂಡುತನೂಭವರ ನೊಪ್ಪ ನೆಗೞ್ಗಮೆ ಬೞಿಯುಂ ॥ ೨೧೩

ದಮಘೋಷಸೂನುಬಳದು
ದಾಮಘೋಷಮದತ್ತ್ವವನ್ನ ನಡೆವಂ ಮುನ್ನಂ |
ಸಮವಾಯುಪತ್ತಿ ಬರೆ ರಿಪು
ಸಮವಾಯುವದಲ್ಲವಾಯುವಾತನೊಳಧಿಕಂ ॥ ೨೧೪

ಪಿರಿದುಂ ನಿರ್ನ್ನಿಕ್ಷಪೇಂದ್ರ ಚ್ಛೆದ್ಯನನಗಂ ಸನ್ಮಾನವಂ ಮಾನವಂ
ಹರಿಯೋಸಂದುಜಿದಿರ್ದಪಂ * ಸ್ಫುಟಿಲೋದುತ್ಕುಂಭಿಪಣಂ ಭೀಷಣಂ |
ಕರಣೀಯಂ ನಮಗಾತನೊಳ್ ಚಲಿತಭೂಭೃದ್ವಿಗ್ರಹಂ ವಿಗ್ರಹಂ
ಪರಮಾದೊತ್ರಿಹನನತ್ತಿಪ್ರೋಗಿ ಚಡಿಂ ಕೊಂದಿಕ್ಕುವಂ ನಿಕ್ಕುವಂ ॥ ೨೧೫

ಧೀರಂ ಧೀರಂಜಿತಂ ಸೀಂ ತಡೆದಿರದೆ ಯಶಸ್ಸಾಧನಂ ಸಾಧನಂ ಮು
ನ್ನೀರಂ ನೀರಂಧ್ರವಾವರ್ಷಿಸೆ ನಡೆದಪಟಿಂದಾನವಂ ದಾನವಂ ದು |
ಷ್ಟಾರಂ ಪಾರಂ ಕ್ಷಣಂ ಮಾಕಿರ್ರ ಮಡಿಯಿಸು ಕಾರ್ಮಾರವ್ರೊಲ್
ಮಾರಿವ್ರೊಲ್ ಸೀ
ಹಾರಂ ಹಾರಂ ಹರಾಂಗಂಬರೆ ನಿಜಯಶದೊಳ್ ಭಾಸಮಾನಂ ಸಮಾನಂ॥

ವ॥ ಎನೆ ಕೇಳ್ದು,

ಯಮುನಾಪ್ಲವಮಂ ಗಂಗೆಯ
ವಿಮಲಪ್ಲವಮೊಂದಿದಂತೆ ಸಭೆಯಂ ಪುದಿದಂ |
ಗಮರೀಚಿಯನುಜ್ಜ್ವಲ † ವಂ
ತಮರೀಚಿ ಪುದುಂಗೊಳಲ್ಕೆ ಕೃಷ್ಣಂ ನುಡಿದಂ ॥ ೨೧೭

* ಕ __ ಹರಿಯೋನೆಂಯುಜಿದಿರ್ದನಂ ಖ. __ ಹರಿಯೋನೆಂದುಜಿದಿರ್ದನಂ,
ಗ. __ ಹರಿಯೋನೆಂದುಜಿದಿರ್ದನ, † ಕ. __ ಮರೀಚಿಯಿನುಜ್ಜ್ವಲ.

ದಾರುಣಚಕ್ರೈದ್ಯಶಿರಶ್ಛಿ
ದಾರುಣಜಲಪಾನವುಂ ತದೀಯಕ್ರವ್ಯಾ ।
ಹಾರವುನೀಯಯುಷ್ಮದ್ವ್ಯಾ
ಹಾರವುದಿಂ * ಭೂತಕೋಟಿಗೀಗುಂ ರಂಧ್ರದೊಳ್ ॥ ೫೮

ವ॥ ಎಂದು ಮುಂದರಥರಂ ಗಂಭೀರಭಾಷೆಯಿಂ ನುಡಿದುದ್ಧವನ ವದನಮಂ ನೋಡೆ,

ಕನಕಾಚಲಚೂಳಿಕಯಿಂ
ದ್ಯುನದಿಯ ಪೊನಲಿೞಿದ ತೆಱದೆ ಕನಕಪ್ರಭನಾ ।
ನನದಿಂದುಜ್ಜ್ವಲದಶನಾಂ
ಶುನಿಕಾಯಂ ಪೊಣ್ಮೆ ನುಡಿದನುದ್ಧವಸಚಿವಂ ॥ ೫೯

ಬವರದಿನತ್ತ ಶತ್ರು ಕರೆವಂ ಬೞಿಯಟ್ಟುವನಿತ್ತ ಮಿತ್ರನಾ
ಬವರದ ನಣ್ಪಿನುಜ್ಜುಗದೊಳೊಂದನೊಡರ್ಚಿದೊಡೊಂದುಮಾಪುದೊ ।
ಲ್ಲವಗಡ । ಕಾರ್ಯಸಂಕಟಮಿದಾದೊಡಮಿಲ್ಲಿಗೆ ಪೇೞ್ವೆನಂತೆ ದಾ
ನವಪಥಮಂತೆ ಧರ್ಮಸುತದರ್ಶನಮುಂ ದೊರೆಕೊಂಡಲಪ್ಪುದಾಯುಮಂ ॥ ೬೦

ವ॥ ಅದೆಂತೆಂದೊಡೆ,

ಯಮಜಾತಂ ಯಜ್ಞಪೂತಂ ಬರಿಸೆ ಬರೆ ನೃಪವಾತ್ರತವಾ ಪೂಜೆಗಾತಂ
ಸಮವಾಯಂ ಬಂದಮೇಯಂ ಸಕಲನೃಪಕುಲಜ್ಯಾಯನಾಂ ಪೂಜಸೀ
ಯಂ ।
ಸಮನಾವಂ ಪೂರ್ವದೇವಂಗೆನಗೆನ ಕೇಳದುರ್ಬಿದ್ದ್ವಿವನಾದುಷ್ಟಭಾವಂ
ನಮಗಾದಂ ಕೋಪವಾದಂದವನೞಿಗುಮಸದ್ವಾದನುದ್ಯತ್ಪ್ರಮಾದಂ॥೬೧

ವ ॥ ಎಂಬುದುಮಾಮಾತನತಿಪ್ರೀತಿಯಿಂದಾದರಿಸಿ,

---

* ಕ, ಗ.— ಹಾರವುನೀಯಯುಷ್ಮದ್ವ್ಯಾಹಾರವುದಿಂ. † ಕ.— ಮಾಣ್ಬ ಪೊಲ್ಲನೆ ಗೆಡ. ಗ.— ಮಾಣ್ಬ ಪಲ್ಲವಗೆಡ.

ನಱಿಯುರಿದಪ್ಪ ಕಾರ್ಯಫಲಮುಂ ಬಲಮುಂ ಚಲಮುಂ ಪ್ರಸಿದ್ಧಿಯೊಳ್
ನಿಱಿಸುವ ನೋಡಿ ಕಾಲಗತಿಯುಂ ಧೃತಿಯುಂ ಕ್ಷಿತಿಯುಂ * ನಿಮಿರ್ಚುವೀ ।
ನಱುವಿನೊಳಯ್ದೆ † ಕಂಡು ನಯಮುಂ ಜಯಮುಂ ‡ ಪ್ರಿಯಮುಂ ಪ್ರಧಾನರ
ರ ಖಿಪ್ರವರಿಂ ತಧೀಶಹಿತಮುಂ ಪ್ರಿತಮುಂ ಮತಮುಂ ¶ ಮಹಾಮತೀ ॥ ೬೦

ವ॥ ಎಂದು ನಿಸ್ತ್ರಿಂತ § ಮಂತ್ರಾಲೋಚನನಾಗಿ ಧರ್ಮಜ ಯಾಗಪೂಜಾವ್ಯಾಜದಿಂ ಚೈದ್ಯನಂ ಯುದ್ಧರಂಗಪೂಜೆಗೆ ಭಾಜನಂ ಮಾಳ್ಪುದೆ ಕಜ್ಜಮುಂ ಮಹೇಂದ್ರನಿಂದ್ರಪ್ರಸ್ಥಗಮನೋದ್ಯುಕ್ತನಪ್ಪುದುಂ ಬಲಾಧ್ಯಕ್ಷಂ ವಿಜಯಪ್ರಸ್ಥಾನಭೇರಿಯುಂ ಪೊಯ್ಸಿದಾಗಳ್,

ಹರಿಮತ್ಸ್ಯಾಕಾರದೊಳ್ ಪುಟ್ಟದೆ ಜಲನಿಧಿಯಂ ಪೊಯ್ದ ನಾಟ್ಯಕ್ರಿಯಾಡಂ
ಬರದೊಳ್ ಕಾಲಾಗ್ನಿರುದ್ರಂ ನಿಜಪದತಳದಿಂ ತಾಳಮಂ ಕೊಟ್ಟದೇವೇ ।
ಶ್ವರವಜ್ರಕ್ಕಳ್ಕಿಗೋತ್ರಾಚಳತತಿ ಕಡಲಂ ಪೊಕ್ಕ ತದ್ಧ್ವಾನಮಂ ಧಿ
ಕ್ಕರಿಸಿತ್ತ ಕ್ಷೋಣಕೋಣಪ್ರಹತಬಹುಳ ಭಾಂಕಾರಭೇರೀನಿನಾದಂ॥ ೬೧

ವ॥ ಆಭೇರೀನಿನಾದಮಂ ಕೇಳ್ದು,

ಪ್ರತಿಪಾದಕ್ಷೇಪಡೋಳಾಯಿತಧರಣಿತಳಂ ಕರ್ಣತಾಳಾಗ್ರವಾತಾ
ಹತಿಯಾತಾಯಾತಗೋತ್ರಾಚಲತತಿ ಮದವಾರಾಶಿನೀರದ್ವಿಶಾಖೀ ।
ಕೃತದಿಙ್ನಾಗೌಘಮುದ್ವೃತ್ತರಳಕದಳಿಕಾರಣ್ಯತೀರದ್ರುಮಾಳಂ
ಕೃತತಾರಾಧ್ವಾಪಗಂ ಬಂದುದು ಘನಘಟೆಯುಂ ಮುಟ್ಟೆ ಮತ್ತೇಭಸೈನ್ಯಂ॥

ಕ್ಷಿತಿಚಕ್ರಂ ತನ್ನ ಪರ್ವಿಂ ತೆರೆಮಸಗಿದ ವಾರಾಸಿಯುಂ ಪೋಲ್ವಿನಂ ಹೇ
ಷಿತಘೋಷಾಪೂರಿತಾಶಂ ಖುರಪರಿಪಿಹಿತಕ್ಷೋಣಿ ಪರ್ಯಾಣರತ್ನ ।
ದ್ಯುತಿವಲ್ಲೀವೇಲ್ಲಿತಾಭ್ರಂ ನರೆದುದಿನಹಯೋಚ್ಚೈಶ್ರವಂಗಳ್ಗಮಿಂತೀ
ಗತಿ ಸತ್ವಂ ರೂಪು ರೋಮಚ್ಛವಿ ಸಮನಿಸದೆಂಬಂತು ದಿವ್ಯಾಶ್ವಸೈನ್ಯಂ॥

* ಖ — ಸ್ಥಿತಿಯಂ   † ಖ.— ತೆಱುವಿನೊಳೆಯ್ದೆ.
‡ ಖ — ಭಯಮುಮಂ   ¶ ಖ. — ನುತಮು
§ ಕ.— ನಿಸ್ಪೃಗತ್ತ   ಗ.— ನಿವೃತ್ತ.

ಪರಿಧಾವಚ್ಚಕ್ರಮಾಲಾಚಟುಲಗತಿಜವೋತ್ಸಾಹವಾಹಪ್ರಜೋದ್ಯ
ತ್ಖುರ * ಪ್ರೋದ್ದಂಡಧ್ವಜಾಳಿಸ್ಫುರಿತಮಖಿಲಶಸ್ತ್ರಾಸ್ತ್ರ ಸಂದೋಹ
ರುದ್ಧಂ |
ಪಿರಿದಪ್ಪುಂಟಾಸವಮುಗ್ರಂ ರಣರಸಿಕಮಹಾವೀರದುರ್ವಾರದೈತ್ಯ
ದ್ಧುರಸೋತ್ತೋಚ್ಛೃಂಖಳಂ ಭೋಂಕನೆ ನಡೆದುದನೂನಂ ವರೂಥಪ್ರ
ತಾನಂ ॥ ೭೬

ಕರಿಕುಂಭೋತ್ಕಂಠಕಂಠೀರವವರವಿಭವುವಕ್ಷ್ಯೋಚಿತಂ ರತ್ನಗಾತ್ರ
ತ್ರರುಚಿಸ್ತೋಮಾವಲೀಢಂ ಗುಣಜಕಿಣಕಠೋರಪ್ರಕೋಷ್ಠಂ ಧನುಷ್ಟಂ
ಕರಣಪ್ರೋದ್ದಾಮವಂಸಗ್ರಥಿತಶವದಿ ಗೂಢಾ † ತತ್ತ್ರಾಂಗುಳಿಪ್ರ
ಸ್ಫುರಿತಂ ಧಾನುಷ್ಕಚಕ್ರಂ ನಡೆದುದು ಚಟುಲಾಸ್ಫೋಟಿತಕ್ಷೋಣಿಚಕ್ರಂ ॥

ವ ॥ ಆಪ್ರಸ್ತಾವದೊಳ್,

ಅವನೀದೇವಸಮೂಹವೇದನಿನದಂ ಮಾಂಗಲ್ಯಗೀತಾನ್ವಿತೋ
ತ್ಸವತೂರ್ಯಧ್ವನಿ ವಂದಿವೃಂದಜಯಜೀಯಾನಂದನಾದಂ ‡ ಸುಹೃ |
ನ್ನಿವಹಾಶೀರವವೊಂದನೊಂದು ಗೆಲೆವಂದೆಕ್ಕಕ್ಕೆಯಿಂದುರ್ವಿಪ
ರ್ವಪಿನಂ ಘೂರ್ಣಿಸುತಿರ್ದುದಾನೃಪಗೃಹಂ ಕ್ಷುಭ್ಯತ್ಸುಧಾಂಭೋಧಿ
ವೋಲ್ ॥ ೭೮

ತರಳವಿಲೋಚನದ್ಯುತಿ ದರಸ್ಮಿತಕಾಂತಿ ನವೀನಮೌಕ್ತಿಕಾ
ಭರಣಮರೀಚಿ ಕಣ್ಗೊಳಿಸೆ ಮಂಗಳಲಕ್ಷ್ಮಿಯು ಮೇಳದಾಕೆಯರ್ |
ನೆರೆದವೊಲಾಗಳಂತವುರದಂಗನೆಯರ್ ನಡೆತಂದು ¶ ಬಾಹುವ
ಲ್ಲರಿ ಕುಡೆ ದೇಸೆಯುಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯುಂ ॥ ೭೯

ವ ॥ ಅಂತು ಮಂಗಳಾಚಾರಮಸೆಯೆ ಸಿಂಹಪೀಠದಿಂದೆಳ್ದು ದೈತ್ಯ
ಮಥನಂ ಪ್ರಥಮಚಲಿತದಕ್ಷಿಣಚರಣನಾಗಿ,

---

* ಕ—ಪ್ರಜೋಚ್ಚಾಮರ. ಗ.—ಪ್ರಜೋಚ್ಚಾಮರ † ಕ—ಶರಧಿ ಗಾಢಂ ಗ.—ಶರಧಿಗಾಢಾ ‡ ಬ—ಸ್ತೃಂದವಿಜಯಾನಂದ ಪ್ರವಾದಂ

¶ ಕ ಪೊಲ್ಮಗಳಂತಪುರದಂಗನಯರ್ ನಡೆತಂದು ಗ.— ಪೊಲಾಗಳಂತ ಪುರದಂಗನೆಯರ್ ನರೆತಂದು

ವೀರಶ್ರೀ ನಲಿದೇಱೆ ತನ್ನ ಭುಜಮಂ ತೇಜಂ ದಿಶಾಧೀಶಕೋ
ಟೀರಪ್ರಾಂತಮನೇಱೆ * ಶತ್ರುದಿವಮಂ ಪೂಸ್ದೇಱೆ ಬಂದೇಱಿದಂ ।
ಧೀರಂ ಶೌರಿ ವರೂಥಮಂ ಪ್ರಥಿತಘಂಟಾಯೂಥಮಂ ಶಸ್ತ್ರತೂ
ಣೀರವ್ರಾತಸನಾಥಮಂ ಧ್ವಜಝುಷಾಪ್ತಸ್ವರ್ಣದೀಪಾಥಮಂ † ॥ ೨೦

ವ॥ ತದನಂತರಂ,

ಅತಿಕೋಪೋದ್ಭಿನ್ನಗಂಧದ್ವಿಪಘಟೆಗಳ ಘಂಟಾರಣತ್ಕಾರದಿಂ ಬೃಂ
ಹಿತದಿಂ ವಲ್ಗತ್ತುರಂಗೋತ್ಕರದ ಖರಖುರಾಳೀರಟತ್ಕಾರದಿಂ ಹೇ।
ಷಿತದಿಂ ಸಂಗ್ರಾಮರಾಗೋದ್ಭಟಭಟರ ಪದ ‡ ಪ್ರೋಚ್ಛಳತ್ಕಾರದಿಂ ಕ್ಷ್ವೇ
ಡಿತದಿಂ ಬ್ರಹ್ಮಾಂಡಮುಜ್ಜೃಂಭಿಸುತಿರೆ ತಳರ್ದಂ ಶ್ರೀಜಗನ್ನಾಥ
ದೇವಂ ॥ ೨೧

ವ ॥ ಆಸಮಯದೊಳಪ್ರಮೇಯಸ್ವಕೀಯಬಲಕಳಕಳಾಕರ್ಣನೋದೀರ್ಣಕೋಪಸ್ಫುಟಿತಕಟತಟವಿಗಳದವಿರಳದಾನಧಾರಾಪಾನೀಯಪರ್ಯಟದಳಿಪಟಲಝಂಕೃತೋಪಬೃಂಹಿತ ಬೃಂಹಿತನಿನದಭೀಕರಾನೇಕಗಜಘಟಾನೀಕರುಂ, ಖರದಂತಖಂಡನಖಣಖಣಾಯಮಾನಖಲೀನೋತ್ಸ್ಖಲಿತ ಬಹುಳ ಲಾಲಾಪ್ರತಾನಫೇನಪ್ರಕರಘುರುಘುರುಘೋಣಾಘೋಷಣೋನ್ಮಿಶ್ರಿತಹೇಷಿತಾರವಭೀಷಣವಾಹಸಂದೋಹರುಂ, ಧರಣಿತಳಶಿಲಾಪಟ್ಟಶಲ್ಕೀಕರಣಪಟುನಿಷ್ಠುರವ್ಯಾಧಾವನ್ನೇಮಿವಳಯೋಚ್ಛಂಡಚಕ್ರಪ್ರಚಯಚೀತ್ಕಾರನಾದಾತಿಶಯವರೂಥಿಚಾಪಟಂಕಾರರವಭಯಂಕರವರೂಥಯೂಥರುಂ, ಅಸಮಸಮರಾರ್ಜಿತಾನೇಕವಿಜಯಾಹಂಕಾರಜನಿತಹರ್ಷಾವೇಶ ಬಂಹಿಮವತ್ಸಿಂಹನಾದ ವಿವಿಧ ಗತಿನರ್ತನಬಹುಪ್ರಕಾರಪ್ರಹರಣಚಾರಣಾನ್ಯೋನ್ಯವೀರಾಳಾಪಕಥನಪರಂಪರಾಭೀಷಣಪದಾತಿಸಂಘಾತರುಂ, ಯುಗಪತ್ಪ್ರಹನ್ಯಮಾನನಾನಾನಕನಿಸ್ಸಾಣಪಣವಭೇರೀಮೃದಂಗಡಿಂಡಿಮಡಮರುಢಕ್ಕಾತಾಳಕಾಂಸ್ಯತಾಳಶಂಖ ಕಾಹಳ

* ಖ — ವ್ರಾತವನೇಱೆ † — ಖ ಸ್ವರ್ಣದೀಪೋತ್ಥವಂ

‡ ಗ — ರಾಗೋದ್ಭಟರಪದತಳ.

ಕೋಳಾಹಳ ಬಧಿರಿತದಿಗಂತರಾಳರುಂ, ಕರಿಮಕರಶರಭಭೇರುಂಡಸಿಂಹ ವ್ಯಾಳಶಾರ್ದೂಲಚಿಹ್ನ ಪರಿವಿರಾಜಿತ ವೈಜಯಂತೀ ವಿಚಿತ್ರಪಿಂಛಚ್ಛತ್ರ ಧವಲಾತಪತ್ರಪ್ರಕರಪರಿಪಿಹಿತಮಿಹಿರಾಂಶುಜಾಳರುಂ, ಅಪ್ರಮಿತಚತುರಂಗಬಲಪದೋದ್ಧೂತಧೂಳೀಪಟಲಸಂಭವ ಮಹಾಂಧಕಾರ ನಿವಾರಣ ಪಟುಹಟನ್ಮಣಿಮಯಾಭರಣ ವಜ್ರಕವಚ ಮರೀಚಿನಿಚಯರುಮಾಗಿ ಬಂದು ದ್ವಾರಾವತಿಯ ಪೊಱವೊೞಲೊಳಿರ್ದನೇಕದ್ವೀಪಾವನಿಪಸೇವಕ ಕ್ಷತ್ರಿಯರಂ ತ್ರಿಯಾಮಾಚರಸೂದನಂ ಸುಪ್ರಸಾದಾವಲೋಕನದಿಂ ಸಂಭಾವಿಸಿ,

ಮುಗಿಯುವಿವೆಂದುಪಂದೆನಿಪ್ಪಪಂ ಹರಿ ಸೈನ್ಯರಜೋಂಧಕಾರದಿಂ<br>
ಮುಗಿಯಿಸಿದಂ ದಿವಾಕರಕರಾಬ್ಜಮನೆಂದೊಡಿದಾವ ಕೌತುಕಂ ।<br>
ಬಗೆಗಿತರಪ್ರಚಂಡರ ಕರಾಬ್ಜಮನೀಕ್ಷಣಚಂದ್ರಕಾಂಶುವಿಂ<br>
ಮುಗಿಯಿಪುದೆಂಬಿನಂ ಮುಗಿದುವೆಂದವನೀಶಕರಾಂಬುಜೋತ್ಕರಂ॥ ೭೦

ವ॥ ಆಗಳಾನೃಪಕೋಟಿಯುಂ ನಿಜೋಲ್ಲಸಿತಭ್ರೂಕೋಟಿಯಿಂ ನಡೆಯಲ್ವೇೞ್ದು,

ಅಸವೋಗ್ರಾನೀಕಿನೀಭಾರದಿನವನಿತಳಂ ಬಳ್ಕಲುಚ್ಚ ಧ್ವಜಾನೀ<br>
ಕಸಮಿರಾಘಾತದಿಂ ಬಾಂದೊರೆ ತೆರೆಮಸಗಲ್ ತೂರ್ಯನಿರ್ಘೋಷ ದಿಂದೆ ।<br>
ಜ್ಜಿಸೆ ಶಬ್ದಾದ್ವೈತಮಾಗಲ್ ನೃಪಸಮಿತಿಶಿಖಾರತ್ನ ಜಾಲಂಗಳಿಂದಂ *<br>
ಬಿಸಿಲೆಲ್ಲಂ ಕೆಂಕಮಾಗಲ್ ವಿಜಯಶಿಬಿರಮಂ ಕೃಷ್ಣನೆಯ್ತಂದು ಪೊಕ್ಕಂ ॥

ವಿವಿಧವಿನೋದದಿನಿರ್ದಾ<br>
ದಿವಸಂ ಪ್ರಸ್ಥಾನಶಿಬಿರದೊಳ್ ಮಱುದಿವಸಂ ।<br>
ದಿವಸಕರೋದಯದೊಳ್ ವಿಜ<br>
ಯವರೂಥಮನೇಱಿ ನೆಗಚೆ ಪಟುಪಟಹರವಂ ॥ ೭೪

* ಖ.— ರತ್ನರಾಗಂಗಳಿಂದಂ.

ಘೀಕೋಲಾಹಲಶೇಕದೇಶಮೆನಿಸ ಪ್ರೋಲ್ಲುಗ್ಗಿಂ ವಾರ್ಧಿಸಂಭೂತಮ
ಪ್ರಾಕೋಳಾಹಳವೆಂಬಿನಂ ನಿಜಚಮೂಕೋಳಾಹಳಂ ದಿಙ್ಮುಖಾ ।
ಸೀಕಾಂತಂಬರವಂಬರಂಬರಮೆಜಾವಾಸಂಬರಂ ಪರ್ವಿದಿರಲ್
ವೈಕುಂಠಂ ನಡೆದಂ ಯುಧಿಷ್ಠಿರನರೇಂದ್ರಾಲೋಕನೋತ್ಕಂಠೆಯಿಂ ॥ ೩೪

ಇದು ಚಿತ್ರಂ ಸಲೆ ಸತ್ವಮೂರ್ತಿಯೆನಿಸಿರ್ದಾವಿಷ್ಣು ತಾನೆಂತು ಮಾ
ಡಿದನಿಂದೀಜಗಮಂ ರಜೋಮಯಮೆನಂದೆತ್ತಂ ರಜೋಜಾಳಮೂ ।
ಣ್ದದೊಳಾಕಾಶದೊಳಾತ್ಮಪಾಣಿಪಿಹಿತಾಸ್ಯರ್ ಖೇಚರರ್ ಮುಂದುಗಾ
ಣದೆ ನಿಬ್ಬಸ್ಸಗಮಾದದೇಂ ಪಿರಿದೊ ತತ್ಸೇನಾರಜೋಮಂಡಲಂ ॥ ೩೫

ಪದಘಾತೋದ್ಧತಧೂಳೀಪಟಲಮೆಹಿಮೆರುಗ್ಬಿಂಬಮಂನುಂಗಿರೋ
ದೋಂ
ತದೆಳ್ಪಿಂ ಧ್ವಾಂತಸಂತಾನಮನೊದವಿಸೆ ನಾನಾನಿಶಾತಾಯುಧವ್ರಾ ।
ತದ ನಿಸ್ಸ್ವದ್ವಜ್ರಪರ್ವಪ್ರಕರದ ನೃಪತಿಪ್ರೌಢಚೂಡಾಮಣಿಸ್ತೋ
ಮದ ಸಾಂದ್ರಜ್ಯೋತಿಗಳ್ ಕಣ್ಬೆಳಗೆನೆ ನಡೆದತ್ತಾಜಗನ್ನಾಥಸೈನ್ಯಂ ॥ ೩೬

ದರಹಾಸಶ್ರೀನಟೀನೂಪುರರದುಳಿಯೆನ ಪೇರಾತಾಡುತುಂ ತಮ್ಮೊಳತ್ಯಾ
ದರದಿಂ ಪೂವಲ್ಲಿ ಕೈಮಿಕ್ಕುದಿರ್ದ ಘುಸೃಣಕರ್ಪೂರಕಸ್ತೂರಿಕಾಸಾ ।
ರರಜಂ ತಳ್ತೊಪ್ಪುವೆಸ್ವೆ ನೀಮೀಲತೆಗೆ ತಳಿರಲರ್ತಾಂಬಿವಿಂಡೆಂಬಿವಂ * ಬಿ
ತ್ತರಿಸಲ್ ಬಂದತ್ತು ಪ್ರೊಂಬಣ್ಣಿಗೆಯ ಪಿಡಿಗಳೊಳ್ ತಂಡದಿಂ ಪೆಂಡವಾಸಂ॥

ನಡೆದೆಳ್ತಂದತ್ತು ಕಣ್ಗಂಪುರಿ † ಮೊಗವಡದಾಟೋಪಮಂ ಬೀಜಿ
ಪಕ್ಕಂ
ಬಿಡಿದಳ್ಕುತ್ತಾರೆಕಾಜರ್ ಬರೆ ಭರವಶದಿಂ ‡ ಮೇಗಣಾರೋಹಕರ್ ಬಾ ।
ಯ್ವಿಡೆಪೋಪ್ರೋಗೆಂದು ದೂರಾಂತರದೊಳೂದರ್ ಕಾಲ್ಗಾಪಿನಾಳ್‌ನಿಂದು
ನಿಂದೋ
ರಡಿಗೋರೆರೊರೆರ್ಲಿಸುತ್ತುಂ ನೆರವಿಯುಲಿಪುಮಂ ವ್ಯಾಳಗಂಧೇಭ
ಚಕ್ರಂ ॥ ೩೮

---

* ಕ ಗ.— ತುಂಬಿವಿಂಡಂಬನಂ † ಖ.— ನಡೆತಂದತ್ತಂದುಕಣ್ಬೆಳ್ಪರೆ
‡ „.— ಪಕ್ಕಂಬಿಡಿದಾರುತ್ತಾರೆಕಾಜರ್ ಬರೆಭಯವಶದಿಂ

ದಿಗಧೀಶರ್ ಜಗದೀಶರೊಳ್ * ಪೊಲಗಿಡಲ್ ದಿಗ್ದಂತಿಗಳ್ ಸೈನ್ಯದಂ
ತಿಗಳೊಳ್ ಪಲ್ಲಟವಾಗಲಬ್ಧಿಗಳನೇಕಾಶ್ವೇಭಶಾಲಾವಿದಾ ।
ಬ್ಧಿಗಳೊಳ್ ತಳ್ತಿರಲರ್ಕಕೇತು ರಥಕೇತುವ್ರಾತದೊಳ್ ಕೂಡಲಿಂ
ತೆಗಲಿಂಬೆತ್ತು ಮಹತ್ತ್ವಮಂ ತಳೆದು ಸೇಚೆಂದಿಟ್ಟಂದನಬ್ಜೇಕ್ಷಣಂ † ॥೪೦

ಇದು ಸಮಸ್ತ ಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರನಿಜ
ಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತಶ್ರೀಪಾದ
ಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗನ್ನಾಥವಿಜಯ
ಮಹಾಪ್ರಬಂಧದೊಳ್ ಷಟ್ಪುರೇಶ್ವರಮಥನ ಶಿಶು
ಪಾಲಾಡಂಬರ ಮಂತ್ರಾಲೋಚನ ಯುಧಿಷ್ಠಿರ
ರಾಜಸೂಯ ನಿರೀಕ್ಷಣಾರ್ಥೇಂದ್ರ
ಪ್ರಸ್ಥಪ್ರಯಾಣವರ್ಣನಂ
ಪಂಚದಶಾಶ್ವಾಸಂ

---

* ಖ.— ಧರಣೀಶರೊಳ್. † ಕ. ಗ.— ಬಂದೆಟ್ಟಿಂದನಬ್ಜೇಕ್ಷಣಂ.

# ಷೋಡಶಾಶ್ವಾಸಂ.

ಶ್ರೀವೃಕ್ಷಪನಸನಿವಹಮು
ಮಾವಿಷ್ಕೃತಕುಸುಮವಿಸರಮೆನಸ * ಶಿಖಿವನಂ ।
ತೀವಿರೆ ಶಿಖಂಡಮಣಿಕಿರ
ಣಾವಳಿಯಿಂ ಕಾಣಲಾಯ್ತು ರೈವತಶೈಲಂ ॥ ೧

ಇರೆ ಶಬರಾಧಿರಾಜಕಟಕಂ ಕಟಕಂ ಕಟಕಂಧರೋಗ್ರಸಿಂ
ಧುರಮೆನೆ ನಿರ್ಝರೋಲ್ಲಹರಿಯುಂ ಹರಿಯುಂ ಹರಿಯುಂ ವಿಜೃಂಭಿಸಾ ।
ಗಿರಿತಟದಲ್ಲಿ ದಾವಶಿಖಿಯುಂ ಶಿಖಿಯುಂ ಶಿಖಿಯುಂ ಪ್ರಭೂತಮಾ
ಗಿರೆ ಬೆಳಗಂ ತಮಂ ತವಿಪಿನಂ ವಿಪಿನಂ ವಿಪಿನದ್ವಮೊಪ್ಪುಗುಂ ॥ ೨

ಕರಿದಾನದ್ರವಗಂಧಚಿತ್ರವಿಹಗಸ್ತೋಮಾರುತಂ ಮಾರುತಂ
ಬರೆ ಕೃಷ್ಣಂಗಿದಿರಂ ಪಳಂಚಲೆದು ಮೋಹಾಧ್ವಾಂತಮುಂ ಧ್ವಾಂತಮುಂ ।
ಪರಿವುತ್ತಿರ್ದುದು ತನ್ನೊಳೊಂದಿ ಸಿಲೆ ತೇಜೋವ್ಯೈಹಿರು ವ್ಯೈಹಿರಂ
ತರುಶಾಖಾನಿಕುರುಂಬಚುಂಬಿತದಿಶಾನೀಕಾನನಂ ಕಾನನಂ ॥ ೩

ಜರದಹಿಪೂತ್ಕೃತಂ ವಿಹಗಚೀತ್ಕೃತಮುದ್ಧತಘೂಕಹುಂಕೃತಂ
ಕರಿಕರಸೂತ್ಕೃತಂ ಪವನಸೀತ್ಕೃತ † ಮುದ್ಧತವೇಣುಝುಂಕೃತಂ ।
ಗಿರಿಜನದೀಜಳತ್ಕೃತಮಿಭಾರಿಘುಳುತ್ಕೃತಮುಗ್ರದಾವಸಂ
ಚರಣಧಗತ್ಕೃತಂ ‡ ಮಹಿಷಶೃಂಗಟಣತ್ಕೃತಮಾವನಾಂತರಂ ॥ ೪

ನಡುವಿರ್ದೆಬ್ಬಿರೆಪೋತ ವಿಕ್ಕ ಕಳಭಂಗಳ್ ¶ ಕೂಡೆ ಸಾರ್ದಿರ್ಕೆಲಂ
ಬಿಡದಿಂಬಿಂದೆಳೆಯಾನೆಗಳ್ § ಬರೆ ಮರಂಗೊಂಡೊಂದು ಯೂಥಾಧಿಪಂ ।

---

* ಖ.— ಕುಸುಮಮಾದುದೆನೆ. † ಖ.— ಪ್ಲವಗಕೀತ್ಕೃತ.
‡ ಕ, ಗ.— ದಾವಸಂಚರಣಧಗಿತ್ಕೃತಂ ¶ ಕ, ಖ, ಗ ಮೊ— ೦— ಚಿಕ್ಕಪೋತ ಕಲಭಂಗಳ್. § ಕ, ಗ.— ಬಿಡಿದಣ್ಮಿಂಸೆಳೆಯಾನೆಗಳ್. + ಖ ಗ.— ಯೂಥಪತಿಯಿಂ.

ಪೊಡೆಯುತ್ತುಂ ಬರೆ ಮುಂದೆ ಪಿಂದೆ ಪೆಱಗಿಂ ಬಂದೊಂದಿಭಂ ಪಜ್ಜೆಯಂ
ತೊಡೆಯುತ್ತುಂ ಬರೆ ಬಪ್ಪ ಯೂಥತತಿಯಿಂ ಚಲ್ಯಾದುದಾಕಾನನಂ‖ ೫

ಸ್ವೈರಿಸಲಾರದುರ್ವರೆಯ ಭಾರಮನಲ್ಪಬಲಂಗಳಾದಿಶಾ
ವಾರಣರಾಜಿಗಳ್ ತಳವುವೀಮದವಾರಣವೃಂದದಿಂ ಮಹೀ ।
ಭಾರಮನೆಂದು ಧಾತ್ರ ಸಮೆಕಟ್ಟಿದ ವಾರಣಯೂಥಮೆಂಬಿನಂ
ವಾರಣಸಂಕುಲಂ ಬಗೆಗಗುರ್ವಿಸುತಿರ್ದುದದೊಂದುತಾಣದೊಳ್ ‖ ೬

ಅತಿಶಯಭದ್ರಮೂರ್ತಿಗೆಜಗಕ್ಕಿದುಮಂಗಳಮೆಂಬಮರಾದ್ರದೇ
ವತೆಪಿಡಿದಿಕ್ಕುವಾಮಿಷದ * ಮುಟ್ಟಿಗೆಯೆಂಬಿನೆಗಂಪಿಡಿಲ್ವುದಿ ।
ಗ್ವಿತತಿಗೆ ಸೂಸೆ ಮುನ್ನಮೆರೆಯಾದ ರುರುವ್ರಜವಾಗಳಾಸ್ಯದಿಂ †
ಪ್ರತಿಘದೊಳೆತ್ತಿ ‡ ಬೀಸಿದುದದೊಂದು ಮದದ್ವಿರದಂ ಮಹಾಹಿಯಂ ‖

ಬಿದುವೋ ಕೂಟಮೊ ಕರ್ಣತಾಳಮೊ ಪತತ್ರಕ್ಷೇಪಮೋ ನಿರ್ಗಳ
ನ್ಮದಮೋಸೆರ್ಘುರವೋ ಲಲಾಟಮೊ ಶಿಲಾವಿಸ್ತಾರಮೋ ಕಣ್ಣ ಕೆಂ ।
ಪೊ ದವಜ್ವಾಲೆಯೊ ಮೆಯ್ಯ ಕರ್ಪೊ ಕರಿಕೋ ಪೇರಾನೆಯೋ ವಜ್ರಗೊ
ಡ್ಡಿದ ನೀಲಾದ್ರಿಯೊ ಪೇೞಿದೆಂಬಿನಸುಗುರ್ವಾದತ್ತು ಮತ್ತೊಂದಿಭಂ ‖ ೮

ವ॥ ಅದಲ್ಲದೆಯುಮಲ್ಲಿಂ ಬೞಿಯೊಂದು ನೀರ್ಸರೆಗೆಯ್ದಿರ್ದ ಬೞಿಯಂ, ¶

ಸರಿಯೆ ಝಷಾಳಿ ಸಂಭ್ರಮಕರಂ ಮಕರಂ ಮಕರಂದರೇಣುಗಳ್
ಪರೆಯೆ ಕಲಂಕೆ ಕೂಡೆ ಕಮಳಂ ಕಮಳಂ ಕಮಳಂ ಮಹೋರ್ಮಿ ಪೊ ।
ಣ್ಮಿರೆ ಪೊಕ್ಕುಮಟ್ಟಿಭಂ ಬಿಸವದಿಂ ನದದಿಂ ನದದಿಂದ್ರವಜ್ರಸಿ
ಷ್ಮರವೆಱಗಿತ್ತಿಭಾಸಘನದಂ ಘನವಂ ಘನವಂಶಜಾಲಮಂ ‖ ೯

---

* ಕ. ಗ.— ಬೞಿದಿಕ್ಕುವಾಮಿಷದ. † ಕ — ತರುವ್ರಜವಾಗಳಾಸ್ಯದಿಂ ಮ — ಅ — ತುರುವ್ರಜವಾಗಳಾಸ್ಯದಿಂ. ಕ. ಗ — ಪ್ರತಿಘದೊಳೊತ್ತಿ. ¶ ಖ.— ಅದಲ್ಲದೆಯುಮೊಂದೆಡೆಯೊಳ್ ಬೞಿಸೀರ್ಸರೆಗೆಯ್ದಿರ್ದ ತಾಣದೊಳ್.

ಬಡಗೊಂಡುಯೊಂದು ನವಶ್ಯಾಕರಹಿಮಜಲಮಂ ಕೊಂಡು ಮೇಲೊಟ್ಟಿ ತಣ್ಪಿಂ
ಪಡೆದಂಭೋಜಾತಪತ್ರಂಗಳ ಕೊಡೆವಿಡಿದಲ್ಲಿಂ ನಿಕುಂಜಸ್ಥಳಕ್ಕ ।
ಯ್ದುಡಿದತ್ತುತ್ಫಲ್ಲವಂ * ಸಲ್ಲಕಿಯೆಳದಳಿರಂ ಪೇಚಕಸ್ಥಾನವಂ ಕೈ
ದುಡುಕುತ್ತಾಘ್ರಾಣಿಸುತ್ತುಂ ನಸೆಗನುಪಶಮಾಗಿರ್ದುದಂದೊಂದಿಭೇಂದ್ರಂ ॥ ೧೦

ಒರ್ಮೆ ವನಸ್ಥಳೀಕಮಲಪಾಂಸುವನಿಂಬೆನೆ ಮುಯ್ಯೊಳೊಟ್ಟಿಕೊ
ಳ್ವೊರ್ಮೆ † ಕರಾಗ್ರಮಂ ನಗಪಿ ಸಂಭ್ರಮದಿಂ ಪರಿವೊರ್ಮೆ ‡ ಶ್ವಾಸಿಂ ।
ಧೂರ್ವಿಗೆ ಬರ್ಕೆ ತುಮ್ಮಿತು ಸೋಂಕಿನೊಳೊಯ್ಯನೆ ಸೋಂಕಿ ನಿಲ್ವಮು
ದ್ದೊರ್ಮೆಯುಪೊಪ್ಪು ತೋಱಿ ¶ ಕಲಭವ್ರಜಮಿರ್ದುದದೊಂದು ತಾಣದೊಳ್ ॥ ೧೧

ವ॥ ಮತ್ತಮೊಂದವಿರಳಮಾದ ಸರಳವನದೊಳ್,

ಉಗುವೆಂಟುಂ ಮದವತ್ತಿ ಕಟ್ಟಿ ವಿಸರಚ್ಚೀತ್ಕಾರ ಭೀರುಸ್ವರಂ
ಮಿಗೆ ಬಾಯುಂ § ಬಿಡೆ ಕಯ್ಯನಿಟ್ಟಿ ಸುಗಿವನ್ನಂಗಜೀಸುತ್ತಮಿರ್ದುವು ।
ತ್ತುಗಳೆತ್ತಂ ಬಿದುವಿಂ ಸ್ವರಾಬ್ರಸಬಿಂದುಶ್ರೇಣಿವೊಲ್ ಸೂಸೆ ದಂ
ತಿಗಳಂ ಸೀಳ್ದು ಸಿಱುಂಬುಳಾಡಿದುದದೊಂದುತ್ಕಂಠಕಂಠೀರವಂ ॥ ೧೨

ವ॥ ಮತ್ತಮೊಂದು ಗಿರಿದರೀದೇಶದೊಳ್,

---

* ಕ. ಗ.— ಸ್ಥಳಕ್ಕಯ್ದುಡಿದುತ್ಫಲೌಘಮಂ.

† ಮ. ಅ — ಮುಯ್ಯೊಳೊಟ್ಟಿಕೊಂಡೊರ್ಮೆ.

‡ ಕ. ಖ. ಗ —ಪಂದೊರ್ಮೆ. ¶ ಕ ಗ.— ನಿಲ್ವವೊರ್ಮೆಯುವೊಪ್ಪಿತೋಱಿ. ಮ. ಅ.— ನಿಂದುವೊರ್ಮೆಯುವೊಪ್ಪಿತೋಱಿ.

§ ಕ. ಗ.— ವಿಸರಂಚೀತ್ಕಾರಭಿನ್ನಸ್ವರಂಮಿಗೆಬಾಯೊಳ್.

ಗಱಿವೊಯ್ದ್ಯದ ಕಣ್ದೆಱೆಯದೆ
ತಿಱುಳಿಂ ತನ್ನೊಡೆದ * ತತ್ತಿಯೊಳ್ ಭೇರುಂಡಂ ।
ಪೊಱಮಡಲದೊಂದು ಶರಭಂ
ಬಿಱಿತೋಡಿತು ಸತ್ವನಿಧಿಯ ಶೈಶವಮಿಳಿದೇ ॥ ೧೩

ವ॥ ಆಮಹಾಗಹನಮಧ್ಯದೊಳ್,

ಮರೆದಿಂದಾಸರ್ಪನಂ † ಹಸ್ತಿಯೆ ಪಿಡಿದುದುವಾಸರ್ಪನಂ ಹಸ್ತಿಯುಂ ಕೇ
ಸರಿ ಕೋಪಾಟೋಪದಿಂ ಪೊಯ್ದುಗಿಬಗಿದುದುವಾಸರ್ಪನಂ ಹಸ್ತಿಯುಂ
ಕೇ।
ಸರಿಯುಂ ಸಿಂಹಾರಿಯೆಂಟುಂಪದದಿನಿಱಿದುದಾಸರ್ಪನಂ ಹಸ್ತಿಯುಂ ಕೇ
ಸರಿಯುಂ ಸಿಂಹಾರಿಯುಂ ತುಂಡದೊಳ ಪಿಡಿದುಪಾಱಿತ್ತು ಭೇರುಂಡನಾ
ಗಳ್ ॥ ೧೪

ಷರ ಬೆಂಬತ್ತಿಯುದ್ದ ನಾಯುಂ ಬಿಡು ನಡೆಯಿಸು ದೀಪಂಗಳಿಂ ಪಾಸಮುಂ ವಾ
ಗುರೆಯುಂ ಬೀಸಾಂಕೆಗೊಳ್ಳಾ ದಿರ್ಸು ಪೊಣರ್ದಿಱಿ ಕೊಲ್ಲೆಂಬ ಸ್ಮಾರಸ್ವ
ನಂ ಪೊ।
ಣ್ಮಿರೆ ವನ್ಯಪ್ರಾಣಿಗಳ್ಗಂತಕನ ಪಡೆಯ ದಾಳಿಟ್ಟವೊಲ್ ಬೇಡರಿರ್ದಂ
ಪರುಷಾಕಾರರ್ ‡ ವನಾಂತಸ್ಥಿಹಿರಮ ಶಬರವ್ರಾತಮಾಯ್ತೆಂಬುಗುರ್ವಿಂ॥

ಪಾಸದ ನೇಣ್ಗಳಿಂ ಪೊಸೆವ ಜಾಲಮನೊಪ್ಪಿರ ಮೊಪ್ಪ ಕಲ್ಲಿಯುಂ
ಕಾಸಿನ ಕಂಬಿಯುಂ ಸವೆವ ಮಾರ್ಗಣಮುಂ ಗಱಿಗಟ್ಟುತಿರ್ಪ ಬಿ।
ಲ್ಗೀಸುವ ಬಾಣಮುಂ ತಿರುಪಿ ತಿದ್ದುವ ಮಾರ್ತಿರುವಂ ತೂಪರ್ಕಿ ನೋ
ಟ್ಪ ಸಹಜಕ್ರಿಯಾವನವನೇಚರರಿಂ ಬಗೆಗೊಂಡುದಾವಸಂ ॥ ೧೬

ಕಮಲಜನಿಲ್ಲಿ ಬಯ್ತನೊಲವಿಂ ಕುಮುದೇಕ್ಷಣವಜ್ರದಂತವಿ
ದ್ರುಮರದನಚ್ಛದಂಗಳನಮರ್ಚಿದ ಜಂಗಮನೀಲಪುತ್ರಿಕಾ।

* ಖ.— ತಿರುಳಿಂದಾದೊಡೆದು. † ಕ. ಗ.— ಮರದಿಂದಾಸರ್ಪನಂ.
‡ ಖ.—ತರುಶಾಖಾಳೀ.

ಸಮಿತಿಯನೆಂಬಿನಂ ಮಿಸುಪ ಕಣ್ ಸುಲಿಪಲ್ಲರುಣಾಧರಂ ಸಕಾ
ಳಿಮೆ ತನುಲೇಖೆಯೊಪ್ಪಿರೆ ಪುಳಿಂದಿಯರಿರ್ದರದೊಂದು ತಾಣದೊಳ್॥ ೧೭

ತೋರಬಿದಿರ್ಮುತ್ತಿನ ನವ
ಹಾರದ ಕೆಂದಳಿರ್ಗಳುಡೆಯ ವನಚರಿಯೊರ್ವಳ್ ।
ತಾರಾವಳಿಯಿಂ ನವಸಂ
ಧ್ಯಾರಾಗದೊಳೆಸೆವ ನಿಶೆಯನನುಕರಿಸಿರ್ದಳ್ ॥ ೧೮

ಲಲಿತಲತಾಕಟುತರುವು
ಸ್ಮಿಲನಮಿದೆಂಬಂತೆ * ಶಬರದಂಪತಿಗಳ್ ಕೋ ।
ಮಲಿಮಕಠೋರಿಮರುರ್ವಿಗೆ
ನೆಲೆಯೆನಿಸಿದರಂಸದೃಶಕ್ರಿಯಾ † ಪಟುಗಾತ್ರರ್ ॥ ೧೯

ಉಗುವೊರ್ಗಯ್ಲೀತನ ಮಯ್ಯೊಳೀಪುಲಿಯ ಪೊಯ್ಲಿಂದಾದುದೆಂದೋಪ
ವಳ್
ಬಗೆವಂತನ್ನವಧೂರತೋತ್ಸವನಖಾಂಕಾಸೀಕಮಂ ಪಂಚಿಪ್ರ ।
ಜ್ಞಗದಿಂದಂ ಪಿಡಿವೊಂದು ಪೆರ್ಬುಲಿಯನೊರ್ವಂ ಕಕ್ಷದಿಂದೊತ್ತಿ ತ
ನ್ನ ಗೃಹಕ್ಕೆಯ್ತರುತಿರ್ದನೊಂದೆಡೆಯೊಳುದ್ಯದ್ಧೀವರಂ ಧೀವರಂ ॥ ೨೦

ಕರಿಪ್ರೋಣದೆಕ್ಕಲಂ ಮೆಳೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೋಣಿವಿ
ಟ್ಟಿದ್ದರದ ಪಿಸುಟ್ಟಿ ಪದೊರ್ಡೆಯ ‡ ನುಗ್ಗಿದ ದಂಡೆಯ ಭಂಗಿ ರೌದ್ರಮಾ ।
ಗಿರೆ ನಡೆ ಮೂಱು ಬೇಂಟೆಯುಮನಾಡಿ ತದಾಮಿಷಭಾರದಿಂದೆ ಜೋ
ಗರೆಯುತೆ ಮಾಂಸಮಾಂತೊಲವಿನಿಂ ¶ ಬರುತಿರ್ದನದೊರ್ವ ಲುಬ್ಧ
ಕಂ ॥ ೨೧

* ಕ. ಗ. — ಲತಾಕಂಟಕತರುಮಿಲನಮಿದೆಂಬಂತೆ.
† ಕ. ಗ — ನೆಲೆಯನಿಸಿದಸ್ಮರತವಿಕ್ರಿಯಾ.
‡ ಖ. — ದೋಱುವಿದುರ್ಗರವಪಿಸುಬಿದ್ದಪದೊರ್ಡೆಯ.
¶ ಖ. — ಮತ್ತಕಾಸಿಯೊಲವಿಂ.

ವ॥ ಮತ್ತೊಂದೆಡೆಯೊಳ್,

ತೊರೆದ ಕುಚಂಗಳಿಂದೆ ಕೊಣಸಂ ನಸೆಯಿಂ ಮೃಗಮಂ ಕುರಂಗಿ ಪಾ
ರ್ದಿರಲೆಡೆಗೊಂಡು ಭಲ್ಲದಿನೆರಟ್ಕಿಡಿಯಾಗೆ ಕಿರಾತನೆಚ್ಚೊಡಂ ।
ತರಿಸದೆ ಪುಲ್ಲೆ ಸಾರ್ಚಿ ಮಱಿಯಂ * ಮೊಲೆಯುಂ ನೆರೆದೀಣನಂ ಬೞಿ
ಕ್ಕೆರಡುಡಿಯಾಯ್ತು ಕೇವಲಮೆ ದೇಹಿಗೆ ಸಂಸೃತಿಮೋಹಬಂಧನಂ॥ ೨೨

ಹರಿಣನನಾರ್ದಿಸಲ್ಕೆ ಶಬರಂ ಶಬರಪ್ರಿಯಕಾಂತೆ ಬಂದು † ಬಿ
ಚ್ಚಿರಳೆಯನೀಕ್ಷಿಸುತ್ತುಮಿರಲಾಕೆಯ ಕೇಕರಕಾಂತಿಜಾಲದಿಂ ।
ಪರಿವೃತಮಾಗಿ ತನ್ಮೃಗಮದೇಂ ಪಡೆದತ್ತೊ ಮೃಗಾಂಕಮಂಡಲಂ
ಧರೆಗವತೀರ್ಣಮಾದುದೆನಿಪ್ಪೊಂದಭಿಶಂಕೆಯನೊಂದು ತಾಣದೊಳ್ ॥ ೨೩

ತರುಣತಮಾಲಲತೌಘದ
ಪೊರೆಯೊಳ್ ಗೇಯಸ್ವನಾನುಮಿತತನುಲತೆಗಳ್ ।
ಕರಮೆಸೆಯೆ ಗೇಯಗೋಷ್ಠಿಗೆ
ನೆರೆದಿರ್ದ ಪುಳಿಂದಕಾಂತೆಯರ್ಕಳ್ಗಳೊರ್ವರ್ಕಳ್ ॥ ೨೪

ತುಱುಗೆವೆಗಣ್ಣ ಕಾಂತಿ ಮರಗಟ್ತಿಲೆಯುಂ ಬೆದರಟ್ಟೆ ತೊಂಡೆವಾ
ಯ್ದೆಱೆ ಕಿಸುಸಂಜೆವೀಱೆ ದಶನಾಂಶು ನವಾಮೃತಪೂರಮೆಂಬಿನಂ ।
ಪೊಱಮಡೆ ಸಿಂಗಮಾನೆ ಪುಲಿ ಪುಲ್ಲೆ ನವಿಲ್ ಫಣಿ ತಮ್ಮ ವೈರಮಂ
ಮಱೆದೊಡನಾಲಿಸಲ್ ಶಬರಿ ಪಾಡಿದಳಚ್ಯುತಸಂಕಮಾಲೆಯುಂ ॥ ೨೫

ವ॥ ಅಂತು ಮನೋಹರಮಾದ ಗಹನಮಂ ದಾಂಟೆ ಧರಣೀಧರ ಕಟಕಂ ರೈವತಧರಣೀಧರಕಟಕಮಂ ಮುಟ್ಟೆವರೆ,

ಹರಿಗೋಲಾಂಗೂಲಡೋಲಾಯಿತತರುವಿಟಪಂ ನಿರ್ಘೃಣವ್ಯಾಘ್ರಭೀತಿ
ಸ್ಫುರಿತತ್ವಂಗನ್ಮೃಗೌಘಂ ‡ ಜರದಜಗರಫೂತ್ಕಾರವಾತ ಸ್ಫುಟದ್ಗ ।

---

* ಕ. ಗ.—ಮಗನಂ. † ಕ. ಗ.—ಶಬರಂಬರಲಾಪ್ರಿಯಕಾಂತೆಕಂಡು.
‡ ಕ. ಗ.— ಭೀತಿತ್ವರಿತಂಧಾವನ್ಮೃಗೌಘಂ.

ಹ್ವರಗರ್ಜತ್ಸಿಂಹನಿರ್ದಾರಿತಮದಗಜಕುಂಭಸ್ಥಳೋನ್ಮುಕ್ತಮುಕ್ತೋ
ತ್ಕರಗುಂಜಾಪುಂಜಕಿರ್ಮ್ಮೀರಿತಕಟಕಮೆಗುರ್ವಾದುದುರ್ವೀಧರೇಂದ್ರಂ ॥

ತ್ರಿದಶನಗೇಂದ್ರಂ ಧನುಮಾ
ದುದು ಪಶುಪತಿಗಲ್ಪಮುನಿಗೆ ಸೆಡೆದುದು ವಿಂಧ್ಯಂ ।
ಸದೃಶಮು ಬಿಣ್ಪಿಂ ಪೆಂಪಿಂ
ಗಿದಱೊಳೆನಲ್ ತಳೆದುದಚಲಮತ್ಯುನ್ನತಿಯುಂ ॥ ೧೭

ಬಳೆದ * ಶಿಖಂಡವಳ್ಳಿಱಿಯೆ ಕೇಸರಿ ಸೀಳ್ ಸಮೀರಪಾತವ
ಗ್ಗಳಿಸೆ ಪುಳಿಂದರಾರ್ದಿಸೆ ಸಿಡಿಲುದ್ಗುತಂದುವು ಪುಷ್ಪಸಾಯಕಂ ।
ಗಳ ಪೊಗರ್ವೆಟ್ಟು ಚಂದ್ರಿಕೆಯ ಬಿತ್ತೆಳಮಿಂಚಿನ ತತ್ತಿ ತಾರಕಂ
ಗಳ ಮಱಿಯೆಂಬ ವಾರಿಧರವಾರಣವೇಣುವರಾಹಮೌಕ್ತಿಕಂ ॥ ೧೮

ಮದಗಜಗಂಧದುದ್ದಸಕೆ ಘೂಂಕಿಸಿ ಲಂಘಿಸಿ ಚಂದ್ರಕಾಂತಕೂ
ಟದ ಕೆಲದಲ್ಲಿ ನಿಂದಿಭದುದಗ್ರತನುಪ್ರತಿಬಿಂಬಮಂ ಮದೇ ।
ಭದ ತನುಗೆತ್ತು ಪಾಯ್ದು ಶಿಲೆಯುಂ ಮೃತಮಾದುದಿಭದ್ವಿಷಂ ಬವರ್ಗಂ
ಕಿದುದಿಭಮಂತೆ ನಿರ್ಮಲರ ಸನ್ನಿಧಿ † ಮೊಱ್ಕುಮಪಾಯನಾಶಮಂ ॥ ೧೯

ಬೆಳಗಂ ಪಸರಿಸುವರುಣೋ
ಪಳದೊಳ್ ಮೃಗಿ ನಿಲೆ ದವಾಗ್ನಿ ಮುಸುಕಿದುವದನಂ ।
ದೊಳಱಿ ಮೃಗಮಿತ್ತಲಸುವಂ
ಕಳೆದತ್ತು ವಿವೇಕಮುಂಟೆ ಮೋಹಾಕುಲರೊಳ್ ॥ ೨೦

ಮರೆಯನೆರೆಗೊಂಡು ಮಱೆವ
ಟ್ಟಿರೆಯಿರೆ ಕಾಯ್ದುರಿವ ಸೂರ್ಯಕಾಂತದಿನಟ್ಟಿ ।
ತ್ತಿರದೋಡಿದುದಜಗರವ
ಸ್ಥಿರಗುಣನಾಶ್ರಯದೊಳಾರುಮಿರಲಱಿದಪರೇ ॥ ೨೧

* ಕ.— ಬಳೆಸಿ. † ಕ. ಗ.—ಸಂಗತಿ.

ಪ್ರತಿಬಿಂಬವನಾಳಿಗೆ ಮರ
ಕತಾಶ್ಮದೊಳ್ ಪಾಯ್ದು ಕಪಿ ಪತಾಕಂ ಸನಸಂ ।
ಪತಿಗ * ಮದಂಜೆದುದಾಶಾ
ಪತಿ ಮೊಡದೆ ತಥ್ಯದಲ್ಲಿ ಮಿಥ್ಯಾಭಯಮಂ ॥ ೩೨

ಮೇದುರನೀಲಾಶ್ಮಮನಂ
ಭೇದಭ್ರಾಂತಿಯೊಳ್ ನೋಡಿ ಕುಣಿದುವು † ಶಿಖಿಗಳ್ ।
ಆದರದಿಂದಂ ಹರ್ಷವಿ
ಷಾದಗುಣಂ ಭ್ರಾಂತಿಸಂಭವಂ ದೇಹಿಗಳೊಳ್ ॥ ೩೩

ಕೊಳನಂ ಬಳಸಿದ ವಜ್ರೋ
ಪಳದೊಳ್ ಮಾರ್ಪೊಳೆದು ಮಱಿಗಳಿಮ್ಮಡಿಯಾದಂ ।
ತೆಳಸಿ ಬರೆ ಹಂಸಿ ಹರ್ಷಮ
ನೊಳಕೊಳ್ವುದಸತ್ಯರಲ್ಲಿ ‡ ತಣಿವಿಲ್ಲಾರ್ಗಂ ॥ ೩೪

ವ॥ ಮತ್ತೊಂದೆಡೆಯೊಳ್ ಮಾಣಿಕ್ಯಶಿಖರದ ಶೋಣಘೃಣಿಯೆ ¶ ಘನೀಭೂತಮಾದಂತೆ ಕೆಂಕಮಾದ ಕಂಕೆಲ್ಲಿವಲ್ಲೀಭವನದೊಳ್ ಕಾಮಕಲಹದಿಂ ಕೆದಱಿದ ಕಿನ್ನರಕನ್ಯೆಯರ ಮುಡಿಯ ಕೇದಗೆಯ ಕುತ್ತುಂಗಱಿಗಳಾಕೆಯರ ಕೇಕರಚ್ಛಟೆಗಳ್ ಕೆದಱಿ ನಿಂದಂತಿರಂದಂಬಡೆಯೆಯುಂ, ಒಂದೆಡೆಯೊಳಿಂದ್ರನೀಲಮಣಿಚಷಕೆಯ ಮೇಚಕಮರೀಚಿಯೆ ಗಟ್ಟಿಗೊಂಡಂತೆ ಕರ್ಪುವೀಱುವ ಬಾಳತಮಾಳಗಳೊಳವರಿಗಳೊಳತನುಲೀಲೆಯಿಂ ಸೂಸಿರ್ದ ಸಿದ್ಧನಾರಿಯರ ಕರ್ಣಪೂರಕುಮುದಂಗಳಾಕೆಯರ ದರಹಾಸದ್ಯುತಿಯೆ ಸೂಸಿದಂತೆಸೆಯುತ್ತಿರೆಯುಂ, ಮುಂತೊಂದೆಡೆಯೊಳ್ ಚಂದ್ರಕಾಂತದೊಡ್ಡುಂಗಲ್ಗಳ ಕಾಂತಿಯೆ ಕುಪ್ಪಳಿಸಿದಂತವಿರಳಮಾಗಿ ಪೂತಚೂತಲತೆಯಬಾಳ್ಗೊಂಪದೊಳಲಂಪುವೆತ್ತ ಬೇಟದ ತೋಟಿಯಿಂ

---

* ಕ. ಗ.— ವನಸಂಗತಿಗ. † ಕ. ಗ.— ಕುಣಿವುವು.
‡ ಖ.— ಕೊಂಡುದಪತ್ಯರಲ್ಲಿ. ¶ ಕ. ಗ.— ಘೃಣಿಯಿಂ.

ದುದಿರ್ದು ಪರಿ * ಕಲಿಸಿದ ವಿದ್ಯಾಧರಪುರಂಧ್ರಿಯರ ಸಿರಿಖಂಡಪತ್ರಭಂಗಂಗಳಾಕೆಯರ ಶೃಂಗಾರರಸದ ಬೆಳೆಯತೀಳಸೂರೆಯೆ ಪರಿಕಲಿಸಿ ಮಸುಳ್ದಿರ್ದ ಪರಿಯುನನುಕರಿಸೆಯುಂ, ಮುಂದೊಂದೆಡೆಯೊಳ್ † ಗರುಡೋದ್ಗಾರದ ಪಚ್ಚೆಯ ಗಂಡಶೈಲದ ಪಸುರ್ವೆಳಗೆ ಮುಂದ್ಯೆಸಿದಂತೆ ಪಸುತ್ತಿರ್ದ ಸೆವಕದಳೀಕದಂಬದಿಱುಂಬಿನೊಳ್ ಸಪ್ರಣಯಪ್ರಕೋಪದಿಂ ಜರಿದು ಸಡಿಲ್ದ ಗಂಧರ್ವಗಣಿಕೆಯರ ಹಾರಮಂಜೀರಮಣಿಗಳಾಕೆಯರ ಲಾವಣ್ಯತೇಜದುರುಳಿಗಳ್ ಸಿಡಿಲ್ದಿರ್ದ ಭಂಗಿಯುನನುಕರಿಸೆಯುಂ, ಒಂದೆಡೆಯೊಳ್ ವಜ್ರವೈಡೂರ್ಯ ಶಿಲಾಪಟ್ಟಕಂಗಳವಿರಳದೀಧಿತಿಯೆ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ ಜಲಕ್ರೀಡೆಯಿಂಚೆಲ್ಲಿರ್ದಯಕ್ಷಯುವತಿಯರ ಕರಕಲಿತಕುಂಕುಮಂಗಳಾಕೆಯರ ಮನದನುರಾಗಮೆ ಚೆಲ್ಲಿರ್ದುದೆಂಬ ಚೆಲ್ವನವಪ್ಪೈಸೆಯುಮತಿರಮಣೀಯಮಾಗಿ,

ತರುಕಾಂಡಂ ದೆಸೆಯಾನೆಗಳ್ಗೆ ಕಟಕಂಡೂವ್ಯಾಪ್ತಿಯಂ ಪಿಂಗಿಸು<br>
ತ್ತಿರೆ ಕೂಟಂ ಸ್ಖಳಯಾನಮಂ ರವಿಹಯಂಗಳ್ಗೀಯೆ ರತ್ನಾಂಶು ಚಿ ।<br>
ತ್ರರುಚಿಕ್ಷೌಮವಿತಾನಮಂ ಕುಡೆ ನಭೋಗೇಹಕ್ಕೆ ತಾಳ್ದುತ್ತು ಮೈ<br>
ಹಿರಮಂ ಕೇಳಿರಸಾರ್ಥವಿಶ್ರಮಿತನಾನಾದ್ಯುವತಂ ರೈವತಂ ॥ ೩೭

ವ॥ ಅಂತು ಮಹಿಮೋರ್ಜಿತಮಾದೂರ್ಜಯಂತಗಿರಿ ಸಾನುಸಾನಿನಿಸಾನುಮಿಱುವಲ್ಲಿ, ‡

ಗಂಧವಹಂ ಹೋಮಹವಿ<br>
ರ್ಗಂಧಪರಂಪರೆಯನೆಸಗಲಸುರಾರಿ ಹವಿ ।<br>
ರ್ಗಂಧಮಿದೇನೆನೆ ತತ್ಸಂ<br>
ಬಂಧವಿದಂ ನಯವಿಶುದ್ಧನುದ್ಧವನೆಂದಂ ॥ ೩೮

ಮುನಿಹೋಮಗಂಧಮಿದು ಪೇ<br>
ಳ್ವೆನದಂ ಸ್ವರ್ಗಾಪವರ್ಗಫಲದಾಯಿ ತಪೋ ।

---

* ಕ ಗ.— ಪರ † ಕ. ಗ.— ಒಂದೊಂದೆಡೆಯೊಳ್.

‡ ಖ.— ಇಱಿದಲ್ಲಿ.

ವೆಸವಿರ್ಪುದು ಪಾವನಮೀ
ಸನಾತನಾಚಲದಗಮ್ಯರಮ್ಯಸ್ಥಳದೊಳ್ ॥ ೩೭

ನುಡಿವ ನಡೆಪಿಷ್ಟ್ಯುಪಲಮುಂ
ಕುಡುವ ಮಹಾಜ್ಯೋತಿಯಾಗಿ ತೋಱುವ ರವಿಯಿ |
ದೆರ್ಡೆಗೆ ನೆೞಲ್ವೀಱುವ ಬಾಂ
ಗಪರ್ದೇಱುವ ತರುಗಳಾತಪೋವನತರುಗಳ್ ॥ ೩೮

ಇರದಘಮರ್ಷಿಸಲ್ ಬಗದಸಿದ್ಧಿಯನೀವಱಿಪಂತೆ ನಿರ್ಜರಾ
ಮರತೆಯನುಂಟುಮಾಡುವೊಳಪೊಕ್ಕ ಪದಾರ್ಥಮನೆಯ್ದೆ ಕಲ್ಗಳಾ |
ಗಿರಿಸುವ ಸೋಂಕೆ ಕತ್ತರಿಸಿ ಖಂಡಿಪ ಸಿದ್ಧರಸಹ್ರದಂ ಸುಧಾ
ಸರಸಿ ಶಿಲೋದಕೋಗ್ರನದಿ * ಕತ್ತರಿವಾಣಿಯ ವಾಪಿ ವಿಸ್ಮಯಂ † ॥ ೩೯

ಮನುಜಪದಱೊಂದ ಕುವಲಯ
ಮನೊಂದ ಪದ್ಮಮನುಮಾಧಿಪಂಗೇಱಿಸೆ ತೂ |
ಟ್ಟನ ಕುವಲಯಪತಿಪದ್ಮೇ
ಶನಪ್ಪ ಪೂಗೊಳನೆ ಬನದ ಪೂಗೊಳನೆಲ್ಲಂ ॥ ೪೦

ಈತಾಪಸರಿರ್ದೆಡೆಗೆ ರ
ಸಾತಳ ಪುರುಷಪ್ರಯಾಣಕೇಳೀಯಾತಾ |
ಯಾತಾಧ್ವಮನಿಸುತಿರ್ಪುವು
ಪಾತಾಳಸ್ಪರ್ಶಿಗಳ್ ಬಿಲದ್ವಾರಂಗಳ್ ॥ ೪೧

ಪದಸಸ್ಮೃತಿಗಳ್ ಪಿಡಿಪಂ
ಪದಿನೇಕಾನೇಕಪದಮುಮಂಸಿರಿಮ್ಯಸೋಂ |

---

* ಕ, ಗ, — ಶಿಲೋದಕಾಗ್ರನದಿ.   † ಖ. — ನಿಷ್ಟಯಂ.

ಯತಿವರರ ಹೋಮಚರುಸಂ
ತತಿಗಳ ಮೇಲೆಱಗದಂತು ಮಕ್ಷಿಕಮಶಕ ।
ಪ್ರತತಿಯನಾತ್ಮಚಲತ್ಕ
ರ್ಣತಾಳವೃಂತದೊಳ ಸೋವುವಿಭಕಲಭಂಗಳ್ ॥ ೪೮

ಎಳವಿಸಿಲೊಳ್ ಮುನಿಬಾಲರ್
ಜಲಧೌತಂಮಾಡಿ ಕಟ್ಟೆಸಾರಂಗಂ ನಿ ।
ಶ್ಚಲತೆಯಿನಾಱಿಸುವುದು ವ
ಲ್ಕಲಕೌಪೀನಂಗಳಂ ಕವಲ್ಗೊಂಬುಗಳೊಳ್ ॥ ೪೯

ತನುಕಂಡೂತಿ ತಪೋಧನ
ತನುಕಷಣದೆ ಪಸಿವು ಹೋಮದೂರ್ವೆಯೆ ತೃಷೆ ಪಾ ।
ವನಪಾತ್ರಜಲದೆ ಕಿಡೆ ಮು
ಚ್ಚಿನಿಂದೆ ಮೃಗಶಿಶುಗಳಿಸೆವುವಾವನಗೃಹದೊಳ್ ॥ ೫೦

ಒಡಗೂಡಿ ವೇದವೋದುವು
ವೊಡನೋದುವ ವಟುಗಳೋದನಾಲಿಸಿ ತಪ್ಪಂ ।
ಪಿಡಿವುವುಪನ್ಯಾಸದೆ ಬ
ಕ್ಕುಡಿಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್ ॥ ೫೧

ಮುನಿಬಾಲಕಿಯರ್ ಮಧ್ಯಂ
ದಿನದೊಳ್ ಬಂದರ್ಘ್ಯ * ಜಲಮನುಯ್ವೆಡೆಯೊಳ್ ಮೇ ।
ಲ ನೆೞಲ್ ಪುದಿದೊದವಿರೆ ಸೋ
ಗೆನವಿಲ್ಗಳ್ ಸೋಗೆವಿರ್ಚಿ ಬರ್ಪುವು ನಭದೊಳ್ ॥ ೫೨

ಯತಿವನಿತಾವಿಲಾಸಗತಿಯಿಂ ಗತಿಗೆಟ್ಟುವಿವೆಂದು ನಿಂದಿಸಲ್
ಗತಿಗಿಡಿಪಾಜ್ಞೆಯುಳ್ಳವರೆ ಸದ್ಗತಿಯಂ ಕುಡಲಾರ್ಪರೆಂದು ಸಂ ।

---

* ಖ.— ಬಂದಗ್ರ.

ತತ್ತಮುಪಧಾವಿಪಂತೆ ಯತಿಕಾಮಿನಿಯರ್ ಮೊಗೆದುಯ್ದು ನೀರ್ಗಳಿಂ
ಲತೆಗೆಱೆವಲ್ಲಿ ಕೂಡಿ † ಬೞ್ಳಿಯೊಳ್ ಸುೞಿದಾಡುವುವಂಚವಿಂಡುಗಳ್ ॥೫೩

ಭಂಗಮನಾಳ್ದವೀಕೆಯರ ಕುಂತಳವೆಂಬುವದಿರ್ಕೆ ತುಂಬಿಗಳ್
ಭಂಗಮನಾಳ್ದವೀಮುನಿವಧೂಟಿ ಕುರುಳ್ಗಳಿನೆಂದು ಭಂಗಿಸಲ್ ।
ಭಂಗಚಿಕಿತ್ಸೆಗೆಯ್ದಪುವೆನಲ್ ದುರಿತಾಪಹಮಪ್ಪ ಹೋಮಧೂ
ಮಂಗಳ ಕಂಪನುಣ್ಬುವೞಿರಾಜಿಗಳಾಮುನಿಗೇಹರಾಜಿಯೊಳ್ ॥ ೫೪

ವ॥ ಆಗಳ್,

ಬಡವರ್ಪಂಬಸಸೆಂಬ ‡ ಕೈಗುಡುವ ತೀರ್ಥಕ್ಕುಯ್ವ ದೇವಾರ್ಚನ
ಕ್ಕೆಡೆಯಂ ಮಾಡುವ ಹೋಮಸಾಧನಸಮಿದ್ದರ್ಭಾರ್ಘ್ಯ ¶ ತೋಯಂ
ಗಳಂ ।
ಕುಡುವಿರ್ಪಲ್ಲಿಗೆ ಕಂದಮೂಲಫಲಮಂ ತಂದೀವ ಪರ್ಯಾಪ್ತಿಯಿಂ
ಪಡೆಗುಂ ತುಷ್ಟಿಯನಿಂತು ವೃದ್ಧಯತಿಗಳ್ಗಾಸ್ಥಾನದೊಳ್ ವಾನರಂ॥೫೫

ಎಡ್ಡವನಲಿಂಡೆಗಟ್ಟುಪ
ಗಡ್ಡಿಗೆಗುಡುವೆಡೆಗೆ ನೀರನಡಕುವ ಫಲಮಂ ।
ಬಡ್ಡಿಸಿ ನಿವೇದ್ಯಮೀವೀ §
ಗೊಡ್ಡಾಟದ ಮುಸುಗಳಸೆವುವಾಮುನಿವನದೊಳ್ ॥ ೫೬

ಮುನಿಧೇನುಗಳಂ ಕಾವುವು
ಮುನಿವನಿತೆಯರ್ಗಜ್ಜಗಾಪೆನಿಪ್ಪುವು ಮುನಿಗೇ ।
ಹನಿಕಾಯದ ಬಾಗಿಲ್ಗಾ
ದು ನಿಲ್ವುವಂತಲ್ಲಿ ಜಂಬುಕಂಗಳ್ ಸತತಂ ॥ ೫೭

ಮೂ.—ಅ — ಸೇವಿಪಂತೆ. † ಖ.— ಕೂಡೆ.
‡ ಕ. ಗ — ಬೆಸನೆಂಬ. ¶ ಖ.— ಸಮಿದ್ದರ್ಭಾರ್ಘ್ಯ.
§ ಖ.— ನೀಡುವವೇಥಯ.

ಈಯೆ ಮನಕ್ಕನುಕ್ರಮತಪಂಪರಿಣಾಮಮನಂತೆ ಕೃಚ್ಛ್ರಚಾಂ
ದ್ರಾಯಣಪರ್ಣಭಕ್ಷಜಲಭಕ್ಷಸಮೀರಣಭಕ್ಷವೃತ್ತಿಯೊಳ್ † ।
ಕಾಯಮನೆಯ್ದೆ ಸಾರ್ಚಿ ಬಳಿಕಂ ಮುನಿಗಳ್ ನಿಜಜೀವನಕ್ಕೆ ಯೋ
ಗಾಯತಸೌಖ್ಯಮೆಂಬಮೃತಸೇವೆಯೆ ಕಾರಣಮಾಗೆ ‡ವರ್ತಿಪರ್ ॥ ೫೮

ಸ್ವರ್ಗಫಲಮಂ ಸ್ವಕೀಯಭು
ಜಾರ್ಗಳದಿಂ ಸಿಕ್ಕೆ ಕಳೆದುಕೊಂಡಪನೀತಂ ।
ನಿರ್ಗಹನದಿನೆಸೆ ಗಹನಾಂ
ತರ್ಗತನೆಸೆದಿರ್ದನೂರ್ಧ್ವಬಾಹುಪದೊರ್ವಂ ॥ ೫೯

ತ್ರಿದಶಪದಸುಖಮನೆಯ್ದಲ್
ತುದಿಗಾಲೊಳ್ ನಿಂದನೀತನಂಬಿನಮೊಂಗು ।
ಷ್ಠದ ಕೊನೆಯನೂಱಿ ನೆಱೆದೊಳ್
ಪದುಳಂ ನಿಂದಿರ್ದ ಮಾಱ್ಪನೊರ್ವಂ ತಪಮಂ ॥ ೬೦

ಕವಿಯಂತಷ್ಟಾಪದದಂ
ತೆ ಪನಸ್ಪತಿಯಂತೆ ತನ್ನೊಳುತ್ಪಾದಕ ¶ವೃ ।
ತ್ತಿ ವಿದಿತಮಾಗಿರೆ ಯೋಗಿ
ಪ್ರವರಂ ತಲೆಯೂಱಿ ತಪಮನೊರ್ವಂ ಮಾಱ್ಪಂ ॥ ೬೧

ವ॥ ಅಂತುಮಲ್ಲದೆಯುಂ,

ಬಡಲಡಗುವೇಳ್ದು ತಪುತಂ
ದೊಡೆ ಪಾಱ್ಮನೆಪುಲ್ಲನುರ್ಚುವೆಂದಪನೆಲ್ಲಂ ।
ಪಿಡಿದುರ್ಚಿ ಬೇಳ್ವರರೆಬರ್
ಸುಡಲಟ್ಟಿಕಸಲಾರದಗ್ನಿ ಕಂಟಳಿಸುವಿನಂ ॥ ೬೨

---

* ಕ. ಗ.— ನಕ್ಕೆ.

† ಕ.— ಪರ್ಣಭಕ್ಷಣಸಮೀರಣಭಕ್ಷಣವೃತ್ತಿಯಿಂದಮೇಂ.

‡ ಕ. ಗ.— ಜೀವನಮಾಗಿವರ್ತಿಪರ್.

¶ ಖ.— ತನ್ನೊಳುತ್ಪಾದಿತವೃತ್ತಿ.

ಜಲವೃಷ್ಟಿವರೊಣ್ದು ಧೈರ್ಯದ
ಸ್ಥಲನಾರ್ಥಂ ಜಟಿಲ್ಗಳ್ ಸಿಡಿಲ್ದೊಡೆವ ಸಿಡಿ ।
ಲ್ಗಳ * ಪೆಂಪೆಗಳಱಿಗೆ ಯೋಗಾ
ಸ್ಖಲಿತವೆನರ್ ಬಯಲೊಳಿರ್ಪರಭ್ರಾಗಮದೊಳ್ ॥ ೬೩

ಪುಳಕಂ ಪೊಣ್ಮಿದೊಡೈಕಿಲ
ಪುಳಕೋದ್ಗಮವೊಂದು ಯೋಗಯೋಗ್ಯಸುಖೋದ್ಯ ।
ತ್ಪುಳಕಂದೋಱದ ಹಿಮಪ
ಜ್ಜಳಂಗಳಂಪೊಕ್ಕು † ಮಾಗಿಯೊಳ್ ಕೆಲರಿರ್ಪರ್ ॥ ೬೪

ರವಿ ಸೆಡೆಗುವಗ್ನಿ ಕಂಪಿಸು
ಗುವಾತ್ಮತೇಜಕ್ಕೆ ‡ ತಮಗೆ ರವಿಯುಗ್ನಿಯು ತೇ ।
ಜವದಾವರಿದೆನಿಸಿ ಮುನಿ
ಪ್ರವರರ್ ಪಂಚಾಗ್ನಿಸಾಧಕರ್ ¶ ಬೇಸಗೆಯೊಳ್ ॥ ೬೫

ಅನವಧಿಕಾಲಾಸನದಿಂ §
ತನುವಂ ಪುತ್ತಡರ್ದು ಮುಚ್ಚೆ ಯೋಗಾಮೃತಸೇ ।
ವನೆಯಿಂನನಶ್ವರಮಿರ್ಪರ್
ಮುನಿಗಳವಿದ್ಯಾತಿರೋಹಿತಬ್ರಹ್ಮದವೋಲ್ ॥ ೬೬

ವ॥ ಎಂದು ಪೇಳ್ವ ಪದ್ಮೋದರನಾದರಂಬೆರಸು ಕೇಳ್ದು ಪಶ್ಚಿಮ
ಕೃತೋರ್ಜಯಂತಭೂಧರೋಪತ್ಯಕನಾಗಿ ನಿತ್ಯಪ್ರಯಾಣಂನಡೆವಲ್ಲಿ,

---

*ಖ.— ಬಿಸಿಲ್ಗಳ್. †ಕ ಗ.— ಪುಳಕಂಪೊಣ್ಮಿದೊಡೆಕೆಲರ್ । ಪುಳಕೋದ್ಗಮವೆಂಬರೆಂದುಯೋಗಸುಖೋದ್ಯ ॥ ತ್ಪುಳಕವುಮಂ ತೋಱದೆ ಹಿಮ । ಪಳುವೆಜಳಂಬೊಕ್ಕು. ‡ ಖ.— ರವಿಯುಗ್ನಿ ಕಂಪಿಸುಗು ಮಾತವೆತೇಜಕ್ಕಂಜಿ. ¶ ಖ.— ಪಂಚಾಗ್ನಿಮಧ್ಯದೊಳ್.
§ ಖ.— ಕಾಲಾನಳನದೆ.

ದಿವಿಜಾನೋಕಹಕಾಮಧೇನುಗಳ ದಿವ್ಯಾವಾಸವಸ್ತ್ರಾನ್ನದಿ
ವ್ಯವಿಲೇಪಾದ್ಯಭಿವಾಂಛೆಯಂ ಶಿಬಿರದೊಳ್ ಬಂದಿತ್ತುವೆಂದಿಂದಿರಾ ।
ಧವನಾಜ್ಞಾಪಿಸೆ ಬೇಱಿವೇಱವರವರ್ಗಲ್ಲಲ್ಲಿಗೇಂ ಸೌಖ್ಯಗೌ
ರವಮಂ ಪೆತ್ತುದೊ ಜೈತ್ರಯಾತ್ರೆ ಕಟಕಕ್ಕಾದ್ವಾರಕಾವಾಸದಿಂ ॥ ೬೭

ಬಲಸಂಘಟ್ಟನದಿಂ ಮಹೀವನವಶೇಷಂ ಪೋಗೆ ಮತ್ತಂತೆ ಭೂ
ತಲದೊಳ್ * ಕೂಡೆ ವಿಚಿತ್ರಭೂರುಹವನಂ ತಳ್ತಂತೆ ನಾನಾಪ್ರಭೋ ।
ಜ್ಜ್ವಲವಾಸ್ತ್ರೀಯರ † ರಂಗಮಂಟಪಕುಟೀಗೂಢಾಲಯಶ್ರೇಣಿ ಕಂ
ಗೊಳಿಸಲ್ । ಬೀಡುವಿಡುತ್ತೆ ಸಿಚ್ಛವೆಯುಣಂಬಂದಂ ಮುರಧ್ವಂಸಕಂ ॥

ಕರಟಿವ್ಯೂಹಾಂತರೀಪಂ ತುರಗಬಲತರಂಗಂ ರಥಾನೀಕನಕ್ರಂ
ಶರಶಸ್ತ್ರೋದ್ದ್ಯೋತನೀರಂ ಸುಭಟಪಟಲವಾದಿತ್ರಕೋಲಾಹಲಾಭೀ।
ಳರವಂ ರಾಜನ್ಯಚೂಡಾಮಣಿಕಿರಣಗಣೌರ್ವಾಗ್ನಿ ಸೈನ್ಯಾರ್ಣವಂ ಸಾ
ಗರವಾತ್ಮಸ್ತ್ರೀಯೊಳೊಂದಿತ್ತೆನಿಸಿ ಯಮುನೆಯಂ ಮುಟ್ಟಿವಂದತ್ತ
ಗುರ್ವಿಂ ॥ ೬೯

ತೆರೆಯಿಂ ಸಿಡಿಲ್ದ ನೊರೆವಿಂ
ಡಿರೆ ಪುಷ್ಪಸ್ತಬಕಪಟಲಮೆನೆ ವನತಟದೊಳ್ ।
ಕರಮೆಸೆದುದು ಯಮುನಾನದಿ
ಕುರರೀಬಕಕೋಕಹಂಸಕೇಳೀಸುಭಗಂ ॥ ೭೦

ಕದಡಿ ಪದಾತಿಘಟ್ಟನದೆ ಕೋಟ್ಕೆಸರಾಗಿ ತುರಂಗಮಾಂಘ್ರಿಪಾ
ತದೆ ಪುಡಿವಿಟ್ಟು ಕೂಡೆ ರಥಘಾತದೆ ತೀವಿ ಬೞಿಕ್ಕೆ ದಂತಿದಾ ।
ನದೆ ಕರಿದಾದುದಿಂತು ಯಮುನಾನದಿ ಕೆಮ್ಮನೆ ದೇಸೆಗಾಯ್ತು ಕ
ಪಿರ್ದಱೊಳ್ನಲ್ಕೆ ದಾಂಟಿದುದು ಕೃಷ್ಣನ ಬೀಡು ಕಳಿಂದಕನ್ಯೆಯಂ ॥

ಮುರಮಥನಂ ಬಂದೊಸಗೆಗೆ
ಬರುತಿರೆ ಹರ್ಷಾಶ್ರು ಪೊಱಮಡುತ್ತಿರೆ ಪುಳಕಂ ।

---

* ಖ.— ಮತ್ತಂತ ತದ್ಬಲದೊಳ್, ಗ.— ಮತ್ತಂತೆಯಾತಲದೊಳ್.

† ಖ.—ಪ್ರಭೋಜ್ಜ್ವಲನಸ್ತ್ರೀಯುತ.   ‡ ಕ. ಗ.—ಶ್ರೇಣಿಸಲ್ಲಲಿತಂ.

ಪುರವಂ ಪೊಱಮಟ್ಟೊಸವರೆ
ಪರಿಗ್ರಹಂ ಧರ್ಮತನಯನೊಸೆದಿದಿರ್ವಂದಂ ॥ ೩೦

ಬರೆ ರಾಮರಂಗಜಭೀಮಪಾರ್ಥರೆರಡುಂ ಪಕ್ಕಂಗಳೊಳ್ ಬಂದರಾ
ಭರಣದ್ಯೋತಿ ಪಳಂಚೆ ಕೃಷ್ಣಯಮಜರ್ ಪ್ರತ್ಯಂತಭೂಭೃತ್ಪರಿ ।
ಸ್ಫುರಿತಂ ಜಂಗಮ * ನೀಲಶೈಲನಿಷಧಾದ್ರೀಂದ್ರದ್ವಯಂ ರತ್ನಕೂ
ಟರುಚಿವ್ಯಾವೃತಮೊಂದನೊಂದಿದಿರ್ಗೊಳಲ್ ಬಂದತ್ತು ಪೇೞೆಂಬಿನಂ ॥

ವ॥ ಅಂತು ಬಂದು ಸಾನಂದಸಂಭ್ರಮಪ್ರಣಯಪರಿರಂಭಣ ಪ್ರಣತಿಗಳಂ ಯಥಾಯೋಗ್ಯಮಾಗೆ ಮಾಡಿ ಕೂಡಿದುಭಯವ್ಯೂಹದುತ್ಸಾಹವಾರಾಶಿಯ ನಿರ್ಘೋಷಮಿದೆಂಬಂತೆ ಬಾಜಿಸುವ ಬದ್ದವಣದ ಘೋಷಮುಮಸದಳಮುಸೆಯುತ್ತಿರೆ, ಅನಂತರಂ,

ಭೀಮಂ ಕೊಡೆವಿಡಿಯೆ ಯಮರ್ †
ಚಾಮರಮಂ ಬೀಸೆ ನಯದೆ ಕೈಗುಡೆ ಪಾರ್ಥಂ ।
ಭೂಮೀಶನೆಸಗೆ ರಥಮಂ
ತಾಮರಸಾಕ್ಷಂ ವಿಲಾಸದಿಂ ನಡೆತಂದಂ ॥ ೩೪

ಉಪಮಾನಕ್ಕೆನ್ನೊಳೇಂ ಬಂದಪುವೆ ನೆಗೞ್ದನಾಗೇಂದ್ರಯಕ್ಷೇಂದ್ರಗೇ ವೇಂ
ದ್ರಪುರಂಗಳ್ ಭೋಗದಿಂ ಸಂಪದದಿನೆಸಕದಿಂದೆನ್ನ ಕಾಲ್ವಳ್ಳಿಗಂ ಬಂ ।
ದಪುವೇ ಪೇೞೆಂದು ಹರ್ಮ್ಯಂಗಳ ಸೊದೆವೆಳಗಿಂದಂ ನಗುತ್ತಿರ್ಪವೋಲ್ ರಂ
ಜಿಪುದಿಂದ್ರಪ್ರಸ್ಥಮಂತಾಪುರಮನೊಸಗೆಯಿಂ ಬಂದು ಪೊಕ್ಕಂ ಮುಕುಂದಂ ॥ ೩೫

* ಕ.— ಭೂಭೃತ್ಕರಿಜಂಗಮ. ಖ.— ಭೂಭೃತ್ಪರೀಕಲಿತರ್ಜಂಗಮ. ಗ.— ಭೂಭೃತ್ಕರಿಚಲಿತಂ. ಮೊ.—ಅ.—ಭೂಭೃತ್ಕರೀಂದ್ರರಟಜ್ಜಂಗಮ.
† ಕ.— ವಿಡಿದೆಮರ್ಳ. ಖ ಗ.— ವಿಡಿದೆಮಳರ್. ಮೊ.—ಅ.—ವಿಡಿಯೆ ಮಳ್ಗಳ್.

ಕವಿವ್ರಜ್ಯತ್ಪಟವಾಸದಿಂ ತಳಿವ ಕಾಶ್ಮೀರಾಂಬುವಿಂದೆತ್ತುವು
ತ್ಸವ * ಚೀನಧ್ವಜದಿಂ ಪೊದಟ್ದ ಪಟಹಪ್ರಧ್ವಾನದಿಂ ಮೊಸಿಸೀ ।
ನಿವಹಂ ಸೂಸುವ ಸೇಸೆಯಿಂ ಪೊಳೆವ ನಾನಾತೋರಣಾಸೀಕಪ
ಲ್ಲವದಿಂ ಪಲ್ಲವಿಸಿತ್ತು ಶೋಭೆ ನಗರಕ್ಕಂಭೋಜನಾಭಂ ಬರಲ್ ॥ ೭೬

ಪರಿಯೊಂದಾಕಾರದಂಗಚ್ಛವಿಯ ಶತಸಹಸ್ರಾಂಶದೊಂದಂಶಮುಂ ಪ್ರೋ
ತ್ತರತೀಶಂ ತಾನೆ ಚೆಲ್ವಂ † ಸೊಬಗನೆನಿಸಿ ಮಿಕ್ಕಂ ಗಡಂತಾದೊಡಿಂದ್ರಾ
ವರಜಂಗೆಂತಪ್ಪ ಚೆಲ್ವೆಂತುಟು ಸೊಬಗದನಿಂ ‡ ನೋಟ್ಪೆವೆಂದೀಕ್ಷಣಾತ್ಸು
ಕ್ಯರಸ ¶ ವ್ಯತ್ಯಸ್ತಶೃಂಗಾರದೆ ಪೊಳವಳೆಪೆಂಡಿರ್ ಕರಂ ಶೋಭೆವೆತ್ತರ್ ॥

ಅರಲಂಬಂ ದೃಗ್ವಿಡಂಬಂ ಕಱೆಯೆ ಕೆದರೆಮಿಂಚಂ ವಿಭೂಷಾಪ್ರಪಂಚಂ
ಕುರುಳೆತ್ತಂ ನರ್ತಿಸುತ್ತುಂ ಪೊಳೆಯೆ ಬಳಲೆ ಧಮ್ಮಿಲ್ಲಮುದ್ಗಂಧಿಪುಲ್ಲಂ ।
ದರಹಾಸಂ ಭ್ರೂವಿಳಾಸಂ ನೆಗಪೆ ನಡುಗೆ ಮಧ್ಯಂ ಸ್ತನಾಭೋಗಬಾಧ್ಯಂ
ಸ್ಫುರಿತಾಂಗಂ ಬೀಱೆವಾಂಗಂ ನರೆದುದುರುನಿತಂಬಂ ಪುರಸ್ತ್ರೀಕದಂ
ಬಂ ॥ ೭೮

ವ॥ ಅಂತುಮಲ್ಲದೆ,

ಇಳೆಯುಂ ಪಾದಾಬ್ಜರಾಗಂ ನಖರುಚಿ ಘುಸೃಣಾಂಭಶ್ಛಟಾಸಿಕ್ತಿಯಿಂ § ಪೂ
ವಳಿಯಿಂ ದಿಕ್ಚಕ್ರಮುಂ ಭ್ರೂಲತೆಪೊಳೆವಲರ್ಗಣ್ ಕರ್ಬುವಿಲ್ಲಿಂ ಸ್ಮರಾ
ಸ್ತ್ರಾ ।
ವಳಿಯಿಂ ರೋದೋಂತಮುಂ ಭೂಷಣಮಣಿಕಿರಣಂ ಮಂದಹಾಸಂತಟಿತ್ಸಂ
ಕುಳದಿಂ ಬೆಳ್ದಿಂಗಳಿಂ ಪೂರಿಸೆ ನೆರೆದುದಜಸ್ರಂ ಪುರಸ್ತ್ರೀಸಹಸ್ರಂ ॥

ಅಳಕಂ ಕಸ್ತೂರಿಯುಂ ಸಾಲಿಡೆ ನಸುನಗೆ ಬೆಳ್ದಿಂಗಳಂ ಬೀಱೆ ನೇತ್ರಾಂ
ಚಳಪಾತಂ ಕಾಮನಂಬಂ ಕಱೆಯೆ ಕನಕಮಂಜೀರಿಕಾಸಿಂಜಿತಂ ಚಂ।

---

* ಕ. ಗ — ಕಾಶ್ಮೀರಾಂಶುವಿಂದೆತ್ತಲುತ್ಸವ    † ಖ — ಚೆಲ್ವಿಂ.

‡ ಕ. ಗ. — ಸೊಬಗೆನಿದಂ.  ಮೊ. — ಅ. — ಸೊಬಗನಿವಂ.

¶ ಖ. — ಈಕ್ಷೆಪುತ್ಕೇಕರಸ.  § ಕ. ಖ. — ಸಕ್ತಿಯಿಂ.

ಚಳಕಾಂಚೀಕೂಜಿತಂ ಕಂಕಣಝುಣಝುಣಿತಂ ಪೊಣ್ಮೆ ಬಂದತ್ತನೂನಂ
ಕಳಹಂಸೀಯಾನವಾಸ್ಯಶ್ವಸಿತಮಧುಪಗಾನಂ ಪುರಸ್ತ್ರೀಪ್ರತಾನಂ ‖

ಜಲಜಾತಾಕ್ಷನನೀಕ್ಷಿಪುತ್ಸುಕತೆಯಿಂ ಕೈಗಯ್ಯುತಿರ್ದಂತೆ ಬಂ
ದೊಲವಿಂ ನೋಡುವಕಾಂತೆಯೊಪ್ಪಿದಳದೊರ್ವಳ್ ದರ್ಪಣೋಪೇತಹ ।
ಸ್ತೈಲಸನ್ಮೌಕ್ತಿಕಭೂಷೆ ಕುಂಕುಮರಜೋರಮ್ಯಾಂಗಿ ಪೂರ್ಣೇಂದುಮುಂ
ಡುವುಂ ತಾರಕಕೋಟಿಯುಂ ತಳೆದ ಸಂಧ್ಯಾಲಕ್ಷ್ಮಿಯೆಂಬಂತವೋಲ್ ‖

ಜಗುೞ್ದುತ್ತಂಸಮನೊತ್ತು ಸೂಸುವಳಕಾನೀಕಂಗಳಂ ತಿರ್ದು ಮೆ
ಲ್ಲಗೆ ಪೋಗಿನ್ನುಡಿದಪ್ಪುದೊಳ್ನಡು ಕುಚಪ್ರಾಗ್ಭಾರದಿಂದೆಂದು ಬು ।
ದ್ಧಿಗುಡುತ್ತುಂ ನಡೆತರ್ಪ ಚೇಟಿಯರ ಮಾತಂ ಮೀಱಿ ಕೈಮೀಱಿದೊ
ಲ್ಮೆಗೆ ಪಕ್ಕಾಗಿ ಪೆಱಳ್ ಮೃಗಾಕ್ಷಿ ಪರಿತಂದಬ್ಜಾಕ್ಷನಂ ನೋಡಿದಳ್ ‖ ೮೨

ಎಱಕಂ ಚಿತ್ತದೊಳುಣ್ಮೆ ಪೊಣ್ಮೆ ನಡೆತರ್ಪೌತ್ಸುಕ್ಯದಿಂ ಮೇಲುದ
ಳ್ಕೆಱಿವುತ್ತುಂಗಕುಚಂಗಳಿಂ ತೊಲಗಲಂಗವ್ಯಕ್ತಿ ಪುಷ್ಪಾಸ್ತ್ರನಾ ।
ದೊರ್ಜೆಯಿಂದುರ್ಚಿದ ಬಾಳನೇಱಿಸಿರೆ ತನ್ನಂ ನೋೞ್ಪವರ್ ಸೋಲ್ತು ಮೆ
ಯ್ಮಱೆಯಲ್ ಮುಯ್ಮಱೆದೊಲ್ದು ನೋಡಿದಳದೊರ್ವಳ್ ಗೋಪಮಾ
ರ್ತಾಂಡನಂ ‖ ೮೩

ನಳಿತೋಳುಂ ತನುಮಧ್ಯಮುಂ ಜಡಿಯೆ ಮುಕ್ತಾಹಾರಮುಂ ನೀಲಕುಂ
ತಳಮುಂ ನರ್ತಿಸೆ ಮೇಲುದುಂ ನಿಱಿಯುಮಡ್ಡಂಬಾರೆ ವಕ್ಷೋಜಮಂ ।
ಡಳಮುಂ ಪೀನನಿತಂಬಮುಂ ಪೊಡರೆ ಕಣ್ ಚೆಲ್ಲಂಗಳಂ ಬೀಱಿ ಕುಂ
ತಳಪುಷ್ಪಂ ಮಿಗೆ † ಸೂಸೆ ಬಂದಬಲೆಯೊರ್ವಳ್ ಕೃಷ್ಣನಂ ನೋಡಿ
ದಳ್ ‖ ೮೪

ಪೊಡರ್ವ ಕುಚದ್ವಯೋರುಭರದಿಂದುಪಹಾರದ ಪೂಗಳಂ ತರಂ
ಬಿಡದೆಡಪುತ್ತುಮಾತ್ಮಗೃಹಹಂಸೆಗಳಿಂ ‡ ಪೆಱಗಾಗಿ ಬರ್ಪವೋಲ್ ।

* ಖ — ಮಧುರಗಾನಂ.

† ಖ.— ಚೆಲ್ಲಂಗಳಿಂಚೆನ್ನ ಪೂಗಳನಲ್ಲಲ್ಲಿಗೆ. ‡ ಕ. ಗ.— ಹಂಸೆಗಳಂ.

ನಡೆಪೆಱಗಾಗಿ ತನ್ನಿ ಸಿಜಚೇಟಿಯರಂ ಪೆಱಗಿಕ್ಕಿ ಬೇಗದಿಂ
ನಡೆದು ಪೆಱಳ್ ಜನಾರ್ದನನ ರೂಪವಿಲಾಸಮನೊಲ್ದು ನೋಡಿದಳ್ ॥೮೫

ಅನವದ್ಯಾಂಗನನೀಮುರಾಂತಕನನಾ ಕರ್ಣಾಂತವಿಶ್ರಾಂತಲೋ
ಚನದಿಂಪಾವಗವೀಕ್ಷಿಸಲ್ ಮನಸಿಜಂ ಪುಷ್ಪಾಸ್ತ್ರದಿಂದೆಚ್ಚು ತೊ ।
ಟ್ಟನೆ ಕೊಂದಿಕ್ಕುಗುಮೆನ್ನನೆಂದು ಭಯದಿಂ ನೋಟ್ಬಂದದಿಂ ದೀರ್ಘಲೋ
ಚನೆಯೊರ್ವಳ್ ಕಡೆಗಣ್ಣ ಕೂರ್ಮೆನೆಗಳಿಂ ದೈತ್ಯಾರಿಯಂ ನೋಡಿ
ದಳ್ ॥ ೮೬

ತರುಣಮೃಣಾಳದಂತೆ ನೆಱೆದಿಂಗಳ ತಣ್ಗದಿರಂತೆ ಪಾಲ ಬೆ
ಳ್ದರೆಗಳ ಬಂಬಲಂತೆ ಕುಮುದೋಜ್ಜ್ವಲಮಾಲಿಕೆಯಂತೆ ತಮ್ಮ ಕೇ ।
ಕರನಿಕರಂ ಗವಾಕ್ಷನಿಕುರುಂಬಕದಿಂ ಪೊಱಪೊಣ್ಮೆ ನೋಡಿದರ್
ಮುರಹರನಂ ಕೆಲರ್ ವಿವಿಧಹರ್ಮ್ಯಗವಾಕ್ಷವಿಲಗ್ನ ವಕ್ತ್ರೆಯರ್ * ॥

ಹರಿ ಬರೆ ನೋಡುತಿರ್ಕೆಲದ ಮಾಡದ ಚಲೋಳಿಕೆಯಲ್ಲಿ ಬಂದು ನಿಂ
ದಿರೆ ಮುಖಪಙ್ಕ್ತಿಯಿಂದೆ ಮಣಿದರ್ಪಣತೋರಣಮಾಲೆಯಂ ಸ್ಥಲೀ ।
ಸರಸಿಜರಾಜಿಯಂ † ವಿವಿಧಪೂರ್ಣಸುಧಾಕರಮಂಡಲಂಗಳಂ
ಪರಿಭವಿಪಾಕೆಯರ್ ಪರಿಭವಂಬಡೆದರ್ ಕುಸುಮಾಸ್ತ್ರಪಾತದಿಂ ॥ ೮೮

ವ॥ ಅಂತು ನೋಡುವ ಗಾಡಿಕಾರ್ತಿಯರ ಮನಮನಿರ್ಕುಳಿ ಗೊಂಡು ಸೂಸುವ ಸೇಸೆಗಳನಾಂತು ಸುಹೃಜ್ಜನಸಜ್ಜನಯೋಷಿಜ್ಜನಂಗಳಾಶೀರ್ವಾದಪರಂಪರೆಗಳಂ ಕೈಕೊಂಡು ಪುರದ ಸಿರಿಯುನವಲೋಕಿಸುತ್ತುಂ ವಿಪಣಿಮಾರ್ಗಂಬಿಡಿದು ನಡೆತಂದು ಕಡುಚೆಲ್ವುವೀಱಿ ಮುನ್ನಮೆ ಸಮಕಟ್ಟಿ ಮಾಡಿಸಿದನರ್ಘ್ಯರತ್ನರಚನಾವಿರಾಜಿತರಾಜಭವನಮಂ ಮಾಂಗಲ್ಯಸಾಕಲ್ಯವಿಭವದಿಂಪೊಕ್ಕು ತನ್ನೊಡನೆ ಬಂದ ನೃಪಾಲವೃಂದಮಂ ಪೊಱಮೊಱಲ ಶಿಬಿರಕ್ಕೆ ಪೋಗಲ್ಬೆಸಸಿ ಬಿಸರುಹಾಕ್ಷಂನವರತ್ನಖಚಿತಸಿಂಹಾಸನದೊಳ್ ಸುಖಾಸೀನನಾಗಿ,

---

* ಖ.— ವಿವಿಧಲಗ್ನ ಮನೋಹರಯುಕ್ತ ವಸ್ತ್ರಯರ್.

† ಖ.— ಪಟೀಪರಿಕರರಾಜಿಯಿಂ.

ಮಗಧನೃಪಜೀವರ್ಝುಷಮಂ
ತೆಗೆವುಜ್ಜ್ವಳರಜ್ಜುಜಾಲಮೆನೆ * ನಿರ್ಮಲದಂ ।
ತಗಭಸ್ತಿಚ್ಛಟೆಪಸರಿಸಿ
ಸೊಗಯಿಸುತಿರೆ ವರ ಯುಧಿಷ್ಠಿರಂಗಿಂತೆಂದುಂ † ॥ ೮೯

ಅಧಿಕೈಶ್ವರ್ಯದ ಮಾಗಧೇಶನಿರೆ ನಿನ್ನೀರಾಜಸೂಯಾಧ್ವರಂ
ವಿಧಿಯಲ್ಲೆಂದುಸಭೀಮನೆಯ್ದಿ ‡ ಭರದಿಂದೋಯುದ್ಧಮಂ ¶ ಬೇಡಿ ಮಾ ।
ಗಧನೊಳ್ ಪೋರಿಸುವಲ್ಲಿ ಶಕ್ತಿಕಳೆಯಂ ಭೀಮಂಗೆ ಕೊಟ್ಟದ್ಭುತ
ಪ್ರಧನಾಟೋಪದೆ ಭೀಮನಿಂ ಕೊಲಿಸಿದಂ ಕೃಷ್ಣಂ ಜರಾಸಂಧನಂ ॥೯೦

ವ॥ ಅಂತು ರಾಜರಾಜಪದವೀಗರ್ವ ಖರ್ವೀಕೃತ ಸಕಲರಾಜಲೋಕನಂ ಯಮರಾಜಧಾನಿಯಂ ಪುಗಿಸಿ,

ಅನಿಲಾಪತ್ಯಪುರಸ್ಸರಂ ಮಗುಟೆಪಂದಾತ್ಮಾಗಮೋತ್ಸಾಹವ
ರ್ಧನದಿಂದುತ್ಪಟಮಾಸಮುದ್ವಿಮಳಸೇನಾನೀಕಮುತ್ತೂರ್ಯನಿ ।
ಸ್ವನಮುತ್ತೋರಣಮುತ್ಪತಾಕಮೆಸೆವಿಂದ್ರಪ್ರಸ್ಥಮಂ ಬಂದು ಪೊ
ಕ್ಕನುಪೇಂದ್ರಂ ತನಗೆಂದು ಬೇಱೆ ಸಮೆಕಟ್ಟಿರ್ದಾನೃಪಾವಾಸಮಂ॥೯೧

ವ॥ ಅಂತು ಬಂದು ಪೊಕ್ಕು ಭೀಮನಂಪ್ರೇಮಪೂರ್ವಕಂ ನಿಜರಾಜ ಭವನಕ್ಕೆ ಕಳಿಪಿ ಮಜ್ಜನಭೋಜನಾನಂತರಂ ಕತಿಪಯಾಂತಃಪುರವಾಸಿನೀ ಪರಿಜನಕುಮಾರಜನಪರಿವೃತನಾಗಿ,

ವಿವಿಧಸ್ನಿಗ್ಧಗಭೀರಹೃದ್ಯಮಧುರಾರಾವಾದ್ಯದಿಂ ವಾದ್ಯದಿಂ
ಶ್ರವಣಸ್ವಾಂತಸುಖಸ್ವನಾನುಕೃತಶಾರಂಗೇಯದಿಂ ಗೇಯದಿಂ ।
ಸುವಿಳಾಸಸ್ಫುಟಭಾವಭಾವಿತ § ನಟೀಲೀಲಾಸ್ಯದಿಂ ಲಾಸ್ಯದಿಂ
ದಿವಸಂ ಪೋಪಿನಮಿರ್ದನುತ್ಸವವನಶ್ರೀಮಾಧವಂ ಮಾಧವಂ ॥ ೯೨

---

* ಕ. ಗ.— ರತ್ನಜಾಲಮೆನೆ † ಕ. ಖ. ಗ.— ಹರಿಯುಧಿಷ್ಠಿರಂಗಿಂತೆಂದಂ. ‡ ಕ. ಗ — ವಿಧಿಯಲ್ಲೆಂದೆನೆಭೀಮನೆಯ್ದಿ.

¶ ಕ.— ಭರದಿಂದಂಭೇದಮಂ. ಗ.— ಭರದಿಂದಂಯುದ್ಧಮಂ.

§ ಖ.— ಭಾವಲಾಲಿತ, ಗ.— ವಿಲಾಸಾಸ್ಫುಟಭಾವಭಾವಿತ.

ವ|| ಅನ್ನೆಗಂ,

ಇಳೆಯಿಂದಂ ಪೊಂಬಿಸಿಲ್ ಪೊಯ್ದೆಗೆದು ನಗನಿಕಾಯಾಗ್ರದೊಳ್ ಸಾಂದ್ರಧಾತು
ಸ್ಥಳಿ ಹರ್ಮ್ಯಘಾಗ್ರದೊಳ್ ಮಾಣಿಕದ ಶಿಖರಮುದ್ಯಾನಮಾಲಾಗ್ರದೊಳ್ಚೆಂ |
ದಳಿರೆಂಬಾಶಂಕೆಯಂ ಮಾೞ್ಪನಮರುಣತೆವೆತ್ತಿರ್ದ * ಚೆಲ್ವಾದುದಸ್ತಾ
ಚಳತುಂಗವ್ಯಾಘ್ರಜೃಂಭಾವೃತವದನಮೆನಿಪ್ಪಂದದಿಂ ಭಾನುಬಿಂಬಂ ||

ಕುವಲಯಪೀಡೆಯಂ ಪಡೆವ ಪುಷ್ಪಿತಪದ್ಮಿನಿಗೋತ್ರ ಕಾಯ್ಪು ಸಂ
ಭವಿಸಿರೆ ಮಂಡಲಾಗ್ರಕರಮಂ ಕುಲಗೋತ್ರಶಿರಕ್ಕೆ ನೀಡುತಿ |
ರ್ಪವಗುಣದಿಂದಮೆಯ್ದಿದುದಧೋಗತಿಯೆಂದು ವಿರಕ್ತನಾದವೊಲ್
ದಿನಕರನಂಬರಂದೊಱೆದು ಪಶ್ಚಿಮವಾರ್ಧಿಗೆ ಮೆಯ್ಯನಿಕ್ಕಿದಂ || ೯೪

ಬಂದವ ಪಗಲಿರುಳರಸಱ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ |
ಸಂದಿಸಿ ಪೊಲ್ದವೊಲೆಸೆದುದು
ಮಂದೈಸಿದ ಸಂಜೆಗೆಂಪು ಪಡುವಣ † ದೆಸೆಯೊಳ್ || ೯೫

ಇನರಥಹತಿಯಿಂ ನೆಗೆದ ಗ
ಗನಧಾತುಸ್ಥಳರಜಂಗಳಿಂ ‡ ರೂಪೞಿದ |
ತ್ತೆನೆ ಸಂಜೆ ಕೆಂಪುತಳ್ತಿರೆ ¶
ಕನಲ್ದು ಪೊಣರೞಿದುವೊಡನೆ ಕೋಕಯುಗಂಗಳ್ || ೯೬

ಇನಿಯಳ್ ಪೊಣರೞಿದೊಡದಂ
ನೆನನೆನೆದುಂ ಸುಯ್ದುಸುಯ್ದಳಲ್ದಳ್ತ |
ಬ್ಜಿನಿಯಬ್ಜಿನಿದಪ್ಪುದೆ + ನೋ
ಡಿ ನೋಡಿ ಜಾನಿಸಿದುದತುಳಶೋಕಂ ಕೋಕಂ || ೯೭

---

* ಕ. ಗ.— ಅರುಣತೆವೆತ್ತೆತ್ತು. † ಕ. ಗ.— ಬೈಗಿನ.
‡ ಕ. ಖ. ಗ.— ಧಾತುಸ್ಥಳರಜಂಗಳಿಂ. ¶ ಕ. ಗ.— ಸಂಜೆಗೆಂಪನುೞಿದಿರೆ. + ಕ. ಗ.— ಅಳಲ್ದಳುರುತ್ತಬ್ಜಿನಿದಪ್ಪುದೆಲ್ಲಿಯುಂ.

ಇದು ಕೋಕಶೋಕಮಂ ನೋ
ಡದ ಕೃಪೆಯೆನೆ ಪದ್ಮನೇತ್ರನುಮಂ ಪದ್ಮಿನಿ ಮು ।
ಚ್ಚಿದಳೆನೆ ಭಾವಕದಿಂದ
ಲ್ಲದೆ ನಾಯಕಿ ತಾಳ್ದಳಿನನಗಲ್ಕೆಯ * ನೋವಂ ॥ ೯೮

ಇಳೆಗೆ ಪಳಗಾಲದಂಬರ
ಮೊಳಸಾರ್ಗುಂ ಬೀೞ್ಗುಮೆಂದು ಧಾತ್ರಂ ಬಲ್ಪಿಂ ।
ದಳವಡೆ ಬೆಟ್ಟಿದ ಬೆಳ್ಳಿಯ
ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ ॥ ೯೯

ಅನುರಕ್ತನಾಗಿ ಧಾರಿಣಿ
ಗೆ ನಲ್ಲಳಂರಾಜಬಾಧೆಗೊಪ್ಪಿಸಿ ರಾಜೀ ।
ವಿನಿಯಂ ಸತ್ಪಥಮಂ ತೊಱೆ
ದಿನನಪಯಶಮೆನೆ ತಮಂ ಪೊದಱ್ದುದುಜಗಮಂ ॥ ೧೦೦

ಇನದೀಪಂ ನಂದಿರೆ † ಬಂ
ದು ನಿಶಾರಾಕ್ಷಸಿ ಚರಾಚರೌಘಗ್ರಸನಾ ।
ರ್ಥಿನಿ ಭುವನಭವನಮಂ ಭೋಂ
ಕನೆ ಪಡಿಗೆತ್ತಂದವಾದುದೆಂದು ‡ ತಮಂಧಂ ॥ ೧೦೧
*

ವ॥ ಅಂತು ಜಗಮೆಲ್ಲಮಂ ಕವಿತರ್ಪ ಕೞ್ತಲೆಯೊಳ್,

---

* ಕ. ಗ.__ತೊಱೆದಳಿನನಗಲ್ಕೆಯ. ಮೊ ಅ.--ತೋಱಿಳಿನನಗಲ್ಕೆಯ.

† ಖ.— ದಿನಕರನಂದುಱದಿರೆ ‡ ಕ, ಗ.— ಪಡಿಗೆತ್ತಂದವಾದುದಂಧ.

ಪದತಳಮಂತಳಚ್ಚಲಿಸಿನಿಲ್ಲೆನೆಧಾರಿಣಿಮಾಯುಮಾದುದೋ
ವದನಮನುದ್ಧಮೆತ್ತಿನಿಲಿಸಿಲ್ಲೆನೆವಾರಿದವೀಧಿಮೇಲೆಬಿ ।
ರ್ದದೊತನುವಿಂಗೆವಾರವಿನಿಸಿಲ್ಲೆನೆನಾಲ್ದೆಸೆತಾಪಿಸಿತ್ತೊಪೇ
ೞದುವಿಪರೀತಮೆಂದುಸುೞಿವರ್ನಿಲೆಕೞ್ತಲೆಪೆತ್ತುದೇಟ್ಗೆಯಂ ॥

ಈ ಪದ್ಯವು ಖ — ಪುಸ್ತಕದಲ್ಲಿ ೧೦೧ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತದೆ.

ಪೊದೆದ ನವೀನನೀಲಪಟವಿಕ್ಕಿದ ಕತ್ತುರಿಯುಣ್ಪು ತೊಟ್ಟ ನೀ
ಲದ ತೊಡವೊಪ್ಪೆ ಜಂಗಮತಮಃಕಳೆಯಂತೆ ತಮಸ್ತಮಾಲವೃ ।
ಕ್ಷದ ಚಲಶಾಖೆಯಂತೆ ತಮದೊಡ್ಡಿನ ಲೋಲಪತಾಕೆಯಂತೆ ಪ
ರ್ವಿದ ತಮದುರ್ವಿನೊಳ್ ಸುಜಿದರಸ್ಫುಟಚಾರೆಯುರಂದು ಜಾರೆಯರ್ ॥

ಜಗುನೆಯಪೂರವೊತ್ತರಿಪ ಗಂಗೆಯಿನೊಡ್ಡಜಿವಂತೆ * ಮರ್ಬಿನು
ಬ್ಬಗಿಬಗಿಯಾಗೆ ಬೆಳ್ಪುವೆಗೆತಂದುದಯಾದ್ರಿಯ ಸೆಜ್ಜರಕ್ಕೆ ಪ ।
ಕ್ಕಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್
ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ ॥೧೦೩

ವ॥ ತದನಂತರಂ,

ವಿತತಪ್ರಾಚ್ಯಾದ್ರಿಪೀಠಾಗ್ರಮುದರುಣಶಿಲಾವೃತ್ತಲಿಂಗಂಬೊಲಿಂಬಾ
ಯ್ತುತ್ತರಂಗೋಂಡೇಲ್ಗೆಯಿಂ ರಾಗದಿನುಲಚಿತಚಕೋತಕ್ಷಕೋರೀಕದಂಬಂ ।
ದ್ಯುತಿವಲ್ಲೀಸ್ತಂಭಮುಜ್ಜೃಂಭಿತಕುಮುದಕುಟುಂಬಂ ತಮಶ್ಶೈಲಶಂ
ಬಂ
ರತಿಪಾಟೋಪಾವಲಂಬಂ ಜನಿತವಿಟವಿಡಂಬಂ ಸುಧಾಸೂತಿಬಿಂಬಂ ॥

ಶೋಣತೆವೆತ್ತ ಮರೀಚಿ
ಶ್ರೇಣಿಯ ಕೆಂದಳಿರನಗ್ರದೊಳ್ ತಳೆದುದಯ ।
ಕ್ಷೋಣಿಧರವೆಂಬ ಕಲಶದ
ಮಾಣಿಕಗನ್ನಡಿವೊಲಾಯ್ತು ಹಿಮಕರಬಿಂಬಂ ॥ ೧೦೪

ಸಂಗಡಿಸೆ ತನ್ನೊಳರುಣಿಪ
ಶಂಗಸಿತದ್ಯುತಿಗಳಂಬನುಕ್ರಮರುಚಿ ಶ ।
ಕ್ರಾಂಗೆತ್ತಿದ ಮಾಣಿಕಗೊಡೆ
ಪೊಂಗೊಡೆ ಬೆಳ್ಗೊಡೆಯೆನಿಸಿದುದು ವಿಧುಬಿಂಬಂ † ॥ ೧೦೫

---

* ಕ.— ಗಂಗೆಯನೊಡ್ಡಚಿವಂತೆ. ಖ.— ಗಂಗೆಯನೊಡ್ಡಜಿವಂತೆ.
† ಕ. ಗ. ಶಶಿಬಿಂಬಂ. ಖ.— ಬೆಳ್ಗೊಡೆಯಿದೆನಿಸಿದುದುವಿಧುಬಿಂಬಂ.

ತಾರೇಶತಾರ್ಕ್ಷ್ಯನಂಶುವಿ
ಸಾರಿತಪಕ್ಷಂ ಬರಲ್ ನಭಶ್ಶ್ವಂದನಧಾ ।
ತ್ರೀರುಹವಮಂ ಸುತ್ತಿದ ಕಾ
ಳೋರಗನೋಡುವವೊಲೋಡಿ ಪೋದುದು ತಿಮಿರಂ ॥ ೧೦೭

ವಿಶಾಂಗಳ ಮುತ್ತೆನಿಸುವ * ಜೆ
ಳ್ದಿಂಗಳ ಪಾಲ್ಗಡಲನಿಱಿಸೆ ಮಂಡಲಶೇಷೋ ।
ತ್ಸಂಗಶಯನೀಯದೆ ೞ ಕೃ
ಷ್ಣಾಂಗದ್ಯುತಿಯಂತಿರೆಸೆದುದಿಂದುಕಳಂಕಂ ॥ ೧೦೮

ಕರಗಿಸೆ ಬೆಳ್ಳಿಯುಪ್ಪುಡಿದು ತೆಳ್ಪುರೆಯೆತ್ತೆ ದುಕೂಲವಪ್ಪ ಕಂ
ಡರಿಸೆ ಮರಾಳವಪ್ಪುರುಳಿಮಾಡಿ ಸರಂಗೊಳ್ ತಾರಹಾರವೆ ।
ಪ್ಪರೆದೊಡೆ ಸೌಧಸಂತತಿಗೆ ಪಾಲ್ಪೊದೆಯಪ್ಪ ಕಱಿಲ್ಚಿ ಕೂಡೆ ಕ
ಪ್ಪುರವಳುಕಪ್ಪಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ ॥

ವ॥ ಅಂತು ಚೆಲ್ವಾದ ಚಂದ್ರಿಕಾವಿಳಾಸದೊಳುಪೇಂದ್ರಂ ಸಾಧಾರಣವಿಟಪ್ರಸಾಧನಪ್ರಚ್ಛನ್ನನಾಗಿ † ನಿಜಪ್ರಿಯಸಖಂ ಪಾರ್ಥನೊಡವೆರೆ ನಾಗರಿಕವಿಟ ವಿದೂಷಕಪೀಠಮರ್ದಕಪುರಸ್ಸರಂ ಪೌರವಿಹಾರಕ್ಕೆ ಪೋಱಮಡೆ,

ನವನೀಲೋತ್ಪಲಲಕ್ಷ್ಮಿಯಂ ನಗಿಸಿ ಮಲ್ಲೀರಾಮಯಂಮೊಳವಾ
ಡಿ ವನೇಜಾತಿನಿಯಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸ ।
ಬ್ಬವಕಾಱಂಗೆಣೆಯಾಗಿ ವಾರವನಿತಾಸೌಭಾಗ್ಯಘಂಟಾರುತಂ
ಸುವಿಟಸ್ವೈರರವಾರುತಂ ‡ ಕುಸುಮಚಾಪಜ್ಯಾರುತಂ ಮಾರುತಂ ॥

ವ॥ ಆಮಂದಮಾರುತನಂ ಮನಂಗೊಂಡು ನಯನಭ್ರಮರಪುಷ್ಪವಾಟವೆಂಬ ವೇಶ್ಯಾವಾಟದೊಳಗಣ ಬರ್ಪಾಗಳ್,

---

* ಖ.— ತಿಂಗಳಬಿತ್ತೆನಿಸುವ.

† ಕ.— ವಿಳಾಸದೊಳುಪೇಂದ್ರಸಾಧಾರಣ ಪ್ರಸಾಧನಪ್ರಚ್ಛನ್ನನಾರಿ. ಗ.—ವಿಳಾಸದೊಳುಪೇಂದ್ರಸಾಧಾರಣಪ್ರಸಾಧನಪ್ರಚ್ಛನ್ನನಾಗಿ.

‡ ಕ. ಗ.—ಸುವಿಟಸ್ವೈರರವಾವೃತಂ. ಖ.—ಸುವಿಟಸ್ವೇದಕಲಾರುತಂ.

ತನುಲತೆ ಶೋಭೆಯಂ ತಳೆದು ನಿಲ್ವಿನೆಗಂ ಮುಖಲಕ್ಷ್ಮಿ ಪೂರ್ಣಚಂ
ದ್ರನನಿೞಕೆಯ್ದು ನಿಲ್ವಿನೆಗಮಾಭರಣಪ್ರಭೆಗಳ್ ಪೊದಪ್ಪು ನಿ ।
ಲ್ವಿನೆಗಮಪಾಂಗಮಾಳಿಕ ವಿಜೃಂಭಿಸಿ ನಿಲ್ವಿನೆಗಂ ಮನೋಭವಂ
ನನೆಗಣೆದೊಟ್ಟು ನಿಲ್ವಿನಗಮೊತ್ತೆಗೆ * ನಿಂದೆಳವೆಂಡಿರೊಪ್ಪಿದರ್ ॥ ೧೧೧

ವ॥ ಅಲ್ಲಿ,

ಪವಳದಿನಿಂಗಡಲ್ ಶಫರದಿಂ ಕೊಳನುನ್ಮದಭೃಂಗನಾದದಿಂ
ದವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ಭೂಷಣಾಂಶುವಿಂ ।
ಕವಿದಲರ್ಗಣ್ಣ ಮಾಪ್ಪೊಳಪಿನಿಂ ಮೃದುಗೇಯದಿನೊಪ್ಪಲುಯ್ಯಲಾ
ಡುವ ಲಲಿತಾಂಗಿ ತನ್ನೆಡೆಗೆ ನೀಱರ ಚಿತ್ತಮನುಯ್ಯಲಾಡಿದಳ್ ॥ ೧೧೨

ವ॥ ಅದಲ್ಲದೆಯುಂ,

ಪದನಖಕಾಂತಿ ತಾರಗೆಯ ಕಾಂತಿಯನೇೞಿಸೆ ಸುಯ್ಯ ಕಂಪೆರ
ಲ್ಗೊದವಿಸೆ † ಕಂಪನಕ್ಷಿಗಳ ಚಂದ್ರಿಕೆ ‡ ಚಂದ್ರಿಕೆಯಂ ಪಳಂಚೆ ಗೇ।
ಯದ ರುತಿ ಕಂತುಚಾಪರುತಿಯೊಳ್ ¶ ತಡಮಾಗೆ ಮುಖೇಂದುವಿಂ
ದುವಿಂ
ಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೊಲ್ ಪೊಳೆದುಯ್ಯಲಾಡಿದಳ್ ॥

ವ॥ ಮತ್ತೊರ್ವಳ್,

ಈಪೊಸಸುಗ್ಗಿ ರಂಜಿಸುವುದೀಪೊಸಜವ್ವನೆಯಿಂದೆನಲ್ § ಜಸಂ
ವ್ಯಾಪಿಸೆ ಭಾವಮಂ + ಮೆಱೆದು ಕಾಮಿನಿ ಕಾಮಭುಜಾಗ್ರಮಂ ಜಯ।
ಶ್ರೀಪರಿದೇಱಲೇಱಿ ತಳರುಯ್ಯಲನಾಖಚರೀಜನಂಗಳೊಳ್
ರೂಪಿಡೆ ತನ್ನ ರೂಪೊಳೆದು ‖ ಪಾಡಿದಳಚ್ಯುತನಂಕಮಾಲೆಯಂ ॥೧೧೪

* ಖ.— ನಿಲ್ವಿನೆಗಮೊತ್ತೆನೆ † ಖ — ಕಂಪರಲ್ಗೊದವಿಸೆ.
‡ ಖ.— ಶುಭ್ರತೆ. ¶ ಖ. ರಂದೊಳ್
§ ಕ, ಗ.— ಜವ್ವನದಿಂದೆನಲ್. + ಕ ಗ — ಚಾಗಮುಂ.
‖ ಕ, ಗ.— ರೂಪೊಲಿದು.

ವ॥ ಮುಂದೊಂದೆಡೆಯೊಳೊರ್ವಳ್,

ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋ
ಹರಿ ತಳಿರ್ದೊಂಗಲಂ ತಳೆದ ಕೋಮಲವಲ್ಲರಿಯಂತೆ ರಕ್ತಪಂ ।
ಕರುಹವನಾಂತ ಪಂಕಜಿನಿಯಂತೆ ನವೋದಿತಚಂದ್ರಬಿಂಬಮಂ
ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್॥೧೧೫॥

ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದಿಂಟುವಲ್ಲಿತ
ನ್ನಧರದ ರಾಗದೊಳ್ ಪೊರೆದುದಂ ಮನದೊಳ್ * ಬೆಱಗಾಗಿ ನೋಡುತುಂ।
ಮಧುರಸಮಲ್ತು ಕುಂಕುಮರಸಂ ದಿಟಮೆಂದು ಬೞಿಕ್ಕೆ ಶಂಕೆ ತ
ನ್ಮಧುರಸಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ ॥೧೧೬

ತನುಲತೆಗಂಕುರಂ ತಳಿರಲರ್ ಮಧುಸಂಗದೊಳಾಯ್ತು ಚೋದ್ಯಮೆಂ
ದೆನೆ ಮಧುಪಾನಜಾತಪುಳಕೇಕ್ಷಣಶೋಣಿಮಘರ್ಮಬಿಂದುಗಳ್।
ತನಗೆಸೆಯಲ್ ಮದೋತ್ಸವದೆ ಕೋಗಿಲೆವೆಣ್ ಗಱಿಪಂ ನೆಗೞ್ವವಂ
ತನುವಿಪ † ಸೊರ್ಕಿನಿಂಪಿಕನಿನಾದೆ ಪೆಱಳ್ ಗಱಿಪಂ ‡ ನೆಗೞ್ದಳ್ ॥

ಎಮ್ಮ ಕೆಲಂಗಳೊಳ್ ಮೆಱೆಯುತಿರ್ಪ್ಪುವೀಶ್ರುತಿಪೂರಕೈರವಂ
ತಮ್ಮ ಬೆಡಂಗನೆಂದು ಸೆಣಸುತ್ತವಱೊಳ್ ತೊಡರ್ದಿಂತಿವಲ್ತೆ ¶ ಕೆಂ।
ಪಂ ಮುಳಿಸಿಂದಮಾಂತುವೆನೆ ಕಣ್ಣೆವರಂ ನಿಮಿರ್ದಕ್ಷಿಗಳ್ಗರಾ
ಗಂ ಮಧುಸೇವೆಯಿಂ ನೆಗೞೆ ರಂಜಿಸಿದರ್ ಮಧುಮತ್ತಕಾಂತೆಯರ್ ॥

ತನುವಂ ಶೃಂಗಾರಮೆಂಬಿಂಗಡಲ ನೊರೆಯೆ ಸುತ್ತಿರ್ದುದೆಂಬಂದದಿಂದಂ
ತನಗೊಪ್ಪಂಬೆತ್ತಿರಲ್ ಬೆಳ್ಪಸದನಮಮಳಜ್ಯೋತ್ಸ್ನೆಯೊಳ್ ಮಲ್ಲಿಕಾಗಂ।
ಘನವಶ್ರೀಖಂಡಗಂಧಶ್ವಸಿತಪವನಗಂಧಾನುಮೇಯತ್ವದಿಂದೊ
ಯ್ಯನೆ ಸಂಕೇತಾಲಯಕ್ಕೆಯ್ದುವಳನಗಧರಂ ನೋಡಿದಂ ಸಸ್ಮಿತಾಸ್ಯಂ ॥

* ಕ ಗ.— ಮಧುವಂ.
† ಖ.— ಮಧೂತ್ಸವದೆಕೋಗಿಲೆಗಳ್ಗಿಪಂತಗಳ್ವಿತುಂತನುವಿನ.
‡ ಖ.— ಮನಮಂ. ¶ ಕ. ಗ.— ತೊಡರ್ದಂತಿರಲ್ತೆ.
ಮೊ.—ಅ.—ತೊಡರ್ದಂತಿರಲ್ಕೆ.

ವ॥ ಆಗಳೊರ್ವಳಿಚ್ಛೆಯಾಣ್ಮನೊಳ್ ಬೆಚ್ಚಮನದಾಕೆ,

ನಿನಗಿಂದಾಪ ಭುಜಂಗನಂ ಕರೆವೆನೆಂಬಾವೊತುಗೇಳ್ದಂಬುದ
ಧ್ವನಿಯುಂ ಕೇಳ್ವ ಮರಾಳಿಯುಂತೆ ಬೆವರುತ್ತುಂ ದೂತಿಯುಂ ಬೈದು ತಾ।
ಯುನುವಿಂಗಂ ಮೊಗಸೋಲದಾವ * ವಿಟರುಂ ಕೊಟ್ಟುತ್ತೆಯುಂ ಕೊ
ಟ್ಟದಿ
ಪೀನೆಗಂ ಪ್ರೀತಿಯೆ ದೂತಿಯಾಗಿಬರೆ † ಬಂದಂ ಕಾಂತನಾಕಾಂತೆಗಂ॥

ವ॥ ಅವಂ ನೋಡುತ್ತೆ ಬರಲೊಡನನ್ಯಕಾಂತೆಯೊಳ್ ಕೈ
ಕೊಂಡ ಪೊಲ್ಲಮೆಯುಂ ಕಳೆಯಲ್ಕೆಂದು ತನ್ನನಲ್ಲಳ ಕಾಲ್ಗೆಱಗೆ,

ಎಱಕ, ಚಿತ್ತದೊಳಿಲ್ಲ ಕಾಲ್ಗೆಱಗಿ ನೀನೇಕಾಳಗೊಂಡಿರ್ಪೆ ಮಾ
ಣೆಱಗಿನ್ನಾಪ್ರೊಸವೇಂಟದಾಕೆಗೆನುತುಂ ಹೂಂಕಾರದಿಂ ಕಾಯ್ಪು ಕ।
ಣ್ಪೊಱೆಯಲ್ ವಾಮಪದಾಬ್ಜದಿಂದೊದೆಯೆ ನಲ್ಲಂಗಾದ ರೋಮಾಂಚದಿಂ
ಪೆಱಪಿಂಗಲ್ ಮುಳಿಸಾಕೆ ಪಕ್ಷ್ಮದೊಳೆ ಪಾಯ್ತುರ್ವಶ್ರುವಂ ತಾಳ್ದಿದಳ್॥

ವ॥ ಆಕೆಯುವಿವೇಕಮುಂ ವಿಚಾರಿಪುತ್ತುಂ ‡ ಬರೆ ಮುಂದೊಂದೆ
ಡೆಯೊಳ್,

ತೊಲಗೆ ಮನಸ್ತಮಂ ಕಿಡೆ ನಿಜೇಕ್ಷಣರಾಗದ ಸಂಜೆಗೆಂಪು ನಿ
ರ್ಮಳದರಹಾಸಚಂದ್ರಿಕೆಯುಮಂ ಕುಡೆ¶ಕಾಲ್ವಿಡಿದೋಪನೋಪಳಂ ¶।
ತಿಳಿಪುವುದುಂ ಪ್ರಸನ್ನತೆಯಿನೋಪಳ ವಕ್ತ್ರಹಿಮಾಂಶುಮಂಡಳಂ
ಬೆಳಗಿದುದುಣ್ಕಿ ಪೊಣ್ಮಿ ಜಘನದ್ರವಚಂದ್ರಶಿಲಾಂಬುನಿರ್ಝರಂ॥ ೧೨೨

ವ॥ ಮತ್ತೊಂದು ಕೇಳೀಗೃಹದೊಳ್,

* ಕ ಗ.— ತಾಯನುವಕ್ಕಂನೊಗಸೋಲದಾವ. ಖ.— ತಾಯನುವ
ಕ್ಕಂವೊಗಸೋವಾವ † ಕ. ಗ.— ತರೆ. ‡ ಖ.—ಭಾವಿಸುತ್ತುಂ.
¶ ಕ. ಖ. ಗ.— ಕಾಲ್ವಿಡಿದೋಪಳೋಪನಂ.

ಶಕುನಿವ್ರಾತಾರವಂ ಮನ್ಮಥರಥಬಲವದ್ಬೃಂಹಿತಂ ಕಂರನಾದಂ
ಮಕರಾಂಕಜ್ಯಾಲತಾಟಂಕೃತವತಿದೃಢಹಸ್ತಪ್ರಹಾರಸ್ವನಂ ದ ।
ರ್ಪಕಭೇರೀಭಾಂಕೃತಂ ತಾನೆನೆ ಯುವತಿರತಾರಂಭಕೋಲಾಹಲಧ್ವಾ
ನಕವಿಂತಾಕಂತುಸೇನಾಕಳಕಳದವೊಲಾಶ್ಚರ್ಯಮಂ ತಂದುದಾಗಳ್ ॥

ವ॥ ಆಮದನಕೇಳೀಸದನಸಮಕ್ಷದುಪವನದ್ರಾಕ್ಷಾಮಂಟಪದ ಮುಂದಣ ಪ್ರಾಂಗಣದೊಳ್,

ಪೊಡವುರ್ತ್ತುಂಗಸ್ತನಂ ಕೊಂಕಿದು ನಿಮಿರ್ವ ನೀಳಾಳಕಂ ಜೋಲ್ದ ಬಂಬ
ಲ್ಮುಡಿ ಬೆಳ್ಪೇರ್ದ ಬಿಂಬಾಧರಮಣಿ ನಸುಕೊಂಕಿರ್ದ ಕರ್ಣೋತ್ಪಲಂ ಕೆಂ ।
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಮರೆದಲರೊಳಂದಾರಿಸುತ್ತಿರ್ದಳೋರ್ವಳ್ ॥ ೧೨೪

ವ॥ ಆಬೆಡಂಗಿಯುಂ ಮನದೆಗೊಂಡು ನಡೆಯಲೊಂದು ಗೃಹವನೋಪಾಂತದೇಕಾಂತನಿಳಯದೊಳ್,

ನೋಡುವರೊಳ್ ಮನಂಬಯಸುವಂತಿರೆ ನಲ್ಮೆ ತುಳುಂಕೆ ಬಿಂಕದಿಂ
ನೋಡುವುದೈದೆ ಮಾತನೊಸೆದಾಡುವರೊಳ್ ಬಗೆ ಬೆರ್ಚದೋಜೆ ಮಾ ।
ತಾಡುವುದಿತ್ತು ಕೂಡುವರೊಳಿಲ್ಲದ ಬೇಟಮನುಂಟುಮಾಡಿ * ನೀಂ
ಕೂಡುವುದೆಂದು ಮುತ್ತಮುದುಗುಂಟಣಿ ಪುತ್ರಿಗೆ ದೀಕ್ಷೆಯಿಕ್ಕಿದಳ್ ॥

ವ॥ ಆಮಾತನಾಲಿಸುತ್ತುಂ ಬರೆ,

ಮುಡಿ ಸೊಪ್ಪಾಗದು ನೀವಿ ಬಿರ್ಕದಧರಂ ಬೆಳ್ಪೇಱದೂರುದ್ವಯಂ
ಪೊಡರ್ದಾಕಂಪಿಸದಕ್ಷಿ ಕೆಂಪಡಪದೊರ್ವಂಗೋತು ನೀನನ್ಯರೊಳ್ ।

* ಕ. ಗ.—ಮಾತಾಡುವುದಿತ್ತು ಮಾಡುವರೊಳಿಲ್ಲದಬೇಟಮನುಂಟುಮಾಡಿ.
ಖ.—ಮಾತಾಡುವುದಿಂತುಕೂಡುವರೊಳಿಲ್ಲದಬೇಟಮನುಂಟುಮಾಡಿ.

ಕೊಡಗೂಸಿರ್ಪವೊಲಿರ್ಪ ನಿನ್ನೊಳಗುಗಂಡರ್ ಗಂಡರಿನ್ನೇನುಮಂ
ಕುಡರೆಂದೆಂದು ಕನಲ್ದು ತಾಯ್ ಮಗಳನೂರ್ವಳ್ ಪುರ್ಪಿನಿಂ ಜರ್ಪಿ
ದಳ್ ॥ ೧೭೬

ವ॥ ಮತ್ತೊಂದೆಡೆಯೊಳೂರ್ವಂ ತನ್ನೋಪಳನಗಲ್ದು ಪೋಪಲ್ಲಿ,

ಮದಿರಾಪಾನಕ್ಕೆ ಮೆಯ್ದಾರದೆ ಸುಟಿಮಲರಂ ಪಾರದುದ್ಯಾನಮಂ ಸಾ
ರದೆ ಮಲ್ಲೀದಾಮಮಂ ಸೂಡದೆ ಹಿಮರುಚಿಯಂ ನೋಡದಾನಂದದಿಂ ಪಾ।
ಡದೆ ಕೈಯ್ಗೆಯ್ದೊಂದಲಂಪಿಲ್ಲದೆ ಕೆಳದಿಯರೊಳ್ ಸೊಲ್ಲದೇಕಾಂತ
ದೊಳ್ * ನಿ
ಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯಮಪ್ಪೊಂದುಪಾ
ಯಂ ॥ ೧೭೭

ವ॥ ಎಂದು ಬುದ್ಧಿವೇೞುತ್ತಿರ್ದಂ. ಆಪ್ರದೇಶಕ್ಕಮನತಿದೂರ
ದೊಳ ತನುತಾಪಸಂತಪ್ತೆಯಾಗಿ,

ಚರಿಯಿಸಿ ನಿಚ್ಚ ವಬ್ಜವನದೊಳ್ ವನದೊಳ್ ವನದೊಳ್ ಕಲಂಕಿದೆಂ
ಸುರಿವ ಮನೋಜಬಾಣತತಿಯಿಂ ಮತಿಯಿಂ ಧೃತಿಯಿಂದೆ ಕೆಟ್ಟೆನೀ ।
ಸುರುಚಿರಚಂದ್ರಿಕಾರುಚಿಕಳಾಪದ ತಾಪದ ಲೇಪದುಬ್ಬೆಗಂ
ಪಿರಿದೊಡಗೂಡು ಚಾರುತರನಂ ವರನಂ ಸ್ಮರನಂನನಂ ಸಖೀ ॥ ೧೭೮

ವ॥ ಎಂದೊರ್ವಳ್ ಸಖಿಗೆ ಪೇೞುತ್ತಿರ್ದಳ್. ಮತ್ತೊಂದೆಡೆ
ಯೊಳ್, †

ಇರುಳ ರಥಾಂಗಿಯಂತೞಲುತುಂ ಪಗಲುತ್ಪಲಲಕ್ಷ್ಮಿಯಂತೆವೋಲ್
ಕೊರಗುತುಮಭ್ರಕಾಲದ ಮರಾಳಿಕೆಯಂದದೆ ನೋಯುತುಂ ‡ ಭವ ।

* ಖ.— ಸಲ್ಲದೇಕಾಂತದೊಳ್.

† ಖ.— ಎಂದೊರ್ವಳಟ್ಟಿದೊಡಾಕೆಪೋಗಿಕೆಳದಿಯ ಕಾಂತಂಗಿಂತೆಂದಳ್,

‡ ಕ. ಗ.— ನೋಡುತುಂ.

ದ್ವಿರಹದೊಳಿರ್ಪ ವಲ್ಲಭೆಯನಾರಿಸಿ ಬಂದೊಸೆದಕ್ಕಟಿಂತು ನಿ
ಷ್ಕರುಣಿಯುಮಿಂತು ಕಲ್ಲೆರ್ದೆಯನಿಂತು ಸಗರ್ವನು * ಮಾಗಲಕ್ಕು
ಮೇ || ೧೮೯

ವ|| ಎಂದು ನುಡಿದೊಡಂಗೊಂಡು ಪೋದಳ್. ಆಗಳೊಂದು
ರಮಣೀಯ ಸ್ಥಾನದೊಳ್ † ಪರಸ್ಪರಸ್ವೈರಾಲಾಪದಿಂದಿರ್ದ ವಿಟಜನ
ದೊಳೊರ್ವಂ,

ಇರದೋಪಂ ಕೋಪದಿಂ ಪೋದೊಡೆ ಪೆಱಗನುಲೇಪಂ ವಿಭೂಷಾಕ
ಲಾಪಂ
ವರಧೂಪಂ ‡ ಸುಪ್ರದೀಪಂ ಸೊಗಸದೊಗೆದ ಕೋಪಂ ಸಶೋಕಪ್ರ
ಳಾಪಂ |
ಸ್ಮರದೀಪಂ ಪೆಣ್ಣ ರೂಪಂ ತಳೆದುದೆನಿಪ ವೇಷಂ ಪ್ರಭಾವೇಶರೂಪಂ
ಪರಿತಾಪಂ ತೋಱಲಾಪೆಣ್ಣೊಲವತಿಲಲಿತಾಲಾಪವಾವಿಪ್ರಲಾಪಂ ¶ ||

ವ|| ಎನೆ ಮತ್ತೊಂದೆಡೆಯೊಳೊರ್ವಂ ತನ್ನಿನಿಯಳಂ ನೆನೆದು,

ಇರು ನೀಂ ಪೋದಪೆನಾಂ ಮೃಗಾಕ್ಷಿಯೆನೆ ಕೇಳ್ದನ್ನೋಪನಾಕಂದಿಕುಂ
ದಿರವಾಚಿಂತಿಸುವಂದವಾನಲವುಗೆಟ್ಟಾಕಾರವಾಬಾಷ್ಪದೊಳ್ |
ಪೊರೆದಾಲೋಕನವಾಬಳಲ್ವತೆಱನಾಸುಯ್ವೊಂದುಪಾಂಗಾಸ್ಮರ
ಜ್ವರಮುಂ § ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚತ್ತೊ ಮಚ್ಚಿತ್ತ
ದೊಳ್ || ೧೯೦

ವ|| ಎಂಬುದುಂ ಮತ್ತೊರ್ವಂ ತನ್ನ ವಲ್ಲಭೆಯ ವಿಯೋಗ
ವೇದನೆಯಂ ಭಾವಿಸಿ ನೋಡಿ,

---

* ಕ. ಖ.— ಕಲ್ಲೆರ್ದೆಯುಮಿಂತುಸಗರ್ವವು ಗ.— ಕಲ್ಲೆರ್ದೆಯು
ಮಿಂತುಸಗರ್ವನು. † ಗ.— ರಮಣೀಯಸ್ಥಾನದೊಳ್.
‡ ಕ. ಗ.— ವರರೂಪಂ. ¶ ಖ.— ಲಾಪವಾಜ್ಞಾಪ್ರಲಾಪಂ.
§ ಗ.— ಸ್ಮರಾತುರವುಂ.

ನಿನಗೆಱಗಿರ್ದ ಮನ್ಮನಮುನಿನ್ನೆಱಗತ್ತಲರಂಬು ನಲ್ಲ ನೀಂ
ಮುನಿದುಱದೆಂದು ಕೇಳ್ದುಱಯಲೀಗುಮೆ ಮನ್ಮಥನೆನ್ನನೆಂದು ಮಾ ।
ನಿನಿ ಜಿನುಗುತ್ತುಮುಂಗುಟದಿನುರ್ವರೆಯುಂ ಬರೆದಾನತಾಸ್ಯೆ ಕ
ಣ್ಬನಿಗಳನಿಕ್ಕುವೊಂದು ತೆಱನಿಕ್ಕಿದುದೆನ್ನೊಡಲಂಸ್ಮರಾಗ್ನಿಯೊಳ್॥೧೧೦

ವ॥ ಎಂದು ನುಡಿದು ತನ್ನ ಮನದಳಲನೆಚ್ಚಱಿಸೆ ಪೆಱನೊರ್ವಂ ಬೆಚ್ಚನೆ ಸುಯ್ದು,

ಸುರತಕ್ಕೆಂದೊಲ್ದು ಸೋಂಕಲ್ ಸತಿ ಮುಳಿದವೊಲಾನಿರ್ಪುದುಂ ತನ್ನ ಬೆನ್ನೊಳ್
ಪರೆದೊಪ್ಪಲ್ ಕೇಶಪಾಶಂ ಕಱಿಯುಚವರಿಯುಂ ಕಟ್ಟಿದೊಂದತ್ಯಪೂರ್ವ ।
ಸ್ಮರಚಾಪಶ್ರೀಯ ಚೆಲ್ವಂ ತಳೆದು ಪೆಱಗುಗೆಯ್ದಿರ್ದೊಡಾಂ ಸೋಂಕೆ ಸಾರಂ
ತಿರೆಸುತ್ತುಂ ನೊಂಕಿ ಸುಯ್ವೆನ್ನಿನಿಯಳ ತೆಱನಿನ್ನುಂ ಮನಂಗೊಳ್ವುದೆನ್ನಂ ॥ ೧೧೧

ವ॥ ಎನೆ ಕೆಲದೊಳಿರ್ದ ಪೆಱನೊರ್ವಂ ತನ್ನ ಕನ್ನೆವೇಟದ ಚೆನ್ನಯುಂ ನೆನೆದು,

ಕಿಱುವರೆಗಾಲದಿಂದುಱದೆ * ನೋಪಳನಾನಪಳಂದೆ ಗಂಡರಂ
ಪಱಿವೊಱಸಾಗೆ † ಮೊಡರ್ವವಳ್ಗೆ ಕುಚಂ ಕಚಮೂರುಭಾರವೆ ।
ಳ್ಳುಱಿದು ಪೊದಳ್ದು ಕೊರ್ವಿ ನಿಲಲಿನ್ನೆಗ ‡ ವಾಕೆಯೊಳಿಂದ್ರಚಂದ್ರರೆಂ
ಬಱಿಕೆಯ ದೇವಕೋಟಿ ಮನುಜಾಕೃತಿಯಿಂದೊಡಗೂಡದಿರ್ಕುಮೇ ॥

ವ॥ ಎಂದು ನುಡಿದ ಪೂರ್ವಾನುರಾಗದ ನುಡಿಗಳಂ ಕೇಳ್ದು ಮತ್ತಲ್ಲಲ್ಲಿ ವಿಟವಿಟೀಭಾವಭಾಷಿತಂಗಳಂ ನೋಡುತ್ತುಮಾಲಿಸುತ್ತುಂ

* ಕ. ಗ.— ಕಿಱುವಡಿಗಾಲದಂದುಱದೆ, † ಗ.— ಪಱಿವೊಱನಾಗೆ,
‡ ಕ. ಖ. ಗ.— ನಿಲವಿನ್ನೆಗ.

ಪೊೞ್ತುಗಳೆದು ಬಂದು ರಾಜಮಂದಿರಮಂ ಪೊಕ್ಕು ಅರವಿಂದನಾಭನರ್ಜುನನಂ ಕಳುಪಿ ಸಜ್ಜೆವನೆಗೆ ಬಿಜಯಂಗೆಯ್ದು ಸುಖದಿಂದೆ ರುಕ್ಮಿಣೀಸನಾಥನಾಗಿ ನಿಶೀಥಿನೀ ವಿರಾಮಸಮಯದೊಳ್,

ತಳರ್ದ ವಿಯೋಗಿನೀನಯನವಾಃಕಣಸಂಕುಳದಂತೆ * ತಾರಕಾ
ವಳಿ ಮಸುಳ್ದತ್ತು ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲದಂ ।
ಚಳಮೆನೆ ಪೋಯ್ತು ಚಂದ್ರಿಕೆ ನಭೋವಧು ಸೂಡಿ ಬಿಸುಟ್ಟಮಾಲ್ಯಮಂ
ತಳದವೊಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ ॥೧೩೫

ತೆರೆವೊಯ್ಲಿಂದೆೞ್ಚ ಕಾಸಾರದ ಪರಿಸರದೊಳ್ ನಿದ್ರೆಗೆಯ್ವಂಚೆವಿಂಡಂ
ದರಹಾಸಶ್ರೀಯನಂಭೋಜಿನಿಗೆ ಪಡೆದು ನೆಯ್ದಿಲ್ಗಳಿಂದುಳ್ಕಲರ್ವಂ ।
ಬುರುಹಕ್ಕೆೞ್ತರ್ಪ ಭೃಂಗಂಗಳ ಗರಿಯೆಲರಿಂ ಕೊರ್ಬೆ ಚಾಂಡಾಲಗೇಯ
ಸ್ವರದೊಳ್ ತಳ್ವೊಯ್ದತಿಸ್ವೈರದೆ ಸುೞಿದುದು ವೈಭಾತಿಕಂ ಮಾತ
ರಿಶ್ವಂ ॥೧೩೬

ರತಿನಾಟಕಾಭಿನಯಮಂ
ಕೃತಕೃತ್ಯಂ ಮಾಡಿ ರಯ್ಯಮಾಗಿರೆ ದೀಪ ।
ದ್ಯುತಿ ಯುವತಿಯರೊಳ್ ನಿದ್ರಾ
ವತಃರವಾದತ್ತು ಮೂಡವೆಳಗಪ್ಪಾಗಳ್ ॥ ೧೩೭

ದಿವಿಜಗಜಂಸಜ್ಜರದಿಂ
ದವೆೞ್ದುದೆನೆ ಕಾಣಲದ್ರಿಯಾದಂತಿಗೆ † ಕ ।
ಟ್ಟುವಚೆಮ್ಮುಗವಡಮೆನೆ ‡ ಚೆ
ಲ್ವುವೆತ್ತುದಂದುದಯಸಮಯ ¶ ಸಂಧ್ಯಾರಾಗಮ್ ॥ ೧೩೮

* ಖ — ತಳರ್ವವಿಯೋಗಿನೀಹೃದಯವಾಃಕಣದಂತೆಸುರುಳ್ವ

† ಕ. ಖ ಗ — ವೆೞ್ದುದದೆಕಾಣಲಾದುದಾದಂತಿಯ.

‡ ಕ. ಗ.— ಕಟ್ಟಿದಕೆಮ್ಮುಗವಡಚಮೆನೆ. ಖ.— ಕಟ್ಟುವಪವಳಾಲಾನಂ.

¶ ಕ. ಗ.— ಶೈಲ.

ಮುರರಿಪು ಪಾರಿಜಾತಕುಜಮಂ ಕೊಳ್ ಬಿಲ್ವಿಡಿದಂದು ಸೋಲ್ತೆನಿಂ
ಪರಿಣತನಪ್ಪೆನಡ್ಡಣದೊಳೆಂದೊಸೆದರ್ಚಿಸಿ ಮುಡಿಪಿಟ್ಟದೊಳ್ ।
ಗರುಡಿಯುನಿಂದ್ರನಾಂತ ಪೊಸಮಾಣಿಕದಡ್ಡಣಮಿಂತಿದೆಂಬಿನಂ
ಕರಮೆಸೆದತ್ತು ಶೋಣರುಚಿಯಿಂದುದಯಾದ್ರಿಯೊಳರ್ಕಮಂಡಲಂ ॥

ಪರರಾಜೋದಗ್ರತೇಜಂ ಕಿಡೆ ರಿಪುಕುಮುದಂ ಕುಂದೆ ವಿದ್ವಿಟ್ತಮಂ ಪಿಂ
ಗೆ ರಥಾಂಗಂ ಲೀಲೆಯೊಳ್ ಕೂಡಿರೆ ಕರಕಲಿತಂ ಮಂಡಲಾಗ್ರಂ ಮನಂ
ಗೊಂ ।
ಡಿರೆ ನಾನಾಪುಂಡರೀಕವ್ರಜಮಲರ್ದಿರೆ ಪಾದಂ ಜಗತ್ಸೇವ್ಯಮಾಗು
ತ್ತಿರೆ ಪೆಂಪಂತಾಳ್ದಿ ನಿತ್ಯಾಭ್ಯುದಯದಿನೆಸೆದಂ ಗೋಪಮಾರ್ತಂಡದೇವಂ॥

ಇದು ಸಮಸ್ತಕಮಳಭವಾಂಡಮಾಲಾಘಟೀಘಟಿತಾರಘಟ್ಟಘಟನಾ
ಸ್ವತಂತ್ರನಿಜಸ್ವರೂಪನಿರೂಪಣಾಚಕಿತಸಕಲಾಮ್ನಾಯತಂತ್ರ
ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತಸುಕವೀಂದ್ರ
ರುದ್ರಪ್ರಣೀತಶ್ರೀಜಗನ್ನಾಥವಿಜಯಮಹಾ
ಪ್ರಬಂಧದೊಳ್ ರೈವತಕಾದ್ರಿವಿಭವ
ತತ್ತಪೋವನವರ್ಣನೇಂದ್ರಪ್ರಸ್ಥ
ಪುರಪ್ರವೇಶಜರಾಸಂಧ
ಹರಣರಾತ್ರಿವಿಹಾರ
ವರ್ಣನಂ.
ಷೋಡಶಾಶ್ವಾಸಂ

---

# ಸಪ್ತದಶಾಶ್ವಾಸಂ

ಶ್ರೀಜಾಯಾಪತಿ ಧರ್ಮಜ
ರಾಜಾವಸಥಕ್ಕೆ ಪೋಗಿ ಹರಿವಿಷ್ಟರದೊಳ್ ।
ಪೂಜಾಸತ್ಕೃತನಿರ್ದಂ
ರಾಜಿಸೆ ನಿಜಮೂರ್ತಿ ತನ್ಮಹಾಸ್ಥಾಯಿಕೆಯೊಳ್ ॥ ೧

ಮಂಗಳಭೂಷಣಾಂಬರಧರಂ ಶುಭಮೂರ್ತಿ ಸದರ್ಭರತ್ನಮು
ದ್ರಾಂಗುಳಿ ಯಜ್ಞಸೂತ್ರನಿವಹಾಂಚಿತವಕ್ಷನಶೇಷವೇದವೇ ।
ದಾಂಗಪಯೋಧಿ ಬಿನ್ನವಿಸಿದಂ ದನುಜಾರಿಗೆ ಧೌಮ್ಯನೊಪ್ಪಿದಂ
ತಂಗಳ * ಕಾಂತಿಗಳ್ ನಿಜಸುಭಾಷಿತವಲ್ಲರಿ ಪೂತ ಮಾಳ್ಕೆಯಿಂ ॥ ೨

ಪಾವನಿಯೊಳ್ ಪೊಣರ್ದಂ ಮಗ
ಧಾವನಿಪಂ ಪೊಣರಲಂಜಿದಂ ನಿನಗದಱಿಂ ।
ದ್ಯಾವಾಪೃಥಿವೀಮೂರ್ತಿಗ
ದಾವಂ ಪ್ರಾದೇಶಿಕಂ ಪೊಣರ್ಕೆಗೆ ನೆಱೆವಂ ॥ ೩

ರಜದಿಂ ತಮದಿಂ ನೀಂ ಪ
ದ್ಮಜನೀಶ್ವರನಾಗಿ ಪಡೆವ ಕಿಡಿಸುವಪದಕೀ † ।
ತ್ರಿಜಗಮುಮಂ ಸತ್ತ್ವದಿನಂ
ಬುಜಾಕ್ಷ ರಕ್ಷಿಸುವ ಪೆಂಪಿದತಿಶಯಮಲ್ತೇ ॥ ೪

ಪರಮಾತಿಥಿ ನೀಂ ನಿನಗಾ
ದರದಿಂದಾತಿಥ್ಯಪೂಜೆಯಂ ಮೆಱೆವ ದಿನಂ ।

---

* ಕ. ಗ — ಧೌಮ್ಯನಂದುದಂತಂಗಳ ಖ — ಧೌಮ್ಯನೊಪ್ಪಿರಲ್ಕಂಗಳ. ಮೊ.–ಅ.—ಧೌಮ್ಯನೊಂದೆದಂತಂಗಳ. † ಕ ಗ.— ಪಡೆಪಕಿಡಿಸು ಪ್ಪದಕೀ. ಖ.— ಪಡೆವಕಿಡಿಸುವದಕ್ಕೀ. ಮೊ.–ಅ.— ಪಡೆಮುಕಿಡಿಸುವುದಿಕೀ.

ದೊರೆಕೊಂಡುದೀನ್ನೃಪಂಗೇಂ
ಚರಿತಾರ್ಥನೊ * ಸಾರ್ವಭೌಮರೊಳ್ ಯುವಂತನಯಂ ॥ ४१
ಉರ್ವೀಶಂ ಮಖಪರಿಕರ
ಸರ್ವಸ್ವವನಾಗುವಮಾಡಿ ವನಜಾಕ್ಷ ಭವ ।
ದ್ದೋರ್ವೀರ್ಯಳದ ಬಳದಿನಲ್ಲದೆ †
ನಿರ್ವಹಿಸದು ಯಾಗವೆಂದು ಪಾರುತ್ತಿರ್ದಂ ॥ ೬

ವ॥ ಆಮಹಾಧ್ವರೋಚಿತರಚನಾವಿಶೇಷಮಂ ನಿರೀಕ್ಷಿಸುವುದೆಂದು ಪುಂಡರೀಕಾಕ್ಷನನೊಡಗೊಂಡುಯ್ದು,

ವಿಮಲಸ್ವರ್ಣಮಯಂ ಕನನ್ಮಣಿಮಯಂ ಶೋಭಾಮಯಂ ತಾನೆನ
ಲ್ಕೆ ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ ಶಾಸ್ತ್ರದೃ ।
ಷ್ಟಮೆನಲ್ಕಾಡಿವ ಯಾಗದೇವಯಜನಪ್ರಾಗ್ವಂಶಪತ್ನೀವಿಚಿ
ತ್ರಮಹಾಶಾಲೆಗಳಂ ಸಮಸ್ತಜನಚೇತೋಹ್ಲಾದಿಯಂ ವೇದಿಯಂ ॥ ೭

ವ॥ ಆವೇದಿಯ ಯಥೋಚಿತಸ್ಥಾನಂಗಳೊಳ್ ಸುಕೃತವನಿತಾಪತ್ಯಮೆನಿಪ ಗಾರ್ಹಪತ್ಯಮುಮಂ ಸಮಸ್ತಮುನಿಜನಸ್ತವನೀಯಮೆನಿಪಾಹವನೀಯಮುಮಂ ಭವಾರ್ಣವವಾಡಬಾಶುಶುಕ್ಷಣಿಯೆನಿಪ ದಕ್ಷಿಣಾಗ್ನಿಯುಮಂ ಲೋಕೋತ್ತರವೆನಿಪುತ್ತರವೇದಿಯುಮಂ ವಿಶಿಷ್ಟವಿಷ್ಟರಾರ್ಘ್ಯಪ್ರಣೀತಸ್ರುಕ್ಸ್ರುವಾಕ್ಷತಸುಗಂಧನವಯವಾಮಳತಿಲಸಮಿದ್ದರ್ಭಾದಿವಿವಿಧಮಖಪರಿಕರಂಗಳುಮಂ ಬೇಱೆವೇಱೆ ತೋಱಿ,

ಆನಧ್ವರ್ಯು ‡ ಪರಾಶರ
ಸೂನು ಬ್ರಹ್ಮಂ ಮುನಿವ್ರಜಂ ಋತ್ವಿಕ್ಸಂ ।
ತಾನಕಮುದ್ಗಾತೃ ಲಸ
ಜ್ಜ್ಞಾನಮುಖಂ ¶ ಹೋತೃ ಯಾಜ್ಞವಲ್ಕ್ಯಮುನೀಂದ್ರಂ ॥ ೮

---

* ಖ — ನೃಪಂಗೆನೆಚರಿತಾರ್ಥಂ † ಖ. — ವನಜಾಕ್ಷಭುಜಾಗರ್ವದ ಬಲದಿಂದಲ್ಲದೆ.
‡ ಗ. — ಆನಧ್ವರಿಯೆ ¶ ಕ. ಗ — ಲಸದ್ಜ್ಞಾನಮುಖಂ.

ಅಕ್ಷೂಣವಾದೊಡಂ ಫಲ
ಮಕ್ಷಯಮಾದಪುದೆ ಮಂತ್ರತಂತ್ರಕ್ರಮವೆ ।
ಬ್ಜಾಕ್ಷ ಭವತ್ಕಾರುಣ್ಯನಿ
ರೀಕ್ಷಣದಿಂದಲ್ಲವಕ್ಕುಮೇ * ಯಜ್ಞಫಲಂ ॥ ೯

ಯಜ್ಞಾದಿಸುಕೃತಕಾರಣ
ಯಜ್ಞಾವೆನದಕ್ಷ ಯಜ್ಞಫಲದಾಯಕ ನಿ ।
ಮ್ಮಾಜ್ಞೆಯಿನಿನತನಯಸುತಂ
ಯಜ್ಞಮನೊಡರಿಸುಗುಮಭಯಮಂ ದಯೆಗೆಯ್ಯಿಂ ॥ ೧೦

ವ॥ ಎಂದು ಧೌಮ್ಯಂ ಬಿನ್ನವಿಸೆ ಧರ್ಮಪುತ್ತ್ರನ ವದನಶತಪತ್ರಮಂ ವನಜನೇತ್ರನತಿಪ್ರೀತಿಯಿಂ ನೋಡಿ,

ತಣಿವನ್ನಂ ಪಿತೃದೇವತಾಸಮುದಯಂ ಸ್ವರ್ಗಾಪವರ್ಗೈಕಕಾ
ರಣಮೆಪ್ಪಗ್ಗದ ರಾಜಸೂಯಮನೊಡರ್ಚಿಂ ವಿಷ್ನಕಾರಿದ್ವಿಷ ।
ದ್ಗಣದಿಂ ಭೂತಗಣಕ್ಕೆ ತುಷ್ಟಿವಡೆದಪ್ಪೆಂ † ಶಾರ್ಙ್ಗಟಂಕಾರಘೋ
ಷಣಮಂ ಕೇಳ್ದೊಡೆ ದಕ್ಷನೇ ಕಿಡಿಸಲಾದಕ್ಷಾಧ್ವರಧ್ವಂಸಿಯುಂ ॥ ೧೧

ವ॥ ಎಂದು ಪೂಣ್ದುನುಡಿಯೆ ಶುಭಮುಹೂರ್ತದೊಳ್,

ನವಮೇಘಧ್ವನಿಧೀರತೂರ್ಯನಿನದಂ ಭೋರೆಂಬಿನಂ ಮಂಗಳೋ
ತ್ಸವಶೃಂಗಾರಮನಪ್ಪುಕೆಯ್ದು ಸೆವಿನಂ ದೀಕ್ಷಾವ್ರತಂ ಸಪ್ತರಾ ।
ತ್ರವಿಧಾನಾಂತರದೊಳ್ ಷಡಗ್ನಿ ಪರಿತೋಷಂಬೆತ್ತು ಶಾಸ್ತ್ರಾಗಮೋ
ಕ್ತವಿದಾವತ್ತಿನೆ ರಾಜಸೂಯಮುಖಮಂ ಬೇಳ್ದಂ ಮಹೀಪಾಲಕಂ ॥ ೧೨

ಕನಕಂ ಶೋಧಿಸೆ ದರ್ಪಣಂ ಬೆಳಗೆ ರತ್ನಂ ಶಾಣಕೋಲ್ಲೀಢಮಾ
ಗೆ ನಿತಾಂತಂ ವಿಮಲತ್ವಮಂ ತಳೆವವೋಲ್ ಧರ್ಮಾತ್ಮಜಂ ರಾಜಸೂ ।
ಯನಿಮಿತ್ತವ್ಯಯದಿಂದೆ ನಿರ್ಮಲತೆವೆತ್ತೆಂ ತೇಜದಿಂ ರಾಜಿಸಿ
ರ್ದನೊ ಚಿತ್ರಂ ನರಲೋಕದೊಳ್ ದಿವಮಣಿದ್ವೈರಾಜ್ಯಮಾಯ್ತೆಂಬಿನಂ॥

* ಖ.— ನಿರೀಕ್ಷಣದಿಂದಕ್ಕುದಲ್ಲದೇ. † ಖ.— ತೃಪ್ತಿವಡೆಯಿಪ್ಪೆಂ.

ಪದೆದಿನಿಸಂ ತಳರ್ಚುವ ತಳರ್ಚಿದುದಂ * ಪೊಱಕಾಲ್ಗೆ ತರ್ಪತಂ
ದುದನುರದಿಂ ತಱುಂಬುವ ತಱುಂಬಿದುದಂ ಪೆಗಲಲ್ಲಿಗೆತ್ತುವೆ ।
ತ್ತಿದುದನ ನೆತ್ತಿಯೊಳ್ ತಳೆದು ಪೊಂಗಳ ಭಾರಮನುಯ್ವ ವಿಪ್ರವೃಂ
ದದ ಪಡಿಮಾತೆ ಪೇೞದೆ † ಯುಧಿಷ್ಠಿರರಾಜನ ಚಾಗದೇೞ್ಗೆಯಂ ‡ ॥

ವ॥ ಅಂತು ನಿರ್ವರ್ತಿತ ರಾಜಸೂಯನಾದ ಕೌಂತೇಯಂ ಗಾಂಗೇಯಂಗಭಿಮುಖನಾಗಿ,

ದಿವಸೇಂದ್ರಾನ್ವಯಸೋಮಾನ್ವಯಯದುಕುಲರಾಜಾಧಿರಾಜನ್ಯಕಂ ವಾ
ಸವಲೀಲಾವಾಸಮಾಯಿರ್ದಪುದೆ ನೆಗೞ್ದ ರಾಜರ್ಷಿದೇವರ್ಷಿವಿಪ್ರ ।
ರ್ಷಿವಿತಾನಂ ¶ ಪುಣ್ಯಪುಂಜೋಪಮಮಿದೆ ಶಿಶುಪಾಲಾದಿದೈತ್ಯವ್ರಜಂ ಭೈ
ರವರೂಪಾಡಂಬರಂ ಬಂದಿದೆ ನೆರೆದುದಶೇಷಂ ಪ್ರಪೂಜಾಭಿಲಾಷಂ ॥ ೧೫

ವ॥ ಎನ,

ಏಪೆಚ್ಚೊರ್ಯುಮತನೂಜ § ಸ
ಭಾಪೂಜೆಯೊಳಗ್ರಪೂಜೆ ಕೃಷ್ಣಂಗೆ ವಲಂ ।
ಶ್ರೀಪುರುಷೋತ್ತಮನಿರ್ದ ಸ
ಭಾಪಟಲದೊಳನ್ಯಪುರುಷನಾವಂ ಪೂಜ್ಯಂ ॥ ೧೬

ಶ್ರುತಿಪತಿ ಗೋಪತಿ ಲಕ್ಷ್ಮೀ
ಪತಿ ಸತ್ವಮಯಂ ಜಗನ್ಮಯಂ ಜ್ಞಾನಮಯಂ ।
ಕ್ರತುಪುರುಷನಾದಿಪುರುಷಂ
ಶ್ರುತಿಪುರುಷನಿರಲ್ಕೆ ಮಿಕ್ಕ ಪುರುಷರಪೂಜ್ಯರ್ ॥ ೧೭

ವ॥ ಎಂದು ಮಂದಾಕಿನೀನಂದನಂ ನುಡಿಯೆ ಕೇಳ್ದು ಶಿಶುಪಾಲಂ ದಕ್ಷಿಣದಿಕ್ಪಾಲಕನಂತೆ ಕೆರಳ್ದು ನಿಂದಿರ್ದು,

---

* ಖ.— ತೆರಳ್ಚುವ ತೆರಳ್ಚಿದುದಂ. † ಕ. ಗ.— ಪೇೞವೆ.

‡ ಖ.— ಭಾಗ್ಯದೇೞ್ಗೆಯಂ.

¶ ಖ — ಯಿರ್ದಪುದೆನೆನೆಗೞ್ದೀದೇವರಾಜದ್ಯೃಷೀವಿಪ್ರವಿತಾನಂ.

§ ಕ.— ಏಪಚ್ಚೀಂಯುವತನುಜ. ಗ.— ಏಪೊಚ್ಚುರ್ಂಯುಮತನುಜ.

ನೀವರ್ಗಾನಿಸಂ ನದೀಜಂ
ನೀವರ್ಗಾನಿಸನಬ್ಧಿಶಯನನದುಕಾರಣದಿಂ ।
ಧರ್ಮಜ ಕೇಳ್ ಭೀಷ್ಮರ ಸಹ
ಧರ್ಮದ ಕೆಳ್ ಕೊಂಡು ಕೊನೆದುದೀಕೇಶವನಂ ॥ ೧೮

ಮೂರ್ಧಾಭಿಷಿಕ್ತರಿರೆ ಗೋ
ವರ್ಧನನಂ ಪೂಜಿಸೆಂದನಱಿಯದೆ * ಭೀಷ್ಮಂ ।
ವಾರ್ಧಕದಿಂ ಮತಿವಿಕಳಂ
ಸ್ವಧರ್ಮನಿಯೊಳ್ ಪುಟ್ಟಿದುದಱಿನತಿಜಡನಲ್ತೇ ॥ ೧೯

ಜ್ಞಾನಿಗಳೊಳ್ ಯೋಗಿಗಳ
ಜ್ಞಾನಿಗಳೊಳ್ ಗೋಪರಧಿಕರೀಯೋಗಿಗಳಂ † ।
ದೀನಂದಗೋಪಪುತ್ರಂ
ತಾನೆಂತೊ ‡ ಪವಿತ್ರನಗ್ರಪೂಜಾಪಾತ್ರಂ ॥ ೨೦

ದೇವರ್ ನರದೇವರ್ ಭೂ
ದೇವರುಮೀಂ ¶ ಪೂರ್ವದೇವನಾಂ ನೆಗೞ್ದಿನ್ನಿಂ ।
ದೇವಾದಿಗಳಱಿದರೆನ
ಲ್ಕಾವಂ § ಮಿಗಿಲಗ್ರಪೂಜೆಗಾನೆ ಸಮಗ್ರಂ + ॥ ೨೧

ಬಲವಿಂದೀವೊಡೆ ‖ ಗೋವಂ
ಗಲಗೆ ಕೊಬಿಲ್ ಕೋಡಕಾಳ್ ಕೋಲುಡೆದೋಲ್ ಕಂ ।
ಒಳಿ ಕಲ್ಲಿ ಚೆಲ್ಲಿ ಪೀಲಿಯು
ತಳೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ ॥ ೨೨

* ಖ.—ಪೂಜಿಸೆಂದನಿಂದೀ, † ಕ. ಗ.—ಗೋಪರಧಿಕರದುಕಾರಣದಿಂ.
‡ ಕ. ಗ.— ತಾನೇನೊ
¶ ಖ.— ದೇವರೆನಲ್. § ಖ.— ನೆಗೞ್ದಂಕೇಳ್ ದೇವಾದಿಗಳೀಱಿವ ರೆನಲಾವಂ. ಗ.—ನೆಗೞ್ದಿನ್ನೀದೇವಾದಿಗಳೀಱಿದರೆನಲಾವಂ. + ಖ.—ಸಮರ್ಥಂ.
‖ ಖ.— ಕುಲಕೆಂದೀವೊಡೆ.

ನವನೀತಚೋರನಕುಲೀ
ನವಧೂಸ್ತನದುಗ್ಧಪೃಥುಶರೀರಂ ಗೋಪೀ ।
ಯುವತಿಜನಜಾರನಾಚಾ
ರವಿದೂರನೆ ಪೂಜ್ಯನಾಗೆ ನಿನಗೆ ನಿಕಾರಂ ॥ ೭೩

ಅಬುಧನಕುಲೀನನನ್ನದೆ
ಕುಬುದ್ಧಿ ನೀಂ ಯಮುಜ ಗೋಪನಂ ಪೂಜಿಸಲಾ ।
ವಿಬುಧಪಿತೃಸಮಿತಿ * ತಣಿದಪು
ದೆ ಬೂದಿಯೊಳ್ ಬೀಳ್ದ ಹವಿವೊಲಕ್ಕುಂ ಯಜ್ಞಂ ॥ ೭೪

ವ॥ ಎಂದು ದಮಘೋಷಪುತ್ರಂ ವಸುದೇವಪುತ್ರನಂ ನಿರಾಕರಿಸಿ ನುಡಿಯುಲಾಮಾತಿಂಗಜಾತಶತ್ರುವೆನಿಸಿದ ಧರ್ಮಪುತ್ರಂ ಕನಲ್ದು,

ಮೇರುಮಹಾದ್ರಿಯಿರ್ದೆಡೆಯೊಳದ್ರಿಕುಲಂ ಮೃಗರಾಜನಿರ್ದ ಕಾಂ
ತಾರಕದಂಬದೊಳ್ ಮೃಗಗಣಂ ಸುರವಾರಣವಿರ್ದ ತಾಣದೊಳ್ ।
ವಾರಣರಾಜಿ ಕಲ್ಪತರುವಿರ್ದ ವನಾಂತರದೊಳ್ ತರುವ್ರಜಂ
ಶ್ರೀರಮಣೀಶನಿರ್ದ ಸಭೆಯೊಳ್ ಧರಣೀಶರದೊಂದು ಲೆಕ್ಕಮೇ ॥ ೭೫

ಆವನ ಪದಮಂ ಧ್ಯಾನಿಸಿ
ದೇವದ್ವಿಜರಾಜಮುನಿಗಳಭಿನುತರಾದರ್ ।
ಭಾವಿಸು ನೀಂ ದೈತೇಯಾ
ಶ್ರೀವರನಿಂದನ್ಯನರರದೇಂ ವಿಶ್ರುತರೇ † ॥ ೭೬

ದೇವತ್ರಯಾದ್ಯನಪ್ಪಾ
ದೇವಜ್ಯೇಷ್ಠಂ ಸ್ವನಾಭಿಕಮಳಭವಂ ಮಾ ।
ದೇವಂ ದ್ವಿತೀಯನೆನಿಪೀ
ದೇವಂ ಶ್ರೀವಾಸುದೇವನರ್ಘ್ಯನಮೋಘಂ ॥ ೭೭

---

* ಗ.— ಸಮಿಧಿ. † ಕ. ಗ.— ಮುನಿಗಳಭಿಮತರಾದರ್ ಭಾವಿಸೆ ನೀಂದೈತೇಯಂಶ್ರೀವರನಿಂದಾದಿಮುನಿಗಳಿಂವಿಶ್ರುತನೈ.

ಅಮಲಯದುವಂಶನಿರೆ ದು
ಷ್ಟಮನ ಮಹಾವಂಶನೆಂಬೆ ನೀನೇತಱಿನ ।
ಗ್ಗಮೆ * ಕಲ್ಪವೃಕ್ಷಮಿರೆ ಕ
ಳ್ಳಿಮಹಾವೃಕ್ಷಂ ಗಡನಿತಱಿಂದದು ಪಿರಿದೇ ॥ ೨೮

ಬೂದಿಯೆ ವಿಭೂತಿಯಾದಂ
ತಾದೈ ನೀಂ ಪೂರ್ವದೇವನಾನಾವುದೆ † ಪೆಂ ।
ಪಾದಪುದೆ ನಿನಗೆ ನಸ್ತು ಗು
ಣೋದಯಮಿಲ್ಲದೊಡೆ ನಾಮಧಾರಕನಲ್ತೇ ॥ ೨೯

ಹರಿಗಂ ನಿನಗಂ ಹರಿಗಂ
ಹರಿಣಂಗಂ ಹರಿಗಮುಡುಗಮಂತರಮೆಂತಂ ।
ತಿರೆ ‡ ಹಸ್ತಿಮಶಕಪರ್ವತ
ಪರಮಾಣುಸಮುದ್ರಶೀಕರಾಂತರಮಲ್ತೇ ॥ ೩೦

ವ॥ ಎಂದು ಚೇದಿರಾಜನಂ ¶ ನುಡಿಯೆ,

ಪಂಚಮಹಾಶಬ್ದಂದಿ
ಕ್ಸಂಚಯಮಂ ತೀವೆ ಯಮಜನಾಜ್ಞೆಯಿನಿತ್ತಂ ।
ಕಾಂಚನಭಾಜನದಿಂ ನ
ಕ್ತಂಚರರಿಪುಗಗ್ರಪೂಜೆಯಂ ಸಹದೇವಂ ॥ ೩೧

ವ॥ ಅದಂ ಕಂಡು,

ದಾರುಣಕೋಪವಹ್ನಿ ವಿಕಟಭ್ರುಕಟೀಕೃತಧೂಮಲೇಖೆ ದಂ
ಷ್ಟ್ರಾರುಚಿವಿಸ್ಫುಲಿಂಗನಿವಹಂ ರಸನಾಶಿಖಿ ದಳ್ಳಿಸಲ್ ಜಗ ।

---

* ಕ. ಗ.— ವಂಶನೆಂಬನೀನೇತಱಿನಗ್ಗಮೆ. ಖ.— ವಂಶನೆಂಬೆನೀನೇತ ಱಿನೂಳ್ಸವು. † ಖ.— ನಾವುದ ‡ ಗ.— ಹರಿಗಮುಡುಗಮೊರೆ ಯಿಡಲೆಂತಂತರ. ¶ ಕ. ಖ. ಗ.— ಎಂದು ಧರ್ಮರಾಜಂಚೇದಿರಾಜನು.

ನ್ಮಾರಣಹೋಮಕುಂಡಮೆನೆ ತುಂಡಗುಹಾಂತರವುರ್ಬಿಸಲ್ಕೆ * ದು
ರ್ವಾರಕಠೋರವಾಕ್ಚಟಚಟತ್ಕೃತಮುತ್ಕಟಮಾಯ್ತು ಚೈದ್ಯನಾ॥ ೩೨

ನಿಂದಿಸಿ ಧರ್ಮಜಪ್ರಮುಖರಂ ಮುಖರಂ ಮುಖರಂಧ್ರ ಘೋಷನಿಂ
ತೆಂದನದಿರ್ಪ್ರಘೋಷಂ ಪ್ರಬಳನಂ ಬಳನಂ ಬಳನಂ ಬಳಾರಿ ಗೆ ।
ಲ್ದಂದದಿನಾಕೃತಾಂತಶರಣಂ ಶರಣಂ ಶರಣಂ ಮುರಾರಿಗಾ
ರಿಂದರಿವೆಂ † ವಿರೋಧಿಗಳಮಂ ಗಳಮಂಗಳಮಂ ನೆಗಚ್ಚುವೆಂ ॥ ೩೩

ಭುವನಾಪಹಾಸ್ಯಮೆನಲ
ರ್ಣವದೊಳ್ ನೀಂ ಮತ್ಸ್ಯನಾಗಲಾನಂದು ಸಮು ।
ದ್ಭವಿಸಿದೆನಪ್ಪೊಡದಂ ಗಾ
ಣವಿಕ್ಕಿ ಪಿಡಿದೆನ್ನ ಬಾಣಪಕ್ಕೊಪ್ಪಿಸೆನೇ ॥ ೩೪

ನೀನಾದಿಕೂರ್ಮನಾದಂ
ದಾನಱಿದೊಡೆ ಪಿಡಿದು ತಂದದಂ ಪತ್ರ್ಕಿಡೋ ॥
ದ್ಯಾನಸರೋವರಸಲಿಲ
ಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರೆನೇ ॥ ೩೫

ನೀಂ ಪೆಸರ ಪಂದಿಯಾದಂ
ದಾಂ ಪುಟ್ಟಿದೆನಪ್ಪೊಡಂದೆ ಬೇಂಟೆಯ ನೆವದಿಂ ।
ದಂ ಪಿಡಿದು ತಂದು ಪಂದಿಗ
ಲಂಪಿಂ ಸಂಬರಮನಱಿಯಿಸದೆ ಮಾಣ್ದಪೆನೇ ॥ ೩೬

ನಗೆಗೆಡೆಯಾಗಿರೆ ಸಿಂಗದ
ಮೊಗಮಂ ಧರಿಯಿಸಿ ನಿಶಾಟನಂ ನೀಂ ಕೊಂದೈ ।
ಪಗರಣಿಗರಲ್ಲದುೞಿದರ್
ಮೊಗಮಂ ಪೆಱತೊಂದನೆಂತುಮೋಂ ‡ ಧರಿಯಿಪರೇ ॥ ೩೭

---

* ಕ, ಗ.— ಗುಹಾಂತರವರ್ಬಿಸಲ್ಕೆ.

† ಕ. ಗ.— ಮುರಾರಿಗಾನಿಂದರಿವೆಂ. ‡ ಗ. ಪೞತೊಂದನೆಂದುಮೋಂ.

ಭೂಚಕ್ರದಾನಮಂ ವೈ
ರೋಚನನನೊಳ್ ಬೇಡುವಂದು ನಿನ್ನೊಳ್ ತನುಸಂ ।
ಕೋಚಂ ಸಮನಿಸಿತುಚಿತಂ
ಯಾಚನಯೊಳ್ ನೆಗೞದಾರ್ಗೆ ತನುಸಂಕೋಚಂ ॥ ೩೮

ದ್ವಿಜನೇಗೆಯ್ದುಮವಧ್ಯಂ
ತ್ರಿಜಗದೊಳಂ * ನೆಗೞ್ದ ಜಾಮದಗ್ನ್ಯಾಕೃತಿಯಿಂ ।
ವಿಜಿಗೀಷುನೃಪರನಿಕ್ಕಿದೆ
ಭುಜಬಲಮೋಂ ಜಾತಿಬಲಮೆ ಮೆಚ್ಚುವೆರದನಾರ್ † ॥ ೩೯

ಪೆಣ್ಬನೞದುಯ್ಯೆ ನಿನ್ನ ಕು
ಟುಂಬಿನಿಯ ಕಾದೆಯಿಲ್ಲ ರಾಮಾಕೃತಿಯಿಂ ।
ನೀಂ ಬೞಿಕ ವಾಯುಪುತ್ತ್ರಕ
ನಿಂಬಱಿತೆಯ್ದಲ್ಕೆ ‡ ಪಗೆಯನಿಕ್ಕುವುದರಿದೇ ॥ ೪೦

ಕೋಗಿಲೆ ಕಾಗೆ ಮುಂ ¶ ಪೊರೆದ ಕಾರಣದಿಂ ಪರಪುಷ್ಟನಾದವೋ
ಲಾಗದ ಜಾತಿ ಗೋವಳತಿ ರಕ್ಷಿಸೆ ನೀಂ ಪರಪುಷ್ಟನಾದೆ ನೋ ॥
ಡೀಗಳದರ್ಕೆ § ನಿನ್ನತನುಕಾರ್ಷ್ಣ್ಯಮೆ ಸೂಚಕಮಲ್ಲವೇ ಮಹಾ
ಯಾಗದೊಳಗ್ರಪೂಜೆಗೆ ವಿಜಾತಿ ಕರಾಗ್ರಮನೆಂತು + ನೀಡುವೈ ॥ ೪೧

ಸಾಸಿಗನೈ ಹರಿ ನೀಂ ಪೆ
ಣ್ಗೂಸಂ ವಧಿಯಿಸಿದೆ ಪಶುವನೞಿದೈ ಮತ್ತಂ ।
ದೋಸಕ್ಕೆ ಹೇಸದೀಗ ಮ
ಹಾಸಭೆಯೊಳಗಗ್ರ ಪೂಜೆಗಗ್ರಣಿಯಾದೈ ॥ ೪೨

---

* ಕ. ಗ.— ಜಗದೊಳೇಂ. † ಕ. ಗ.— ನೃಪರನಿಕ್ಕಿದೆಭುಜಬಲಮೋ ಜಾತಿಬಲರದಂ ಮೆಚ್ಚುವರೇ. ‡ ಕ. ಗ.— ವಾಯುಪುತ್ತ್ರಕನಿಂಬಱಿಕೆಯಲ್ಕೆ. ಖ — ಪಾಯ್ವುತತ್ತ್ವಲನಂಬರಿತ್ತೈದಲ್ಕೆ. ¶ ಕ. ಖ.— ಕಾಗೆಯಿಂ.
§ ಖ — ಪುಷ್ಟನಾದೆಯಂತೀಗಳದರ್ಕೆ. + ಕ. ಗ.— ಕರಾಗ್ರಮನೇಕೆ.

ಅದಟಲೆದದೊಂದುಬಂಡಿಯು
ನೊದೆದೈ ಬೇಕೆರ್ೞಳದ ಮೆಟ್ಟುಯುಂ ನೀಂ ಕಿತ್ತೈ ।
ಕುದುರೆಯನೋವದೆ ಸೀೞ್ದು
ಮುದುಗಿಪ್ತೆಯನಿಟ್ಟು ಕೆಡಪಿದೈ ಬಲ್ಲಿದನೈ ॥ ೪೩

ಪಾಪಂ ಪಿಡಿದನಿತಱೊಳೇಂ
ಪಾವಡಿಗರ್ ಸುಭಟರಪ್ಪರೇ ಜಗುನೆಯು ನೀ ।
ರ್ಪಾವಂ ಪಿಡಿದನಿತಱೊಳು
ವೀರ್ವವಳಯಂ ಸುಭಟನೆನ್ನುಗಮೇ ಹರಿ ನಿನ್ನಂ ॥ ೪೪

ಪೆಱುವವೊಲ್ಪುತ್ತಂ ನೀ
ನೇಱಿ ಜರಾಸಂಧಭಯದೆ ಗಿರಿದುರ್ಗಮನಾ ।
ತೊಱಲತುದಿಯೊಳ್ಕೇದಗೆ
ಯೇಱಿದಕೋಡಗದೊಲಿರ್ದ ತೆಱನಂ ಮಱೆದೈ ॥ ೪೫

ಕಾಲಯವನಂಗೆ ಗರುಡನ
ಗಾಳಿಯು ಜವದಿಂದವೋಡಿ ಜಂಘಾಬಲಮಂ ।
ತ್ರೈಲೋಕ್ಯವೆಱಿಯೆ ತೋಱಿದೆ
ಕಾಳೆಗದೊಳ್ತೋಱಲಾಪೆ ಬಾಹಾಬಲಮಂ ॥ ೪೬

ವ॥ ಎಂದು ವಜ್ರಘೋಷಣನಿಷ್ಠುರಭೀಷಣಘೋಷದಿಂ ಚೇದಿನಾಥಂ ಜಗನ್ನಾಥನಂ ನಿರ್ಭಾಟಿಸಿ ನುಡಿಯೆಯುಮಾಸಮಯದೊಳ್,

ಸಮರಸನ್ನದ್ಧನವಿದಲ್ಪುಪಲ್ಲಣಿಸುವೀವಾಜಿವ್ರಜಂ ಪಣ್ಣುವೀ
ಸಮದೇಭಾವಳಿ ಪೂಡುವೀ ರಥಸಮೂಹಂ ಕೈದುಗೊಳ್ವೀಪದಾ ।
ತಮಿದೇಂ ಯಾದವಚೈದ್ಯಸೈನ್ಯಯುಗದೊಳ್ ಬೇಡೆಂದು ಭೀಮಾರ್ಜುನ *
ಪ್ರಮುಖರ್ ಮೋಣಿಸೆ ಸೈನ್ಯವಿದ್ದುದುಭಯಂ ನಿರ್ವಾತವಾರಾಶಿವೋಲ್ ॥

* ಕ. ಗ.— ಭೀಷ್ಮಾರ್ಜುನ.

ವ॥ ಆಗಳ್,

ದಶನಾಂಶುಜಾಲತತಿಯಿಂ
ಶಿಶುಪಾಲನ ಜೀವಪವನನಂ ತೆಗೆವಂತ ।
ಬ್ಧಿಶಯಂ ಸಕೋಪಹಸಿತಾ
ಸ್ಯಶತಚ್ಛದನಾಗಿ * ದಾನವೆಂಗಿಂತೆಂದಂ ॥ ೪೮

ಎನಗೆ † ನಿಜಜನನಿ ಕೈಮುಗಿ
ದು ನೂಱುಸೂೞ್ವರಮುಪೇಂದ್ರ ಶಿಶುಪಾಲನ ಪೊ ।
ಲ್ಲನುಡಿಗೆ ಸೈರಿಪುದೆನಲಂ
ದಿನ ಮಾತಂ ಸಲಿಸಲಿನ್ನೆಗಂ ಸೈರಿಸಿದೆಂ ॥ ೪೯

ತೀವಿದುದು ಶಪನಶತಮಿಂ
ತೀವಿದುದದಱೊಡನೆ ಚೈದ್ಯ ನಿನ್ನಾಯುಷ್ಯಂ ।
ತೀವುಗುಮೀಗಳ್ ನಿನ್ನ ವೆ
ಧೂವರ್ಗದ ರೋದನಸ್ವನಂ ದಿಕ್ತಟದೊಳ್ ॥ ೫೦

ಮೊದಲೊಳ್ನಮ್ಮೊರ್ವರ್ಗಲಂ ‡ ಕಾದುವೊಡೆ ತಡೆವುದೇಕನ್ನೆಗಂ ದ್ವಂದ್ವ ಸಂಗ್ರಾ
ಮದ ಕಾಲಕ್ಷೇಪಮೆಂಬುದು ದುಸ್ಸಹ ಮೆನಗೆ ಜಯೋತ್ಕಂಠೆ ಕೈಮಿಱಿ ದತ್ತೆ ।
ನ್ನಿದಿರೊಳ್ ಱೀಂಡಾಡಿದೀನಾಲಗೆಯುತುಗದ ಮುನ್ನಂ ಭವನ್ಮಸ್ತಕಚ್ಛೇ
ದದಗುರ್ವಂ ತೋರ್ಪೆನೆಂದರ್ಘ್ಯದ ¶ ತಳಿಗೆಗೆ ಕೈನೀಡಿದಂ ಕಂಜ ನಾಭಂ ॥ ೫೧

* ಕ. ಗ.— ಹಸಿತಾಸ್ಯಶರಚ್ಛದನಾಗಿ. ಖ.— ಹಸಿತಾಬ್ಜಸಿತಚ್ಛದನಾಗಿ
† ಖ — ದನೆ ಜ. ‡ ಖ.—ನಮ್ಮಾಬಲಂ.
¶ ಖ.— ತೋರ್ಪೆನೆಂದಗ್ರದ.

ಖರರೋಚಿರ್ಮಂಡಲಂ ಬೇಱಿದೆ ಗಗನತಳಂ ಭಾಸ್ಕರಾಭಾಸ * ಮೆಂಬಂ
ತಿರೆ ಕೂರ್ಪಂ ತೋರ್ಪ ಚಕ್ರಂ ದ್ಯುತಿಕಬಳಿತ † ದಿಕ್ಚಕ್ರಮುನ್ಮೀ
ಲಿತೋಗ್ರಾ।
ಸುರಚಕ್ರಂ ದೇವಕೀನಂದನನ ಕರಸರೋಜಾತದೊಳ್ ರಾಜಸೂಯಾ
ಧ್ವರ ಪೂಜಾಭಾಜನವ್ಯಾಜದೆ ನೆಲಸಿದುದಂತರ್ನಿಗೂಢಪ್ರಭಾವಂ ॥೫೨

ನೀಂ ಬಯಸಿದಗ್ರಪೂಜೆಯು
ಪೊಂಬರಿಯುಣಮಿದೆ ನಿಶಾಟ ಕೊಳ್ಳೆಂದು ಸರೋ।
ಜಾಂಬಕನಿಡೆ ಶಿಶುಪಾಲಶಿ
ರಂಬೆರಸಂಬರತಳಕ್ಕೆ ನೆಗೆದುದಮತ್ರಂ ॥ ೫೩

ಮಕುಡಮಣಿ ಸೊಡರ್ಗಳನೆ ಮ
ಸ್ತಕಸಹಿತಮೆ ನೆಗೆದು ತಿರುಗು ವಾಪರಿಯುಣಮೋಲ್ ।
ಪ್ರಕಟಿಸಿದುದೊ ಕೃಷ್ಣನ ವಿಜ
ಯಕಾಂತೆಗಾಕಾಶ ಲಕ್ಷ್ಮಿ ನಿವಳಿಪ ತೆಱಮಂ ‡ ॥ ೫೪

ಶಿರಮಾಕಾಶತಳಕ್ಕೆ ಪಾಱೆ ಗಳರಂಧ್ರೋದ್ದೇಶದಿಂ ಪಾಯ್ವ ನಿ
ರ್ಭರರಕ್ತೋನ್ಮುಖಧಾರೆ ವಾರಿಜಭವಾಂಡಕ್ಕೆಯ್ದೆ ತದ್ಬ್ರಹ್ಮವಿ।
ಷ್ಟರಪದ್ಮಾರುಣನಾಳದಂಡಮೆನಿಸಿತ್ತಿತ್ತಟ್ಟೆ ಘೋಳಿಟ್ಟುಮು
ರ್ವರೆಯೊಳ್ಪುಟ್ಟನೆ ಬೆಟ್ಟುಬೀೞ್ವ ತೆಱದಿಂ ಬಿೞ್ದತ್ತು ಚೇದೀಶನಾ ॥ ೫೫

ಬೆಂಬಲಮಪ್ಪೆವೆಮ್ಮ ಶಿಶುಪಾಲಮಹೀಪತಿಗೆಂದು ಚಾತುರಂ
ಗಂಬೆರಸಣ್ಮಿನೊಳ್ಪಸೆವಿನಂ ¶ ಕಡುಬಿಂಕದ ವೇಣುಧಾರಿ ಸಾ।
ಲ್ವಂ ಬಲಿಸೂನು ರುಕ್ಮಿ ರಣರಾಗದೆ ಬಿಲ್ವಿಡಿದೆರ್ದು ಕಂಡು ಬಿ
ಲ್ಲುಂಬೆರಗಾದರೊರ್ಮೊದಲೆ § ಪಾಱುವುದುಂ ಶಿಶುಪಾಲಮಸ್ತಕಂ ॥೫೬

* ಖ — ಬೇಱಿರೆ ಗಗನಗತಂಭೂಸುರಾಭಾಸ † ಕ ಗ.— ಚಕ್ರ
ದ್ಯುತಿಕಬಳಿತ ಖ.— ಚಕ್ರದ್ಯುತಿಸನ್ನೆ ‡ ಕ. ಖ. ಗ.— ತೆಱದಿಂ.
¶ ಕ. ಗ.— ಬೆರಸಣ್ಮಿನೇರ್ಪೆಸೆವಿನಂ § ಕ.— ಕಂಡುಬಿಲ್ಲುಂ
ಬೆರಗಾದುದೊರ್ಮೊದಲೆ. ಗ — ಕಂಡುಬಿಲ್ಲುಂಬೆರಗಾದುದೊರ್ಮೊದಲೆ
ಖ.— ಬಲ್ಪುಪಿಂಗಲ್ಬೆರಗಾದುದೊರ್ಮೊದಲೆ.

ಕ್ರತುಪೂಜಾವಮಣಿಪಾತ್ರದಿಂ ರಿಪುಶಿರೋವಿಚ್ಛೇದನಂಗೆಯ್ದನ
ಚ್ಯುತನಿಂ ಕೈದುಗೊಳಲ್ಕೆ ಜೀವಿಸುವನಾವಂ ಯುಃಪಲಾಯುಃಸಜೀ ।
ವತಿಯೆಂದೋಡುವ ತನ್ನ ಮೆಯ್ಯುನನೆನಿಪ್ಪಾ ರುಕ್ಮಿಗಂ ಕ್ಷೇಮಧಾ
ವತಿಗಳ್ಗಂಶ್ರುತಿಪೂರವಾಯ್ತು ಜಯಭೇರೀನಾದವಾಕ್ಯಷ್ಣನಾ * ॥ ೫೭

ಧರೆಗವುರಾಧ್ವದಿಂ ಕೆಡೆವ ಚೈದ್ಯನ ಮೂರ್ಧದ ರತ್ನಭಾಃ ಪರಂ
ಪರೆ ಕುಡಿಮಿಂಚಿನಂತೆಸೆಯೆ ನಾರದನೃತ್ಯಮೆ ಕೇಕಿನೃತ್ಯಮಾ ।
ಗಿರೆ ಜಯದುಂದುಭಿಧ್ವನಿ ಘನಧ್ವನಿಯುಂ ಗೆಲೆ ಪುಷ್ಪವೃಷ್ಟಿಯುಂ
ಸುರಿದುದು ಧರ್ಮಜಂ ಪುಳಕದಿಂ ಕಡವುಳ್ಳೆರ್ದಂತಿರಿರ್ಪಿನಂ † ॥ ೫೮

ವ॥ ಆ ಮಹಾ ವಿಜಯೋತ್ಸವದೊಳಾಯಮತನೂಜಂ ಸಮಯೋಚಿತ ವಾಕ್ಯಪೂಜೆಯೊಳಂ ದಿವ್ಯಾಂಬರಾಭರಣಪೂಜೆಯೊಳಂ ರಾಜೀವನೇತ್ರನಂ ಪೂಜಿಸಿ ಗೀತವಾದ್ಯಾದಿ ಮಂಗಳಾಚಾರಮಂ ನೆಗಳುತ್ತುಂಮೆತ್ತಂ ‡,

ಶೌರಿ ಭವತ್ಪ್ರಸಾದಲವದಿಂದೆ ಮುಮುಕ್ಷುಗೆ ಮೋಕ್ಷಲಕ್ಷ್ಮಿ ಸಂ
ಸಾರಿಗೆ ರಾಜ್ಯಲಕ್ಷ್ಮಿ ದೊರೆಕೊಳ್ವುದೆನಲ್ ನಿನಗಾವ ವಸ್ತುವುಂ ।
ತೀರದುದಿಲ್ಲವಾದೊಡಮಿವಂ ಜನರಂಜನೆಗಿತ್ತೆನೆಂದು ದೈ
ತ್ಯಾರಿಗೆ ಕೊಟ್ಟನುತ್ತಮ ಗಜಾಶ್ವರಥಾದಿಪದಾರ್ಥಸಾರ್ಥಮಂ ॥ ೫೯

ವ॥ ಅಂತು ವಸ್ತುವಾಹನಂಗಳಂ ಮನಂಗೊಂಡು ಕೈಕೊಂಡು ಪರಿಪೂರ್ಣ ಮನೋರಥಂ ರಥಾರೂಢನಾಗಿ ವಿಹಗೇಂದ್ರ ಪತಾಕನಿಂದ್ರಪ್ರಸ್ಥದಿಂ ಪೊಱಮಟ್ಟು ಪೊಱವೊೞಲೊಳ್ ಪಾಂಡವರ ನೆಂತಾನುಂ ಬೀಳ್ಕೊಳಿಸಿ ನಿಲಿಸಿ,

---

* ಕ, ಗ.—ತಚ್ಛವೂಪತಿಗಳ್ಗಂ ಶ್ರುತಿಪೂರವಾಯ್ತುಭಯಭೇರೀಘೋಷಣಂಕೃಷ್ಣನಾ.   † ಖ.—ಪುಳಕದುಳ್ಳಲರ್ದಂಧರೆಯಂತಿರಿರ್ಪಿನಂ.
‡ ಕ, ಗ.—ನೆಗಳುತ್ತುಮಿರೆ.

ಅವನೀನಾಥಪ್ರತಾನಂಪೆಱಗೆಸಕಲಸಾಮ್ರಾಜ್ಯಚಿಹ್ನೋತ್ಕರಂ ಮುಂ
ದವರೋಧಸ್ತ್ರೀಕದಂಬಂಕೆಲದೊಳತಿಬಲೋಚ್ಚಂಡಚಾತುರ್ವಲಂಸು।
ತ್ತುಮನೂನೋತ್ಸಾಹದಿಂದಂನಡೆಯೆ ನಡೆದು * ರಮ್ಯಪ್ರದೇಶಂಗಳೊಳ್
ಬೀಡುವಿಡುತ್ತುಂಬಂದುಪೊಕ್ಕಂನಿಜಪುರವರಮಂಮಂಗಳಾಚಾರದಿಂದಂ ॥

ವ॥ ಅಂತು ಪೊಕ್ಕು ರಾಜಭವನದೊಳ್ ವನಮಾಲಿ ಲೀಲೆಯಿಂದಿರ್ದ ನನ್ನೆಗಂ,

ಪರಿವ ಬಿಸಿಲ್ಗುದುರೆಗಳೂ
ಪ್ಪಿರೆ ದವಧೂಮಧ್ವಜಂಗಳೆಸೆದಿರೆ ಬೇಱೊಂ ।
ದರಸು ರವಿಗೆನೆ ನಿದಾಘದ †
ಬರವೆಸೆದತ್ತೆಸೆವಿನಂ ಪ್ರತಾಪಂ ಜಗದೊಳ್ ॥ ೬೧

ಉರಿವರಿವನರಸುತನದೊಳ್
ಪಿರಿದು ಖಳರ್ಗಳಪುವಂತಿರೆಲೆಯಿಕ್ಕಿದ ಪೆ !
ಮರಗಳಡಿವಡಪಿಯೊಳದೇಂ
ಕರೆದುವೊ ಸೀರುಡುಗಳುಡುಗದಿರುಳುಂ ಪಗಲುಂ ॥ ೬೨

ತಾಱಲ್ಬಿರ್ದ ‡ ಮರಂಗಳ
ತೂಱಲತುದಿಗೋಡೆಯೊಳರದೆ ಬುರುಲೆಗಳಡ್ಡಂ ।
ಬಾಱಿದುವೆಳ್ಳಿರ್ದ ಪವ್ವನೆ
ಪಾಱಿ ಕುಳಿಲ್ಪಾಱೆ ಪಧಿಕಜನಸಂತಾನಂ ॥ ೬೩

ಕೆಸರುಬುರ್ಬೇಱೆ ನೀಬೊರ್ಬ್ಬುಳಿಸಿ ಬುಳುಬುಳುಂದೇಂಕಿ ಮೆಂಡೆಯಿಂ [ಕಂಪಂ
ಮಸಗುತ್ತುಂ ಬತ್ತೆ ನೆರ್ಪಂಬಡೆದರೆಗೆಱೆಯೊಳ್ ಬೀಡೆವೋಗಿರ್ದತಣ್ಣೀ ।

* ಕ. ಗ.__ನಡೆಯೆಪಡೆಸು.

† ಕ ಗ —ರವಿಗೇಂನಿದಾಘದ. ಖ.__ರವಿತನ್ನಿದಾಘದ.

‡ ಖ.—ತಾ ಲುದಿರ್ದ.

ರೊಸದರ್ಣಂ ಬಾವಿಗಾದತ್ತಸಿದುಪರಿವ ಪೆರ್ಬಳ್ಳದಿರ್ವಕ್ಕದೊಳ್ ನೀ
ರ್ದೆಸೆಯೊಳ್ ಸೇದಾಲಿಸುತ್ತಿರ್ದುದು * ಚಳಶಫರೀಕಾಲಕೂಟಂ
ಬಕೋಟಂ ‖ ೬೪

ಮೆಸಗಿರ್ದ ಲೋಹಿತಾಶ್ವ †
ಪ್ರಸರಂ ಕಾಳ್ಗರಡಮೆಲ್ಲಮಂ ಮೇಯೆ ರಸಾ ।
ರಸಮಂ ಗೋಪತಿ ತವೆ ಕುಡಿ
ಯಿಸಿದಂ ನಿಜಗೋಸಹಸ್ರಮಂ ಬೇಸಗೆಯೊಳ್ ‖ ೬೫

ಕೆಱೆ ನೆಱೆ ನೀರ್ ತವುತರೆ ಬಱಿ
ಗೆರೆಯಾದುವು ‡ ತೊಱೆಗಳುಂಕರ್ಗೆಟ್ಟಱತು ಬಯು ।
ಲ್ದೊಱೆಯಾದುವು ಬಾಂದೊಱೆ ಬಿಸು
ದೊಱೆಯಾದುದು ¶ ಕಾಲವಶಮದೇನಾಗಿಸದೋ ‖ ೬೬

ತಿಳಿದೊದವೆ ಮುಂದೆ ಮುಂದಿದೆ
ಜಲವೆಂದೆಂದೆಯ್ದುತುಂ ಬಿಸಿಲ್ಗದುರೆಯುನಂ ।
ದಳವೆೞದುವುಕಾಲ್ಗಂದಿದು
ವೊಳವಾಯಿಂ ಕರಿಸೆಯುಗುೞ್ದುವೆಯ್ದೆ ಮೃಗಂಗಳ್ ‖ ೬೭

ತೆಗಳಿಗೆವಿದೊರ್ಡಲುಂ ನಾ
ಲಗೆಗಿತ್ತರೆಬಱಿತ ಬಾಯುಮುೞ್ದರೆಗಣ್ಬೀ ।
ಡುಗಳುಂ ತಾಱುವೆ ತಾಳ್ಗಳು
ಮೊಗುರ್ವಿಸಲ್ ಕಾಡಕೋಣನೆಯ್ದಿದುದಱಿಲಂ ‖ ೬೮

ಬಿಸಿಲೞರೆ ಬಿಱಿದ ಬಿದುವಿಂ
ನಸುದೋಱುವ ರಕ್ತಸಿಕ್ತಮುಕ್ತಾಫಲಮಂ ।

---

* ಕ ಗ.—ಮಿತ್ತೆಸೆದೊಂದಂಜಾನಿಸುತ್ತಿರ್ದುವು. ಮೊ. ಆ.—ನಿತ್ತೊ ಸೆದೊಂದಂಜಾನಿಸುತ್ತಿರ್ದುವು. † ಖ.—ಮಸಗಿದುವುಲೋಹಿತಾನ.
‡ ಕ ಖ. ಗ.—ಬಱುಗೆಱೆಯಾದುವು. ¶ ಕ. ಗ.—ಬಿಸಿಲ್ದೊಱೆ ಯಾದುದು.

ರಸದಾಳಿಂಬದ ಬಿಱು್ತಂ
ದೊಸೆದು ಕದುರ್ಕಂಕುವುದು ಶುಕಕುಳಂ ಮದಗಜದಾ ॥ ೨೯

ಎಸೆವೆಮ್ಮೆ ಮ್ಮಧಿನಾವುದೆ
ಪೆಸರ್ವೆತ್ತರ್ ದಿವಿಜಸತಿಯರೆನಲೆಮ್ಮೆಳ್ಪಂ ।
ನಸದಳಮೆಂದು ಬೆಡಂಗಂ
ಪಸರಿಸುವಂತಿರ್ದುವೆಲರ್ದ ಪೊನ್ನಾದವರೆಗಳ್ ॥ ೩೦

ಉಱು ಕಾವ ಸೂರ್ಯರಶ್ಮಿಗೆ
ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ ।
ತುಱುಗಿರ್ದಾವರೆಗೊಂಬಂ
ಮುಱಿದು ನೆೞಲ್ಮಾಡಿಕೊಂಡು ನಡೆವರ್ ಪಥಿಕರ್ ॥ ೩೧

ಎಳನೇಸರೇಱೆ ನಟನ
ಗ್ಗಳಗಣ್ಣುರಿಯಾಲಿ * ಯೆನಿಸಿ ನೆಲಸಿತ್ತು ದವಾ ।
ನಳಭೀಷ್ಮಂ ತಪ್ತಾಧ್ವಗ †
ಕುಲವೇಷ್ಮಂ ಪ್ರಬಲಪಾರ್ಥಿವೋಷ್ಮಂ ಗ್ರೀಷ್ಮಂ ॥ ೩೨

ಬಲೆಗಳ್ಪೋಲ್ಕಾಯ್ದು ವೆಂಟುಂದಿಗಿಭದಬಿದುಗಳ್ಕಾಯ್ದು ಕಬರ್ೊನ್ನ ಪೆರ್ಗಾ
ವಲಿವೋಲಾಯ್ತಾನೆಲಂಸಿಂಪಳೆಯು ‡ ನೆರೆದವೊಲ್ಕಾಯ್ದುಱುಯ್ವೆಂದು ವೇೞುಂ ।
ಕುಲಪಾರಾವಾರವಿಾಬೇಸಗೆಯು ಬಿಸಿಲೊಳಿನ್ನೆಂದಿದೇಕಾರ್ಣವಂ ಭೂ
ತಲವಕ್ಕುಂಪೇೞೆನಲ್ಪರ್ವಿದುದತಿಶಯದಗ್ಗಾನಿದಾಘಂ ¶ ನಿದಾಘಂ ॥ ೩೩

ಉರಿವರಿವ ಬಿಸಿಲ ಬೆಂಕಿಯು
ಭರದೆ ಮೞಲ್ದೀಂಟೆ ಕಾಯ್ದು ಸಿಡಿಯುತ್ತಿರೆ ಪಂ ॥

* ಖ — ವಿಟನಗ್ಗಳಗಣ್ಮುರಿಯಾಲಿ. † ಖ. — ತಪ್ತಾಧ್ವರ.
‡ ಕ. ಖ. ಗ. — ಸಂಪಣೆಯು, ಮೊ. ಅ. — ಸಿಂಪಿಣಿಯು.
¶ ಖ. ಅತಿಶಯದಾಜ್ಞಾನಿದಾಘಂ. ಮೊ. ಅ. ಅತಿಶಯದ್ಭಗ್ಗಾನಿದಾಘಂ.

ಕರುಹಭವಾಂಡದ ಹಂಚಿನ
ಹುರಿಗಡಲೆವೊಲೊಡೆದು ಪಾಱಿದುವು ಬೆಟ್ಟಂಗಳ್ ॥ ೨೪

ಅಳುರ್ವ ನಿದಾಘದಿಂ ತ್ರಿಭುವನಂ ನೆಱೆ ನಿರ್ಜಲಮಾದೊಡೀಕಮಂ
ತಲುಜಲಸೇವೆಯಿಂ ತೃಷೆಯನಾಱಿಪೆ ನೆಂದರವಿಂದಜಂ ಕಮಂ ।
ಡಲುವಿನೊಳಂದು ಬಯ್ತು ಪಿಡಿದಾಜಲವಿಂದುಪಕಾರಿಯಾಯ್ತಲೇ
ತಿಳಿದೆನಿದೊಂದನೆಂದೊಡೆ ನಿದಾಘದ ದಾಹಮನೇನನೆಂದಪೆಂ ॥ ೨೫

ಜಲನಿಧಿತಲ್ಪನುಂ ಜಲರುಹೋದರನುಂ ಜಲಜಾತನೇತ್ರನುಂ
ಜಲಧಿಸುತೇಶನುಂ ಜಲದವರ್ಣನುಮೆಂಬುದನೀನಿದಾಘಮಂ ।
ಕಳೆಯಲೆ ಪೆಣ್ಣಿ ಕೊಂಡನಸುರಾರಿವೊಲಾವನನಾಗತಜ್ಞನಂ
ದಿಳೆನುಡಿವಂತು ಪೆರ್ಬಿಸಿಲೊಳರ್ಬಿಸಿತುರ್ಬಿ ನಿದಾಘಮುರ್ಬಿಯೊಳ್ ॥

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮ ಗಿರಿಪುತ್ರಿಯಂ ಮುದದೊಳಪ್ಪಿ ಹಿಮಾಂಗದ ನಾಗಮಂಡನಾ ।
ಘಮನೊಸೆದಾಂತು ತಾಪಹರಮಪ್ಪುದನೀಶನುದರ್ಕದರ್ಶಿ * ಮು
ನ್ನಮೆ ಸಮಕಟ್ಟಿಕೊಂಡನೆನೆ ಬೇಸಗೆ ಬೇಸಱಿಸಿತ್ತು ಲೋಕಮಂ ॥ ೨೭

ರವಿ ತುಹಿನಾದ್ರಿಯತ್ತೆಳಸಿಯುಂ ಮೃಗಮೊಂದು ಹಿಮಾಂಶುಬಿಂಬಮ
ಧ್ಯವನೆಡೆಗೊಂಡುಮನ್ಯಗತಿಶೂನ್ಯನಿಭಾನನನಾತ್ಮಜಾರರಾಂ ।
ಬುವನೆ ನಿರಂತರಂ ತೆಗೆದು ಹಸ್ತದಿನೀಂಟಿಯುಮಂಗತಾಪಮಂ
ತವಿಕುಮೆ ರೌದ್ರಮೀಬಿಸಿಲೆನಲ್ ಬಿಸಿಲೞ್ಬಿದು † ದಧ್ವಗರ್ಕಳಂ ॥ ೨೮

ತರುಣಿಯರಲ್ಲಿಗಲ್ಲಿಗಱವಟ್ಟಿಗೆಯೊಳ್ ಕಡುಗೋಡುವೆತ್ತ ಕ
ಣ್ಗೆರಗಮನೆತ್ತಿ ನೀರೆಱೆಯೆ ಸಾಲ್ವುದೆನಲ್ ನೆರೆದಾದ ಮೀಂಟುತುಂ ।
ಬರೆ ಬಿಸಿಲೞ್ಕೆ ಕೊಳ್ವಸಕದಿಂ ಬಿಸಿನೀರ ತಡಂಗದಂದದಿಂ
ದಿರೆ ಬಸಿರತ್ತಬಾಯೊಣಗೆಪಾಂಥಜನಂನಡೆಯಿತ್ತು ಮಾರ್ಗದೊಳ್ ॥ ೨೯

---

* ಖ.— ತಾಪಹರಮಪ್ಪನಮೀಶನುದಗ್ರದರ್ಶಿ.

† ಖ.— ರೌದ್ರಮೀಬಿಸಿಲುಮುರ್ಬಿಸಿಪರ್ಬಿದು.

ಬಿಸುಪಂ ಪೆಚ್ಚದ ಮುತ್ತಿ ಮುತ್ತಿ ಸರಸಶ್ರೀಖಂಡದಣ್ಪೆಯ್ದೆ ಖಂ
ಡಿಸೆ ಘರ್ಮಾಂಬುವನಾಂತ ಮಲ್ಲಿಗೆ ಕರಂ ತಮ್ಮಲ್ಲಿಗೊಳ್ಗೊಂಪನೆ ।
ಯ್ದಿಸೆ ಸಾರೋದಯಮಾಗೆ ಸಾರಘನಸಾರಂ ತಂಬುಲಂ ಚಪ್ಪರಂ
ಬಿಸಿಲಂ ಚಪ್ಪರಿಸಲ್ಕೆ ಭೋಗಿಜನಮಿರ್ಕುಂ ಭೋಗದಾಣಂಗಳೊಳ್ ॥ ೮೦

ಲತಿಕಾಮೂಲಪ್ರಸೂನಂ ಕನಕಕಲಶಮುಕ್ತಾಕ್ಷತಂ ದರ್ಪಣಾಗ್ರ
ದ್ಯುತಿಪುಂಜಂ ಮುಗ್ಧ ಚಂದ್ರಾಮೃತಕಳಿಕೆಯೆನಲ್ * ಕಾಂತಕಕ್ಷೋದ್ಯ ನೋರೋ ।
ಜತಟೀ ಚಂಚತ್ಕಪೋಲ ಸ್ಫುರಿತನಿಟಲ ಘರ್ಮಾಂಬು ಚೆಲ್ವಾಗೆ ಸೋಂಕಿಂ
ಸತಿಯರ್ ಕರ್ಪೂರಸಾಳೀಕೃತಸತಿಯರೆನಲ್ ನಲ್ಲರೊಳ್ ತಣ್ಪು ದಂದರ್ † ॥ ೮೧

ಅಸದಳದಿಂಪು ಕಂಪು ಕಡೆಯಾಣಿಯ ಪೊನ್ನ ಸರಕ್ಕೆ ಕೂಡಿದಂ
ತೆಸೆವುದಿದರ್ಕದೇನುರುವದೊರ್ಮೆಡಿಗಿರ್ಮಡಿ ಬಂದೊಡಂ ಸುಧಾ
ರಸಮೆನೆ ತೀವಿದೊಳ್ರಸವ ಮಾವಿನ ಪಣ್ಗಳನಿರ್ತಳಂಗಳಿಂ
ಪೊಸೆದೆರ್ದೆಯಾಱೆ ಪೀರ್ದಮರ್ದುವೀರ್ದವರಂ ನಗುಗುಂ ಜಗಜ್ಜನಂ ॥

ವ॥ ಅಂತು ನಿದಾಘಸಮಯಂ ಭೋಗಿಜನಮನೋಹರಮಾಗಿ ವರ್ತಿಸುತ್ತಿರ್ದುದು ಅತ್ತಲೊಂದು ಶೋಣಿತನಾಮನಗರದೊಳ್,

ಬಲಿದೈತ್ಯೇಂದ್ರ ತನೂಜನೆಂಬೆಸಕದಿಂ ಭೂಭಾರಧೌರೇಯನೆಂ
ಬಳವಿಂ ಭೂರಿಭುಜಾಸಹಸ್ರಯುತನೆಂಬಾಟೋಪದಿಂ ನಿರ್ಜಿತಾ ।
ಖಿಳದಿಕ್ಪಾಲಕನೆಂಬ ಶೌರ್ಯದಿನವಂ ಗೌರೀಶರಕ್ಷಾನಿರ
ರ್ಗಳನೆಂಬುನ್ನತಿಯಿಂದಜೇಯನೆನಿಸಿರ್ಪಂ ಬಾಣದೈತ್ಯಾಧಿಪಂ ॥ ೮೩

ವಾರ್ಧಿಕ್ರೀಡಾವಗಾಢಂ ಹರಿ ಬಡಗೊರವಂ ನಂಟನೀಯಾಮಿನೀನಾ
ಥಾರ್ಧಪ್ರೋತ್ತಂಸನೆಂಬೊಂ ಮುದುಪನಜನಿವಂ ಚಿಃ ಕೃಪಾಪಾತ್ರನಿಲ್ಲಿಂ।

* ಕ. ಗ.__ ಚಂದ್ರಾತಪಕಳಿಕೆಯೆನಲ್. † ಖ.__ ತಣ್ಪವೆತ್ತರ್.

ಸ್ಪರ್ಧೌರೇಯರ್ಕಳಿಂದ್ರಾದಿಗಳದೊರೆಯೆತಾನೆಂದುಬಾಣಂಕರಂತಾಂ*
ನಿರ್ಧೂತಾರಾತಿದೋರ್ಗರ್ವದಮದದೊದವಿಂ ನಿಚ್ಚಲುಂ ಪೆರ್ಚಿ ನಿಲ್ವಂ॥

ವಾಸವನಾದಿಯಾಗೆರಡುತೋಳವರುಂ ಮೊದಲಾಗಿ ಕಾದುವರ್
ಸಾಸಿರತೋಳ್ಗಳುಳ್ಳನಗೆ ಕಾಳಗಮಿಲ್ಲಿನಿತೊಂದು ತೋಳ್ಗಳಂ ।
ದೇಸೆಗೆ ಪೊತ್ತೆನಲ್ಲದಿಱಿಪಂತಿರೆ ಪೊತ್ತನೆ ಪೇೞುವೆಂದು ಬಾ
ಣಾಸುರನಿಂತು ತನ್ನೊಡನೆ ಕಾದುವರಿಲ್ಲದುದರ್ಕೆ ಚಿಂತಿಪಂ ॥ ೮೬

ವ॥ ಮತ್ತಮಾ ವೀರೋತ್ತಮನಾಹವದೋಹಳಂ ಹೃದಯಪರಿ
ತಾಪಮಂ ನೆಗೞ್ಚೆ ತನ್ನೊಳಿಂತೆಂದಂ:—

ಧುರದೊಳ್ವಜ್ರಮುಮುರ್ಕದನ್ನೊಡಲನುರ್ಕಾಲ್ತಿಕ್ಕುಮೋಘಾಸ್ತ್ರಮು
ಳ್ಳರಿವೀರರ್ ದೊರೆಕೊಳ್ಗುಮೇತರದಿನಸ್ತ್ರಾನೀಕವಿಂದುಳ್ಕುಡಂ ।
ಬರಿದೆನ್ನಂಗದೊಳಾದ † ಪುಣ್ಗಳ್ ಗುಹಾದ್ವಾರಂಗಳೊಳ್ ಪೊಕ್ಕು ಪು
ಲ್ಕುರುಳ್ತಂನುಸುಳ್ದುರ್ಚಿಪೋಪಿನಗ ‡ ಮೆಂದಾಟೋಪದಿಂಕಾದುವಂ॥
ಕದನವೊಡರ್ಚದೇಱ ಸವಿಗಾಣದ ಬಲ್ಪೆನಗೇವುದಸ್ತ್ರಸಾ
ತದೆ ಕಡಿವೆತ್ತ ಬಾಹುವನಮಂ ರಿಪುವೆಚ್ಚಿಱಿದಿಟ್ಟಕೈದುವೆ ।
ನ್ನುದರದೊಳಯ್ದೆ ತಳ್ತಿಡಿದಿರಲ್ ¶ ಯಮರಾಜನ ಶಸ್ತ್ರಕೋಟಿ ತೀ
ವಿದ ನಡೆಮಂದಸೆಂಬಿನೆಗಮಿರ್ಪನದೆಂದೊ ಮಹಾಜಿರಂಗದೊಳ್ ॥೮೭

ಬಳವದರಾತಿಹೇತಿಪರಿಖಂಡಿತದೋಃಪರಿಖಂಡಮೆಂಬ § ಜೇ
ಕೊರ್ಳವಿಗಳಿಂದಮುಚ್ಚಳಿಪ ನೆತ್ತಱ ಕುಂಕುಮವಾರಿಯಂ ದಿಶಾ॥
ಲಳನೆಯುರತ್ತ + ಸಿಂಪಿಸುತೆ ಸಿಂಪಿಣಿಯಾಡೆ ರಣೋರ್ವಿಯೆಂಬ ಪೂ
ಗೊಳನನದೆಂದೊ ವೀರರಸಪೂರದೆ ನಾಂ ಕಡೆಗೋಡಿಪೋಗಿಪೆಂ ‖ ॥೮೮

---

* ಖ.—ವ॥ ಯದುಪನಜನವಧ್ಯಂಕೃಪಾಪಾತ್ರನಿಲ್ಲಿಂ ‖ ಸ್ಪರ್ಧಾಧೌರೇಯರಿಂ
ದ್ರಾದಿಗಳೆನಗೆ ತೃಣಪ್ರಾಯರೆಂದಿಂತು ಬಾಣಂ. † ಕ. ಗ.—ತರದಿನಸ್ತ್ರಾ
ನೀಕದಿಂದಂಧುರಂಪಿರಿದೆನ್ನಂಗದೊಳಾದ. ‡ ಕ. ಗ.— ಪೋಪೆನಗ.

¶ ಕ. ಗ.—ತಳ್ತಿಱಿದಿರಲ್.

§ ಕ. ಗ.—ಪರಿಖಂಡಿತ ಖಂಡಸಹಸ್ರಮೆಂಬ.

+ ಕ. ಗ.—ಲಲನೆಯುರೊತ್ತಿ. ‖ ಕ. ಗ.—ಕಡೆಗೋಡಿಯಾದಪೆಂ.

ವ॥ ಎಂದು ಬಾಣಾಸುರಂ ಸಂಗ್ರಾಮಕಾಮನಾಗಿ ತನ್ನ ಪವನದೊಳ್ ಸನ್ನಿಹಿತನಾಗಿರ್ಪ ದರ್ಪಕವಿರೋಧಿಯನಾರಾಧಿಸಿ ನಿಜಮಯೂರಧ್ವಜಪತನೋತ್ಪಾತವಾದಂದು ಮಹಾಹವಮಪ್ಪುದೆಂದು ವರಂಬಡೆದು ಬಂದೊಂದು ಸಮಯ ಮೊಡ್ಡೋಲಗಂಗೊಟ್ಟಿರ್ದಲ್ಲಿ ಕುಂಭಾಂಡನೆಂಬ ಮಹಾಮಾತ್ಯಂ ದೈತ್ಯಪತಿಯ ಮೊಗಮಂ ನೋಡಿ,

ಮೃಡನೊಸೆದೀಯೆ ನೀಂ ಪಡೆದ ವಸ್ತುವದಾವುದೊ * ದೈತ್ಯರಾಜ ನೀಂ
ಗಡಮಮರತ್ವಮಂ ಪಡೆದ ವಿಶ್ವಜಗತ್ತ್ರಿತಯಾಧಿಪತ್ಯಮಂ ।
ಪಡೆದ ಮಹಾಸ್ತ್ರಮಂ ಪಡೆದ ತಂದೆಗೆ ಬಂಧನಮೋಕ್ಷಮಪ್ಪುದಂ
ಪಡೆದ ದಿಟಕ್ಕೆ † ಪೇಟೆನೆ ದರಸ್ಮಿತನಾಗಿ ಬಲೀಂದ್ರನಂದನಂ ॥ ೮೯

ಎನಗಮರತ್ವಮುಂ ತ್ರಿಭುವನಾಧಿಪತಿತ್ವಮುಮುತ್ತಮಾಸ್ತ್ರಮುಂ
ಜನಕನ ಬಂಧಮೋಕ್ಷಣಮುಮೇಗಹನಂ ರಣಮೆಂಬ ವಸ್ತುವೊಂ ।
ದನೆ ಪಡೆಯಲ್ ಮನಂಬಯಸಿ ಪೂಜಿಸಿದೆಂ ಧೃತಕಾಲಕೂಟನಂ
ಮನಸಿಜಘಸ್ಮರಾಂಬಕಲಲಾಟನನುಗ್ರಫಣೀಂದ್ರಜೂಟನಂ ॥ ೯೦

ವರವಿತ್ತಂ ಶಂಭು ದೇವಾಸುರಸಮರದ ರಾಮಾಯಣೋಗ್ರಾಹವಾಡಂ
ಬರದಂತಪ್ಪೊಂದು ಸಂಗ್ರಾಮಮನೆನಗೆನುತುಂ ಪೆರ್ಚಿದುತ್ಸಾಹದಿಂದಂ ।
ಶಿರದಿಂ ಮುಯ್ವುದ್ದಮಾಗುತ್ತಿರೆ ಪುಳಕಚಯಂ ಪೊಣ್ಮೆವಕ್ತ್ರಾಬ್ಜದಿಂವೀ
ರರಸಂ ತುಳ್ಕಾಡೆ ಬೇಱೊಂದೆಸಕದಿನೆಸೆದಂ ಬಾಣದೈತ್ಯಾಧಿನಾಥಂ ॥ ೯೧

ವ॥ ಆದೈತ್ಯವಂಶಭೂಷಣಂಗುಷಾದೇವಿಯೆಂಬ ಕನ್ಯಾರತ್ನಮುಂಟದೆಂತೆಂದೊಡೆ,

ಕುರುಳೊಳ್ ಕರ್ಪು ಕಟಾಕ್ಷದೊಳ್ ತರಳಭಾವಂ ಪುರ್ಬಿನೊಳ್ ವಿಭ್ರಮಂ
ಕೊರಲೊಳ್ ರೇಖೆ ಕಪೋಲದೊಳ್ ಪೊಳಪು ತೋಳೊಳ್ ಕೋಮಲತ್ವಂ
ಪಯೋ ।

* ಖ.—ವಸ್ತುವದೇವುದೊ. † ಖ.—ಪಡೆಯದಿದೇಕೆ.

ಧರದೊಳ್ ತುಂಗತೆಮಧ್ಯದೊಳ್ ಕೃಶತೆಮೆಯ್ಯೊಳ್ ಮಾರ್ದವಂ ರಂಜಿಸು
ತ್ತಿರೆ ಬಾಣಾತ್ಮಜೆಯೊಪ್ಪಿದಳ್ ಮದನತೇಜೋಮೂರ್ತಿಯೆಂಬಂದದಿಂ *॥

ಮದನನ ಕೈದು ಕೂರ್ಪನೊಳಕೊಂಡುದೊ ಕಾಮನ ಕಲ್ಪವಲ್ಲಿ ಪೂ
ತುದೊ ಕುಸುಮಾಸ್ತ್ರರಾಜನ ಜಯಧ್ವಜಪಟ್ಟಿಕೆ ಚಿತ್ರಿಸಿತ್ತೊ ಹೃ।
ತ್ಸದನನ ಪುಷ್ಪಚಾಪಲತೆ ಪೂಗಣೆವೊಯ್ದುದೊ † ಕಂತುದಂತಿ ಪ
ಣ್ಣಿದುದೊ ದಿಟಕ್ಕನಲ್ ಬಲಿಸುತಾತ್ಮಜೆ ಯೌವನದಿಂದ ಮೊಪ್ಪಿದಳ್॥ ೯೩

ವ॥ ಅನ್ನೆಗಮಾಶೋಣಿತಪುರೋಪಾಂತದ ಗೋಮತೀನದಿಯ ಪರಿಸರಪ್ರದೇಶದೊಳ್,

ಕಳಹಂಸೌಘವಿಹಾರಹಾರಿ ಪುಳಿನಂ ಕಂಜಾತಕಿಂಜಲ್ಕಪಾ
ಟಳನೀರಂ ಕೊಳನುನ್ಮದಾಳಿಮಿಳಿತಂ ಪುಷ್ಪದ್ರುಮಂ ರತ್ನಮಾಂ।
ಸಳಕೂಟಂ ಕೃತಕಾದ್ರಿ ದಂಪತಿಯುತಂ ವಲ್ಲೀಗೃಹಂ ಪುಷ್ಪಪೇ
ಶಳಗಂಧಂ ಪವನಂ ಮನಂಗೊಳಿಸಲಿರ್ಕುಂ ‡ ಶೂಲಿಲೀಲಾವನಂ ॥ ೯೪

ಸುರಚೂಡಾರತ್ನ ಬಾಲಾತಪದೊಡನಮರೀನೇತ್ರಚಂದ್ರಾತಪಂ ತ
ಳ್ತಿರೆ ಚಂಚಚ್ಚಾಮರೌಘಾನಿಲದೊಡನೆ ಸಹಾಧ್ಯಾಯಿಮಂದಾನಿಲಂ ಕೂ
ಡಿರೆ ಸಂಗೀತಪ್ರಕೋಲಾಹಲದೊಡನೆ ಮರುದ್ವಂದಿಕೋಲಾಹಲಂ ಪೆ
ರ್ಚಿರೆ ಚೆಲ್ವಾದತ್ತುಮಾವಲ್ಲಭನ ವನಮಹೀಮಧ್ಯದಾಸ್ಥಾನರಂಗಂ ॥ ೯೫

ವಿಳಸದ್ದೇವವಧೂನಿಕಾಯರಸವದ್ಗೇಯಂ ಮರುದ್ವಾದ್ಯಮುಂ
ಜುಳನಾದಂ ಸುರಲಾಸಿಕಾಲಲಿತಲಾಸ್ಯಪ್ರಸ್ಖಲನ್ಮೇಖಲಾ ¶ ।
ಕಳಮಂಜೀರಕಶಿಂಜಿತಂ ನೆಗಳ್ವಿನಂ ಗೌರೀಶಲೀಲಾಸಭಾ
ವಳಯಂಭೋರ್ಗರೆಯುತ್ತುಮಿರ್ದುದುನದತ್ಪೀಯೂಷವಾರಾಶಿವೋಲ್॥

ವ॥ ತದನಂತರಂ,

* ಕ ಗ.—ಬಾಣಾತ್ಮಜೆರಂಜಿಪಳ್ ಮದನತೇಜಂಮೂರ್ತಿಗೊಂಡಂದದಿಂ.
† ಖ.—ಪೂಗಣೆವಾಯ್ದುದೊ. ‡ ಕ.ಗ.—ಮನಂಗೊಳಿಸುತಿರ್ಕುಂ
¶ ಲಾಸ್ಯಪ್ರೇಂಖಲಾಮೇಖಲಾ.

ಗಿರಿಜೆಯ ವೇಷಮಂ ತಳೆದುಮೇಶನ ಮುಂತಿರೆ ಚಿತ್ರಲೇಖೆ ತ
ತ್ಪುರಹರನಾಕೆಯಂ ಗಿರಿಜೆಯೆಂದು ಮನೋಮುದದಿಂ ನಿರೀಕ್ಷಿಸು ।
ತ್ತಿರಲದನಟ್ಟಱಿಂ ಗಿರಿಜೆ ಕಂಡು ನಿಜೇಶನ ಮುಗ್ಧಭಾವವ
ಲ್ಲರಿಗೆ ನಿಜಾಪಹಾಸರುಚಿಯಿಂ ಪಡೆದಳ್ ಕುಸುಮಪ್ರತಾನಮಂ * ॥ ೯೭

ವ॥ ಅದಂ ಕಂಡು ಖಂಡೇಂದು ಚೂಡಾಮಣಿಯ ಪಾರ್ಶ್ವ ದೊಳಿರ್ದ ಪಾರ್ಶ್ವವರ್ತಿಗಳೆೞ್ದು,

ಗಿರಿಸುತೆ ಚುನ್ನವಾಡಿ ನಗುತಿರ್ದಪಳೀಶನ ಮುಗ್ಧವೃತ್ತಿಗೀ
ಗಿರಿಜೆಗೆ ಮುಗ್ಧಭಾವಮನೊಡರ್ಚುವವೊಂದಿರದೀಶಚಿಹ್ನಮಂ ।
ಧರಿಯಿಸಿ ನಿಂದರಂ ಪ್ರಮಥರೆಂದಱಿದದ್ರಿಜೆ ಸಸ್ಮಿತಾಸ್ಯೆಯಾ
ಗಿರಲೆಲೆ ದೇವಿ ಗೆಲ್ದಳೆನುತಂ ನಲಿದಾಡಿದುದಪ್ಸರೋಗಣಂ ॥ ೯೮

ವ॥ ಅಂತುಮಲ್ಲದೆಯುಂ,

ಬನದೊಳ್ ಮೆಱೆಯುತ್ತಿರ್ದಂ
ಬಿನದಮನೋರಂತನೇಕವಿಧದಿಂದಗನಂ ।
ದನೆಗಭವಂ ನಿತ್ಯಾನಂ
ದನನಾನಂದಸ್ವರೂಪನಾನಂದಮಯಂ ॥ ೯೯

ವ॥ ಆಸಮಯದೊಳ್ ಕತಿಪಯಸಖೀಜನಸಮನ್ವಿತೆಯಾಗಿ,

ಕನ್ನೆಯಿನೀವನಕ್ಕೆ ಮಧುಲಕ್ಷ್ಮಿಯಿನಾಗದ † ಲಕ್ಷ್ಮಿಯಾದುದೆಂ
ಬನ್ನವರಂ ವಿಳಾಸರಸದಿಂ ಪರಿವರ್ಧಿಸುತಂ ವನಾಳಿಯಂ ।
ತನ್ನ ವನಾಂತರಾಂತರದ ಕತ್ತಲೆಯಂ ಬೆದಱುಟ್ಟುತಂ ವಿಲೋ
ಲನ್ನಯನಾಂಶುವಿಂ ದನುಜನಂದನೆ ಬಂದಳದೊಂದುಲೀಲೆಯಿಂ ॥ ೧೦೦

ವ॥ ಅಂತಾ ಪ್ರದೇಶದೊಳ್,

---

* ಕ.ಗ.__ನಿಜೋಪಹಾಸರುಚಿಯಿಂಪಡೆದಳ್-ಕುಸುಮಾಸ್ತ್ರತಾನಮಂ,
† ಕ ಗ.—ಮಧುಲಕ್ಷ್ಮಿಯಿನಗ್ಗದ.

ರಾಗದಿನಾಡುವೀಹರನ ರಾಗದ ಪೊಂಪುಱು ವಸ್ತ್ರದೊಂದು ರೂ
ಪಾಗಿಯೆ ನಿಂದುದೆಂಬರುಣವಸ್ತ್ರದಿನುಜ್ಜ್ವಲದೇಹವೆಂದು ಚೆ ।
ಲ್ವಾಗಿರೆ ಸಾಂಧ್ಯಮೇಘಪಟಳೀಪರಿವೇಷ್ಟಿತರಾಜತಾಚಳಾ
ಭೋಗಮೆನಲ್ ವಿರಾಜಿಸುವ ಶಂಕರನಂ ಹರಿಣಾಕ್ಷಿ ನೋಡಿದಳ್ ॥ ೧೦೧

ವ॥ ಮತ್ತಮಲ್ಲಿ,

ಶಿತಿಕಂಠರಂ ತನಗೆಟ್ಟಱಿಂ ಮೆಱೆವ ನಾನಾಕ್ರೀಡೆಯಂ ಕೂಡೆ ನೋ
ಡುತುಮಾನಂದರಸಾಮೃತಾರ್ಣವದೊಳೋಲಾಡುತ್ತುಮಿರ್ದಾಕುಭೃ ।
ತ್ಸುತೆಯಂ ಭಕ್ತಜನೈಕಕಲ್ಪಲತೆಯಂ ವೃಂದಾರಕವ್ರಾತವಂ
ದಿತೆಯಂ ಕಂಡಸುರೇಂದ್ರಕನ್ಯೆ ಕೆಲದೊಳ್ ಕುಳ್ಳಿರ್ದಳುತ್ಸಾಹದಿಂ ॥೧೦೨

ವ॥ ಅಂತು ಮಾಕಾಂತೆಯಂತಿಕದೊಳ್ ಕುಳ್ಳಿರ್ದ್ದು,

ಇಂತು ನಿಜಪ್ರಿಯಂ ಮೆಱೆವ ಲೀಲೆಯನೀಕ್ಷಿಸುವೊಂದು ಸೈಪನೆಂ
ದಾಂ ತಳೆದಪ್ಪೆನೆಂದುಷೆ ಮಹೇಶ್ವರಲೀಲೆಯನೀಕ್ಷಿಪದ್ರಿಜಾ ।
ಕಾಂತೆಯನೊಲ್ದು ನೋಡುವುದುಮಾಕೆಯ ನೋಡುವ ಪಾಂಗನೊಂದು ಪಾಂ
ಗಿಂ ತಿಳಿದಳ್ ತದದ್ರಿಸುತೆ ಕಾಂತೆ ವರಾರ್ಥಿನಿಯಾದಳೆಂಬುದಂ ॥ ೧೦೩

ವ॥ ಅಂತು ಚಿತ್ತಜ್ಞೆ ಕುಭೃತ್ತನೂಜೆ ನಿರ್ನಿಮಿತ್ತಪ್ರಸಾದಾಭಿಮುಖಿಯಾಗಿ,

ಅದಟಿಂದಾಕಾರದಿಂ ವೈಭವದಿನೆಣೆ ಸಮಂ ಸಾಟಿಯಲ್ಲೆತ್ರಿಣೇತ್ರಂ
ಮದನಂ ದೇವೇಂದ್ರನೆಂಬಂತೆಸೆವಖಿಲಗುಣಾಲಂಕೃತಂ ಬಂದು ವೈಶಾ ।
ಖದ ಶುದ್ಧದ್ವಾದಶೀರಾತ್ರಿಯೊಳನುಭವಿಕುಂ ಕನ್ನೆ ನಿನ್ನೊಳ್ ಮನೋರಾ
ಗದಿ ನೊರ್ವಂಸ್ವಪ್ನದೊಳ್‌ತತ್ಸುಭಗನೆ ನಿನಗಕ್ಕುಂ * ವರಂ ಪೋಗ ಮೋಘಂ ॥ ೧೦೪

*ಕ. ಗ.— ರಾಗದೆ ನೋಡಲ್ ಸ್ವಪ್ನದಿಂತತ್ಸುಭಗನವನೆನಿಕ್ಕುಂ.

ವ॥ ಎಂದು ವರಂಗೊಟ್ಟು ಕಳುಪೆ,

ಭುವನಾಂಬಿಕೆ ಕೊಟ್ಟೀವರ
ಮವಿತಥವೆಂಬೊಂದು ಚಿತ್ರಲೇಖೆಯ ನಿನದಂ ।
ಕಿವಿಗೆಯ್ದೆ ಮೇಘಲೇಖೆಯ
ರವಮಂ ಕೇಳ್ದೊಂದು ಸೋಗೆಯಂತುಱೆ ನಲಿದಳ್ ॥ ೧೦೪

ವ॥ ಅಂತು ಸಂತೋಷದಿಂದುಱೆ ಪೊೞಲ್ಗೆ ವೆಂದು ತಂದೆಯ ರಾಜಮಂದಿರದೊಳಗಣ ತನ್ನ ಕನ್ನೆವಾಡದೋವರಿಯೊಳೊಂದುದೆವಸಂ ಬೆಳ್ವಸದನಂಗೊಂಡು ಸುಖಸುಪ್ತೆಯಾಗಿರೆ,

ಲಳಿತಾಕಾರಂ ವಿಲಾಸಂ ವಿಭವವೆಸೆಯೆ ದಿಕ್ಚಕ್ರಮಂ ತೇಜದಿಂದಂ
ಬೆಳಗುತ್ತುಂ ಬಂದು ಬಾಣಾಸುರನರಮನೆಯಂ ಪೊಕ್ಕು ಹರ್ಮ್ಯಸ್ಥೆಯಾಗಿ ।
ರ್ದಳ ರೂಪಂ ಕಂಡು ಕನ್ಯಾವ್ರತವಳಿದಪುದೆಂದೊಲ್ಲದಂತೊಲ್ಮೆಯಂತೋ
ರ್ಪಳೊಳಗಳ್ ಕೂಡಿದಂ ಸ್ವಪ್ನದೊಳಸೆದನಿರುದ್ಧಂ ಮನೋರಾಗರುದ್ಧಂ ॥ ೧೦೫

ವ॥ ತದನಂತರಂ,

ಚಪಲಾಪಾಂಗೆ ಕುಮಾರಕಂ ನೆರೆದು ತನ್ನೊಳ್ ಪೋಗೆ ಮಾಣೆತ್ತವೋ
ದಪೆ ಮದ್ವಲ್ಲಭಪತ್ತವೋದಪೆಯೆನುತ್ತೆೞ್ಚರ್ತುದೇನಾರನೆಂ ।
ದಪೆಯೆಂದಾಳಿಯರಾಳಿಗೊಂಡು ನಗಲೇವಂ ಕೆಟ್ಟುದೀಕನ್ಯಕಾ
ತಪವೆಂದಾಕನಸೆಂದೊಡಂ ನೆನಸೆನುತ್ತಾಂತಳ್ ಮಹಾಚಿಂತೆಯಂ ॥ ೧೦೬

ವ॥ ಆಸಮಯದೊಳ್,

ಇವಳೀರೂಪಿವಳೀವಿಲಾಸಮಿವಳೀಚೆಲ್ವೆಂದಿನಂತಲ್ಲವಿಂ
ದಿವಳಂದಂ ಪೊಸತಾದುದೀತರುಣಿಯೊಳ್ ರೋಮೋದ್ಗಮಂ ಸ್ವೇದಬಿಂ ।

ದುವಪಾಂಗಾರುಣಿಮಂ ಘನೋರುಚಲನಂ ಪೇಟೇತರಚ್ಛಿಂದಾಯ್ತು ಚಿ
ತ್ರವೆನುತ್ತುಂ ಸಖಿಯರ್ ನಿರೀಕ್ಷಿಸಿದರಾಸಂಭೋಗಚಿಹ್ನಾಂಗಿಯಂ ॥

ವ॥ ಅಂತು ನೋಡುವ ಮೇಳದಾಳಿಯರ ಮೊಗಮಂ ನೋಡಿ,

ಎನ್ನಭಿಮಾನವೆನ್ನ ಜಸವೆನ್ನ ಕುಲೋನ್ನತಿ ಕೆಟ್ಟುದೆನ್ನೊಳೂ
ವರ್ನ್ನರೆದೀಗ ಪೋದನಿದು ಲೋಕವಿರುದ್ಧಮೆನುತ್ತೆ ಕಣ್ಣ ನೀ।
ರನ್ನಳಿನಾಕ್ಷಿ ಸೂಸೆ ಕನಸಿಂ ನೆರೆದಿಂತಿದು ದೋಷಮಲ್ತು ನೀಂ
ಕನ್ನೆ ಸಖೀಷ್ವೆಯಾಗಿರದಿರೆಂದುಷೆಯಂ ನುಡಿದರ್ ವಿದಗ್ಧೆಯರ್॥ ೧೦೯

ವ॥ ಆಗಳಾಕುಂಭಾಂಡನ ಮಗಳಪ್ಪ ಚಿತ್ರಲೇಖೆಯೆಂಬ ಕೆಳದಿ,

ನೆನೆ ನೀಂ ಚಿತ್ತದೊಳಾಂ ಜಲಕ್ಕನೆಱದೆಂ ಸರ್ವರ್ತುಕೋದ್ಯಾನದೊಳ್
ನಿನಗೇನೆಂದುಮೆಯೆಂದಳೆಂದ ತೆಱದಿಂದಾಮಾಸವಾಜೊನ್ನ ವಾ।
ದಿನವಾರಾತ್ರಿಯುಮಾದುದಂತೆ ಕನಸಿಂ ನೀನೊರ್ವನೊಳ್ ಕೂಡಿತಂ *
ವನಜಾತಾನನೆ ಕಂಡೆ ತಪ್ಪುಗುಮೆ ಗೌರೀವಾಕ್ಯಮೀಲೋಕದೊಳ್॥೧೧೦

ಎನೆ ತತ್ಪ್ರಪಂಚಮಂ ಮಾ
ನಿನಿ ಮನದೊಳ್ ತಿಳಿದು ನೋಡಿ ಬಳಿಕಂ ನೆನೆದಳ್।
ಕನಸಿಂ ನೆರೆದಾತನ ಯೌ
ವನರೂಪವಿಳಾಸವಿಭ್ರಮಂಗಳನೊಲವಿಂ ॥ ೧೧೧

ವ॥ ಅಂತು ನೆನೆನೆನೆದಂಗಜದಹನಪರಿತಾಪದುಜ್ಜಗಂ ಲಜ್ಜಾರಸಮನಪ್ಪಕ್ಕಡಿಸೆ ಕನ್ನೆ ತನ್ನೊಳಾತನಂ ತಂದು ನೆರೆಪುವುದೆಂದು ಚಿತ್ರಲೇಖೆಗೆ ನುಡಿಯಲಾಕೆಯುಂ ದರಹಸಿತವದನೆಯಾಗಿ,

ಕನಸಿಂ ನೆರೆದವನಂ ನೀಂ
ನೆನಸಿಂ ನೆರೆದಪ್ಪೆನೆಂದು ತರವೇಳ್ದಪೆ ಕಾಂ।

---

* ಖ.__ಕೂಡಿದಂ

ತನೆನಘಟಿತಮಿದು ಬಗೆವೊಡೆ
ಕನಸಿನ ಬತ್ತಕ್ಕೆ ಗೋಣಿಯಾಂತವರೊಳರೇ ‖ ೧೧೧

ಆರ ಮಗನಾರ ಮೊಮ್ಮನ
ದಾರೊಡವುಟ್ಟಿದನದಾರ ಗೋತ್ರದವಂ ಪೇ ‖
ಊರೊಳಗೆಂದಱಿಯದೆ ರತ
ಚೋರನನಾನೆಂತು ತಂದು ನೆರೆಪುವೆನಬಳೇ ‖ ೧೧೨

ವ‖ ಎಂಬುದುಮೆಳಂಬಮಾದ ವೇದನೆಯಿಂದವಸ್ಥಾಂತರಮ ನೆಯ್ದುವ ರಮಣಿಯಂ ಕಂಡು ಕರುಣಾರಸಾರ್ದ್ರಹೃದಯೆಯಾಗಿ,

ನರರಂ ಕಿನ್ನರರಂ ದನುಪ್ರಭವರಂ ದೈತೇಯರಂ ಯಕ್ಷರಂ
ಸುರರಂ ಕಿಂಪುರುಷರ್ಕಳಂ ಗರುಡರಂ ಗಂಧರ್ವರಂ ಸಿದ್ಧರಂ ।
ಬರೆದಾಂ ಸಪ್ತದಿನಕ್ಕೆ ಚಿತ್ರಪಟಮಂ ತಂದಪ್ಪೆನಂತಲ್ಲಿ ನೀಂ
ತರುಣೀ ನೋಡಿ ಬಟಿಕ್ಕೆ ಪೇೞ ನಿಜದೊಳ್ * ನಿನ್ನೋಪನಾರೆಂಬುದಂ‖

ವ‖ ಎಂದುಷಾದೇವಿಯ ಮನಮನಾಱಿಸಿ ಪೋಗಿ ಚಿತ್ರಲೇಖೆ ಚಿತ್ರ ಪಟಮಂ ಚಿತ್ರಲೇಖಮನಮರ್ಚಿ ತೀರ್ಚಿ

ಸೊಗಯಿಸುತಿರ್ಪ ಚಂದ್ರಿಕೆ ಚಕೋರಿಗೆ ವಾಸರಲಕ್ಷ್ಮಿ ಚಕ್ರವಾ
ಕಿಗೆ ಘನಲೇಖೆ ಚಾದಗೆಗೆ ಬರ್ಪವೊಲೊಪ್ಪಿರೆ ಚಿತ್ರಲೇಖೆ ಕ ।
ನ್ಯೆಗೆ ನಲವೇಱೆ ನಿರ್ವಹಣಲೇಖೆಯಲಕ್ತಕದಣ್ಕೆ ಪತ್ತಿ ಕೈ
ಯುಗುರ್ಗೆಸೆಯಲ್ ಸಚಿತ್ರಪಟಧಾರಿಣಿ ಬಂದಳತಿಪ್ರಮೋದದಿಂ ‖ ೧೧೪

* ವಸುಧೆಗೆ ಕೌತುಕರಸಮಂ
ಪಸರಿಸುತುಂ ಚಿತ್ರಲೇಖೆ ಚಿತ್ರದ ಪಟಮಂ ‖

* ಕ. ಗ.—ಪೇೞಿನಿಬರೊಳ್.

*ಕ,ಗ.—ವ‖ ಅಂತು ಬಂದು ನಿಜಾನುಚರಿಯ ಕೈಯೊಳಿರ್ದ ಚಿತ್ರಪಟಮಂ ಕಳೆಗುಕೊಂಡು. ಎಂಬ ವಚನವು ಹೆಚ್ಚಾಗಿದೆ.

ಪಸರಿಸಿದಳೊಡನೆ ಗಡಣಿಸಿ
ಪಸರಿಸುತಿರೆ ಬಾಣಸುತೆಯು ಕಣ್ಣುಂ ಮನಮುಂ ॥ ೧೧೬

ವ॥ ಆಗಳ್,

ಇನಿಸಂ ಪೋಲೆ ಸಮಸ್ತ ಜಾತಿಗಳ ರೂಪಂ ಚಿತ್ರಿಸಲ್ ವಿಶ್ವಕ
ರ್ಮನ ಮೊಂಡವ್ಯನ ಚೀರಘಟ್ಟಿಯುಳವೆಲ್ಲೆಂದಟ್ಟಿಱಿಂ ಚಿನ್ನಪೂ।
ವಿನ ಚೆಂಬೊನ್ನ ಮಯೂಖಲೇಖೆಗಳನಂತಾಚಿತ್ರನಿರ್ಮಾಹರೇ
ಖೆ *ನೆರಂಬೆತ್ತಿರೆ ನೋಡಿ ನೋಡಿ ತಲೆದೂಗಿತ್ತಂಗನಾಸಂಕುಲಂ ॥ ೧೧೭

ಪಡೆದಳಿದರ್ಕೆ †ಚೇತನವನೀವಧುವಲ್ಲದೊಡಿಂತೆ ಚಿತ್ರವಿಂ
ತೊಡನುಡಿವಂತೆ ನೋೞ್ಪವರ ಬೇೞ್ಪವರಂಗುಡುವಂತು ಕೌತುಕಂ।
ಬಡೆಗುಮೆ ‡ಪೇಟಿಮೊಂದುಷೆ ನಿರೀಕ್ಷಿಸಿದಳ್ ನಿಜಲೋಚನಾಂಶುತ
ಳ್ತಡರೆ ದುಕೂಲಕಾಂಡಪಟವಾದುದು ಚಿತ್ರಪಟಕ್ಕೆದೆಂಬಿನಂ ॥ ೧೧೮

ಲಲಿತರಗಳೆ

ಚಿತ್ರಲೇಖೆಯು ಬರೆದ ಚಿತ್ರಪಟದೊಳ್ ನೆರೆದ
ಬಹುವಿಧ ತತಿಯುಲ್ಲಿ ಮಹಿವಿನುತೆ ನೋೞ್ಪಲ್ಲಿ
ಸಾಧ್ಯರಂ ಧಿಕ್ಕರಿಸಿ ಸಿದ್ಧರನಧಃಕರಿಸಿ
ರಾಕ್ಷಸರನೀಕ್ಷಿಸದೆ ಯಕ್ಷರನಪೇಕ್ಷಿಸದೆ
ಗರುಡರಂ ಬಗೆಗೊಳ್ಳದುರಗರಂ ಕೈಕೊಳ್ಳ
ದಿವರಾದಿಯಾಗಿರ್ಪ ಭುವನ ಸಂಸ್ತುತರಪ್ಪ
ಖಚರಸಂತಾನದೊಳ್ ದ್ಯುಚರಪ್ರತಾನದೊಳ್
ಕನಸಿನೊಳ್ ಕಂಡನಂ ಮನಮನೀಟ್ಕೊಂಡನಂ ¶

* ಖ—ಚಿತ್ರನಿರ್ಮಾಣರೇಖೆ.

† ಕ.—ಪಡೆವಳಿವರ್ಕೆ. ‡ ಕ. ಗ.—ಕೌತುಕಂಬಡುಗುಮೆ.

¶ ಖ.—ಮನಸಿನೊಳ್ಕೊಂಡನಂ.

ಕಾಣದಜನಂ ಬೈದು ನಾಣಿಟಿದು ಬಿಸುಸುಯ್ದು
ಕಂಬನಿಯೊಳೋಲಾಡಿ ಬಂಬಳವೊಗಂ ಬಾಡಿ
ನೋವಿಂ ಕರಂ ಬಳಲಲೋವಿದೇಕೆಂದಬಲ
ಲಿತ್ತಿತ್ತ ನೋಡರಸಿ ಚಿತ್ತೋತ್ಸವಂಬೆರಸಿ
ಭೂಭುವನಭೂಪರಂ ಶೋಭಿತಸುರೂಪರಂ
ನೀನೆಂದು ಪೇಳೆಸಖಿ ತಾನೋಡಿ * ಚಂದ್ರಮುಖಿ
ತತ್ಸಕಲಭೂಪರೊಳ್ ಹೃತ್ಸೇವ್ಯರೂಪರೊಳ್
ಚೋಳನಂ ಪಟಿಕೆಯ್ದು ಮಾಳವನ ನಿಟಿಕೆಯ್ದು
ಲಾಳನಂ ಜಾೋಡಾಡಿ ಗೌಳನಂ ಕೊಱಚಾಡಿ
ಪಾರಸಿಕನಂ ಪಱದು ಪಾರಿಯಾತ್ರನನುಱದು
ಹೂಣನಂ ಕೀೞ್ಪಡಿಸಿ ಬಾಣನಂ ಪೞಿಪಡಿಸಿ
ಮಗಧನಂ ಧಿಕ್ಕರಿಸಿ ಸಗರನಂ ನ್ಯಕ್ಕರಿಸಿ †
ಪಾಂಡ್ಯನಂ ಪರಿಹರಿಸಿ ಪಾಂಡವರನರವರಿಸಿ
ಕುರುಕುಳರನತಿಗಳೆದು ಮರುಪತಿಯುನಸಕಳದು
ಪಲ್ಲವನನಲ್ಲೆಂದು ವಲ್ಲನಂ ಹೊಲ್ಲೆಂದು
ವಂಗನೊಳ್ ಬಗೆಯಿಲ್ಲದಂಗನೊಳ್ ಮನವೊಲ್ಲ
ದತಿಚಾಟುಕಾಱನಂ ರತರತ್ನ ಚೋರನಂ
ಭೂವಿನುತರೂಪನಂ ಭಾವಿಸುತ್ತೋಪನಂ
ಬಂದು ಚೆಲ್ವಾದವರನಿಂದುಕುಲಯಾದವರ
ನಿನಿಯನಂ ಪೋಲ್ತವರನಿನಿಸು ಬಗೆಸೋಲ್ತವರ
ನೊಲವಿನಿಂ ನೋಡುತ್ತೆ ನಲವಿನಿಂ ಕೂಡುತ್ತೆ
ತಾಮರಸನಾಭನಂ ಶ್ಯಾಮಜಳದಾಭನಂ
ಪೀತಪಟಲೀಲನಂ ಪೂತವನಮಾಲನಂ
ಕೌಸ್ತುಭವಿಭಾಸಿಯಂ ಭೂಸ್ತುತವಿಳಾಸಿಯಂ
ಪತಗೇಂದ್ರಪತ್ತ್ರನಂ ಶತಪತ್ರನೇತ್ರನಂ
ದೇವಾದಿದೇವನಂ ಶ್ರೀವಾಸುದೇವನಂ

* ಕ. ಗ.— ತಾನೊಸೆದು. † ಕ. ಖ. ಗ.— ದರವರಿಸಿ.

ಪ್ರಿಯಮಶಂಕೆಯಿಂ ತಂದು ನಯನಸುಖದಿಂ ನಿಂದು
ಕರಮೆಚ್ಚುಕೆಯಿಂ ನೋಡಿ ಗುರುಬುದ್ಧಿಯಿಂ ಮಾಡಿ
ದನುಜಹರಪುತ್ರನಂ ಕನಕರುಚಿಗಾತ್ರನಂ
ಧೃತಮಕರಕೇತುವಂ ನತಸೌಖ್ಯ ಹೇತುವಂ *
ಕುಸುಮಕೋದಂಡನಂ ಪ್ರಸವಮಯಕಾಂಡನಂ
ಪ್ರೋದ್ಯತ್ಪ್ರಭಾವನಂ ಪ್ರದ್ಯುಮ್ನದೇವನಂ
ರೂಪಸಾದೃಶ್ಯದಿಂದೋಪನೆ ಅವಶ್ಯದಿಂ †
ದಿವನೆಂದು ರಾಗಿಸುತೆ ದಿವಿಜರಿಪುರಾಜಸುತೆ
ರೋಮೋದ್ಗಮಂ ಪೊಣ್ಮೆ ಕಾಮೋಂಬು ಕೈಗಣ್ಮೆ
ಮತ್ತಂತೆ ನಡೆನೋಡಿ ಚಿತ್ತದೊಳ್ ತಡಮಾಡಿ
ಕನಸಿನೊಳ್ ನೆರೆದಂಗೆ ತನುಮನವನೊರೆದಂಗೆ ‡
ಮಕರಕೇತನವಿಲ್ಲ ಮುಕುಲಮಾರ್ಗಣವಿಲ್ಲ
ತಪನೀಯರುಚಿಯಿಲ್ಲ ವಿಪುಲೇಕ್ಷುಧನುವಿಲ್ಲ
ನಿಜದಿಂದಮೆಸೆವನವನಜಿತಪ್ರಭಾವನವ
ನಾಕಾಂತನಪ್ಪಾತನೀಕಂತುವೆಂಬಾತ
ನಪ್ಪನಲ್ಲೆಂಬುದಂ ತಪ್ಪದಱಿಪೆಂಬುದಂ
ಚಿಂತಿಸಿ ನಿಜಾಂತರಂ ¶ ಕಾಂತೆ ತದನಂತರಂ
*
ಕನಸಿಂದೆನ್ನೊಳ್ ರತಕ್ರೀಡೆಯನೊಡರಿಸಿದಾಧೂರ್ತನೀಯಿರ್ದನೀಯಿ
ರ್ದನೆ § ಪೋಗಾಕಂತುವೆಲ್ಲೀವಿಮಲ + ವಿಭವಮಿನಾರೂಪಮಾತೇಜಮಾ
ಯುಃ

* ಕ. ಗ.— ನುತಶೌರ್ಯಹೇತುವಂ. † ಕ. ಗ.— ಓಪವನವಶ್ಯದಿಂ.
‡ ಕ. ಗ.— ತನುಮನದಧೀಶಂಗೆ. ¶ ಖ.— ನಿರಂತರಂ.
* ಕ. ಖ. ಗ. ಪುಸ್ತಕಗಳಲ್ಲಿಲ್ಲದ ಸ್ವಾಂತದ ನೆಗಟ್ಟೆಯಿಂದಿಂತೆಂದಳ್ ಅತ್ತಯಿಂ ಎಂಬೀ ಪಾದವು ಮೊ.—ಅ. ಲ್ಲಿ ಮದ್ರಾಸ್ ಪ್ರತಿಯಂತೆ ಹೆಚ್ಚಾಗಿ ಸೇರಿಸಲ್ಪಟ್ಟಿದೆ.
§ ಖ.— ಧೂರ್ತನೇ ಈತನೇ ಇರ್ದನೆ. + ಖ.— ವಿಪುಲ.

ವೆನವಿಾಸಾಂದರ್ಯವಿಾಸೌಷ್ಠವಮೆನುತನಿರುದ್ಧಸ್ಫುರದ್ವಿದ್ಧಮಂ ಭೋಂ
ಕೆನೆ ಕಂಡಾಕನ್ನೆ ಲಜ್ಜಾಭಯರಸವಶದಿಂ ಸಂಚಲದ್ಗಾತ್ರೆಯಾದಳ್ ‖೧೧೯

ವ‖ ಅದಲ್ಲದೆಯುಂ,

ಪಿಡಿದವೆರ್ದಪ್ಪಲೆಂದು ನಿವಿಱುತ್ತಿರೆ ದೋರ್ಲತೆವೇಲೆವಾಯುಲಂ
ದೊಡರಿಸೆದೇಹವಿನ್ನೆಗವದೇಕೆಯೊ * ನಲ್ಲನೆ ರೂಪುದೋಱೆಯುಂ ।
ದೊಡನುಡಿಯಲ್ಕೆ ತೇರಯಿಸೆ ನಾಲಗೆ ಪೆರ್ಚಿದಲಂಪಿನಿಂದಮಾ
ಗಡೆನೆರೆವಂತುಟಾಯ್ತುಷಗೆ ನೋಱ್ಪ† ದುವುಂದನಿರುದ್ಧವಿದ್ಧಮಂ‖೧೨೦

ವ‖ ಅಂತಾಪೆರ್ಚಿದೌತ್ಸುಕ್ಯದಿಂ ಬಾಣಪುತ್ರಿ ಚಿತ್ರಲೇಖೆಯ ಮೊಗಮಂ ನೋಡಿ,

ಇಂತುಟು ಕುಲವಿಂತುಟು ಪೆಸ
ರಿಂತುಟು ರೂಪೆನ್ನ ‡ ವಲ್ಲಭಂಗೆಂಬಿನಿತಂ ।
ನೀಂ ತಿಳಿದೆ ಕೇಳದಿ ನಲ್ಲನ
ನೆಂತಾದೊಡವಿಂದೆ ತಂದು ನೆರಪಲೆವೇಱ್ಕುಂ ‖ ೧೨೧

ವ‖ ಎಂದು ನುಡಿಯೆ ಚಿತ್ರಲೇಖೆ ಮತ್ತಮಾಕೆಯುನೞಲಿಸುವ ಬಗೆಯಿಂದಿಂತೆಂದಳ್,

ಕಣ್ಬರಿಗೆಟ್ಟು ಕಾಮನಿಸೆ ನಾಂಟುವ ಪೂಗಣೆಯಿಂ ಬೞಲ್ದು ನೀಂ
ಬಂಬಳಬಾಡಿದಪ್ಪೆ ದೊರೆಕೊಳ್ಳದ ವಸ್ತುಗಿದೇಕವಸ್ಥೆಯಿಂ ।
ಮೊಣ್ಬಸಜಾಕ್ಷಿ ಮುನ್ನ ಕನಸಿಂದವು ಕಂಡನನೀಗ ಚಿತ್ರದೊಳ್
ಕಾಣ್ಬದೆ ಸಾಲ್ವುದಾರಱಿವರೆತ್ತಣ ಚೆನ್ನಿಗನಾವನೆಂಬುದಂ ‖ ೧೨೨

ವ‖ ಎನೆ ಬಾಣನಂದನೆ,

---

* ಕ. ಗ.— ತನುವಂನಿವಿಱುತ್ತಿರೆ ಮೇಲೆ ವಾಯುಲೆಂದೊಡರಿಸೆಹವ್ಮಿನಿನ್ನೆ ವರಮೇಕೆಯೊ. ಮೊ.—ಅ. ತನುವುಂನಿವಿಱುತ್ತಿರೆ ಮೇಲೆ ವಾಯುಲೆಂದೊಡರಿಸಿ ಹವ್ಮಿವಿಂದುವರವೇಕೆಯೊ. † ಮೊ.—ಅ. ತೋರ್ಪುದು.
‡ ಖ.— ಬಲವೆನ್ನ.

ಅೞಲಿಸವೇಡ ನೀನಱಿವೆ ಕಾದಲನಿರ್ದೆಡೆಯುಂ ದಿಟಕ್ಕೆ ನೀಂ
ತೊೞಲದ ಪಟ್ಟಣಂ ಪುಗದ ನಂದನಮೆಯ್ದದ ರಾಜಮಂಡಲಂ ।
ಸುಱಿಯದ ಲೋಕಮಾವುದು ತಳಾಮಳಕಂ ನಿನಗಬ್ಜಜಾಂಡಮಾ
ರುಱಿದವರಿಂತು ನಿನ್ನ ತೆಱದಿಂ ಪಡೆದರ್ ಬಹುರೂಪವಿದ್ಯೆಯುಂ ॥ ೧೬೩

ವ॥ ಎಂಬುದುಮದರ್ಕೆ ಸಂತೋಷಂಬಟ್ಟು ನಿನ್ನ ಕಾಂತನನಿಂದೀಗಳೆ ತಂದು ಕೂಡಿದಪೆನೆಂದಾಡಿಯಾ ಕನ್ನೆ ನೋಡೆ ನೆಲೆಮಾಡದ ಭೂಮಿಯಿಂದಾಕಾಶಕ್ಕೆ ನೆಗೆದು,

ಮಿಳಿರಲ್ ಮೇಲುದಿನಂಚಳಂ ಪೊಡರಲುತ್ತುಂಗಸ್ತನದ್ವಂದ್ವಮು
ಚ್ಚಳಿಸಲ್ ಮೇಲೆವಿಲೋಚನಾಂಶು ನಿಮಿರಲ್ ನೀಳಾಳಕೌಘಂ ಕಿಡಲ್ ।
ವಳಿಗಳ್ ಪಿಂತಲೆಯೊಳ್ ಬೞಲ್ಮುಡಿಯುಲುಂಗಲ್ ಕರ್ಣಪೂರಂ ವಿಯು
ತ್ತಳದೊಳ್ ಮಿಳ್ಳಸೆ ಚಿತ್ರಲೇಖೆ ನವವಿದ್ಯುಲ್ಲೇಖೆವೊಲ್ ಪಾಱಿದಳ್॥೧೬೪

ವ॥ ಅಂತು ಪೋಗಿ ಮನೋವೇಗದಿಂ ದ್ವಾರಾವತಿಯನೆಯ್ದಿ ಕಮನೀಯ ಕೌಮುದಿಯೊಳೊಡ್ಡೋಲಗಂಗೊಟ್ಟು ನಿಜರಾಜಾಲಯದೊಳಿರ್ದನಿರುದ್ಧಕುಮಾರನಂ ಕಂಡಾಕುಮಾರನುಂ ಸ್ವಪ್ನಸಂಭೋಗದೊಳ್ ಬಾಣಸುತೆಯ ರೂಪಾತಿಶಯಕ್ಕೆ ಕೂರ್ತು ವಿರಹಾರ್ತನಾಗಿರ್ದ * ಭಂಗಿಯನಿಂಗಿತದಿಂ ತಿಳಿದದೃಶ್ಯರೂಪದಿಂ ತಾರಾಪಥದಿಂದಿಱಿತಂದು ಮೆಲ್ಲನೆ ನುಡಿದೊಡಂಬಡಿಸಿ ನಿಜಾಂಸಪೀಠಮನೇಱಿಸಿ ವಿಯಚ್ಚರ ಲೀಲೆಯಿಂ ಚೆಚ್ಚರಂ ಮಗುಳೆವಂದನಿರುದ್ಧನಂ ಉಷಾದೇವಿಯೊಳ್ ಗಾಂಧರ್ವವಿವಾಹದಿಂ ನೆರೆಪಲ್ ವಧೂವರರ್ಕೇಳೀ ಗೃಹಾಂತರದೊಳ್ ಅತಿಸ್ವೈರದಿಂದಿರ್ಪುದುಮದಂ ಕನ್ಯಾಧ್ಯಕ್ಷನಱಿದು ಬಾಣಾಸುರಂಗೆ ಪೇೞೆ,

ಶರಧಿಪ್ರಸ್ಪರ್ಧಿಯಾದೀವಿಪುಲಪರಿಖೆಯಂ ದಾಂಟಿ ಮುಂ ದೇವದೈತ್ಯ
ರ್ಗರಿದಾದೀಕೋಂಟೆಯಂ ಪೊಕ್ಕತುಳಪೃಥುಳಮದ್ಬಾಹುಮಾಲಾರ್ಗ
ಳಾತ್ಯ ।

* ಕ, ಗ,— ವಿಷಯಾರ್ತನಾಗಿರ್ದ.

ದ್ಧುರವೊದೀರಾಜಗೇಹಾಂತರದುಷೆಯೊಳವಂ ಕೂಡಿದೀಕಾರ್ಯ್ಯಯೋಗಂ
ಪಿರಿದೊಂದಾಶ್ಚರ್ಯವೆಂದೆಂದಸುರಪತಿ ಮುಹುಃಕಂಪಕೋಟೀರನಾ
ದಂ ॥ ೧೨೫

ಅನ್ಯಾಯಂ ಕೊಡುಗೂಸಿನೊಳ್ ಕುಡದ ಮುನ್ನಂ ಬಂದು ಕೂಡಿರ್ದ್ದದಾ
ಕನ್ಯಾಜಾರನ * ನೀಗಳಿಂತೆಱೆದು ತನ್ನಿಂ ಪೋಗಿಮೆಂದಂದು ಹ ।
ಸ್ತನ್ಯಸ್ತಾಯುಧದೈತ್ಯವೀರಭಟರಂ ಬಾಣಾಸುರಂ ಪೇೞೆ ತ
ತ್ಸೈನ್ಯಂ ಸುತ್ತಿದುದೆಯ್ದೆ ಕೇಳಿಗೃಹಮಂ ಪ್ರೋತ್ತಾಳಕೋಳಾಹಳಂ ॥

ವ॥ ಆಗಳ್,

ಬೆಳವಾರ್ಯೊಳ್ ಬಾಯ್ ಘನೋರುದ್ವಯದೊಳುರುಘನೋರುದ್ವಯಂ ನೀಳ್ದತೋಳೊಳ್
ನಳಿತೋಳ್ಗಳ್ ಮುಯ್ವೊಳಾಮುಯ್ವುರದೊಳುರಸಿಜಂ ತಳ್ತಿರಲ್ ತಳ್ತುಷಾಕೋ ।
ಮಳೆಯೊಳ್ ನಾರೀವರಾತ್ಮಾಕೃತಿಯೆನೆ † ಸುಖದಿಂದಿರ್ದ್ದ ದೈತೇಯಕೋಳಾ
ಹಳಮಂ ಕೇಳ್ದೀಪಳಪ್ಪಂ ಸಡಿಲಿಸಿ ನಡೆದಂ ಕಾದಲೇಕಾಂಗವೀರಂ ॥

ವ॥ ಅದಂ ಕಂಡು,

ಇನಿಯಂ ಕೋಮಲರೂಪನುಗ್ರತರರೂಪರ್ ದೈತ್ಯರಾತ್ಮೇಶನೊ
ರ್ಬನನೇಕರ್ ದಿತಿಜರ್ ನಿರಾಯುಧನಧೀಶಂ ಸಂಗ್ರಹೀತಾಯುಧರ್ ।
ದನುಜರ್ ಮತ್ಪ್ರಿಯನಿಂದು ದಾನವರನಾನಲ್ಲಾನ್ವೆನೆಂತೆಂದು ಕಾಂ
ತನನಾಳೋಕಿಸುತಿರ್ದ್ದಳಂದುಷೆ ಜಯಶ್ರೀ ನೋಡುತಿರ್ಪಂತೆವೋಲ್ ॥

---

* ಕ. ಗ.— ಕನ್ಯಾಚೋರನ.

† ಕ. ಗ.— ಕೂಡಿರ್ದನಾತ್ಮಾಕೃತಿಯೆನೆ.

ವ|| ಆಸಮಯದೊಳ್ ರಣರಾಗದಿಂ ವಿಜೃಂಭಿಸುವ ತನ್ನ ಭುಜಬಲಮೆ ಬಲಮಾಗೆಯುಂ ಗೆಲ್ವೆನೆಂಬ ಮನೋರಥಮೆ ರಥಮಾಗೆಯುಂ ವಜ್ರೋಪಮಾನಮೆನಿಸುವ ತಳಪ್ರಹರಣಮೆ ನಿಜಪ್ರಹರಣಮಾಗೆಯುಮಿದಿರ್ಚಿ ಕಾದುವಲ್ಲಿ,

ಹತಭುಜಗರ್ವಮಾಗಿ ದೆಸೆಗೆಟ್ಟನಿರುದ್ಧತಳಪ್ರಹಾರದಿಂ
ದಿತಿಜಭಟೌಘಮೋಡಿದುದಗುರ್ವಿಪ ಸಿಂಹತಳಪ್ರಹಾರದಿಂ |
ಚ್ಯುತಮದಮಾಗಿ ವಾರಣಘಟಾತತಿ ತಾರ್ಕ್ಷ್ಯತಳಪ್ರಹಾರದಿಂ
ಗತವಿಷಮಾಗಿ ನಾಗಕುಲಮುತ್ಕಟಭೀತಿಯಿನೋಡುವಂತೆವೋಲ್ ||೧೨೯

ವ|| ತದನಂತರಂ,

ಬಳಿಸೂನು ಸಹಸ್ರಭುಜಾ
ಬಳಗರ್ವದೆ ಷಷ್ಟಿಹಾಯನಂ ತುಂಗಗಜಂ |
ಕಳಭಕ್ಕಿದಿರ್ಚಿದಂತಿರೆ
ಮುಳಿದು ಕುಮಾರಂಗಿದಿರ್ಚಿ ನಿಂದವಸರದೊಳ್ || ೧೩೦

ರಸೆಯಿಂದಂ ತೀರ ಮೇಗಣ್ಗೊಗೆದಸುರನ ಶಸ್ತ್ರಪ್ರಹಾರಂಗಳಂ ಬಂ
ಚಿಸುತುಂ ಬಾಹಾಸಹಸ್ರಾಟವಿಯೊಳವಿದು ದುರ್ಲಕ್ಷ್ಯನಾದಾಗಳಾರಾ |
ಕ್ಷಸನೋವೋಗೆಲ್ದೆನೆಂದಾರ್ವುದುಮವನ ರಥಾಶ್ವಂಗಳಂ ಮುಷ್ಟಿಯಿಂ ಮ
ರ್ದಿಸುತುಂ ವಿದ್ಯಾಧರೇಂದ್ರಪ್ಲುತದಿನಿಱಿದನಾತೀರ ಮೇಲಿಂ ಕುಮಾರಂ||

ವ|| ಅಂತು ಮನ್ಮಥಸೂನು ಬಲಿಸೂನುವಂ ವಿರಥನಂ ಮಾಡಿ ರಣದೊಳೀತಂಗಭಿಮುಖನಾಗಿ ಗೆಲ್ವುದರಿದೆಂದು * ನಭೋಂತರಕ್ಕೆ ನೆಗೆದು ಅಂತರ್ಹಿತಮೂರ್ತಿಯಾಗಿ ಬಾಣಂ ನಾಗಪಾಶದಿಂದನಿರುದ್ಧನಂ † ನಿರುದ್ಧನಂಮಾಡೆ,

* ಕ. ಗ.__ ನಿಲ್ವುದರಿದೆಂದು. † ಕ. ಗ.__ ನಾಗಬಾಣವರ್ಷದಿಂದನಿರುದ್ಧನಂ.

ಮಾಯೆಯೊಳ್ ಗೆಲ್ದ ದಾನವ
ನಾಯಕನಂ ನಗುವ ಮದನಸುತನುಪಹಾಸ ।
ಛಾಯೆ ಬೆಡಂಗಾಯ್ತು ಯಶ
ಶ್ರೀಯ ಮನೋಹರಸಿತಪ್ರಸಾಧನರುಚಿವೋಲ್ ॥ ೧೩೦

ವ॥ ಇತ್ತಲನ್ನೆಗಂ ದ್ವಾರಾವತಿಯೊಳನಿರುದ್ಧನಂ ಕಾಣೆವೆಂಬ ಕಳಕಳದ ಸಂಭ್ರಮಂ ನೆಗಱೆ,

ಸ್ಮರಸುತನಂತಃಪುರಸತಿ
ಯರ ಹಾಹಾವಿರುತಿ ಹೇಮಹರ್ಮ್ಯಾಗ್ರದೊಳು ।
ದುರವೊಗೆದತ್ತೊಗೆವೆಂತಿರೆ
ಕುರರೀಕ್ರೇಂಕಾರಮರುಣಜಲಧರತತಿಯೊಳ್ * ॥ ೧೩೩

ವ॥ ಮತ್ತಂ,

ಅನಿರುದ್ಧನಂತಃಪುರದಂ
ಗನೆಯರ ರೋದನರವಂ ಸುಧಾಗೃಹತತಿಯೊಳ್ ॥
ಜನಿಯಿಸಿದುದು ಧವಳಾಂಬುಜ
ವನದೊಳ್ ಪೆಣ್ಣಂಚೆಯಿಂಚರಂ ಪೊಣ್ಮುವವೋಲ್ ॥ ೧೩೪

ಯಾದವರಿದೇನಿದೇಂ ಭಯ
ವಾದುದಿದೆತ್ತಣ ನಿನದವೆನುತೆ ತಳರ್ದರ್ ಗೇ ।
ಹೋದರದಿಂ ಬಹುಶೈಲಗು
ಹೋದರದಿಂ ತಳರ್ವ ಸಿಂಹಸಂತತಿಗಳವೋಲ್ ॥ ೧೩೫

ವ॥ ಆಸಂಭ್ರಮಪರಂಪರೆಯೊಳ್ ಪರಮಜ್ಞಾನರೂಪನಜ್ಞನಂತೆ † ವಿಭ್ರಾಂತನಾಗಿರ್ದನಂತರಂ,

---

* ಕ.— ಕರಂಕ್ರೇಂಕಾರಚಾರುಜಲಧರತತಿಯೊಳ್. ಗ.— ಗಿರಿಯುಗ್ರಸ್ಥಲದೊಳೊಗೆವಜಲಧರತತಿಯೊಳ್. ಮ.—ಬಿ.— ಗಿರಿಯುಗ್ರಸ್ಥಲದೊಳೊಳರ್ವಜಲಧರವಿರುತಂ.

† ಕ. ಗ.— ಜ್ಞಾನರೂಪಂ ರೂಪಜ್ಞನಂತೆ.

ಅನಿರುದ್ಧವ್ಯಾಪ್ತಿಯಂ ನಾರದಮುನಿ ತಿಳಿದೆತ್ತಿಂದವಷ್ಟಬ್ಧರತ್ನಾ
ಸನನಾದತ್ತಾರ್ಘ್ಯಪಾದ್ಯಂ * ದಶನರುಚಿಸುಧಾಸಾರದಿಂ ಯಾದವೋದ್ವೇ|
ಗನಿದಾಘಂ ಪಿಂಗೆ ವೃತ್ತಾಂತವನಱುಪುವುದುಂ ನೋಡಿದಂ ತಿರ್ಯಗಾ
ಲೋ
ಕನನುದ್ಯಚ್ಚಕ್ರಮಂ ಸಂಗರಪಿಶುನವಿದೆಂಬನ್ನೆಗಂ ವಾರಿಜಾಕ್ಷಂ ॥೧೩೬

ಇದು ಸಮಸ್ತ ಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತಸುಕವೀಂದ್ರರುದ್ರಪ್ರಣೀತಶ್ರೀಜಗನ್ನಾಥ
ವಿಜಯಮಹಾಪ್ರಬಂಧದೊಳ್ ಶಿಶುಪಾಲವಧ ನಿದಾಘ
ಕಾಲವರ್ಣನ ಬಾಣಪುತ್ರೀಮದನಪುತ್ರಸಂಯೋಗ
ವರ್ಣನಂ ಸಪ್ತದಶಾಶ್ವಾಸಂ.

---

* ಕ — ತಿಳಿದೆತ್ತಿಂದನಷ್ಟಬ್ಧರತ್ನಾಸನನಾದೇಯಾರ್ಘ್ಯಪಾದ್ಯಂ.
ಖ. — ತಿಳಿದೆತ್ತಿಂದವಷ್ಟಂಭರತ್ನಾಸನನಾಗೀಯುರ್ಘ್ಯಪಾದ್ಯಂ.
ಗ. — ತಿಳಿದೆತ್ತಿಂದವಷ್ಟಂಭರತ್ನಾಸನನಾದೇಯಾರ್ಘ್ಯಪಾದ್ಯಂ.

## ಅ ಷ್ಟಾ ದ ಶಾ ಶ್ವಾ ಸಂ .

ಶ್ರೀಲೀಲಾಗೃಹತೋರಣ
ಬಾಲಾರುಣಕಿಸಲಯೌಘಮೆನೆ ವಕ್ಷದೊಳು ।
ನ್ಮೀಲಿಸೆ ಕೌಸ್ತುಭಮಣಿರು
ಗ್ಜಾಲಂ ವನಮಾಲಿ ಸಿಂಹಪೀಠದೊಳಿರ್ದಂ * ‖ ೧

ಬಲಿಸುತನೊಳ್ ಸಹಸ್ರಭುಜನೊಳ್ ಹರಪಾಲಿತನೊಳ್ ಮಹಾಚತು
ರ್ಬಲಯುತನೊಳ್ ಜಿತಾಖಿಲಜಗತ್ತ್ರಯನೊಳ್ ರಣಕೇಳಿಕಾಮನೊಳ್।
ಕಲಹಮೊಡರ್ಚಿತೆಂಬ ನಲವೇಱಿರೆ ತಾರ್ಕ್ಷ್ಯನನಾಗಳೇಱಿದಂ
ಹಲಧರಪುಷ್ಪಧನ್ವರೊಡನೇಱಿ ವಿಜೃಂಭಿಸೆ ತೂರ್ಯನಿಸ್ವನಂ ‖ ೨

ವ‖ ಅಂತು ಸಮರೋಚಿತಪರಿಕರಸಮೇತಂ † ಖಗೇಂದ್ರನ ನೇಱುವುದುಂ ದ್ವಾರಾವತಿಗೆ ಬಾಣನಗರಮೇಕಾದಶಸಹಸ್ರಯೋಜನಾಂತರದೊಳಿರ್ಪುದೆಂಬುದಂ ಬಗೆದು ನೋಡುತ್ತುಂ ವೈಹಾಯಸೋಡ್ಡಾಯನರಭಸೋಡ್ಡಾಮರನಾಗಿ,

ಕ್ರಮಪಕ್ಷಕ್ಷೇಪವಿಕ್ಷೋಭದಿನಖಿಳಮಹೀಚಕ್ರಮಲ್ಲಾಡೆ ವಾರಾ
ಶಿ ಮರುನ್ಮಾರ್ಗಸ್ಥಳಕ್ಕುಚ್ಚಳಿಸೆ ಕುಲಗಿರಿಶ್ರೇಣಿ ಕಿತ್ತೇಱೆ ತಾರಾ ।
ಹಿಮರುಕ್ಖಂಡಾಂಶುಗಳ್ ಸಂಚಳಿಸೆ ತುಳುಂಕೆ ‡ ತಾರಾಧ್ವಗಂಗಾಜಲಂ ಸ
ಪ್ತಮವಾಯುಸ್ಕಂಧದತ್ತಲ್ ನೆಗೆದನಧರಿತ ¶ ಸ್ವರ್ಗದೇಶಂ ಖಗೇಶಂ ‖ ೩

* ಖ — ಸಿಂಹಪೀಠದಿನೆೞ್ದಂ.  † ಕ. ಗ. — ಅಂತುಸಮುಚಿತಜ್ಞಾನಸಮೇತಂ, ಮೊ. — ಅ. — ಅಂತುಸಮುಚಿತಾಜ್ಞಾಸಮೇತಂ.

‡ ಕ. ಗ. — ಹಿಮಕೃಚ್ಛಂಡಾಂಶುಗಳ್ ಸಂಚಲಿಸುತುದುರೆ.

¶ ಕ. — ತೆಗೆಯೆನಗರಿಪು. ಗ. — ತೆಗೆಯಲ್ಪಡರಿದಂ.

ವ|| ಅಂತತಿವೇಗದಿಂ ಪೋಗೆವೋಗೆ ಮುಂದೊಂದೆಡೆಯೊಳ ದೊಂದು ಪಿಶಂಗವರ್ಣಂ ನಿಜನಿಜಾಂಗವರ್ಣಮಂ ತಳೆದ್ದುವ್ಯಲಂತದ ನೇಕಕಕುಂಡಲಂ ಕಂಡು,

ಅಂಬುಜನಾಭ ನಮ್ಮವಯವಂಗಳನೊರ್ಮೆಯೆ ನಿನ್ನ ಯುದ್ಧರಾ
ಗಂಬಳಿಸಿತ್ತೊ ಕೌಸ್ತುಭವಿಭೂಷಣದೀಧಿತಿ ವೇಷ್ಟಿಸಿತ್ತೊಪೀ ।
ತಾಂಬರಕಾಂತಿ ಸುತ್ತಿದುದೊ ವಿಸ್ಮಯಮಾದಪುದೀಗಳೆತ್ತಣಿಂ
ಕೆಂಬೆಳಗಿಂತಿದಾವರಿಸಿದತ್ತೆನೆ ಕೇಳುತುಮಬ್ಜಲೋಚನಂ || ೪

ವ|| ಅಂತೆಯ್ದೆ ಬಂದು ಮೋಕ್ಷಮಾರ್ಗವ್ಯಾಪ್ತಮಾದ ಮಾರ್ಗ ನಿರೋಧಕ್ಷಮಾಶುಶುಕ್ಷಣಿಯುಂ ಕಂಡು ಖಂಡಪರಶುವಿನಾಜ್ಞೆಯಿಂದಿರ್ದಾ ಹವನೀಯಾಭಿಧಾನಕ್ಕೆಡೆಯಾದ ಪಾವಕನೆಂಬುದಂ ದೇವವ್ರತಿಯ ಪೇಕ್ಷೆಯಿಂ ತಿಳಿದಿಲ್ಲಿಗೆ ತಕ್ಕುಪಾಯಮಂ ವೈನತೇಯ ನೀನೇ ಬಲ್ಲೆ ಯೆನೆ ವಿಹಂಗವಲ್ಲಭಂ,

ಬಿದಿ ಪದ್ಮೋದರನಂಘ್ರಿಯಂ ತೊಳೆಯೆ ಮುನ್ನಂ ಪುಟ್ಟಿಬಂದೀಮರು
ನ್ನದಿ ಲೋಕತ್ರಿತಯಂಗಳಂ ಮುಳುಗಿಸಲ್ಕಂಡಂತದಂ ಶಂಭು ಜೂ ।
ಟದೊಳಾಂತಂ ತಲೆಮುಟ್ಟೆ ತಾಳ್ವುದರಿದಲ್ತೆಂಬಂತೆ ತತ್ಸಿಂಧುಬಂ
ಧದ ನೀರೆಲ್ಲಮನೊಂದುಮುಕ್ಕುಳೊಳೆ ತಂದಾವಹ್ನಿಯಂ ತೂಳ್ದಿದಂ ||೫

ವ|| ಆಪ್ರದೇಶದಿಂ ಕೇಶಿಸೂದನಂ ನಡೆವುದುಂ ಬ್ರಹ್ಮಪುತ್ರಂ ದ್ವಿತ್ರಿಯೋಜನಾಂತರದಲ್ಲಿ ನಿಲ್ಲಿಸಿ,

ಇದಿರೊಳ್ ತೋರ್ಪುದಿದಲ್ತೆ ಶೋಣಿತಪುರಂ ನೋಡೀಪುರೋದ್ಯಾನದೇ
ಶದೊಳಿರ್ಪಂ ತ್ರಿಪುರಾರಿಯುಂ ಗುಹನುಮೊಂದುಂ ಬಾಣರಕ್ಷಾರ್ಥಮೆಂ।
ಬುದುಮಂತಾತ್ರಿಪುರಾರಿಯುಂ ಗುಹನುಮಂ ಪೋ ಗೆಲ್ವೆನೆಂದಾಜಿದ
ರ್ಪದ ಕೂರ್ಪೇರ್ಚಿರೆ ಬೇರ್ಪದೊಂದೆಸಕಮಂ ಕೈಕೊಂಡನಬ್ಜೋದರಂ||೬

ವ|| ತದನಂತರಂ,

ಉದಿತಾಶಾಪ್ರತಿನಾದದಿಂ ದಿಗಧಿಪರ್ ಬಾಣಾಸುರಂಗಾಭಿಚಾ
ರದ ಮಂತ್ರಕ್ರಿಯೆಯಂ ನೆಗೞ್ವವರೊಲಿರ್ಪಂತಚ್ಯುತಂ ಯುದ್ಧಸ ।
ಮ್ಮದದಿಂ ಪೂರಿಸೆ ಪಾಂಚಜನ್ಯಮನಜಾಂಡಂ ತನ್ಮಹಾನಾದದಿಂ
ಪುದಿದಂತಚ್ಚರಿಯಂ ನಿಮಿರ್ಚಿದುದು ನಾದಗ್ರಂಥಿಯೆಂಬಂತೆ ಪೋಲ್ ॥೭

ಉಡಿವೆಂತೆ ವಿಜಯವೆಲ್ಲರಿ
ಯುಡಪುರ್ ತದ್ಧ್ವನಿ ಪೆಳಂಚೆ ಕೇಶಿಧ್ವಜವಂ ।
ದುಡಿದುದು ಸಹಸ್ರಭುಜವನ
ದುಡಿಪಕ್ಕಿದು ಸಂಚಕಱಮೆನಲ್ ಬಲಿಸುತನಾ ॥ ೮

ತನ್ನಾದಹತಿಗೆ ಜೂಟದ
ಪನ್ನಗಪತಿ ಸುಗಿಯೆ ತುಳುಂಕೆ ಗಂಗಾಂಬು ಮಹೀ ।
ಭೃನ್ನಂದನೆ ಬೆದರೆ ಹರಂ
ಗನ್ನೆಗಟ್ಟಿತ್ತಧಿಕಸಂಭ್ರಮಂ ತತ್ಕ್ಷಣದೊಳ್ ॥ ೯

ವ॥ ಆಗಳಾಮಹಾನಾದಮಂ ಪಾಂಚಜನ್ಯನಾದಮೆಂದಱಿದು ಶರ್ವಂ ಪಾರ್ವತೀಸುತನಿರ್ವಿಶೇಷನಪ್ಪ ಬಾಣಂಬರಂ ಯುದ್ಧಮೇವುದೀಯೆಡೆಯೊಳ್ ವಾರಿಜಾಕ್ಷನಂ ನಿವಾರಿಪೆನೆಂದು ಗಿರಿವ್ರಜನಾಮಪಾವಕಪುರಸ್ಸರನಂಗಿರನೆಂಬಗ್ನಿರಾಜನುಮನಲ್ಲಿಂ ಪಿಂತೆ ನಂದಿಪ್ರಮುಖನಿಖಿಲಪ್ರಮಥಯೂಥಮನಲ್ಲಿಂ ಪೆಱಗೆ ಭೈಷಜ್ಯಕಾದಿಜ್ವರಮುಮಂ ಬೆಸಸೆ,

ಇದಿರಾಂತಂಗಿರನಗ್ನಿರಾಜನಭಿಜನ್ಯಸ್ಯಂದನಂ ಬಂದು ಕೋ
ಪದಿನಾತ್ಮೀಯಕರತ್ರಿಶೂಲದಿನಿಡಲ್ ತಚ್ಚೂಲಮಂ ಮುಟ್ಟಿವೆ ।
ಪುದನಾಗಳ್ ಪೆಱೆಯಂಬಿನಿಂ ತಱಿದು ಕೃಷ್ಣಂ ಸ್ಥೂಲಕರ್ಣಾಗ್ರಬಾ
ಣದಿನೆಚ್ಚಾತನವಕ್ಷಮಂ ಮಡಿಪಿದಂ ಧೂಮಧ್ವಜಾಧೀಶನಂ ॥ ೧೦

ವ॥ ಅವಂ ಕಂಡು ಗಿರಿವ್ರಜಂ ಗುಹಾಂತರಮನೋಡಿ ಪುಗೆ ಬೞಿಕಂ,

ಇಳೆಯುಂ ಕಿಱುತ್ತಿ ಪಾಱುಂಬಳ್ದಿಱುಪುವ ಚಂದ್ರಾರ್ಕಬಿಂಬಂಗಳಂ ಸೂ
ಱೊಳ್ ತಾಳಂಗುಟ್ಟುವೇೞುಂ ಕಡಲುಮನುರೆ * ತುಳ್ಕಾಡುವಾಶಾಗಜೇಂದ್ರಾ |
ವೞಿಯುಂ ಕೈಜಂತ್ರದಿಂ ಪೋರಿಸು † ಪುಡುಗಣಮುಂ ಮೂಲೆಯುಂ ಕೋವ ‡ ಹೇಮಾ
ಚಳಮುಂ ಬಟ್ಟಾಡುವೀಶಪ್ರಮಥಸಮಿತಿ ಬಂದತ್ತು ಸಂರಂಭದಿಂದಂ ॥೧೧

ವಿಕೃತಾಂಗರ್ ವಿಕೃತಾಯುಧರ್ ವಿಕೃತವೇಷರ್ ಪ್ರೋತ್ಸೈಯಿಂ ದಾನವಾಂ
ತಕನೊಳ್ ತಳ್ತಿಱಿದೀಗಳ್ಲ್ಲಿತನಿತೊಂದಾಳಾಪಚಾವೀರವೃ |
ತ್ತಿಕನಂತಪ್ಪುದವೆಂಬಿನಂ ಪ್ರಮಥರಂಗೋಪಾಂಗಸಂಭಿನ್ನಸಾ
ಯಕಪತ್ರಂಗಳ್ಱೆಂಕೆಯಾಗೆ ದೆಸೆಬಿಟ್ಟುಂಪಾಱಿದರ್ ಬೇಗದಿಂ ¶ ॥೧೨

ವ॥ ತದನಂತರಂ,

ಜವದಿಂ ಬಂದುದು ದಳ್ಳನುತ್ತುರಿವ ಮೆಯ್ಯುಂ ಧೂಮದುರ್ಬೆಂಬ ಜ
ಬುರ್ವ ಪುರ್ಬುಂ ಕುಡುದಾಡೆಗಳ್ ಪೊಳೆವ ಬಾಯುಂ ಕಣ್ಗಗುರ್ವಾಗೆ ಮೂ |
ರಿವಿಡುತ್ತುಂ ತಿರುಗುತ್ತುಮಾಗುೞಿಸುತುಂ ರೌದ್ರಜ್ವರಂ ತಪ್ತಹೇ
ಮವಿಭೂಷಂ ತ್ರಿಶಿರಂ ತ್ರಿಪಾದವರುಣಾಕ್ಷಂ ರೂಕ್ಷರಕ್ಷಾಯುಧಂ ॥೧೩

ಜ್ವರನಾಟೋಪದೆ ಭಸ್ಮದಿಂದಿಡುವುದುಂ ಭಸ್ಮಂ ಬಳೋರಸ್ಸ್ಥಳಾಂ
ತರಮಂ ತಾಗಿ ಸಿಡಿಲ್ದು ಪೋಗಿ ಸುರಭೂಭೃತ್ಕೂಟಮಂ ತಾಗೆ ತ |
ದ್ಗಿರಿಕೂಟಂ ಭುಗಿಲೆಂದು ಕೇಸುರಿಗಳಂ ಸೂಸುತ್ತೆ ಬಿಟ್ದತ್ತಿದೇಂ
ಜ್ವರಭಸ್ಮಾಹತಿ ವಜ್ರಿವಜ್ರಹತಿಯಿಂದತ್ಯಂತದುರ್ವಾರಮೋ ॥ ೧೪

ವ॥ ಆಗಳ್,

---

* ಗ.— ಕಡಲನುರಯೆ. † ಗ.— ಪೂರಿಸು.
‡ ಗ,— ಕೊಂಡು. ¶ ಖ.— ದೆಸೆವಿಟ್ಟಿರ್ ಪಾಱಿದಭೀರ್ಕತಿಯಿಂ.

ಉರಿಯುತ್ತಿರ್ದಪನಿನಾನೀ
ಜ್ವರಮೆನ್ನೊಳ್ ತಾಗೆ ಕೃಷ್ಣ ಕೃಷ್ಣಭಟಾಗ್ರೀ ।
ಸರ ಕೇಳೆಂಬ ನಿಜಾಗ್ರಜ
ನ ರವಂ ಕಿವಿಗೆಯ್ದೆ ಕರ್ಣಶೂಲಪ್ರಖ್ಯಂ ॥ ೧೫

ಎಲೆಲೆ ಬಿಡಸ್ಮದಗ್ರಜನನಿತ್ತಿದಿರಾಗಿದಿರಾಗೆನುತ್ತೆ ಮೂ
ದಲಿಸಿ ಗದಾಯುಧಂ ಕರೆಯೆ ಬಿಟ್ಟು ಹಲಾಯುಧನಂ ಹರಜ್ವರಂ ।
ಪ್ರಲಯಶಿಖಿಪ್ರಚಂಡವಿಡುತುಂ ಯಮಘಸ್ಮರಭಸ್ಮದಿಂದುರ
ಸ್ಸ್ಥಲಮನಡುರ್ತು ತಾಗಿದುದಜೇಯನನಕ್ಷಯನಂ ಮುರಾರಿಯಂ ॥೧೬

ವ॥ ಅಂತು ತಾಗಿದ ಮಹೇಶ್ವರಜ್ವರಮಂ ಕಂಡು ಕನಲ್ದು ಕಂಸಾರಿ ವೈಷ್ಣವಜ್ವರಮಂ ಬಿಡಲಾ ವೈಷ್ಣವಜ್ವರಂ ಮಹೇಶ್ವರಜ್ವರದೊಳ್ ಕಾದಿ ಪಿಡಿದು ತಂದು ಮುಂದಿಕ್ಕಿಪೆ ದನುಜಾಂತಕನದಂ ಕೊಲಲುಜ್ಜುಗಂ ಗೆಯ್ಯೆ,

ಇದನಕಟ ಕೊಲ್ಲದಿರ್ ಕೊ
ಲ್ಲದಿರೆಂಬಶರೀರವಾಕ್ಯಪಿಷದಿಂ ದುರೆ * ಕೊ ।
ಲ್ಲದೆ ಕಾದಂ ಜ್ವರಮಂ ಲೋ
ಕದೆ ಕ್ರತಮುಂ ಪರಮವಸ್ತುವಂ ವಿಭು ಕಿಡಿಸಂ ॥ ೧೭

ಪಿಂಗಾಕ್ಷಂ ನಿಜಕಿಂಕರಾಗ್ನಿಬಲತೇಜೋಭಂಗದಿಂ ಭ್ರೂಕುಟೀ
ಭಂಗಂ ಸ್ವಪ್ರಮಥಾಪರಾಗದಿ † ನಪಾಂಗಾರಾಗಮಾತ್ರಜ್ವರೋ ।
ಗ್ರಾಂಗಸ್ಪಂದನದಿಂ ಪೊದಚ್ಚಿಧರಬಿಂಬಸ್ಪಂದನಂ ಪೆರ್ಚುವ
ನ್ನಂ ಗೋವರ್ಧನನೊಳ್ ಕಚುತ್ತಿಱಿವ ಕೋಪಾಟೋಪಮಂ ತಾಳ್ದಿದಂ ॥

ವ॥ ಅಂತಪ್ರಮೇಯಪ್ರತಿಘಮಂ ಕೈಕೊಂಡು,
ಧರೆಗಂ ‡ ವ್ಯೋಮಕ್ಕಮೊಂಟುಂದೆಸೆಗಮಡಸಿ ತೂಂಕಿಟ್ಟವೋಲ್ ಭೂತ
ಸೈನ್ಯಂ

* ಖ ಗ.— ಮಿಷದಿಂಹರಿ. † ಗ.— ಸ್ವಪ್ರಮಥಾಸ್ತ್ರರಾಗದಿ.
‡ ಗ.— ಧರೆಯುಂ.

ಬರೆ ಬಂದಂ ಲೋಕಮಂ ಸಂಹರಿಪ ಪದದೊಳಿಂತಪ್ಪ ರೌದ್ರಸ್ವರೂಪಂ।
ಹರನೊಳ್ ಮುನ್ನಿಲ್ಲೆನಲ್ ತಾವರೆಯೆಲೆಯ ಪಯೋಬಿಂದುವೆಂಬಂತೆ ಶಂಕಾ
ಭರದಿಂ ಬ್ರಹ್ಮಾಂಡಘಾಂಡಂ ನಡುಗೆ ಸಮರಸಂರಂಭದಿಂ ಭೂತನಾಥಂ॥

ತುಂಗವೃಷಧ್ವಜಂ ಮಿಳಿರ್ದು ಮಿಳ್ಳಿಸೆ ಚೋದಿಸೆ * ನಂದಿಕೇಶ್ವರಂ
ಸಿಂಗದ ಪಿಂಡು ಪೂಡಿರೆ ಘನಾಧ್ವಮನೀಂಟುವ ದಿಕ್ತಟಂಗಳಂ ।
ನುಂಗುವೆಜಾಂಡಮಂ ಗುಳಿಗೆಯಿಕ್ಕುವ ತಕ್ಕಿನೊಳೆಚ್ಚರಲ್ ರಥಂ †
ಪಿಂಗಳನೇತ್ರನೆಯ್ದಿದನುಪೇಂದ್ರನನಪ್ರತಿಮಪ್ರತಾಪನಂ ‡ ॥ ೨೦

ವ॥ ಅಂತೆಯ್ದಿ ವಿಜಯಾವಷ್ಟಂಭದಿಂ ವಿಜೃಂಭಿಸುವಂಭೋಜಾಕ್ಷನಂ ಕಂಡು,

ಈಕಮಲಾಕ್ಷನಕ್ಷಯನಜೇಯನಚಿಂತ್ಯನದೆಂತು ಗೆಲ್ದಪೆಂ
ಪ್ರಾಕೃತರೂಪನಲ್ತೆನುತೆ ಧೂರ್ಜಟಿ ಕಂಪಿತಲೋಕಪಾಲಕಾ ।
ನೀಕಮನಾಶುನಿರ್ಜಿತವಿರೋಧಿಸಮೀಕಮನಸ್ತಲೋಕಲುಂ
ಟಾಕಮನಾನತಾಖಿಲದಿವೌಕಮನೇಱಿಸಿದಂ ಪಿನಾಕಮಂ ॥ ೨೧

ವ॥ ಅಂತೇಱಿಸಿ ನೀವಿ ಜೇವೊಡೆಯೆ,

ಭರದಿಂ ಗೋತ್ರಾದ್ರಿಗಳ್ ತೂಳಿಕೆಗಳ ತೆಱದಿಂ ಪಾಱೆ ಭೂಮಂಡಲಂ ಕೋ
ವರ ಚಕ್ರಾಕಾರದಿಂ ತಿಱನೆ ತಿರಿಯೆ ಸಮುದ್ರಂಗಳರ್ಘ್ಯಾಂಬುವೋಲ್ ತು
ಳ್ಕಿರವಿಶ್ವೇತಾಂಶುಬಿಂಬಂ ಧರಣಿಗೆ ಕಳಿಪಣ್ ಗಾಳಿಯೊಳ್ ಜೀಱ್ವವೋಲ್ ಬೀ
ಱ್ತಿರೆ ಮೂಱುಂಲೋಕಮಂ ಪರ್ವಿದುದತಿಶಯದಿಂ ಶರ್ವಮೌರ್ವೀನಿನಾದಂ ॥ ೨೨

* ಗ — ಜೋಡಿಸೆ. † ಗ.— ಕರಂ.
‡ ಗ.— ನೇತ್ರನೆಯ್ದಿದನುಜಾರಿಯನಪ್ರತಿಮಪ್ರತಾಪನಂ.

ಕಮಳಾಕ್ಷಂ ಜಯಲಕ್ಷ್ಮಿಯುಂ ನಿಜಭುಜಾಗ್ರಕ್ಕೇಱಿಸುತ್ತುಂ ಭಯ
ಭ್ರಮಮಂ ಧಾರಿಣಿಗೇಱಿಸುತ್ತುಮತಿಶಂಕಾತಂಕಮಂ ಪದ್ಮಜಾ ।
ದ್ಯಮರರ್ಗೇಱಿಸುತುಂ ಪ್ರಕೋಪಭಯಮಂ ಕಾಮಾಂತಕಂಗೇಱಿಸು
ತ್ತಮರುತ್ತೇಱಿಸಿದಂ ಸ್ವಕೀಯಜಯವಲ್ಲೀಶಾರ್ಙ್ಗವಂ * ಶಾರ್ಙ್ಗವಂ ॥

ವ॥ ಆಖಂಡಕೋದಂಡಮಂ ಸಮಾಸ್ಫಾಲಿತಂಮಾಡೆ,

ವಸುಧಾಚಕ್ರಂ ಜಲಾಂತರ್ವಿಧುವಿಲುಳಿತಮಾಗಿರ್ಪಿನಂ ಮೇರೆಯುಂ † ಸಪ್ತಸಮುದ್ರಂ ಮೀಱಲೆಂದಿರ್ಪಿನಮಖಿಳಮರುತ್ಸಂಚಯುಂ ಸಂಚಳನ್ಮಾನಸಮಾಗುತ್ತಿರ್ಪಿನಂ ದಿಕ್ಕರಿಕುಲಮೊಱಲುತ್ತೋಡಲೆಂದಿರ್ಪಿನಂ ವರ್ಧಿಸುತುಂ ಬ್ರಹ್ಮಾಂಡಮಂ ತೀವಿದುದಸುರಹರಜ್ಯಾಲತಾಸ್ಫೋರಸ್ಫೋಷಂ॥

ವ॥ ತದನಂತರಂ,

ಕಡುಮುಳಿದೊರ್ಬರೊರ್ಬರನಿಸುತ್ತಿರೆ ಭೀಕರಭೂರಿಭೀಂಕೃತಂ
ಗಡಣಿಸೆ ದಿಙ್ಮುಖಂ ಮುಖರಮಪ್ಪಿನಮುತ್ಕಟಮಾಗಿ ಪಾಯ್ದು ಪಾ ।
ಯ್ದೊಡನೊಡನೊಂದನೊಂದು ಕಿಡಿಸೂಸೆ ಸಿಡಿಲ್ ಸಿಡಿಲಂ ಪಳಂಚುವಂ
ತಡಸಿ ಪಳಂಚುತಿರ್ದುವು ಪಿನಾಕಿಯ ಶಾರ್ಙ್ಗಿಯ ಬಾಣಮುರ್ವಿಯೊಳ್॥

ಧೀರರ್ ಶಂಕರಶಾರ್ಙ್ಗಿಗಳ್ ಪೊಣರೆ ತತ್ಸಂಘಟ್ಟದಿಂ ಭೂತಳಂ
ನೀರೊಳ್ ಪಾಸಿದದೊಂದು ಪೆರ್ಗಡಿತದಂತಳ್ಳಾಡಲದ್ರಿವ್ರಜಂ ।
ಬೇರಿಂ ಕಿೞ್ತು ನಭೋನದೀಪುಳಿನಸಂದೋಹಂಬೊಲಿರ್ದತ್ತು ಮು
ನ್ನೀರುದ್ವಂ ನೆಗೆದಿಂದ್ರನಂದನಕೆ ಪೊಯ್ಮೀರಾಯ್ತುದೇಂ ರೌದ್ರಮೋ॥ ೨೬

ಗೆಲ್ವಂ ತಾರ್ಕ್ಷ್ಯಪತಾಕನಂ ವೃಷಪತಾಕಂ ಹೋ ಲಲಾಟೇಕ್ಷನಂ
ಗೆಲ್ವಂ ಪಂಕರುಹಾಕ್ಷನಲ್ತು ಗಿರಿಜಾಧೀಶಂ ರಮಾಧೀಶನಂ ।
ಗೆಲ್ವಂನೋಡಿಮೆನುತ್ತುಮಿರ್ಬರಳವಂ ಕೈಮೊಯ್ದು ಸಂವಾದಿಸಲ್
ಸಲ್ವರ್ ನಾಕಿಗಳೇಂ ಸಮಾನಬಲರೋ ಕಾಮಾರಿಕಂಸಾರಿಗಳ್ ॥ ೨೭

---

* ಕ. ಖ.— ಭಾರ್ಗವಂ.

† ಕ. ಗ.— ಜಲಾಂತರ್ವಿದಿತವಿಲುಳಿತಾಕಾರಮಾಗಿರ್ಪಿನಂ.

ಶ್ರೀಕಂಠನಿಸುವ ಕಣೆಗಳ್
ವೈಕುಂಠನನೆಯ್ದಿ ಮುಸುಱುತಿರ್ದುವು ರಣದೊಳ್ ।
ಭೀಕರತರೌರ್ವಮಂ ಮಕ
ರಾಕರವೀಚೀಕದಂಬಕಂ * ಮುಸುಱುವವೊಲ್ ॥ ೨೮

ತಕ್ಕಿಸಿನೀಶನಚ್ಚ ತಿಮಿರೇಷುಗಿನೇಷುವನಗ್ನಿಮಿತ್ರಬಾ
ಣಕ್ಕಹಿಬಾಣಮಂ ಗಿರಿಪತತ್ರಿಗೆ ವಜ್ರಪತತ್ರಿಯಂ ಘನಾ ।
ಸ್ತ್ರಕ್ಕನಿಲಾಸ್ತ್ರಮಂ ಶಿಖಿಶರಕ್ಕೆ ಪಯಶ್ಶರಮಂ ಭುಜಂಗಕಾಂ
ಡಕ್ಕೆ ಖಗೇಶಕಾಂಡಮನಧೋಕ್ಷಜನೆಚ್ಚು ಪೊಡರ್ಪುದೋಱಿದಂ ॥ ೨೯

ವ॥ ಅಂತುಮಲ್ಲದೆಯುಂ,

ಪೆಱತೇನಿಂತಿದಕಾಲಕಾಲನಿಶಿ ಪರ್ಬಿತ್ತೆಂಬಿನಂ ನುಂಗಿ ನೇ
ಸಱನಂಟುಂದೆಸೆಯುಂ ಕಱಂಗೆ ತಮಮಂ ಭಿನ್ನಾಂಜನಚ್ಛಾಯೆಯಂ ।
ಕಱೆಯುತ್ತುಂ ಹರನಲ್ಲಿಗೆಯ್ದಿದುದಗುರ್ವಿಂ ವೈಷ್ಣವೋಗ್ರೇಷು ಬಾ
ಯ್ದೆಱೆದೆಬ್ಬಿಟ್ಟುವ ಕಾಳರಕ್ಕಸನವೊಲ್ ಭೀಂಕಾರಹೂಂಕಾರದಿಂ॥ ೩೦

ವ॥ ಅದಂ ಕಂಡು ಖಂಡಪರಶುವಖಂಡಿತೋಚ್ಚಂಡಕೋಪಮಂ ಕೈಕೊಂಡು,

ಉರಿಗಣ್ಣಿಂ ಬಿರ್ಚಿದಂ ಬಿರ್ಚಿದನಿಷುಧಿಗೆ ಕೈನೀಡಿದಂ ನೀಡಿದಂ ನೋ
ಡಿರೆ ತೊಟ್ಟಂ ತೊಟ್ಟನೀಪಾಶುಪತಶರಮನೋಹೋ ಜಗಂ ಕೆಟ್ಟುದೆಂದಂ ।
ಬಱದೊಳ್ ದೇವವ್ರಜಂ ಬಾಯ್ದೆಱೆಯೆ ತೆಱೆದು ಭಾಳಾಕ್ಷನುಂ ದ್ವಿಟ್ಪುರೀ † ಸಂ
ಹರಣಂಗೆಯ್ದಸ್ತ್ರಮಂ ತೊಟ್ಟಸಲೊಡರಿಸಿದಂ ಕೃಷ್ಣನಂ ಕೃಷ್ಣಕಂಠಂ ॥ ೩೧

---

* ಕ ಗ.— ಮಕರಾಕರಶೀಕರಪೊಡರ್ಪಿನಿಂ.

† ಖ.— ತೋಱಿದಂ.

